# ಲೈಂಗಿಕ ಶೋಷಿತ ಬಾಲೆಯರು: ಪುನರ್ವಸತಿ–ಪುನರ್ಸೈಲೆ

ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ

ಸಂಶೋಧಕರು
ಬಿಜಾಪುರ ಭಾರತಿ ಕೆಂಚಪ್ಪ

ಮಾರ್ಗದರ್ಶಕರು
ಡಾ. ಎಚ್.ಡಿ. ಪ್ರಶಾಂತ್
ಪ್ರಾಧ್ಯಾಪಕರು





ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಲೈಂಗಿಕ ಶೋಷಿತ ಬಾಲೆಯರು: ಪುನರ್ವಸತಿ–ಪುನರ್ನೆಲೆ

ಸಮಾಜಕಾರ್ಯ ವಿಷಯದಲ್ಲಿ ಪಿಎಚ್. ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ



ಸಂಶೋಧಕರು
**ಬಿಜಾಪುರ ಭಾರತಿ ಕೆಂಚಪ್ಪ**

ಮಾರ್ಗದರ್ಶಕರು
**ಡಾ. ಎಚ್.ಡಿ. ಪ್ರಶಾಂತ್**
ಪ್ರಾಧ್ಯಾಪಕರು



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬
೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಬಿಜಾಪುರ ಭಾರತಿ ಕೆಂಚಪ್ಪ** ಅವರು ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಲೈಂಗಿಕ ಶೋಷಿತ ಬಾಲೆಯರು: ಪುನರ್ವಸತಿ–ಪುನರ್ನೆಲೆ"** ಎಂಬ ವಿಷಯದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 31-1-17
ಸ್ಥಳ : ವಿದ್ಯಾರಣ್ಯ

(ಡಾ. ಎಚ್.ಡಿ. ಪ್ರಶಾಂತ್)
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಸಂಶೋಧಕರ ಘೋಷಣಾ ಪತ್ರ

**"ಲೈಂಗಿಕ ಶೋಷಿತ ಬಾಲೆಯರು: ಪುನರ್ವಸತಿ–ಪುನರ್ನೆಲೆ"** ಎಂಬ ಮಹಾಪ್ರಬಂಧವನ್ನು ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಎಚ್.ಡಿ. ಪ್ರಶಾಂತ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 31-01-2017

ಸ್ಥಳ : ವಿದ್ಯಾರಣ್ಯ

Bharati Bijapur

**(ಬಿಜಾಪುರ ಭಾರತಿ ಕೆಂಚಪ್ಪ)**
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

**ಅನುಬಂಧಗಳು**

# ಪರಿಶಿಷ್ಟಗಳು

**ಭೂಪಟ**



**ಕೋಷ್ಟಕಗಳು**

**ವೃತ್ತಚಿತ್ರ**



**ಲಂಬಚಿತ್ರ**



**ರೇಖಾಚಿತ್ರ**

# ಅಧ್ಯಾಯ ಒಂದು

# ಪ್ರಸ್ತಾವನೆ

೧.೧. ಪ್ರವೇಶ

೧.೨. ಸಾಹಿತ್ಯ ಸಮೀಕ್ಷೆ

೧.೩. ಸಮಸ್ಯೀಕರಣ

೧.೪. ಅಧ್ಯಯನದ ಉದ್ದೇಶಗಳು

೧.೫. ಅಧ್ಯಯನದ ವಿಧಾನ

೧.೬. ಅಧ್ಯಯನ ಕ್ಷೇತ್ರದ ಪರಿಚಯ

೧.೭. ಅಧ್ಯಯನವ ಮಹತ್ವ

೧.೮. ಅಧ್ಯಯನದ ಮಿತಿಗಳು

೧.೯. ಅಧ್ಯಾಯಗಳ ವಿನ್ಯಾಸ

೧.೧೦ ಸಂಶೋಧಕರ ಅನುಭವ

## ಅಧ್ಯಾಯ ಎರಡು

## ಅಧ್ಯಯನ ಕ್ಷೇತ್ರದ ಪರಿಚಯ

೨.೧. ಪ್ರಸ್ತಾವನೆ

೨.೨. ಬಿಜಾಪೂರ ಜಿಲ್ಲೆ

- ೨.೨/೧ ಚಾರಿತ್ರಿಕ
- ೨.೨/೧.೧ ಬಸವೇಶ್ವರರ ಕಾಲಘಟ್ಟದ ಬಿಜಾಪೂರ
- ೨.೨/೧.೨ ವಸಾಹತು ಪೂರ್ವ ಬಿಜಾಪೂರ
- ೨.೨/೧.೩ ವಸಾಹತು ನಂತರದ ಬಿಜಾಪೂರ
- ೨.೨/೧.೪ ಬರಗಾಲದ ಬಿಜಾಪೂರ
- ೨.೨/೨ ಭೌಗೋಳಿಕ
- ೨.೨/೩ ಸಾಮಾಜಿಕ
- ೨.೨/೪ ಆರ್ಥಿಕ
- ೨.೨/೪ ಶೈಕ್ಷಣಿಕ
- ೨.೨/೫ ಕೈಗಾರಿಕೆ
- ೨.೨/೬ ಪ್ರವಾಸ

೨.೩. ಬೆಳಗಾವಿ ಜಿಲ್ಲೆ

- ೨.೩/೧ ಭೌಗೋಳಿಕ
- ೨.೩/೨ ಚಾರಿತ್ರಿಕ
- ೨.೩/೩ ಶೈಕ್ಷಣಿಕ
- ೨.೩/೪ ಆರ್ಥಿಕ
- ೨.೩/೫ ಕೈಗಾರಿಕೆ
- ೨.೩/೬ ಪ್ರವಾಸ
- ೨.೩/೭ ಸಾರಿಗೆ ಸಂಪರ್ಕ

**೨.೪. ಬಾಗಲಕೋಟೆ ಜಿಲ್ಲೆ**

೨.೪/೧. ಭೌಗೋಳಿಕ

೨.೪/೨. ಚಾರಿತ್ರಿಕ

೨.೪/೩. ಶೈಕ್ಷಣಿಕ

೨.೪/೪. ಆರ್ಥಿಕ

೨.೪/೫. ಕೈಗಾರಿಕೆ

೨.೪/೬. ಪ್ರವಾಸ

೨.೪/೭. ಸಾರಿಗೆ ಸಂಪರ್ಕ

**೨.೫. ಅಧ್ಯಯನಕ್ಕೊಳಪಡಿಸಿದ ಆರು ತಾಲೂಕುಗಳ ಕುರಿತು ಕಿರುನೋಟ**

೨.೫/೧. ಆಯ್ದ ತಾಲೂಕುಗಳು ಮತ್ತು ಜನಸಂಖ್ಯೆ

೨.೫/೨. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ

೨.೫/೩. ಒಟ್ಟು ಭೂಹಿಡುವಳಿದಾರರು

೨.೫/೪. ಮಳೆ ಪ್ರಮಾಣ

೨.೫/೫. ಸಾಕ್ಷರತೆ

೨.೫/೬. ಲಿಂಗಾನುಪಾತ

೨.೫/೭. ಮಾನವ ಅಭಿವೃದ್ಧಿ ಸೂಚ್ಯಾಂಕ

೨.೫/೮. ದೇವದಾಸಿ ಮಹಿಳೆಯರ ಸಂಖ್ಯೆ

೨.೫/೯. ಲೈಂಗಿಕ ಕಾರ್ಯಕರ್ತರ ಸಂಖ್ಯೆ

೨.೫/೧೧. ಎಚ್ ಐ ವಿ ಸೋಂಕಿತರ ಸಂಖ್ಯೆ

೨.೫/೧೧. ಶಾಲಾ ದಾಖಲಾತಿ ಮತ್ತು ಮುಂದುವರಿಕೆ

೨.೫/೧೨. ಮಕ್ಕಳ ಅಭಿವೃದ್ಧಿ ಸೂಚ್ಯಾಂಕ

## ಅಧ್ಯಾಯ ಮೂರು

# ಲೈಂಗಿಕ ಜೀತದ ವಾಸ್ತವಿಕ ಜಗತ್ತು

# ಅಧ್ಯಾಯ ನಾಲ್ಕು

# ಲೈಂಗಿಕ ಜೀತದಲ್ಲಿ ಭದ್ರತೆ ಮತ್ತು ರಕ್ಷಣೆ

## ಅಧ್ಯಾಯ ಐದು

## ಲೈಂಗಿಕ ಜೀತದ ನಂತರದ ಬದುಕು

**೫.೧. ಪ್ರಸ್ತಾವನೆ**

**೫.೨. ಲೈಂಗಿಕ ಜೀತಕ್ಕೊಳಗಾದವರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ**

೫.೨/೧. ಸಾಮಾಜಿಕ

೫.೨/೨. ಆರ್ಥಿಕ

**೫.೩. ಪೂರ್ವಸ್ಥಿತಿ**

**೫.೩/೧. ದೇವದಾಸಿ ಆಚರಣೆಗೆ ಒಳಗಾದವರು**

೫.೩/೧.೧. ಸಂಪ್ರದಾಯ ಮತ್ತು ನಂಬಿಕೆ

೫.೩/೧.೨. ಒಬ್ಬಳೇ ಮಗಳು

೫.೩/೧.೩. ಪರಿಸರ

೫.೩/೧.೪. ಬಡತನ ಮತ್ತು ಅನಿಯಂತ್ರಿತ ಸಂತಾನೋತ್ಪತ್ತಿ

೫.೩/೧.೫. ತಾಯಿಯ ದುಡಿತ

೫.೩/೧.೬. ಕೌಟುಂಬಿಕ ಸಂಬಂಧಗಳಲ್ಲಿಯ ಬಿಕ್ಕಟ್ಟು

೫.೩/೧.೭ ವಿವಾಹ ಪೂರ್ವದಲ್ಲಿ ನಡೆದ ಲೈಂಗಿಕ ದೌರ್ಜನ್ಯ

**೫.೩/೨. ಇತರೆ ಒತ್ತಡಕ್ಕೆ ಒಳಗಾದವರು**

೫.೩/೨.೧. ಬಾಲ್ಯವಿವಾಹ

೫.೩/೨.೨. ಸಾಗಾಣಿಕೆ

೫.೩/೨.೩. ಲೈಂಗಿಕ ಆಸಕ್ತಿ

**೫.೪ ಶೋಷಣೆ ಮತ್ತು ದೌರ್ಜನ್ಯದ ಜಗತ್ತು**

೫.೪/೧. ಅಸಹಾಯಕತೆ

೫.೪/೨. ಹಿಂಸೆ

೫.೪/೩. ಮೋಸ

೫.೪/೪. ಯಜಮಾನಿಕೆ

## ಅಧ್ಯಾಯ ಆರು

## ದಂಧೆಯಿಂದ ಹೊರಬಂದವರ ಪ್ರಸ್ತುತ ಬದುಕು

# ಅಧ್ಯಾಯ ಏಳು

## ಲೈಂಗಿಕ ಶೋಷಿತರ ಸಾಮಾಜಿಕ ಭದ್ರತೆ ಮತ್ತು ರಕ್ಷಣೆ

೭.೧. ಪ್ರಸ್ತಾವನೆ

೭.೨. ಸಂವಿಧಾನ

೭.೩. ಶಾಸನಾತ್ಮಕ

೭.೪. ಒಡಂಬಡಿಕೆಗಳು

೭.೫. ಕಾರ್ಯಕ್ರಮಗಳು ಮತ್ತು ಯೋಜನೆಗಳು

೭.೬. ಸುತ್ತೋಲೆಗಳು

೭.೭. ಸರ್ಕಾರೇತರ ಸಂಸ್ಥೆ

# ಅಧ್ಯಾಯ ಎಂಟು

# ಪುನರ್ವಸತಿ ಪುನರ್ನೆಲೆ-ಸವಾಲುಗಳು

# ಅಧ್ಯಾಯ ಒಂಬತ್ತು

# ಅಧ್ಯಯನದ ಸಾರಾಂಶ ಮತ್ತು ತಾತ್ಕಾಲಿಕ ನಿರ್ಧಾರಗಳು

೯.೧. ಸಾರಾಂಶ

೯.೨. ತಾತ್ಕಾಲಿಕ ನಿರ್ಧಾರಗಳು

## ಅನುಬಂಧಗಳು

೧. ಪ್ರಕರಣ ಅಧ್ಯಯನಗಳು: ಲೈಂಗಿಕ ಜೀತದ ನಂತರದ ಬದುಕು

೨. ಪ್ರಕರಣ ಅಧ್ಯಯನಗಳು: ಪುನರ್ವಸತಿ ಪುನರ್ನೆಲೆ-ಸವಾಲುಗಳು

೩. ಪದಗಳ ವಿಸ್ತರಣೆ

೪. ಅಧ್ಯಯನಕ್ಕೆ ಸಹಕರಿಸಿದ ಇಲಾಖೆಗಳು ಮತ್ತು ಸಂಸ್ಥೆಗಳು

೫. ಪರಾಮರ್ಶನ ಗ್ರಂಥಗಳು

ಅಧ್ಯಾಯ ಒಂದು

# ಪ್ರಸ್ತಾವನೆ

## ಪ್ರವೇಶ

ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳ ಲೈಂಗಿಕ ಶೋಷಣೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಅರ್ಥಮಾಡಿಕೊಳ್ಳುವುದು ಪ್ರಸ್ತುತ ಅಧ್ಯಯನದ ಆಶಯ. ಬಾಂಬೆ ಕರ್ನಾಟಕದ (ಬೆಳಗಾವಿ, ಬಿಜಾಪುರ ಮತ್ತು ಬಾಗಲಕೊಟೆ) ಜಿಲ್ಲೆಗಳಿಂದ, ಮಹಾರಾಷ್ಟ್ರದ ಮಿರಜ್, ಸಾಂಗ್ಲಿ, ಪುಣೆ ಮತ್ತು ಮುಂಬೈ ನಗರಗಳಿಗೆ ಸಾಗಾಣಿಕೆಗೊಂಡು ಲೈಂಗಿಕ ಶೋಷಣೆಗೆ ಬಲಿಯಾಗಿರುವ ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳು ಪ್ರಸ್ತುತ ಅಧ್ಯಯನದ ಕೇಂದ್ರಬಿಂದು. ಈ ಶೋಷಣೆಯ ಸಾಮಾಜಿಕ ಆಯಾಮಗಳಿಗೆ ಇರುವ ಕಾರ್ಯಕಾರಣ ಸಂಬಂಧಗಳನ್ನು ಮತ್ತು ಪರಿಣಾಮಗಳನ್ನು ಮೊದಲ ಹಂತದಲ್ಲಿ ಅರ್ಥಮಾಡಿಕೊಂಡು ನಂತರ ಶೋಷಣೆಗೆ ಒಳಗಾದವರ ಪುನರ್ವಸತಿ ಮತ್ತು ಪುನರ್‍ಸ್ಥಿತಿಯ ಪ್ರಕ್ರಿಯೆಗಳನ್ನು ವಿಶ್ಲೇಷಣಾತ್ಮಕವಾಗಿ ಅರ್ಥಮಾಡಿಕೊಳ್ಳುವುದು ಪ್ರಸ್ತುತ ಅಧ್ಯಯನದ ಆಶಯ.

ಲೈಂಗಿಕ ಶೋಷಣೆಯು ಬರೀ ಶೋಷಣೆಯಾಗಿರದೇ ಅದೊಂದು ದೌರ್ಜನ್ಯವಾಗಿದೆ. ಮೇಲು ನೋಟಕ್ಕೆ ಶೋಷಣೆಗೂ ದೌರ್ಜನ್ಯಕ್ಕೂ ವ್ಯತ್ಯಾಸವಿಲ್ಲವೆನಿಸಿದರೂ, ಇವುಗಳ ನಡುವೆ ಒಂದು ಸೂಕ್ಷ್ಮವೆನಿಸುವ ಅಥವಾ ತೆಳುವಾದ ಎಳೆಯನ್ನು ನಾವು ಗುರುತಿಸಬಹುದು. ಲೈಂಗಿಕವಾಗಿ ಶೋಷಿತರಾದ ಶೇಕಡಾ ೯೦ರಷ್ಟು ಮಹಿಳೆ ಮತ್ತು ಮಕ್ಕಳು ಕೆಳವರ್ಗದ ತಳಸಮುದಾಯದವರೇ ಆಗಿದ್ದಾರೆಂಬುದನ್ನು ಹಲವಾರು ವರದಿ, ಅಧ್ಯಯನಗಳಿಂದ ಕಂಡುಕೊಳ್ಳಬಹುದು. ಜಾತಿಯ ತಂತ್ರವನ್ನು ಹುಟ್ಟು ಹಾಕಿದ ಶಿಷ್ಟ ಸಮುದಾಯ, ತಮ್ಮ ಬಳಕೆಗೆ ಅಸಹಾಯಕರಾದ ಒಂದು ವರ್ಗವನ್ನು ಪರಿಶಿಷ್ಟರನ್ನಾಗಿ ನಿರ್ಮಿಸಿಕೊಂಡ ಕ್ರಮವೇ ಶೋಷಣೆಯ ಹುಟ್ಟು. ದೇವರು, ಧರ್ಮ, ದೈವ, ಹುಟ್ಟು, ಸಾವು, ಪಾಪ, ಕರ್ಮ, ಮೋಕ್ಷಗಳ ಕಲ್ಪನೆಯನ್ನು ಹುಟ್ಟುಹಾಕಿ, ಅವರ ಶ್ರಮವನ್ನು, ರಕ್ತವನ್ನು, ಅವರ ಮಹಿಳೆಯರನ್ನು ಮಕ್ಕಳನ್ನು ದೈಹಿಕವಾಗಿ, ಮಾನಸಿಕವಾಗಿ, ಲೈಂಗಿಕವಾಗಿ ಬಲಿ ತೆಗೆದುಕೊಂಡಿದ್ದು, ತೆಗೆದುಕೊಳ್ಳುತ್ತಿರುವುದು ದೌರ್ಜನ್ಯ. ಇತ್ತೀಚೆಗೆ ೨೦೧೨ರಲ್ಲಿ ಜಾರಿಗೆಗೊಂಡ **ಪೋಕ್ಸೋ-೨೦೧೨** (ಲೈಂಗಿಕ ಅಪರಾಧಗಳಿಂದ

ಮಕ್ಕಳ ರಕ್ಷಣಾ ಕಾಯ್ದೆ 2012)ರ ಸೆಕ್ಷನ್ 7ರಲ್ಲಿ ಈ ರೀತಿ ಹೇಳುತ್ತದೆ. "*ಯಾರಾದರೂ ಲೈಂಗಿಕ ಉದ್ದೇಶದಿಂದ ಮಗುವಿನ ಯೋನಿ, ಶಿಶ್ನ, ಗುದದ್ವಾರ ಅಥವಾ ಮೊಲೆಗಳನ್ನು ಮುಟ್ಟಿದರೆ ಅಥವಾ ಮಗುವನ್ನು ತನ್ನದು ಅಥವಾ ಬೇರೆಯವರ ಯೋನಿ, ಶಿಶ್ನ, ಗುದದ್ವಾರ ಅಥವಾ ಮೊಲೆಗಳನ್ನು ಮುಟ್ಟುವಂತೆ ಮಾಡಿದರೆ ಅಥವಾ ಸಂಭೋಗ ಹೊರತುಪಡಿಸಿ ಯಾವುದೇ ಲೈಂಗಿಕ ಉದ್ದೇಶದಿಂದ ದೇಹ ಸ್ಪರ್ಶಿಸಿದರೆ, ಅದನ್ನು ಲೈಂಗಿಕ ದೌರ್ಜನ್ಯ ಎಂದು ಪರಿಗಣಿಸುವುದು*" (Whoever, with sexual intent touches the vagina, penis, anus or breast of the child or makes the child touch the vagina, penis, anus or breast of such person or any other person, or does any other act with sexual intent which involves physical contact without penetration is said to commit sexual assult). ಆದರೆ ಲೈಂಗಿಕ ದೌರ್ಜನ್ಯಕ್ಕೂ ಮುಂದೆ ಹೋಗಿ ಅಪ್ರಾಪ್ತರ ಮೇಲೆ ಬಲಾತ್ಕಾರದ ಸಂಭೋಗ ನಡೆಯುತ್ತಿದೆ. ಅಮಾಯಕರಾದ ಅವರನ್ನು ಮೋಸದಿಂದ, ಬಲವಂತದಿಂದ, ಧಾರ್ಮಿಕ ನೆಪಗಳಿಂದ, ಹಣಕ್ಕಾಗಿ ವೇಶ್ಯಾಗೃಹಗಳಲ್ಲಿ ಬಂಧಿಸಿ ಲೈಂಗಿಕ ಹಲ್ಲೆ ನಡೆಸಲಾಗುತ್ತಿದೆ. ಇವರನ್ನು ಖರೀದಿಸಿದ ತಲೆಹಿಡುಕ, ಘರವಾಲಿಯರು ತಾವು ಕೊಟ್ಟ ಪುಡಿಗಾಸಿಗೆ ಮೋಸ ಹೋದ ಮಗುವಿನ ಮೇಲೆ ಬಡ್ಡಿ, ಚಕ್ರ ಬಡ್ಡಿ ಆಕರಿಸಿ, ಅದನ್ನು ತೀರಿಸುವ ಹೊಣೆಯನ್ನು ಮಗುವಿನ ಮೇಲೆಯೇ ಹೇರುತ್ತಾರೆ. ಅದನ್ನು ತೀರಿಸಲು ಅವಳು ತನ್ನ ಬಾಲ್ಯದ ಅಮೂಲ್ಯ ೧೦ ವರ್ಷಗಳನ್ನು ಬಲಿ ನೀಡಬೇಕಾಗುತ್ತದೆ. ಅಲ್ಲಿಯವರೆಗೆ ಮಗು ಬಂಧನದಲ್ಲಿ ಇರುತ್ತದೆ. ಇದನ್ನು ನಾವು 'ಲೈಂಗಿಕ ಜೀತ' ಎಂದು ಕರೆಯುತ್ತೇವೆ.

ಲೈಂಗಿಕ ಜೀತ ಎಂದು ಕರೆಯುವುದಕ್ಕೆ **ಸಿಮನ್ ದ ಬೋವಾ** ಅವರ ಈ ಅಭಿಪ್ರಾಯ ಪುಷ್ಠಿಯನ್ನು ನೀಡುತ್ತದೆ. "ವೇಶ್ಯೆಯರ ನೈತಿಕ ಮತ್ತು ಮಾನಸಿಕ ಸ್ಥಿತಿಗತಿಗಳನ್ನು ಸಹಿಸುವುದು ಅವಳಿಗೆ ಕಷ್ಟವೇನಲ್ಲ. ಆದರೆ, ಅವರಿರುವ ಪರಿಸರದ ಜೀವನ ಮಟ್ಟ ದುರ್ಭರವಾಗಿರುತ್ತದೆ. ತಲೆಹಿಡುಕರು, ಘರವಾಲಿಗಳು ಕಿತ್ತು ತಿನ್ನುತ್ತಾರೆ. ಸದಾ ಏನಾಗುವುದೋ ಎಂಬ ಆತಂಕ ಅವರನ್ನು ಕಾಡುತ್ತಿರುತ್ತದೆ. ಅಗತ್ಯವಾದಾಗ ಬಹುತೇಕರ ಕೈಯಲ್ಲಿ ಚಿಕ್ಕಾಸೂ ಇರುವುದಿಲ್ಲ. ತಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳಲು ದಂಧೆಯಲ್ಲಿ ಇರುವ ಮಹಿಳೆಯರು ಆಧುನಿಕ ಸಾಲ ಸೌಲಭ್ಯ ಸಿಗುವ ಸಂಸ್ಥೆಗಳಿಗೆ ಹೋಗಲಾಗದೇ, ಘರವಾಲಿಗಳ ವಿಷ ವರ್ತುಲದಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾರೆ. ಮುಂದುವರೆದು ಸಿಮೊನ್ ದ ಬೋವಾ ಅವರು, ಐದು ವರ್ಷ ಹೀಗೆ ದುಡಿದ ಮೇಲೆ ಪ್ರತಿಶತ ಎಪ್ಪತ್ತೈದು ಜನರಿಗೆ ಸಿಫಿಲಸ್ ಎನ್ನುವ ಸೋಂಕು ತಗಲುತ್ತದೆ. ಇಂಥ ಸಾವಿರಾರು ಜನರನ್ನು ಪರೀಕ್ಷಿಸಿದ ವೈದ್ಯರ ಅಭಿಮತವಿದು. ಅನುಭವವಿಲ್ಲದ ಚಿಕ್ಕ ವಯಸ್ಸಿನ ಮಕ್ಕಳು ಸೋಂಕಿಗೆ ಒಳಗಾಗುವ ಅಪಾಯ ಹೆಚ್ಚಾಗಿರುತ್ತದೆ. ಹಾಗೆಯೇ ಪ್ರತಿಶತ ಇಪ್ಪತ್ತೈದು ಮಂದಿಗೆ ಗೊನೋರಿಯಾ ಸಂಬಂಧಿಸಿದ ಶಸ್ತ್ರ ಚಿಕಿತ್ಸೆ ಮಾಡಬೇಕಾಗುತ್ತದೆ. ಪ್ರತಿಶತ ಐದು ಮಹಿಳೆಯರಿಗೆ ಕ್ಷಯ ತಗಲುತ್ತದೆ. ಪ್ರತಿಶತ ಅರವತ್ತು ಮಹಿಳೆಯರು ಕುಡಿತ, ಮಾದಕ ದ್ರವ್ಯಗಳ ಸೇವನೆಗೆ ದಾಸರಾಗುತ್ತಾರೆ. ಪ್ರತಿಶತ ನಲವತ್ತು ಮಹಿಳೆಯರು ನಲವತ್ತು ತುಂಬುವುದರೊಳಗೆ

ಸಾಯುತ್ತಾರೆ. ಎಷ್ಟೇ ಮುನ್ನೆಚ್ಚರಿಕೆ ವಹಿಸಿದರೂ ಕೆಲವರು ಆಗೀಗ ಬಸಿರಾಗಿ ಬಿಡುತ್ತಾರೆ. ಅದನ್ನು ತೆಗೆದು ಹಾಕಲು ತಾವೇ ಯತ್ನಿಸುತ್ತಾರೆ. ಅದೂ ಕೆಟ್ಟ ಪರಿಸರದಲ್ಲಿ. ಸಾಮಾನ್ಯ ವೇಶ್ಯೆಯ ಸನ್ನಿವೇಶ ಅತ್ಯಂತ ದುರ್ದಮನೀಯ. ಆಕೆ ಲೈಂಗಿಕವಾಗಿ, ಆರ್ಥಿಕವಾಗಿ ಶೋಷಿತಳು. ಪೋಲೀಸರು ಬೇಕೆಂತಲೇ ಹಿಂಸಿಸುತ್ತಾರೆ. ವೈದ್ಯಕೀಯ ಸವಲತ್ತುಗಳು ಹೀನಾಯವಾಗಿವೆ. ಗಿರಾಕಿಗಳು ಮನಬಂದಂತೆ ವರ್ತಿಸುತ್ತಾರೆ. ರೋಗಗಳು, ಸೋಂಕುಗಳು ಕಾಡಿಸುತ್ತವೆ. ಬದುಕು ಇದಕ್ಕಿಂತ ಅಮಾನುಷವಾಗಲು ಸಾಧ್ಯವೆ ಇಲ್ಲ”[೧] ಎಂದು ತಮ್ಮ 'ದಿ ಸೆಕೆಂಡ್ ಸೆಕ್ಸ್' ಪುಸ್ತಕದಲ್ಲಿ ವಿವರಿಸುತ್ತಾರೆ.

ಹಾಗೆಯೇ **ಸಮಾಜವಾದಿ ಚಿಂತಕ ವಿ.ಐ. ಲೆನಿನ್** ಅವರ ಮಾತುಗಳೂ ಕೂಡ, ಲೈಂಗಿಕ ಶೋಷಣೆ ಒಂದು ರೀತಿಯಲ್ಲಿ ಜೀತವೇ ಎಂಬುದಕ್ಕೆ ಆಧಾರಗಳನ್ನು ನೀಡುತ್ತದೆ. “ಬಡತನ, ಅತ್ಯಂತ ಕಡಿಮೆ ಕೂಲಿ, ಹಸಿವು  ಗುಲಾಮಗಿರಿ ಇರುವವರೆಗೂ ವೇಶ್ಯಾವೃತ್ತಿ ಅನಿವಾರ್ಯವಾಗಿ ಇರುವುದು. ಮಾನವ ಸಮಾಜದ ಚರಿತ್ರೆಯಲ್ಲಿ  ಎಲ್ಲ ಶೋಷಿತ ವರ್ಗಗಳೂ ಯಾವತ್ತೂ ತಮ್ಮ ಪೀಡಕರಿಗೆ ಮೊದಲು ತಮ್ಮ ಕೂಲಿರಹಿತ ಶ್ರಮವನ್ನು, ಎರಡನೇಯದಾಗಿ ತಮ್ಮ ಮಹಿಳೆಯರನ್ನು ಬೆಲೆವೆಣ್ಣುಗಳಾಗಿ ಬಿಟ್ಟುಕೊಡುವುದೇ ಬಲಾತ್ಕಾರಕ್ಕೊಳಗಾಗಿಯೇ ಇದ್ದುಕೊಂಡು ಬಂದಿವೆ. ಈ ರೀತಿಯಲ್ಲೇ ಅವರ ಶೋಷಣೆ ಜರುಗುತ್ತಿರುವುದು. ಈ ವಿಷಯಕ್ಕೆ ಸಂಬಂಧಿಸಿ ಗುಲಾಮ ಪದ್ಧತಿಯೂ, ಸಾಮಂತಶಾಹಿ ವ್ಯವಸ್ಥೆಯೂ ಬಂಡವಾಳವಾದವು ಒಂದೇ ರೀತಿಯವು. ಬದಲಾಗುವುದು ಶೋಷಣೆಯ ರೂಪವಷ್ಟೇ. ಶೋಷಣೆಯಂತೂ ಉಳಿದೇ ಇರುತ್ತದೆ”[೨]. ಹಾಗೆಯೇ **ಕರ್ನಾಟಕ ಮತ್ತು ಕೇರಳ ಹೈಕೋರ್ಟಿನ ನಿವೃತ್ತ ಮುಖ್ಯ ನ್ಯಾಯಮೂರ್ತಿ ವಿ.ಎಸ್.ಮಳೀಮಠ** ಅವರು  “ಭಾರತದ ಸಂದರ್ಭದಲ್ಲಿ ಒಮ್ಮೆ ಆಕೆ ವೇಶ್ಯೆಯಾದರೆ ಮತ್ತೆ ಹಿಂದಿನ ಜೀವನಕ್ಕೆ ಮರಳುವುದು ಕಷ್ಟ”[೩] ಎಂದು ಹೇಳುತ್ತಾರೆ. ಇವೆಲ್ಲಕ್ಕಿಂತ ಮುಖ್ಯವಾಗಿ ೨-೩ ದಶಕಗಳಿಂದ ವೇಶ್ಯಾವಾಟಿಕೆ ಕುರಿತಾದ ಸುಪ್ರೀಂ ಕೋರ್ಟಿನ ತೀರ್ಪುಗಳೆಲ್ಲವೂ ಇದು ನಾಗರಿಕತೆಯ ದೇಹದ ಮೇಲಿರುವ ವ್ರಣಗಳೆಂದೇ ಆತಂಕಿಸಿವೆ.  “ಬಾಲೆಯರು, ಹೆಣ್ಣುಮಕ್ಕಳನ್ನು ಈ ರೀತಿಯ ಜೀತಕ್ಕೆ ಬಲವಂತದಿಂದಲೋ, ಪ್ರಚೋದಿಸಿಯೋ, ಆರ್ಥಿಕ ಸಂಕಷ್ಟದ ಕಾರಣಕ್ಕೋ ತಳ್ಳುವ ಮೂಲಕ ಅವರನ್ನು ನಿರಂತರ ಅತ್ಯಾಚಾರಕ್ಕೆ ಗುರಿ ಮಾಡಿದಂತಾಗುತ್ತದೆ. ತನ್ಮೂಲಕ ಹಿಂಸೆ ನೀಡಿ ಅವರ ದೇಹವನ್ನು ಘಾಸಿಗೊಳಿಸ ಲಾಗುತ್ತದೆ ಮತ್ತು ರೋಗಗಳು ಹರಡುತ್ತವೆ. ಇದನ್ನು ಯಾವುದೇ ಕಾರಣಕ್ಕೂ ಕ್ಷಮಿಸಲಾಗದು”.[೪] ಎಂದು ಹೇಳಿ ಅದರ ನಿರ್ಮೂಲನೆಗಾಗಿ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಕೊಟ್ಟಿತ್ತು. **(ರೂಪಾ ಹಾಸನ, ೨೦೧೪)** ಈ ಎಲ್ಲ ಕಾರಣಕ್ಕಾಗಿ ಮಕ್ಕಳ ಮೇಲೆ ನಡೆಯುತ್ತಿರುವ ಈ ಲೈಂಗಿಕ ಶೋಷಣೆಯನ್ನು ಅದರ ತೀವ್ರತೆ ಮತ್ತು ಭೀಕರತೆಯನ್ನ ಆಧರಿಸಿ 'ಲೈಂಗಿಕ ಜೀತ' ಎಂದು ಈ ಅಧ್ಯಯನವು ಗುರುತಿಸುತ್ತದೆ. ಹಾಗಿದ್ದರೆ, ಲೈಂಗಿಕತೆ ಎಂದರೇನು ಎನ್ನುವ ಪ್ರಮುಖವಾದ ಪ್ರಶ್ನೆ ನಮಗೆ ಎದುರಾಗುತ್ತದೆ. ಅದನ್ನು ಈಗಾಗಲೇ ನಡೆದಿರುವ ಅಧ್ಯಯನಗಳ ಮೂಲಕ ಅರ್ಥಮಾಡಿಕೊಂಡು ಅರ್ಥೈಸುವ ಪ್ರಯತ್ನವನ್ನು ಮುಂದೆ ಮಾಡಲಾಗಿದೆ.

**ಶ್ರೀಮತಿ,ಎಚ್.ಎಸ್. ಅವರು, ಹೆಗೆಲ್** ಅವರ ಚಿಂತನೆಯನ್ನು ಹೀಗೆ ಉಲ್ಲೇಖಿಸುತ್ತಾರೆ "ಲೈಂಗಿಕತೆ ಎಂಬುದು ನಿಯೋಗಿಯು ತಾನು ನಿರ್ದಿಷ್ಟ ಜೀವ ವರ್ಗಕ್ಕೆ ಸೇರಿದ್ದೇನೆಂಬ ಭಾವವನ್ನು ಪಡೆದುಕೊಳ್ಳಲು ನೆರವಾಗುವ ಮಾಧ್ಯಮ. ನಿಯೋಗಿಯಲ್ಲಿ ತನ್ನ ವ್ಯಕ್ತಿಗತ ವಾಸ್ತವವು ಅಪರಿಪೂರ್ಣವೆಂಬ ಅನಿಸಿಕೆಯು ಮೂಡಿ ತನ್ನ ಜೀವಿತ ವರ್ಗಕ್ಕೆ ಸೇರಿರುವ ಇನ್ನೊಂದು ಜೀವಿಯಲ್ಲಿ ಇರುವ ತನ್ನನ್ನೇ ಕಂಡು ಅದರೊಡನೆ ಬೆರೆಯುವ ಮೂಲಕ ಪೂರ್ಣಗೊಳ್ಳುವ ಬಯಕೆ ಮೂಡುತ್ತದೆ. ಈ ಪ್ರಕ್ರಿಯೆಯು ಜೀವಿಯು ತನ್ನ ಪೂರ್ಣತೆಯನ್ನು ಕಂಡುಕೊಳ್ಳುವುದರ ಜೊತೆಗೆ ತನ್ನಂತೆ ಇರುವ ಮತ್ತೊಂದು ಜೀವಿಯನ್ನು ರೂಪಿಸಲು ಸಾಧ್ಯವಾಗುತ್ತದೆ"[೨] ಎನ್ನುವುದನ್ನು ವಿವರಿಸುತ್ತಾರೆ.

**ರುತ್ ಡಿಕ್ಸನ್-ಮ್ಯುಲೇರ್** ಇವರು **ದಿ ಸೆಕ್ಸ್ಯುಯಾಲಿಟಿ ಕನೆಕ್ಷನ್ ಇನ್ ರೀ ಪ್ರೊಡಕ್ಟಿವ್ ಹೆಲ್ತ್** ಎಂಬ ಲೇಖನದಲ್ಲಿ ಗ್ರುಪೋ ಕೇರ್ಸ್ ಇವರು ಹೇಳಿದ್ದನ್ನು ಹೀಗೆ ಉಲ್ಲೇಖಿಸುತ್ತಾರೆ. "ಲೈಂಗಿಕತೆ ಎಂಬುದಕ್ಕೆ ವಿವಿಧ ಸಂದರ್ಭಗಳಲ್ಲಿ ವಿವಿಧ ಅರ್ಥಗಳಿವೆ. ಸಾಮಾಜಿಕವಾಗಿ ಆಯೋಜನೆಗೊಂಡಿರುವ ಲೈಂಗಿಕತೆ ಮತ್ತು ಲೈಂಗಿಕ ನಡುವಳಿಕೆಗಳ ನಾಲ್ಕು ಆಯಾಮಗಳನ್ನು ಅವರು ಸರಳವಾದ ಚೌಕಟ್ಟಿನಲ್ಲಿ ಹೀಗೆ ಪ್ರಸ್ತಾಪಿಸುತ್ತಾರೆ. "ಲೈಂಗಿಕ ನಡುವಳಿಕೆ ಎಂಬುದು ಜನರು ಲೈಂಗಿಕವಾಗಿ ಇತರರೊಡನೆ ಏನು ಮಾಡುತ್ತಾರೆ ಅಥವಾ ತಮಗಾಗಿ ಏನು ಮಾಡುತ್ತಾರೆ, ತಮ್ಮನ್ನು ತಾವು ಲೈಂಗಿಕವಾಗಿ ಹೇಗೆ ಪ್ರಸ್ತುತ ಪಡಿಸುತ್ತಾರೆ, ಹೇಗೆ ಮಾತನಾಡುತ್ತಾರೆ ಮತ್ತು ವರ್ತಿಸುತ್ತಾರೆ ಎಂಬುದನ್ನು ಪ್ರಾಯೋಗಿಕವಾಗಿ ಗಮನಿಸುವ (ಕನಿಷ್ಟ ತಾತ್ವಿಕವಾಗಿ) ಕ್ರಮಗಳನ್ನು ಒಳಗೊಂಡಿರುತ್ತದೆ. ಇದಕ್ಕೆ ಭಿನ್ನವಾಗಿ ಲೈಂಗಿಕತೆಯು ಲೈಂಗಿಕ ಪ್ರಚೋದನೆಗೆ ಮತ್ತು ತೃಪ್ತಿಗೆ (ಲಿಬಿಡೋ-ಕಾಮ) ಬೇಕಾಗುವ ದೈಹಿಕ ಸಾಮರ್ಥ್ಯ ಹಾಗೂ ಸಾಮಾಜಿಕ ನಡುವಳಿಕೆ ಮತ್ತು ಲಿಂಗ ಮತ್ತು ಲಿಂಗತ್ವಗಳ ರಚನೆಯ ಜೊತೆಗೆ ವ್ಯಕ್ತಿಗತವಾದ ಮತ್ತು ಸಾಮಾಜಿಕ ಅರ್ಥಗಳನ್ನು ಹಂಚಿಕೊಳ್ಳುವಂತಹ ವಿಷಯಗಳ ಜೊತೆಗೆ ಸುತ್ತುವರಿಯಲ್ಪಟ್ಟಿರುವಂತಹ ಸಮಗ್ರ ಪರಿಕಲ್ಪನೆಯಾಗಿದೆ. ಹಾಗೆಯೇ ಲೈಂಗಿಕತೆಯು ಜೀವ ವೈಜ್ಞಾನಿಕ ಪರಿಕಲ್ಪನೆಯಾಗಿ ಶ್ರೇಣೀಕೃತ ಗೊಂಡ ಸಾಮಾಜಿಕ ಸಂಬಂಧಗಳ ನೈಸರ್ಗಿಕ ಕಾರ್ಯಗಳನ್ನು ಪ್ರತಿನಿಧಿಸಲು ಮತ್ತು ವ್ಯಾಖ್ಯಾನಿಸಲು ಇರುವ ಸಂಸ್ಕೃತಿ ಮತ್ತು ಸಾಮಾಜಿಕ ಉತ್ಪನ್ನವಾಗಿದೆ".[೩]

ಸಾರ್ತ್ರ ಮತ್ತು ಮಾರ್ಲೋ-ಪಾಂಟಿ ಹೇಳುವಂತೆ "ಲೈಂಗಿಕತೆಯು ಅಸ್ತಿತ್ವದ ಸಹಚರಿ ಸ್ಥಿತಿ". ಇದನ್ನು ಎರಡು ರೀತಿಯಿಂದ ಅರ್ಥೈಸಿಕೊಳ್ಳಬಹುದು. ಮೊದಲನೇಯದಾಗಿ ಅಸ್ತಿತ್ವದ ಪ್ರತಿಯೊಂದು ಅನುಭವವೂ ಲೈಂಗಿಕ ನೆಲೆಯ ಮಹತ್ವವನ್ನು ಹೊಂದಿದೆ. ಎರಡನೇಯದಾಗಿ. ಪ್ರತಿ ಲೈಂಗಿಕ ಸಂಗತಿಯೂ ಅಸ್ತಿತ್ವದ ನೆಲೆಯಲ್ಲಿ ಮಹತ್ವ ಪಡೆದಿದೆ"[೪](ಶ್ರೀಮತಿ, ಎಚ್.ಎಸ್.).

**ಸೆಕ್ಸ್ಯುಯಾಲಿಟಿ ಇನ್‌ಫರ್ಮೇಶನ್ ಆಂಡ್ ಎಜ್ಯುಕೇಶನ್ ಕೌನ್ಸಿಲ್ ಆಫ್ ದಿ ಯುನೈಟೆಡ್ ಸ್ಟೇಟ್ಸ್** ಪ್ರಕಾರ "ಮಾನವ ಲೈಂಗಿಕತೆಯು ವ್ಯಕ್ತಿಯ ಲೈಂಗಿಕ ಜ್ಞಾನ. ನಂಬಿಕೆ. ವರ್ತನೆಗಳು. ಮೌಲ್ಯಗಳು ಮತ್ತು ನಡುವಳಿಕೆಗಳನ್ನು ಒಳಗೊಂಡಿರುತ್ತವೆ. ಅದರ ವಿವಿಧ ಆಯಾಮಗಳು ಅಂಗರಚನಾ ಶಾಸ್ತ್ರ ಮತ್ತು ಲೈಂಗಿಕ ಪ್ರತಿಕ್ರಿಯೆ ವ್ಯವಸ್ಥೆಯ ಜೀವರಸಾಯನಶಾಸ್ತ್ರ. ಗುರುತಿಸುವಿಕೆ. ಮನರ್ಮನನ ತರಬೇತಿ.

ಪಾತ್ರಗಳು ಮತ್ತು ವ್ಯಕ್ತಿತ್ವ ಮತ್ತು ವಿಚಾರಗಳು, ಅನುಭವಗಳು ಮತ್ತು ಸಂಬಂಧಗಳನ್ನು ಒಳಗೊಂಡಿದೆ. ಲೈಂಗಿಕತೆಯ ಅಭಿವ್ಯಕ್ತಿಯು ನೈತಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಮತ್ತು ನೀತಿಯುತ ಕಾಳಜಿಯಿಂದ ಪ್ರಭಾವಿತಗೊಂಡಿದೆ"(SIECUS -1996)[6] "ಲೈಂಗಿಕತೆ ಎಂಬುದು ನಿಸರ್ಗದತ್ತ ಪ್ರೇರಣೆ. ಮೂಲತಃ ಪ್ರಾಣಿಯಾದ ಮನುಷ್ಯನಲ್ಲಿರುವ ಹೆಣ್ಣು ಗಂಡು ಪ್ರವೃತ್ತಿಗಳು ಆವನಿಗಾಗಿಯಲ್ಲ. ಕುಲ ಪರಂಪರೆಯನ್ನು ಮುಂದುವರೆಸುವ ನಿಸರ್ಗದ ಇಚ್ಛೆಗೆ ಅದು ಸೇರಿದ್ದು".[7] ಎಂದು **ಶಿವರಾಮ ಕಾರಂತರು** ತಮ್ಮ **'ಮೈ ಮನಗಳ ಸುಳಿಯಲ್ಲಿ'** ಕಾದಂಬರಿಯ ಮುನ್ನುಡಿಯಲ್ಲಿ ವಿವರಿಸುತ್ತಾರೆ. **'ಸ್ತ್ರೀ ವಾದ: ತಾತ್ವಿಕತೆ'** ಎನ್ನುವ **ಪುಸ್ತಕದಲ್ಲಿ ಲೇಖಕರಾದ ಶ್ರೀಮತಿ ಎಚ್ ಎಸ್ ಅವರು,** "ಲೈಂಗಿಕತೆ ಎನ್ನುವುದು ಗಾಳಿ, ನೀರು, ಆಹಾರಗಳಂತಹ ಇನ್ನುಳಿದ ಜೀವನಾವಶ್ಯಕ ಸಂಗತಿಗಳಂತೆ ಸ್ವ ಸಂಪೂರ್ಣವಾದ ಅನುಭವವಲ್ಲ. ಭಿನ್ನ ಲಿಂಗಿಗಳಲ್ಲಿ ಪರಸ್ಪರವಾಗಿ ವಿನಿಮಯವಾಗುವ ಅನುಭವ. ಹಾಗಾಗಿ ಇಲ್ಲಿ ಪರಸ್ಪರ ಬಯಕೆ, ಆಕರ್ಷಣೆಗಳೂ ಸಹಜ. ಕೆಲವು ಪ್ರಾಣಿಗಳಲ್ಲಿ ಈ ಮೈಥುನದ ಬಯಕೆ ಕೇವಲ ಸಂತಾನೋತ್ಪತ್ತಿಯ ಸಂದರ್ಭಕ್ಕಷ್ಟೇ ನಿಗದಿತವಾಗಿರುತ್ತದೆಯಾದರೆ, ಕೆಲವು ಜೀವಿಗಳಲ್ಲಿ ಬಹುಮುಖ್ಯವಾಗಿ ಮಾನವರಲ್ಲಿ ಸಂತಾನೋತ್ಪತ್ತಿಯ ಹೊರತಾಗಿಯೂ ನಿರಂತರವಾಗಿರಬಹುದು. ಇಂಥಾ ಬಯಕೆ, ಆನಂದ, ಖುಷಿ ಎಂಬಂತಹ ಅಮೂರ್ತ, ಭಾವನಾತ್ಮಕ ಅಗತ್ಯಗಳನ್ನು ಪೂರೈಸುವಂತದ್ದಾಗಿರುತ್ತದೆಂದು"[8] ವಿವರಿಸುತ್ತಾರೆ.

ಹೀಗೆ ಲೈಂಗಿಕತೆಯು ಪ್ರಾಣಿ ಸಂಕುಲದ ಮೂಲಭೂತವಾದ ಅಗತ್ಯತೆ ಎನಿಸಿ, ಅದರ ಸಂತತಿಯ ಮುಂದುವರಿಕೆಗಾಗಿ ನಿಸರ್ಗವೇ ಹುಟ್ಟು ಹಾಕಿದ ಒಂದು ಸಹಜ ಪ್ರಕ್ರಿಯೆ ಎನ್ನಬಹುದು. ಇದು ಗಂಡು ಹೆಣ್ಣು ಪರಸ್ಪರ ಕೊಟ್ಟು ಪಡೆಯುವ ಮತ್ತು ಪಡೆದು ಕೊಡುವ ಒಂದು ಜೀವಶಾಸ್ತ್ರೀಯ ಚಟುವಟಿಕೆಯಾಗಿದೆ. ಗಂಡು ಮೇಲೋ, ಹೆಣ್ಣು ಮೇಲೋ ಎಂಬ ಲಿಂಗತ್ವದ ಪ್ರಶ್ನೆಯೇ ಬರುವುದಿಲ್ಲ. ಆದರೂ ಕೂಡ ಲೈಂಗಿಕವಾಗಿ ಹೆಣ್ಣು ಗಂಡಿಗೆ ಅಧೀನವಾಗುವ ಸಂದರ್ಭವೇನಿತ್ತು? ಇದು ಉಳಿಯುವಿಕೆಯ ಒಂದು ಪ್ರಕ್ರಿಯೆಯಾ? ಜೈವಿಕ ಮತ್ತು ದೈಹಿಕ ಅಸಾಮರ್ಥ್ಯವಾ? ಅಥವಾ ಹೆಣ್ಣಿನ ಲೈಂಗಿಕತೆಯನ್ನು ಬಂಧಿಸಿ, ತಾನು ಮುಕ್ತವಾಗಿ ಲೈಂಗಿಕ ಸುಖದ ಅವಕಾಶವನ್ನು ಪಡೆಯುವ ಪುರುಷ ರಾಜಕಾರಣವಾ? ಎಂಬುದನ್ನು ವಿಶ್ಲೇಷಿಸುವ ಮತ್ತು ಅರ್ಥೈಸಿಕೊಳ್ಳುವ ಅಗತ್ಯವಿದೆ.

ಆಹಾರ ಸಂಗ್ರಹಣೆಯಿಂದ ಆಹಾರ ಉತ್ಪಾದನೆಯ ಹಂತಕ್ಕೆ ಬರುವ ಮೊದಲು ಮುಕ್ತವಾಗಿ ಕಾಡು–ಮೇಡುಗಳಲ್ಲಿ ಓಡಾಡಿಕೊಂಡಿದ್ದ ಸಂದರ್ಭದಲ್ಲಿ ಮಾನವ ಜೀವಿಗೆ ಲೈಂಗಿಕತೆ ಒಂದು ಸಹಜ ಕ್ರಿಯೆಯಾಗಿತ್ತು. ಜೀವರಕ್ಷಣೆಗಾಗಿ ಒಂದೆಡೆ ಕೂಡಿದಾಗ ಸಮುದಾಯದ ಜೀವನಕ್ಕೆ ನಾಂದಿಯಾಯಿತು ಎಂಬುದನ್ನು ಅನೇಕ ಅಧ್ಯಯನಗಳಿಂದ ಕಂಡುಕೊಳ್ಳುತ್ತೇವೆ. ಕೂಡಿ ದುಡಿಯುವ ಮತ್ತು ಹಂಚಿ ತಿನ್ನುವ ಪರಿಸರದಲ್ಲಿ ತಾಯಿ ಎಂಬುದು ಸತ್ಯವಾಗಿತ್ತು. 'ಮಾತೃ ಪ್ರಧಾನವಾದ ಶಿಲಾಯುಗದ ಬುಡಕಟ್ಟುಗಳಲ್ಲಿ 'ವ್ಯಭಿಚಾರ' ಎಂಬ ಮಾತಿಗೆ ಅರ್ಥವಿಲ್ಲ'[9] ಎಂದು ಕೋಸಾಂಬಿಯವರು ಪ್ರಾಚೀನ ಭಾರತದ ಚರಿತ್ರೆ ಪುಸ್ತಕದಲ್ಲಿ ವಿಶ್ಲೇಷಣೆ ಮಾಡುತ್ತಾರೆ.

ಈ ವ್ಯವಸ್ಥೆಯಲ್ಲಿ ಆದ ಮೊದಲ ಪರಿವರ್ತನೆ ಅಂದರೆ – "ಕೆಲವು ಸಮುದಾಯಗಳು ಒಂದಾಗಿ ಒಂದೇ ಗುಣ ಅಥವಾ ಬುಡಕಟ್ಟಾಗಿ ರೂಪು ತಳೆದದ್ದು. ವಿಭಿನ್ನವಾದ ಆಹಾರ ಪದಾರ್ಥಗಳನ್ನು ಸಂಗ್ರಹಿಸುವ ವಿವಿಧ ಸಮುದಾಯಗಳು ಒಂದು ಗಣವಾಗಿ ರೂಪುಗೊಂಡಾಗ, ಒಬ್ಬರು ಸಂಗ್ರಹಿಸಿದ ಆಹಾರವನ್ನು ಇನ್ನೊಬ್ಬರು ಸಂಗ್ರಹಿಸಿದ ಆಹಾರದೊಂದಿಗೆ ವಿನಿಮಯ ಮಾಡಿಕೊಳ್ಳುವುದೂ ನಡೆಯುತ್ತದೆ. ಹೀಗೆಯೇ ಲೈಂಗಿಕ ನಿಯಮಗಳಲ್ಲಿಯೂ ಇದು ಪರಿವರ್ತನೆ ತಂದಿತು. ಈವರೆಗೆ ಸಮುದಾಯಗಳ ಸ್ತ್ರೀ–ಪುರುಷರು ತಮ್ಮ ತಮ್ಮ ಸಮುದಾಯಗಳೊಂದಿಗೆ ಮಾತ್ರ ಲೈಂಗಿಕ ಸಂಬಂಧವನ್ನು ಬೆಳೆಸುವುದು ಎಂದಾಗಿತ್ತು. ಆದರೆ ಈಗ ಗಣವೊಂದು ರೂಪು ತಳೆದ ಮೇಲೆ ಒಂದೇ ಸಮುದಾಯದ ಒಳಗೆ ಲೈಂಗಿಕ ಸಂಬಂಧಗಳು ನಿಷಿದ್ಧವೆನಿಸುತ್ತವೆ. ಸಮುದಾಯದೊಳಗೆ ಅಂತರ್ಸಂಬಂಧಗಳಾಗುವಂತಿಲ್ಲ. ಒಂದು ಸಮುದಾಯಕ್ಕೆ ಸೇರಿದವರೆಲ್ಲ "ಸಗೋತ್ರ"ರೆನಿಸಿಕೊಳ್ಳುತ್ತಾರೆ. ಆದರೆ ಒಟ್ಟು ಬುಡಕಟ್ಟು ತನ್ನಾಚೆಗಿನ ಸಂಬಂಧವನ್ನು ನಿಷೇಧಿಸುವ ನಿಯಮವನ್ನು ಪಾಲಿಸುತ್ತದೆ. ಅಂದರೆ ಒಂದು ಬುಡಕಟ್ಟಿನವರು ತಮ್ಮ ಬುಡಕಟ್ಟಿನದೇ ಇತರ ಸಮುದಾಯಗಳೊಂದಿಗೆ ಸಂಬಂಧ ಬೆಳೆಸುವಂತಿಲ್ಲ. ಒಂದೇ ಬುಡಕಟ್ಟಿನ ಸಮುದಾಯಗಳ ನಡುವೆ ಸಾಮೂಹಿಕ ವಿವಾಹಗಳು ಕೂಡ ಈ ಹಂತದಲ್ಲಿ ಪ್ರಾರಂಭವಾಯಿತು"[೨] ಎಂದು ಡಿ. ಡಿ. ಕೋಸಾಂಬಿ ಅವರು ತಿಳಿಸುತ್ತಾರೆ.

"ಭೂಮಿ ಸಮುದಾಯದ ಎಲ್ಲರಿಗೂ ಸೇರಿದ್ದ ಶಿಲಾಯುಗದಲ್ಲಿ, ಸ್ತ್ರೀ ಮತ್ತು ಪುರುಷರು ಪರಸ್ಪರ ಸಹಕಾರಿಗಳಾಗಿದ್ದರು. ಶ್ರಮವಿಭಜನೆಯಿಂದ ಎರಡು ಲಿಂಗಗಳು ಎರಡು ವರ್ಗಗಳಾಗಿದ್ದರೂ ಸಮಾನತೆ ಇತ್ತು. ಪುರುಷ ಮನೆಯ ಹೊರಗೆ ಆಹಾರ ಸಂಗ್ರಹಣೆ ತೊಡಗಿದರೆ, ಮಹಿಳೆ ಮನೆಯಲ್ಲುಳಿದು ಕುಂಬಾರಿಕೆ ನೇಕಾರಿಕೆ, ತೋಟಗಾರಿಕೆ ಮಾಡುತ್ತಿದ್ದಳು. ಕುಟುಂಬದ ಆರ್ಥಿಕತೆಯಲ್ಲಿ ಇಬ್ಬರಿಗೂ ಪಾಲಿತ್ತು. ಲೋಹದ ಬಳಕೆಯನ್ನು ಕಂಡುಕೊಂಡ ಪುರುಷ ಕೃಷಿಯ ವಿಸ್ತರಣೆಯಲ್ಲಿ, ಕೃಷಿ ಉಪಕರಣವಾಗಿ ಲೋಹವನ್ನು ಬಳಸಿಕೊಂಡ. ಹೀಗೆ ಕೃಷಿ ವ್ಯಾಪ್ತಿಯನ್ನು ಹೆಚ್ಚಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಭೂಮಿಯನ್ನು ಗುಲಾಮರನ್ನು ತನ್ನ ಖಾಸಗಿ ಆಸ್ತಿಯನ್ನಾಗಿ ಮಾಡಿಕೊಂಡ. ಹೊಸ ಉಪಕರಣಗಳ ಬಳಕೆಯಿಂದ ಶ್ರಮವಿಭಜನೆಯ ಸಮತೋಲನ ತಪ್ಪಿತು. ಮಾತೃ ಮೂಲೀಯ ವ್ಯವಸ್ಥೆಯ ಸ್ತ್ರೀ ಅಧಿಕಾರ ಪುರಷನ ಪಾಲಾಯಿತು. ಖಾಸಗಿ ಆಸ್ತಿಯ ತಳಹದಿಯ ಮೇಲೆ ನೆಲೆಗೊಂಡ ಪಿತೃ ಪ್ರಧಾನ ಕುಟುಂಬದಲ್ಲಿ ಸ್ತ್ರೀ ಪುರುಷನ ಅಧೀನಕ್ಕೆ ಒಳಗಾಗುತ್ತಾಳೆ"[೩] ಎಂದು ಏಂಗೆಲ್ಸ್ ವಿಶ್ಲೇಷಿಸುತ್ತಾನೆ.

"ಬೇಸಾಯವು ನೇಗಿಲಿಗೆ ತೇರ್ಗಡೆ ಪಡೆದ ಮೇಲೆ ದೈಹಿಕ ಶಕ್ತಿಯ ಬೆಲೆ ಹೆಚ್ಚಿತು. ಆಗ ಪುರುಷ ತಾನು ಸ್ತ್ರೀಗಿಂತ ಹೆಚ್ಚು ಎಂದು ಸಾಧಿಸಿ ತೋರಿಸಿದ. ದನಕರುಗಳೂ, ವ್ಯವಸಾಯೋತ್ಪನ್ನಗಳೂ, ವರ್ಗಾವಣೆಗೊಳ್ಳುವ ಆಸ್ತಿಯಾದಾಗ ಮಹಿಳೆಯು ಲೈಂಗಿಕವಾಗಿ ಅಧೀನತೆಗೆ ಒಳಪಟ್ಟಳು. ಈ ಅಧೀನಗೊಂಡ ಲೈಂಗಿಕತೆಯ ನಿಯಂತ್ರಣದ ಮೂಲ ರೂಪವೇ ವಿವಾಹ"[೪] ಎಂದು ವಿಲ್ ಡ್ಯೂರಾಂಟೋ ಅವರು ತಿಳಿಸುತ್ತಾರೆ. "ವಿವಾಹವೆಂಬುದು ಹೆಂಗಸರಿಗೆ ಸಮಾಜವು ನೀಡಿದ ಜವಾಬ್ದಾರಿ"[೫] ಎಂದು ಸಿಮೋನ್ ದ ಬೋವಾ ತಮ್ಮ ಅಧ್ಯಯನದಲ್ಲಿ ತಿಳಿಸುತ್ತಾರೆ. "ಗಂಡು–ಹೆಣ್ಣು ಎರಡೂ

ಸಂತಾನವಾಗುವವರೆಗೂ ಲೈಂಗಿಕ ಸಂಬಂಧವನ್ನು ಇರಿಸಿಕೊಂಡಿರುವ ಸ್ಥಿತಿ"ಯನ್ನು ವೆಸ್ಟರ್ ಮಾರ್ಕ್ ಅವರು ವಿವಾಹವೆಂದು ಕರೆಯುತ್ತಾರೆ.

"ಪುರಾತನ ಸಮಾಜದಲ್ಲಿ ಬಹುಪತ್ನೀತ್ವ ಮತ್ತು ಬಹುಪತಿತ್ವ ಆಚರಣೆಯಲ್ಲಿತ್ತು. ಆಗ ಎಲ್ಲಾ ಮಕ್ಕಳನ್ನು ಸಮುದಾಯದ ಮಕ್ಕಳೆಂದೇ ಭಾವಿಸುತ್ತಿದ್ದರು. ಇದು ಸಮೂಹ ವಿವಾಹದ ಮೂಲಕ ಜಾರಿಯಲ್ಲಿತ್ತು. ಇಲ್ಲಿ ಭೇದ ಭಾವನೆಗಳಿಲ್ಲದೆ ಪುರುಷರು ಮತ್ತು ಮಹಿಳೆಯರು ಪರಸ್ಪರ ಜೊತೆಯಾಗಿ ಬದುಕುತ್ತಿದ್ದರು. ಈ ಬದುಕು ವ್ಯಕ್ತಿ ವ್ಯಕ್ತಿಗಳ ನಡುವೆ, ಪ್ರತಿಷ್ಠೆ ಮತ್ತು ಅಸೂಯೆಯು ಬರದಂತೆ ನೋಡಿಕೊಂಡಿತು. ಇಲ್ಲಿ ಲೈಂಗಿಕತೆ ಮತ್ತು ಲೈಂಗಿಕ ಸಂಬಂಧಗಳು ಸರಳವಾಗಿದ್ದವು. ಇಲ್ಲಿಯೂ ಸ್ವೇಚ್ಛಾ ಲೈಂಗಿಕ ಸಂಬಂಧಗಳು ಇದ್ದವು ಎಂದು ಕೆಲವು ಚರಿತ್ರಾಕಾರರು ಗುರುತಿಸುತ್ತಾರೆ. ಸಮೂಹ ವಿವಾಹದ ಅಂತ್ಯದಲ್ಲಿ ಬೆಳೆದು ಬಂದ ಯುಗ್ಮ ವಿವಾಹ ವ್ಯವಸ್ಥೆಯು ಸಹಜ ತಾಯಿಯ ಜೊತೆಗೆ, ಪ್ರಮಾಣೀಭೂತನಾದ 'ತಂದೆ'ಯನ್ನು ಕುಟುಂಬ ಪದ್ಧತಿಯಲ್ಲಿ ಸೇರಿಸಿತು. ಆಗ ಅಸ್ತಿತ್ವದಲ್ಲಿದ್ದ ಶ್ರಮ ವಿಭಜನೆಯ ಪ್ರಕಾರ, ಕುಟುಂಬದ ಹೊರಗೆ ಆಹಾರ ಉತ್ಪಾದನೆಗೆ ಸಂಬಂಧಿಸಿದ(ದನಕರುಗಳು ಗುಲಾಮರು) ಮಾಲೀಕತ್ವ ಪುರುಷನ ಮತ್ತು ಗೃಹೋಪಯೋಗಿ ವಸ್ತಗಳೆಲ್ಲ ಸ್ತ್ರೀಯ ಸ್ವತ್ತಾಗಿದ್ದವು. ಆದರೂ ಸಹ ಆ ಸಂದರ್ಭದಲ್ಲಿ ಅಸ್ತಿತ್ವದಲ್ಲಿದ್ದ ಸಮಾಜದ ಸಂಪ್ರದಾಯದ ಪ್ರಕಾರ ಅವರಿಗೆ ಜನಿಸಿದ ಮಕ್ಕಳು ಪುರುಷನ ಕುಲಪರಂಪರೆಗೆ ಸಂಬಂಧಿಸುತ್ತಿರಲಿಲ್ಲ. ಆದರೆ ಹೆಚ್ಚಿದ ಕುಟುಂಬ ಸಂಪತ್ತು ಮತ್ತು ಸ್ಥಾನಮಾನಗಳು ಹೆಂಡತಿಗೆ ಇದ್ದ ಉತ್ತರಾಧಿಕಾರದ ಪಾರಂಪರಿಕ ಪದ್ಧತಿಯನ್ನು ಕಿತ್ತೊಗೆದು, ಅದು ತನ್ನ ಸ್ವಂತ ಮಕ್ಕಳ ಪರವಾಗುವಂತೆ ಮಾಡಲು ಉತ್ತೇಜನ ನೀಡಿದವು. ಪರಿಣಾಮವಾಗಿ ಯುಗ್ಮ ಕುಟುಂಬವು ಏಕಪತಿ–ಏಕಪತ್ನಿ ಕುಟುಂಬಕ್ಕೆ ಸ್ಥಿತ್ಯಂತರಗೊಂಡಿದ್ದನ್ನು ಸೂಚಿಸುತ್ತದೆ. ಪತ್ನಿಯ ಪತಿನಿಷ್ಠೆಯನ್ನು, ಅಂದರೆ ಮಕ್ಕಳ ತಂದೆ ಆತನೇ ಎಂಬುದನ್ನು , ಖಚಿತಪಡಿಸುವ ಸಲುವಾಗಿ, ಪುರುಷ ಮಹಿಳೆಯನ್ನು ಸಂಪೂರ್ಣ ಆಧಿಪತ್ಯದಲ್ಲಿರಿಸಿಕೊಂಡ. ಹೀಗೆ ಹುಟ್ಟಿಕೊಂಡ ಏಕಪತ್ನಿತ್ವದಿಂದಾಗಿ, ಪುರುಷರು ಮತ್ತು ಅವಿವಾಹಿತ ಸ್ತ್ರೀಯರ ಮಧ್ಯೆ ವಿವಾಹೇತರ ಸಂಬಂಧಗಳು ಹುಟ್ಟಿಕೊಂಡವು. ಈ ಸಂಬಂಧವನ್ನೇ ಮಾರ್ಗನ್ ಅವರು ಉಪಪತ್ನೀತ್ವ ಎಂದು ಕರೆಯುವುದನ್ನು ಏಂಗೆಲ್ಸ್ ಗುರುತಿಸುತ್ತಾರೆ. ಏಕಪತ್ನಿತ್ವದ ಜೊತೆ ಜೊತೆಗೆ ನಡೆದು ಬಂದ ಈ ಉಪಪತ್ನಿತ್ವವೇ ಕಾಲಾಂತರದಲ್ಲಿ ವಿಭಿನ್ನ ರೂಪಗಳಲ್ಲಿ ಏಳಿಗೆ ಪಡೆಯುತ್ತ, ನಾಗರಿಕ ಹಂತದಲ್ಲಿ ವೇಶ್ಯಾವೃತ್ತಿಯಾಗಿ ವಿಕಾಸವಾದದ್ದನ್ನು ಏಂಗೆಲ್ಸ್ ವಿಶ್ಲೇಷಿಸುತ್ತಾರೆ. ಮುಂದುವರೆದು, ಉಪ ಪತ್ನಿತ್ವವು ಇತರ ಜನತೆಗಳಲ್ಲಿ ವಿವಾಹದ ಮೊದಲು ಯುವತಿಯರಿಗೆ ನೀಡಲಾಗುತ್ತಿದ್ದ ಲೈಂಗಿಕ ಸ್ವಾತಂತ್ರ್ಯದಿಂದ ವೇಶ್ಯಾವೃತ್ತಿಯೂ, ಗುಲಾಮ ಸ್ತ್ರೀಯರ ಬಲಾತ್ಕಾರದ ಲೈಂಗಿಕ ಜೀತವೂ ಹುಟ್ಟಿಕೊಂಡವು. ಇದನ್ನು ಆಳುವ ವರ್ಗಗಳು ಪೋಷಿಸಿಕೊಂಡು ಬಂದವು. ಇದರ ಪರಿಣಾಮ ಪುರುಷರ ಬದುಕಿನಲ್ಲಿ ಯಾವ ವ್ಯತ್ಯಾಸವನ್ನೂ ಉಂಟು ಮಾಡುವುದಿಲ್ಲ. ಆದರೆ ಸ್ತ್ರೀಯರನ್ನು ಬಹಿಷ್ಕರಿಸಲಾಗುತ್ತದೆ, ಹೊರ ದೂಡಲಾಗುತ್ತದೆ. ಇದೇ ಸ್ತ್ರೀ ಜಾತಿಯ ಮೇಲೆ ಪುರುಷ ಜಾತಿಯ ಪರಮಾಧಿಕಾರ ಎಂದು ಏಂಗೆಲ್ಸ್ ಇಲ್ಲಿ ತಿಳಿಸುತ್ತಾರೆ. ಹೀಗೆ ಬಹುಪತ್ನಿತ್ವದಿಂದ–

ಏಕಪತ್ನಿತ್ವಕ್ಕೆ ಸಮಾಜವು ಸ್ಥಿರಗೊಳ್ಳುವಲ್ಲಿ ಹುಟ್ಟಿಕೊಳ್ಳುವ ಉಪಪತ್ನಿಯರು ಆರ್ಯೇತರರಾದ, ಭೂಮಿ ಇಲ್ಲದ ವರ್ಣವ್ಯವಸ್ಥೆಯಲ್ಲಿ ಶೂದ್ರರೆನಿಸಿಕೊಂಡ ಸಮುದಾಯಗಳ ಹೆಣ್ಣುಮಕ್ಕಳೇ ಇರಬೇಕೆಂಬುದನ್ನು ಮಾರ್ಗನ್ ಅವರ ಅಧ್ಯಯನವು ಚಿಂತಿಸುತ್ತದೆ.[೧೭] ಇದನ್ನೇ ಸಿಮೊನ್ ದ ಬೋವಾ ಅವರು, ಕೃಷಿಯಿಂದ ಮಹಿಳೆಯನ್ನು ದೂರ ಮಾಡಿ, ವರ್ಣ ಜಾತಿಗಳ ಕಟ್ಟಳೆಗಳ ಕೆಳಗೆ ಬಂಧಿಸಿ, ಮಾತೃ ಮೂಲೀಯವಾಗಿದ್ದ ಅರಣ್ಯವಾಸಿಗಳ ಕುಟುಂಬಗಳನ್ನು ಪಿತೃಪ್ರಧಾನತೆಗೆ ತಂದು ನಿಲ್ಲಿಸಿದ ಪ್ರಸಂಗಗಳಲ್ಲಿ ಕೆಳ/ತಳ ವರ್ಗದ ಪುರುಷರು ಮೇಲ್ವರ್ಗದವರ ಹೊಲ ಮನೆಗಳಲ್ಲಿ ಕೆಲಸ ಮಾಡುವ ಕೂಲಿಗಳಾಗುತ್ತಾರೆ. ಯಾವುದೇ ಆರ್ಥಿಕತೆಯೇ ಇರದ ಮಹಿಳೆಯು ಅದೇ ಮೇಲ್ವರ್ಗದ ಪುರುಷರ ಮುಕ್ತ ಲೈಂಗಿಕತೆಗೆ ಒಳಗಾಗಲೇ ಬೇಕಾದ ಪರಿಸ್ಥಿತಿಗಳು ನಿರ್ಮಾಣವಾಗುತ್ತವೆ. ಇದಕ್ಕೆ ಧರ್ಮ, ನಂಬಿಕೆ ಸಾಂಪ್ರದಾಯಿಕತೆಗಳ ಲೇಪನ ನೀಡಿ ದೇವದಾಸಿ, ಬಸವಿ, ಜೋಗುತಿ, ಪಾತರದವಳು, ವೇಶ್ಯೆ, ಸೂಳೆ, ಇತ್ಯಾದಿ ಹೆಸರಿನಲ್ಲಿ ಸಮಾಜ ಗುರುತಿಸುತ್ತದೆ.[೧೮] (ಸೆಕೆಂಡ್ ಸೆಕ್ಸ್). ಈ ಸ್ಥಿತಿಯನ್ನು ಒಪ್ಪಿಕೊಳ್ಳುವಂತೆ ಮಾಡಲು "ಮೇಲ್ಜಾತಿಗಳು ತಮ್ಮ ಸುಲಿಗೆಯ ಸ್ವಾರ್ಥಕ್ಕಾಗಿ ಸಾಮಾಜಿಕ ಕಟ್ಟುಪಾಡುಗಳನ್ನು ಧಾರ್ಮಿಕ ಕಟ್ಟುಪಾಡುಗಳನ್ನಾಗಿ ಮಾಡಿದ್ದು ತೀರ ಅಸಹನೀಯ. ಇದನ್ನು ಜಾತಿ ಸಮಾಜ ಮನ್ನಿಸಿತ್ತು. ದೇವದಾಸಿಯಂತಹ ಪದ್ಧತಿ ಈ ಹಂತದಲ್ಲಿ ಮೇಲ್ಜಾತಿಯವರ ತೆವಲಿಗೆ ಕಾರಣವಾದರೆ, ಇದು ಕೆಳಜಾತಿಗಳ ಮಹಿಳೆಯರ ಅಸಹಾಯಕತೆಗಳಿಗೆ(ಹಸಿವು, ಬಡತನ, ಇತ್ಯಾದಿ) ಹಿಡಿದ ಕನ್ನಡಿಯಾಯಿತು. ಇದನ್ನು ಪ್ರತಿಭಟಿಸುವ ಪ್ರಶ್ನೆಯೇ ಇರಲಿಲ್ಲ ಎಂದು ಎಸ್ ಎಸ್ ಹಿರೇಮಠ(೨೦೦೫)[೧೯] ಅವರು ವಿಶ್ಲೇಷಿಸುತ್ತಾರೆ.

ವರ್ಗ, ವರ್ಣ, ಧರ್ಮ, ಜಾತಿ ಇವುಗಳ ಹೆಸರಿನಲ್ಲಿ ಸ್ತರಗಳನ್ನು ಹುಟ್ಟು ಹಾಕಿದ ಪುರೋಹಿತಶಾಹಿ, ಸಾಮಂತರು, ಅರಸೊತ್ತಿಗೆಗಳು, ಊಳಿಗಮಾನ್ಯ, ಜಮೀನ್ದಾರಿ ವ್ಯವಸ್ಥೆಗಳು ಮಹಿಳೆಯರನ್ನು ಬಂಧಿಸಿತ್ತು. ಸಮಾಜ, ಅವಳ ಜೈವಿಕತೆಯನ್ನೇ ಮೂಲವಾಗಿಸಿಕೊಂಡು ಲಿಂಗ ತಾರತಮ್ಯ, ವೈಧವ್ಯ, ಬಾಲ್ಯ-ವಿವಾಹ, ವರದಕ್ಷಿಣೆ ಇನ್ನೂ ಮುಂತಾದ ಸಾಮಾಜಿಕ ಪಿಡುಗುಗಳಿಗೆ ಮಹಿಳೆಯರನ್ನು ಬಲಿಯಾಗಿಸುವುದು ಹೆಚ್ಚಿತು. ಇವು ಮಹಿಳಾ ಕುಲಕ್ಕೆ ಅಂಟಿದ ಶಾಪಗಳಾಗಿದ್ದರೆ, ಜಾತಿಯ ಹೆಸರಿನಲ್ಲಿ ವರ್ಗಗಳನ್ನು ಸೃಷ್ಟಿಸಿ ಕೆಳವರ್ಗದ ಮಹಿಳೆಯರನ್ನು ವಿಚಿತ್ರವಾದ ಸಾಮಾಜಿಕ ಸನ್ನಿವೇಶಗಳಿಂದ ಹಿಡಿದಿಡಲಾಯಿತು. ಜಮೀನ್ದಾರಿ ಪಟ್ಟಭದ್ರ ಹಿತಾಸಕ್ತಿಗಳು, ಕೆಳವರ್ಗದ ಜನರನ್ನು ಭೂರಹಿತರನ್ನಾಗಿಸಿ, ಅವರ ಮಹಿಳೆಯರು ಮತ್ತು ಅವರ ಹೆಣ್ಣುಮಕ್ಕಳನ್ನು ತಮ್ಮ ಲೈಂಗಿಕತೆಗಾಗಿ ಬಳಸಿಕೊಳ್ಳಲು ವಿಚಿತ್ರವಾದ ಧಾರ್ಮಿಕ ಸಂಪ್ರದಾಯಗಳನ್ನು ಸೃಷ್ಟಿಸಿತ್ತು. ಇಂಥ ಧಾರ್ಮಿಕ ಮತ್ತು ಸಾಂಪ್ರದಾಯಿಕ ಹಿನ್ನೆಲೆ ಹೊಂದಿದ್ದ ಸಂಪ್ರದಾಯಗಳು ವಸಾಹತು ಸಂದರ್ಭದಲ್ಲಿ ಒಂದು ವ್ಯಾಪಾರವಾಗಿ ಬದಲಾದುದನ್ನು ಮನೋರಂಜನಿ ಇವರು ಈ ರೀತಿ ವಿವರಿಸುತ್ತಾರೆ. "ಮೊಗಲರ ಕಾಲದಲ್ಲಿ ವೇಶ್ಯಾವಾಟಿಕೆಯು ನೈತಿಕತೆಯ ಆಧಾರದ ಮೇಲೆ ಕೆಲವು ನಿರ್ಬಂಧನೆಗಳನ್ನು ಹೊರಿಸಿ ಆ ವ್ಯವಸ್ಥೆಯಿಂದ ಮಹಿಳೆಯರನ್ನು ಹೊರಗೆ ತರಬೇಕೆಂದು ಪ್ರಯತ್ನ ಮಾಡಿದರೂ ಅದು ಸಾಧ್ಯವಾಗದೇ, ಅದು ಬೇರೆ ಸ್ವರೂಪವನ್ನು ಹೊಂದುವುದರ ಮೂಲಕ ಅವರ ಸ್ಥಿತಿ ತೀರ ಸಂಕಷ್ಟಕ್ಕೊಳಗಾಯಿತು.

ಬ್ರಿಟಿಷರ ವಸಾಹತುಶಾಹಿಯಲ್ಲಿ ಈ ಪದ್ಧತಿಯನ್ನು ಅನೈತಿಕತೆಯ ಆಧಾರದ ಮೇಲೆ ಅಪರಾಧ ವೆಂದು ಪರಿಗಣಿಸಿದರು. ಇದು ಸಮಾಜದಲ್ಲಿ ಅವರು ಅಪರಾಧಿಗಳೆಂದು ಪರಿಗಣಿಸುವ ಪ್ರಕ್ರಿಯೆ ಬಂದಿತಾದರೂ, ಬ್ರಿಟಿಷರು ತಮ್ಮ ಸೇವೆಯಲ್ಲಿರುವ ಬ್ರಿಟಿಷ ಮಿಲಿಟರಿ ಪಡೆಗಳಿಗೆ ಮಹಿಳೆಯರು ಲೈಂಗಿಕ ಸೇವೆಯನ್ನು ಸಲ್ಲಿಸುವಂತಹ ಪದ್ಧತಿಯನ್ನು ಜಾರಿಗೊಳಿಸಲಾಯಿತು. ಬ್ರಿಟಿಷ ಕಮಾಂಡರ್ ಇನ್ ಚೀಫ್ ಅಧಿಕಾರಿ ಲಾರ್ಡ ರಾಬರ್ಟ ೧೮೮೬ರಲ್ಲಿ ಬ್ರಿಟಿಷ ಮಿಲಿಟರಿ ಪ್ರಾಂತೀಯ ಪಡೆಗಳ ಮಾರುಕಟ್ಟೆಗಳಲ್ಲಿ ಆಕರ್ಷಣೆಯ ಮಹಿಳೆಯರು ಹಣಕ್ಕಾಗಿ ಲೈಂಗಿಕ ಸೇವೆಯನ್ನು ನೀಡಬೇಕೆಂದು ಆದೇಶಿಸಿದನು. ಇದಕ್ಕಾಗಿಯೇ ಲೈಂಗಿಕತೆಯು ವ್ಯಾಪಾರವಾಗಿ ಬದಲಾಯಿತು. ಹಾಗೆಯೇ ಅನೇಕ ವೇಶ್ಯಾಗೃಹಗಳು ರಾಜ್ಯವ್ಯವಸ್ಥೆಯ ಬೆಂಬಲದಿಂದ ಹುಟ್ಟಿಕೊಂಡವು. ತಲೆಹಿಡುಕರು ಹುಟ್ಟಿಕೊಂಡರು. ಮಹಿಳೆಯರನ್ನು ಮತ್ತು ಅಪ್ರಾಪ್ತ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳುವುದು, ವೇಶ್ಯಾಗೃಹಗಳಲ್ಲಿ ಬಲವಂತವಾಗಿ ಅವರನ್ನು ದುಡಿಸಿಕೊಳ್ಳುವುದರಿಂದ ಅವರನ್ನು ಲೈಂಗಿಕ ಗುಲಾಮರನ್ನಾಗಿ ಮಾಡಲಾಯಿತು ಎಂದು ಮನೋರಂಜಿನಿಯವರು[೯] ವಿಶ್ಲೇಷಿಸುತ್ತಾರೆ. ಆಗ ಹೆಚ್ಚಳಗೊಂಡ ವೇಶ್ಯಾಗೃಹಗಳು, ತಲೆಹಿಡುಕರು ಹೆಚ್ಚಿನ ಲಾಭಕ್ಕಾಗಿ ಮಹಿಳೆಯರ ಜೊತೆಗೆ ಮಕ್ಕಳನ್ನೂ ವೇಶ್ಯಾವಾಟಿಕೆಗೆ ಎಳೆದುಕೊಳ್ಳತೊಡಗಿದವು. ಅದರಲ್ಲೂ ದಕ್ಷಿಣ ಭಾರತದಲ್ಲಿ ಧಾರ್ಮಿಕ ನಂಬಿಕೆಯ ಮೇಲೆ ನಡೆಯುತ್ತಿದ್ದ ದೇವದಾಸಿ ಪದ್ಧತಿಗೆ ಒಳಗಾದ ಅಪ್ರಾಪ್ತ ಮಕ್ಕಳು, ಈ ಪ್ರಕ್ರಿಯೆಗೆ, ಅತಿ ಹೆಚ್ಚಿನ ಸಂಖ್ಯೆಯಲ್ಲಿ ಬಲಿಯಾದರು. ಹೀಗೆ ಪ್ರಾರಂಭಗೊಂಡ ಮಕ್ಕಳ ಲೈಂಗಿಕ ಜೀತವು ಇಂದು, ಬಂಡವಾಳವೇ ಇಲ್ಲದೇ, ಅತ್ಯಂತ ಹೆಚ್ಚಿನ ಲಾಭ ಹುಟ್ಟಿಸುವ ದಂಧೆಯಾಗಿದೆ. ಎಸ್.ಪಿ. ಪಾಂಡೆ ಮತ್ತು ಇತರರು, "ಲೈಂಗಿಕ ಜೀತಕ್ಕಾಗಿ ಮಹಿಳೆ ಮತ್ತು ಮಕ್ಕಳನ್ನು ಸಾಗಾಣಿಕೆ ಮಾಡುವ ದಂಧೆಯು, ಕಾನೂನು ಉಲ್ಲಂಘಿಸಿ(ಇಲ್ಲೀಗಲ್) ಅತ್ಯಂತ ಹೆಚ್ಚು ಲಾಭ ಗಳಿಸುವಲ್ಲಿ ಮುಂಚೂಣಿಯಲ್ಲಿರುವ ಶಸ್ತ್ರಾಸ್ತ್ರ ಮತ್ತು ಮಾದಕ ವಸ್ತುಗಳ ಪೂರೈಕೆ ದಂಧೆಗಳ ನಂತರ ಅತೀ ಹೆಚ್ಚು ಲಾಭ ಗಳಿಸುವ ಒಂದು ಸಂಘಟಿತ ಅಪರಾಧವಾಗಿದೆ"[೨೦] (ರೀ ಹ್ಯಾಬಿಲಿಟೇಶನ್ ಆಪ್ ಡಿಸ್ ಅಡ್ವಾನ್ಸ್ಡ್ ಚಿಲ್ಡ್ರನ್ ಯ್ಯಾಂಡ್ ವುಮೆನ್ ಸೆಕ್ಸ್ ವರ್ಕರ್ಸ್, ೨೦೦೮) ಎಂದು ಹೇಳುತ್ತಾರೆ. ಯುನಿಸೆಫ್ ವರದಿಯ ಪ್ರಕಾರ ಪ್ರತಿ ವರ್ಷವೂ ೭೦೦,೦೦೦ ದಿಂದ ೨ ಮಿಲಿಯನ್ ಮಹಿಳೆಯರು ಮತ್ತು ಮಕ್ಕಳು ಜಾಗತಿಕವಾಗಿ ಲೈಂಗಿಕ ಜೀತಕ್ಕಾಗಿ ಸಾಗಾಣಿಕೆಯಾಗುತ್ತಾರೆಂದು ತಿಳಿಸುತ್ತದೆ(ಮೋಂದಿರಾ ದುತ್ತಾ, ೨೦೦೩). ಟಾಟಾ ಇನ್ಸಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ ಇದು ೧೯೯೧ರಲ್ಲಿ ನಡೆಸಿದ 'ರೀ ಹ್ಯಾಬಿಲಿಟೇಶನ್ ಆಫ್ ಚಿಲ್ಡ್ರನ್ ಆಫ್ ಪ್ರಾಸ್ಟಿಟ್ಯೂಟ್ಸ್ ಆ್ಯಂಡ್ ದೇವದಾಸೀಸ್' ಎಂಬ ಅಧ್ಯಯನದಲ್ಲಿ, ಭಾರತದಲ್ಲಿ ಸುಮಾರು ೨೦ ಲಕ್ಷ ವೇಶ್ಯಾ ಮಹಿಳೆಯರಿದ್ದಾರೆ. ಅವರಿಗೆ ಇರುವ ೫ ಮಿಲಿಯನ್‌ಗಿಂತಲೂ ಹೆಚ್ಚು ಮಕ್ಕಳ ಹುಟ್ಟಿಗೆ ಕಾರಣ ಯಾರು ಎಂಬುದು ಆ ಮಹಿಳೆಯರಿಗೇ ಗೊತ್ತಿಲ್ಲ. ಇವರಲ್ಲಿ ೧೭೦೦೦ ವೇಶ್ಯೆಯರು ಮುಂಬಯಿಲಿ ಇದ್ದು, ಅವರಿಗೆ ೪೫೦೦೦ ಮಕ್ಕಳಿದ್ದಾರೆ. ಈ ಮಕ್ಕಳೆಲ್ಲ ಲೈಂಗಿಕ ಜೀತಕ್ಕೆ ಬಲಿಯಾಗುವ ಅಪಾಯದ ಅಂಚಿನಲ್ಲಿದ್ದಾರೆ[೨೧] ಎಂದು ಅಧ್ಯಯನಕಾರರು ಗುರುತಿಸುತ್ತಾರೆ. ರಾಷ್ಟ್ರೀಯ ಮಹಿಳಾ ಆಯೋಗವು ರಾಜಧಾನಿಯಾದ ದೆಹಲಿಯ ಜಿ. ಬಿ. ರೋಡ್ ರೆಡ್‌ಲೈಟ್ ಏರಿಯಾದಲ್ಲಿ ಲೈಂಗಿಕ ವ್ಯವಹಾರದಲ್ಲಿ ತೊಡಗಿದವರಲ್ಲಿ

ಶೇಕಡಾ ೬೦ರಷ್ಟು ಮಕ್ಕಳಿರುವುದನ್ನು ವರದಿ ಮಾಡುತ್ತದೆ[೨೨](ದಿ ಪಾಯೋನೀರ್, ೨೧ ಜುಲೈ ೧೯೯೭).

ರಕ್ಷಣೆ ನೀಡಬೇಕಾದ ಅಪ್ಪ-ಅಣ್ಣ-ತಮ್ಮಂದಿರೇ, ಒಡ ಹುಟ್ಟಿದವರನ್ನು ಅತ್ಯಾಚಾರಗೈಯುವ, ಲೈಂಗಿಕವಾಗಿ ಶೋಷಿಸುವುದನ್ನು, ನಾವು ತಮ್ಮ ಸುತ್ತಮುತ್ತ ಕಾಣುತ್ತಲಿದ್ದೇವೆ. ಅಕ್ಷರ ಕಲಿಸಿ, ಬೆಳೆಸಿ ಪೋಷಿಸಬೇಕಾದ ಜಾಗದಲ್ಲಿರುವ ಶಿಕ್ಷಕರೇ ಮುಗ್ಧ ಮಕ್ಕಳ ದೇಹವನ್ನು ತಮ್ಮ ತೆವಲುಗಳಿಗೆ ಬಳಸಿಕೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ. ಸಾಮಾಜಿಕವಾಗಿ ಕೆಳಸ್ತರದಲ್ಲಿರುವ, ಅಸಹಾಯಕ ಕುಟುಂಬಗಳು, ತಮ್ಮ ಕಷ್ಟಗಳಿಗೆ ಹೆತ್ತ ಮಕ್ಕಳನ್ನು ನಿರ್ದಾಕ್ಷಿಣ್ಯವಾಗಿ ಬಾಲ್ಯದಲ್ಲಿಯೇ ವೇಶ್ಯಾವಾಟಿಕೆಗೆ, ಲೈಂಗಿಕ ಚಟುವಟಿಕೆಗೆ ಮಾರಾಟ ಮಾಡುತ್ತಿದ್ದಾರೆ. ಕೆಲವು ಸಂದರ್ಭಗಳಲ್ಲಿ ಮಾರಾಟ ಜಾಲಗಳಿಗೆ ಮುಗ್ಧ ಹೆಣುಮಕ್ಕಳು ಬಲಿಯಾಗುತ್ತಿದ್ದಾರೆ. ಡಾ. ಆಪ್ಟೆ, ಮಾನವಶಾಸ್ತ್ರಜ್ಞರು, ಹೇಳುವಂತೆ ವರದಕ್ಷಿಣೆಗಾಗಿ ಹಣ ಗಳಿಸಲು, ಮದುವೆಯಾಗಬೇಕಾದ ಮಕ್ಕಳನ್ನೇ ಕೆಲವಷ್ಟು ವರ್ಷಗಳಿಗೆ ಒಪ್ಪಂದದ ಮೇರೆಗೆ ತಲೆಹಿಡುಕರ ಕೈಗೆ ಒಪ್ಪಿಸುವಂತಹ ಆತಂಕಕಾರಿ ಬೆಳವಣಿಗೆಗಳು ನಡೆಯುತ್ತಿವೆ.[೨೩] ಈ ಎಲ್ಲಾ ಸಮಾಜ ಘಾತುಕ ಪ್ರಕ್ರಿಯೆಗಳು ಮಾರುಕಟ್ಟೆ ಪ್ರೇರಿತ ಅಭಿವೃದ್ಧಿ ಚಿಂತಕರು ಕಾಣೆಯಾದ ಹೆಣ್ಣುಮಕ್ಕಳು ಎನ್ನುವ ಹೆಸರಿನಲ್ಲಿ ಅರ್ಥೈಸುತ್ತಾರೆ.

ಸಂವಿಧಾನಾತ್ಮಕವಾಗಿ, ಶಾಸನಬದ್ಧವಾಗಿ, ರೀತಿ-ನೀತಿ, ಒಡಂಬಡಿಕೆಗಳು, ಯೋಜನೆಗಳು, ಕಾರ್ಯಕ್ರಮಗಳು ರೂಪುಗೊಂಡು ಅನುಷ್ಠಾನಗೊಳಿಸುತ್ತಿದ್ದರೂ ಕೂಡ ಅಪ್ರಾಪ್ತ ವಯಸ್ಸಿನ ಮಕ್ಕಳು ವಿವಿಧ ಸಂದರ್ಭಗಳಿಗೆ ಬಲಿಯಾಗಿ ಲೈಂಗಿಕ ಜೀತಕ್ಕೆ ಒಳಪಡುತ್ತಿದ್ದಾರೆ. 'ಮಕ್ಕಳು ರಾಷ್ಟ್ರದ ಸಂಪತ್ತು' ಎಂದು ಹೇಳುವ ಬೆನ್ನ ಹಿಂದೆಯೇ, ಇನ್ನಿಲ್ಲದಂತೆ ಅವರನ್ನು ದೈಹಿಕವಾಗಿ, ಮಾನಸಿಕವಾಗಿ, ಲೈಂಗಿಕವಾಗಿ ಕಾಡಲಾಗುತ್ತಿದೆ. ಲೈಂಗಿಕತೆಯ ಅರಿವು ಇರದ ಮಗುವನ್ನು ಲೈಂಗಿಕ ಜೀತದ ಒಂದು ಸಾಧನವಾಗಿ ಬಳಸಿಕೊಳ್ಳಲಾಗುತ್ತಿದೆ. "*ನಾನು ದೊಡ್ಡವಳಾಗಿದ್ದೆ(ಋತುಮತಿ). ತಲೆಯ ಮೇಲೆ ಎಣ್ಣೆ ನೀರು ಹಾಕಿದ್ದರು. ಅದರ ಮರುದಿನವೇ ನಾನು ಪುಣೆಯ ಈ ದಂಧೆಯ ಮನೆಯಲ್ಲಿದ್ದೆ*". ಎಂದು ೨೨ ವರ್ಷದ ಪ್ರೇಮಾ, ತಾನು ವೇಶ್ಯಾಗೃಹಕ್ಕೆ ಸಾಗಿಸಲ್ಪಟ್ಟ ದಿನಗಳನ್ನು ನೊಂದುಕೊಂಡು ನೆನಪಿಸಿ ಕೊಳ್ಳುತ್ತಾಳೆ. ವ್ಯವಹಾರ, ಹಣ, ಸಂಪಾದನೆ, ಆರ್ಥಿಕತೆ ಏನೊಂದು ಅರಿಯದ ಮಗು ಮಾರುಕಟ್ಟೆಯ ಮುಖ್ಯ ಸರಕಾಗಿ ಬಿಟ್ಟಿರುತ್ತದೆ. ಲೈಂಗಿಕ ಜೀತಕ್ಕೆ ಬಲಿಯಾಗಿ ಕಳೆದುಹೋಗುವ ಇಂಥ ಹೆಣ್ಣುಮಕ್ಕಳನ್ನು ರಕ್ಷಿಸುವುದು ಈ ಸಮಾಜದ ಪ್ರತಿಯೊಬ್ಬರ ಜವಾಬ್ದಾರಿ ಆಗಿದೆ. ಈಗಾಗಲೇ ಲೈಂಗಿಕ ಜೀತಕ್ಕೆ ಒಳಗಾದ ಮಕ್ಕಳನ್ನು ಪುನರ್ವಸತಿ ಮತ್ತು ಪುನರ್ನೆಲೆಗೊಳಿಸುವುದು ಸಂವಿಧಾನದ ಆಶಯ.

ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಶೋಷಿತ ಮತ್ತು ಲೈಂಗಿಕ ಜೀತಕ್ಕೆ ಒಳಗಾದ ಹೆಣ್ಣುಮಕ್ಕಳನ್ನು ಮತ್ತು ಮಹಿಳೆಯರನ್ನು ರಕ್ಷಣೆ ಮಾಡುವ ದಿಕ್ಕಿನಲ್ಲಿ ಅನೇಕ ಕಾಯಿದೆಗಳು ಬಂದಿವೆ. ಪ್ರಾರಂಭಿಕವಾಗಿ ಬಂದ ಕಾಯಿದೆಗಳು ಕೇವಲ ರಕ್ಷಣೆಯ ವಿಷಯವನ್ನು ಮಾತ್ರ ಪ್ರಸ್ತಾಪಿಸುತ್ತವೆ. ತದನಂತರದಲ್ಲಿ

ದೊರೆತ ಹಿಮ್ಮಾಹಿತಿಯ ಆಧಾರದಲ್ಲಿ ಕೇವಲ ರಕ್ಷಣೆಯಿಂದ ಮಾತ್ರ ಮಕ್ಕಳು ಲೈಂಗಿಕ ಜೀತಕ್ಕೆ ಒಳಗಾಗುವುದನ್ನು ತಡೆಯಲು ಸಾಧ್ಯವಿಲ್ಲ ಎಂಬುದು ತಿಳಿಯುತ್ತದೆ. ಈ ಅನುಭವದ ಆಧಾರದಲ್ಲಿ ಲೈಂಗಿಕ ಶೋಷಿತ ಮತ್ತು ಜೀತಕ್ಕೊಳಗಾದ ಮಕ್ಕಳಿಗೆ ಪುನರ್ವಸತಿ ಕಲ್ಪಿಸಿ ಅವರನ್ನು ಸಮಾಜದ ಜೊತೆ ಸಮೀಕರಿಸಿ ಬದುಕುವ ಅಂದರೆ ಪುನರ್ನೆಲೆಗೊಳಿಸುವ ಪ್ರಕ್ರಿಯೆಗಳಿಗೆ ಆದ್ಯತೆ ದೊರೆಯುತ್ತದೆ. ಇಂತಹ ಕಾಯಿದೆಗಳಲ್ಲಿ ಮುಖ್ಯವಾದವು ೨೦೦೦ರಲ್ಲಿ ಜಾರಿಗೆ ಬಂದ ಭಾರತ ಸರ್ಕಾರದ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಕಾಳಜಿ) ಅಧಿನಿಯಮ, ಕರ್ನಾಟಕದ ಬಾಲ್ಯ ವಿವಾಹ ನಿಷೇಧ ಕಾಯಿದೆ ಹಾಗೂ ನಿರ್ಭಯಾ ಪ್ರಕರಣದ ನಂತರ ಬಂದ ಕಾಯಿದೆಗಳು ಮತ್ತು ಪೋಸ್ಕೋ(ಲೈಂಗಿಕ ಅಪರಾಧಗಳಿಂದ ಮಕ್ಕಳ ರಕ್ಷಣಾ ಕಾಯ್ದೆ) ೨೦೧೨, ಅತ್ಯಂತ ಮಹತ್ವವಾದವುಗಳು. ಈ ಎಲ್ಲ ಕಾಯಿದೆಗಳು ಮಹಿಳೆ ಮತ್ತು ಮಕ್ಕಳ ಶೋಷಣೆ ಮತ್ತು ಅಮಾನವೀಯ ದೌರ್ಜನ್ಯ ಕುರಿತು ವಿವರಿಸುತ್ತವೆ. ಈ ಕಾಯಿದೆಗಳು ಪ್ರಮುಖವಾಗಿ ಮಾತನಾಡುವ ಪುನರ್ವಸತಿಯನ್ನು ಯಥಾವತ್ತಾಗಿ ಹಾಗೆ ನಮ್ಮ ಅಧ್ಯಯನದಲ್ಲಿ ಬಳಸಿಕೊಳ್ಳುವ ಸಾಹಸ ಮಾಡಿಲ್ಲ. ಆದರೆ ಒಂದು ಮಗುವಿಗೆ ಅಥವಾ ಮಹಿಳೆಗೆ ಸಮಾಜ ಮಾಡುವ ಗಾಯವನ್ನು ಮಾನವೀಯ ನೆಲೆಯಲ್ಲಿ ಹೇಗೆ ಅವರನ್ನು ಪುನರ್ವಸತೀಕರಣಗೊಳಿಸಬಹುದು ಎಂಬ ಪ್ರಾಥಮಿಕ ಕಾಳಜಿಯಿಂದ ಇಲ್ಲಿ ಪುನರ್ವಸತಿಯ ವಿಷಯಗಳನ್ನು ಪ್ರಸ್ತುತ ಅಧ್ಯಯನ ಚರ್ಚಿಸುತ್ತದೆ. ಸ್ವಲ್ಪ ಹೆಚ್ಚು ಕಮ್ಮಿ ಇದೆ ನೆಲೆಯಲ್ಲಿ ಪುನರ್ನೆಲೆಯ ವಿಷಯಗಳನ್ನು ಪ್ರಸ್ತುತ ಅಧ್ಯಯನವು ಚರ್ಚಿಸುತ್ತದೆ. ಪುನರ್ನೆಲೆಯ ವಿಷಯಗಳು ಇತ್ತೀಚೆಗೆ ಮಾರುಕಟ್ಟೆ ರೂಪಿಸುವ ಉತ್ಪಾದನಾ ಆಧಾರಿತ ಮಾದರಿಗಳಿಂದಾಚೆಗೆ ಪುನರ್ನೆಲೆಯನ್ನು ಕಟ್ಟಿಕೊಳ್ಳಲು ನಮ್ಮ ಅಧ್ಯಯನ ಪ್ರಯತ್ನಿಸಿದೆ. ಆ ಹಿನ್ನೆಲೆಯಲ್ಲಿಯೇ ಪುನರ್ನೆಲೆಯನ್ನು ಇಲ್ಲಿ ಚರ್ಚೆಗೆ ಒಳಪಡಿಸಿ ಪರಿಶೀಲಿಸಲಾಗಿದೆ.

ಹೀಗೆ ಲೈಂಗಿಕತೆಯು ಅಸಹಜವಾಗಿ ಲೈಂಗಿಕ ಶೋಷಣೆ, ಲೈಂಗಿಕ ದೌರ್ಜನ್ಯ ಮತ್ತು ಲೈಂಗಿಕ ಜೀತವಾಗಿ ರೂಪಾಂತರವಾಗಿರುವ ಕುರಿತು ತತ್ವಶಾಸ್ತ್ರೀಯ ಚರ್ಚೆಗಳು ಸೇರಿದಂತೆ ಅನೇಕ ಜಿಜ್ಞಾಸೆಗಳು ನಡೆದಿವೆ. ಇಂದು ಲೈಂಗಿಕತೆಯು ಅಸಹಾಯಕ ಹೆಣ್ಣುಮಕ್ಕಳ ಮತ್ತು ಮಹಿಳೆಯರ ಶೋಷಣೆಯ ಅಸ್ತ್ರವಾಗುತ್ತಿರುವ ಅಪಾಯಕಾರಿ ಅಸಹಜ ಲೈಂಗಿಕತೆಯು ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ರಾಜಕಾರಣದ ಜೊತೆ ಹೆಣೆದುಕೊಂಡು ಮಹಿಳೆಯರನ್ನು ದ್ವಿತೀಯ ಪ್ರಜೆಯಂತೆ ಕಾಣುತ್ತಿರುವ ಮಹಿಳೆಯನ್ನು ಮತ್ತಷ್ಟು ಇಕ್ಕಟ್ಟಿಗೆ ಸಿಲುಕಿಸಿದೆ. ಭಾರತೀಯ ಸಾಂಸ್ಕೃತಿಕ ಸಂದರ್ಭವು ಮಹಿಳೆಯನ್ನು ಏಕರೂಪಿ ನೆಲೆಯಲ್ಲಿ ಗುರುತಿಸುವ ಮತ್ತು ಅರ್ಥೈಸುವ ಮತ್ತು ಬದಲಿಸುವ ಆಧುನಿಕೋತ್ತರವಾದದ ಪ್ರಭಾವಗಳು ಮಹಿಳೆಯರನ್ನು ಬಹು ಆಯಾಮಗಳಲ್ಲಿ ವಿಶ್ಲೇಷಿಸುವ ಅಗತ್ಯವನ್ನು ಎತ್ತಿ ಹಿಡಿದಿದೆ. ಇದನ್ನು ಮಾರ್ಕ್ಸ್‌ವಾದಿ ಸ್ತ್ರೀವಾದ ಮತ್ತು ರ್‍ಯಾಡಿಕಲ್ ಸ್ತ್ರೀವಾದ ಈಗಾಗಲೇ ಪ್ರಶ್ನೆ ಮಾಡಿವೆ. ಈ ಚಿಂತನಾ ಕ್ರಮದಲ್ಲೇ ಮಹಿಳೆಯರ ಮತ್ತು ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ನಿಯಂತ್ರಣಾಧಾರಿತ, ಲೈಂಗಿಕ ದೌರ್ಜನ್ಯಗಳನ್ನು ಕುರಿತು ಲೆಕ್ಕಕ್ಕೆ ಸಿಗದಷ್ಟು ಅಧ್ಯಯನಗಳು ನಡೆದಿವೆ. ಈ ಎಲ್ಲ ಅಧ್ಯಯನಗಳನ್ನು ಓದಿ ಅರ್ಥ ಮಾಡಿಕೊಳ್ಳಲು ಸಮಯವಿಲ್ಲದ ಕಾರಣ,

ಗಮನಕ್ಕೆ ಬಂದ ಅತ್ಯಂತ ಮುಖ್ಯವಾದ ಪುಸ್ತಕಗಳನ್ನು, ಸಂಶೋಧನಾ ಪ್ರಬಂಧಗಳನ್ನು, ವರದಿಗಳನ್ನು ಮತ್ತು ಲೇಖನಗಳನ್ನು ಓದಿ ಅರ್ಥಮಾಡಿಕೊಳ್ಳುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

**ಸಾಹಿತ್ಯ ಸಮೀಕ್ಷೆ**

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಗಣಿತ ಅಧ್ಯಯನಗಳು ನಡೆದಿವೆ. ನಮ್ಮ ಅಧ್ಯಯನಕ್ಕೆ ಪ್ರಮುಖವೆನಿಸಿದ ಅಧ್ಯಯನಗಳನ್ನು ಕಾಲದ ಮಿತಿಯಲ್ಲಿ ಇಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನ ಮಾಡಲಾಗಿದೆ. ಅಧ್ಯಯನಗಳ ಪರಾಮರ್ಶೆ ಮಾಡಿದಾಗ ಕಂಡು ಬಂದ ಹಿನ್ನೆಲೆಯಲ್ಲಿ ಪ್ರಶ್ನೆಗಳನ್ನು ಗುರುತಿಸಿ ಪ್ರಸ್ತುತ ಅಧ್ಯಯನವು ಸಂಶೋಧನಾ ಪ್ರಶ್ನೆಗಳನ್ನು ರೂಪಿಸಿಕೊಂಡಿದೆ.

'ಲೈಂಗಿಕತೆ' ಎಂಬುದು ಮಾನವ ಜೀವಿಯ ಒಂದು ಸಹಜ ಜೈವಿಕ ಪ್ರಕ್ರಿಯೆ. ಮಾನವ ಸಮಾಜವು ಆಹಾರ ಸಂಗ್ರಹಿಸುವ ಕಾಲಘಟ್ಟದಿಂದ, ಆಹಾರವನ್ನು ಉತ್ಪಾದಿಸುವ ಹಂತಕ್ಕೆ ಬಂದಾಗ, ಮಾತೃ ಮೂಲ ಕುಟುಂಬ ವ್ಯವಸ್ಥೆಯಿಂದ ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ಸ್ಥಿತ್ಯಂತರಗೊಳ್ಳುತ್ತದೆ. ಇದು ಖಾಸಗಿ ಆಸ್ತಿಯ ಪರಿಕಲ್ಪನೆಯ ಹುಟ್ಟಿಗೆ ಕಾರಣವಾಗುತ್ತದೆ. ದೈಹಿಕವಾಗಿ ಅಸಬಲಳಾದ, ಜೈವಿಕವಾಗಿ ಸಂತಾನೋತ್ಪತ್ತಿಯ, ಬಸಿರು, ಹೆರಿಗೆಗಳ ಸಂದರ್ಭದಲ್ಲಿ ತನ್ನ ಹಸಿವನ್ನು ನೀಗಿಸಿಕೊಳ್ಳಲು ಗಂಡಿನ ಆಶ್ರಯದ ಅನಿವಾರ್ಯ ಅವಶ್ಯಕತೆ ಎದುರಾದಾಗ ಭೂಮಿ, ಪಶು ಸಂಪತ್ತುಗಳಂತೆ ಸ್ತ್ರೀ ಸಹ, ಪುರುಷನ ಖಾಸಗಿ ಆಸ್ತಿಯಾಗುತ್ತಾಳೆ. ಉತ್ಪಾದನೆ ಹೆಚ್ಚಿಗೆಯಾದಂತೆ, ತನ್ನ ಕುಲಪರಂಪರೆಯನ್ನು ಬೆಳಗಲು ತನ್ನಿಂದ ಹುಟ್ಟಿದ ಮಕ್ಕಳೇ ಆಗಬೇಕು ಎಂಬ ಚಿಂತನೆ ಬೆಳೆದುದರ ಪರಿಣಾಮವೇ ಮುಕ್ತವಾಗಿದ್ದ ಲೈಂಗಿಕ ಪ್ರಕ್ರಿಯೆ ಖಾಸಗಿಯಾಗುತ್ತದೆ. ತಾಯಿಯ ಅಧಿಕಾರ ತಂದೆಯ ಅಧಿಕಾರಕ್ಕೆ ಜಾಗ ನೀಡಿದ್ದರಿಂದ, ತಂದೆಯ ಆಸ್ತಿ ಮಗನ ಪಾಲಾಗುವ ಪದ್ಧತಿ ನೆಲೆಗೊಂಡಿತು. ಹಾಗಾಗಿ ಹೆಣ್ಣಿನ ಆಸ್ತಿ ಆಕೆಯ ಕುಲಕ್ಕೆ ರವಾನೆಯಾಗುವ ಪದ್ಧತಿ ತಪ್ಪಿ ಹೋಗಿ ಖಾಸಗಿ ಆಸ್ತಿಯ ತಳಹದಿಯ ಮೇಲೆ ಪಿತೃ ಪ್ರಧಾನ ಕುಟುಂಬ ನೆಲೆಗೊಂಡಿತು. ಈ ಕುಟುಂಬದಲ್ಲಿ ಮಹಿಳೆ ಗಂಡಿಗೆ ಅಧೀನಳಾದಳು ಎಂದು ಸಿಮೊನ್ ದ ಬೋವಾ ಅವರು ವಿಶ್ಲೇಷಿಸುತ್ತಾರೆ.[೨೨]

**ವಿಲ್ ಡೂರ್‍ಯಾಂಟೋ,** ಅವರು ಅಭಿಪ್ರಾಯ ಪಡುವಂತೆ, "ದನಕರುಗಳೂ, ವ್ಯವಸಾಯೋತ್ಪನ್ನಗಳೂ, ವರ್ಗಾವಣೆಗೊಳ್ಳುವ ಆಸ್ತಿಯಾದಾಗ ಮಹಿಳೆಯನ್ನೂ ಕೂಡ ಒಂದು ಆಸ್ತಿಯಾಗಿ ಪರಿಗಣಿಸಿ, ಅವಳನ್ನು ಲೈಂಗಿಕವಾಗಿ ಅಧೀನತೆಗೆ ಒಳಪಡಿಸಿಕೊಳ್ಳಲಾಗುತ್ತದೆ". ಹೀಗೆ ಆದಿಮ ಸಮುದಾಯವೊಂದು ಸಮಾಜೀಕರಣ ಪ್ರಕ್ರಿಯೆಗೆ ಒಳಪಟ್ಟಾಗ, ಕುಟುಂಬ, ವಿವಾಹ, ಧರ್ಮ, ಜಾತಿಗಳು ಬೆಳೆದು ಮಹಿಳೆಯ ಬದುಕನ್ನು ಮತ್ತಷ್ಟು ಸಂಕೀರ್ಣಗೊಳಿಸುತ್ತವೆ. ಈ ಎಲ್ಲ ಸಂದರ್ಭಗಳಲ್ಲೂ ಹೆಣ್ಣಿನ ಲೈಂಗಿಕತೆಯ ಮೇಲೆ ನಿರ್ಬಂಧ ಹೇರುವ ಪುರುಷ, ತಾನು ಮಾತ್ರ ಲೈಂಗಿಕವಾಗಿ ಮುಕ್ತನಾಗಿರಬೇಕೆಂದು ಬಯಸುತ್ತಾನೆ. ಪರಿಣಾಮವಾಗಿ ಹೆಣ್ಣನ್ನು ಬಹುಪತ್ನಿತ್ವ ರೂಪದಲ್ಲಿ, ಉಪಪತ್ನಿತ್ವ ರೂಪದಲ್ಲಿ, ಗುಲಾಮಳನ್ನಾಗಿ ಇರಿಸಿಕೊಳ್ಳುವಲ್ಲಿ, ದಾಸಿಯನ್ನಾಗಿ ಇರಿಸಿಕೊಳ್ಳುವಲ್ಲಿ ಮೂಲದ ಮುಕ್ತ ಲೈಂಗಿಕತೆಗೆ ದಾರಿಗಳನ್ನು ಕಂಡುಕೊಳ್ಳುತ್ತಾನೆ. ಸಾಮಾಜಿಕ ಬೆಳವಣಿಗೆಯಲ್ಲಿ ಏಕ ಪತ್ನಿತ್ವ, ವಿವಾಹ ರೂಪಗೊಂಡ ಮೇಲೆ

ಅವನ ಉಪಪತ್ನಿಯರೆಲ್ಲ ಲೈಂಗಿಕವಾಗಿ ಪುರುಷ ಉಪಯೋಗಿಸಿಕೊಳ್ಳಬಹುದಾದ ವಸ್ತುಗಳಾಗುತ್ತಾರೆ. ದೇವರು, ಧರ್ಮ, ಜನಾಂಗ, ವರ್ಣ, ವರ್ಗ, ಜಾತಿಗಳು ಪಿತೃಪ್ರಧಾನ ವ್ಯವಸ್ಥೆಯ ಮುಂದುವರೆದ ಘಟ್ಟವಾಗಿ ಬೆಳೆದುಬಂದಾಗ ಶಿಷ್ಟ ಪರಿಶಿಷ್ಟ ವರ್ಗಗಳು ನಿರ್ಮಾಣಗೊಳ್ಳುತ್ತವೆ. ಅರಸೊತ್ತಿಗೆಗಳು, ಪುರೋಹಿತಶಾಹಿಗಳು, ಊಳಿಗಮಾನ್ಯ, ಜಮೀನ್ದಾರಿ ವ್ಯವಸ್ಥೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿ ಬರುತ್ತವೆ. ಈ ಎಲ್ಲ ಕಾಲಘಟ್ಟಗಳಲ್ಲಿಯೂ ಮಹಿಳೆಯನ್ನು ಲೈಂಗಿಕವಾಗಿ ಪೋಷಿಸಿಕೊಂಡು, ಶೋಷಿಸಿಕೊಂಡು ಬರಲಾಗಿದೆ.[೨೫]

**ಕೌಟಿಲ್ಯನು ತನ್ನ ಅರ್ಥಶಾಸ್ತ್ರದ ೪೪ ನೇ ಪ್ರಕರಣದಲ್ಲಿ**, ಗುಪ್ತರು ತಮ್ಮ ಆಳ್ವಿಕೆಯಲ್ಲಿ, ರೂಪ, ಯೌವ್ವನ, ಆಸಕ್ತಿ ಹೊಂದಿದ ರೂಪವತಿ ಹೆಣ್ಣುಮಕ್ಕಳು ರಾಜಾಶ್ರಯದಲ್ಲಿ ಲೈಂಗಿಕ ಚಟುವಟಿಕೆ ಮಾಡಬಹುದಿದ್ದಿತು. ಗಣಿಕೆಯರು ಎನ್ನಿಸಿಕೊಂಡ ಅವರಿಗೆ ರಾಜ ಬೊಕ್ಕಸದಿಂದ ಹಣವನ್ನು ವ್ಯಯಿಸಿ ೬೪ ಕಲೆಗಳಲ್ಲಿ ತರಬೇತಿ ನೀಡಲಾಗುತ್ತಿತ್ತು. ಅವರಿಗೆ ಮಾಸಿಕ ೧೦೦೦ ಪಣಗಳ ಸಂಭಾವನೆಯನ್ನು ನಿಗದಿಪಡಿಸಿ, ಅವರ ಮೇಲ್ವಿಚಾರಣೆ ಮಾಡಲು ಗಣಿಕಾಧ್ಯಕ್ಷರೆಂಬ ಅಧಿಕಾರಿಯನ್ನು ನೇಮಿಸಲಾಗಿತ್ತು. ಗಣಿಕೆಯರು ತಾವು ಗಳಿಸಿದ ಆದಾಯಕ್ಕೆ ಕಂದಾಯವನ್ನೂ ಸಹ ಕಟ್ಟಬೇಕಾಗಿದ್ದಿತು ಎಂದು ವಿವರಿಸುವಲ್ಲಿ, ರಾಜ್ಯ ವ್ಯವಸ್ಥೆಯು ಲೈಂಗಿಕತೆಯನ್ನು ಪೋಷಿಸಿಕೊಂಡು ಬಂದದ್ದು ತಿಳಿಯುತ್ತದೆ.[೨೬]

**"ಶಾಸನಗಳಲ್ಲಿ ಸ್ತ್ರೀ ಸಮಾಜ" ಎಂಬ ಗ್ರಂಥದಲ್ಲಿ ಚೆನ್ನಕ್ಕ ಎಲಿಗಾರ(೧೯೯೦) ಅವರು**, ಪ್ರಾಚೀನ ಶಾಸನಗಳಲ್ಲಿ ದೊರೆಯುವ ಸೂಳೆ ಸಮಾಜ ಕುರಿತಾದ ಉಲ್ಲೇಖಗಳನ್ನು ಅಧ್ಯಯನಕ್ಕೊಳಪಡಿಸಿ, "ವಿವಾಹ ವ್ಯವಸ್ಥೆ ಉದಯವಾದಂದಿನಿಂದ ಅಸ್ತಿತ್ವಕ್ಕೆ ಬಂದ ಗೃಹಿಣಿ, ಸಮಾಜದ ಜೊತೆ ಜೊತೆಯಲ್ಲಿಯೇ ಸೂಳೆ ಸಮಾಜ ಬೆಳೆದು ಬಂದಿದೆ. ವ್ಯಕ್ತಿಯೊಬ್ಬನೊಂದಿಗೆ ಇದ್ದ, ದೇವರ ಹೆಸರಿನಲ್ಲಿ ಬಿಟ್ಟ, ಹಣಕ್ಕಾಗಿ ದೇಹ ಮಾರುವ ಇವರನ್ನು ವ್ಯಕ್ತಿ ಸೂಳೆ, ದೇವ ಸೂಳೆ, ಸಮಾಜ ಸೂಳೆ ಎಂದು ವರ್ಗೀಕರಿಸುತ್ತಾರೆ. ವ್ಯಕ್ತಿ ಸೂಳೆ ಎಂದರೆ, ವಿವಾಹಿತ ಇಲ್ಲವೇ ಅವಿವಾಹಿತ ಪುರುಷರು ಇಟ್ಟುಕೊಂಡ ಮಹಿಳೆಯರಿವರು. ಸಾಮಾನ್ಯ ಜನರಲ್ಲಿ ಅವಿವಾಹಿತರು, ಗಂಡನನ್ನ ಅಗಲಿದವರು ಮತ್ತು ವಿಧವೆಯರು ಕಂಡುಬಂದರೆ, ಮೇಲ್ವರ್ಗದ ರಾಜಸತ್ತೆಯಲ್ಲಿ ಯುದ್ಧದಲ್ಲಿ ಗೆದ್ದು ತಂದ, ವಿವಾಹಿತ, ಅವಿವಾಹಿತ ಮತ್ತು ವಿಧವಾ ಸ್ತ್ರೀಯರು ಮತ್ತು ಅವರ ಮಕ್ಕಳು ಇರುತ್ತಾರೆ ಎಂದು ಅಧ್ಯಯನಕಾರರು ವಿಶ್ಲೇಷಿಸುತ್ತಾರೆ. ಇವರನ್ನು ದೊರೆಯು 'ತೊತ್ತು' ಗಳಾಗಿಯೂ ಉಪಯೋಗಿಸುತ್ತಿದ್ದನು. ಅಲ್ಲದೇ ಬಡವರ್ಗದ, ಕೀಳು ಜಾತಿಯ ಮಹಿಳೆಯರು ಇನ್ನೊಬ್ಬರಲ್ಲಿ ತೊತ್ತಾಗುತ್ತಿದ್ದರು. ಇವರನ್ನು ಲೈಂಗಿಕವಾಗಿ ಬಳಸಿಕೊಳ್ಳುವುದಲ್ಲದೇ, ಇಟ್ಟುಕೊಂಡವರು ಇವರನ್ನ ದೇವಕಾರ್ಯಗಳಿಗೆ ಬಿಟ್ಟು ಕೊಡುವುದು, ಮಾರುವುದೂ ಸಹ ನಡೆಯುತ್ತಿತ್ತು. ಎಂದು ಅಧ್ಯಯನಕಾರರು ವಿವರಿಸುತ್ತಾರೆ.[೨೭]

ದೇವಸೂಳೆ ಎಂದರೆ, ದೇವನ ಭೋಗಕ್ಕೆ ಒಪ್ಪಿಸಲ್ಪಟ್ಟವಳಾಗಿರುತ್ತಾಳೆ. ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಪದ್ಧತಿ ಇದು. ಪ್ರಾಚೀನ ಈಜಿಪ್ತ, ಸಿರಿಯ, ಅರೇಬಿಯಾ, ಮುಂತಾದ ಮಧ್ಯ ಪ್ರಾಚ್ಯ ದೇಶಗಳಲ್ಲಿ ಬಳಕೆಯಲ್ಲಿದ್ದ ಈ ಪದ್ಧತಿ ಪಶ್ಚಿಮ ಆಫ್ರಿಕಾದ ಕೆಲವು ಜನಾಂಗಗಳಲ್ಲಿ ಇನ್ನೂ ರೂಢಿಯಲ್ಲಿದೆ. ಪ್ರಾಚೀನ ಕಾಲದಲ್ಲಿ ದೇವಾಲಯದ ಅವಶ್ಯಕ ಅಂಗವಾಗಿ ತಲೆ ಎತ್ತಿದ ಈ ಪದ್ಧತಿ ಕಾಲಾಂತರದಲ್ಲಿ

ಅಪಾತ್ರಮಟ್ಟಕ್ಕೆ ಇಳಿಯಿತು. ಮುಗ್ಧ ತಂದೆ ತಾಯಿಗಳ ಮನಕ್ಕೆ ಧರ್ಮದ ನಂಜಿಕೆ ಹುಟ್ಟಿಸಿ ಅವರ ಮಕ್ಕಳನ್ನು ದೇವಸ್ಥಾನಕ್ಕೆ ಬಿಡಿಸಿಕೊಳ್ಳುವಲ್ಲಿ ದೇವಾಲಯದ ಪುರೋಹಿತ ವರ್ಗ, ಅಧಿಕಾರಿ ವರ್ಗದವರು ಯಶಸ್ವಿಯಾದರು. ಉಪ ಜೀವನಕ್ಕೆ ಗತಿ ಇಲ್ಲದ ಸ್ತ್ರೀಯರೂ ಈ ಪದ್ಧತಿ ಯನ್ನು ಒಪ್ಪಿಕೊಂಡು ಅವರ ವಿಸ್ತಾರಕ್ಕೆ ಕಾರಣರಾದರು ಎಂದು ಅಧ್ಯಯನಕಾರರು ಸೂಕ್ಷ್ಮವಾಗಿ ತಿಳಿಸುತ್ತಾರೆ. ಸಮಾಜ ಸೂಳೆ ಎಂದರೆ, ಸಾರ್ವಜನಿಕರ ಮುಕ್ತ ಭೋಗಕ್ಕೆ ಒಪ್ಪಿಕೊಂಡವಳಾಗಿದ್ದಾಳೆ. ಈ ಚಟುವಟಿಕೆಯ ಮೇಲೆ ಹಿಡಿತ ಸ್ಥಾಪಿಸಲು ರಾಜ್ಯವು ಇವರ ಮೇಲೆ ತೆರಿಗೆಗಳನ್ನು ಹಾಕುತ್ತಿದ್ದಂತೆ ಕಂಡುಬರುತ್ತದೆ. ಸೂಳೆಗೆರೆ, ಸೂಳೆವಣ, ಇದರಿಂದ ಆಕರಿಸುತ್ತಿರಬಹುದು."[೨೮] ಎಂದು ಅಧ್ಯಯನಕಾರರು ವಿಶ್ಲೇಷಿಸುತ್ತಾರೆ.

**"ಅವಳ ಪ್ರಶ್ನೆಗಳು" ಎಂಬ ಪುಸ್ತಕದಲ್ಲಿ ವಸು ಮಳಲಿ (೨೦೧೩) ಅವರು** ರಾಜರು, ಸಾಮಂತರು, ಮುಂದೆ ಪಾಳೇಗಾರರು ಇವರಿಗೆಲ್ಲಾ ವೇಶ್ಯೆಯರನ್ನು ಇರಿಸಿಕೊಳ್ಳುವುದು ಹೆಗ್ಗಳಿಕೆಯ ವಿಷಯವಾಗಿತ್ತು ಎಂದು ಹೇಳುತ್ತಾರೆ. ಹತ್ತನೇ ಶತಮಾನದ ಶಾಸನಗಳಲ್ಲಿ ರಾಜನೊಬ್ಬ ದೇವಾಲಯಕ್ಕೆ ಹೋದರೆ, ಅವನ ಹಿಂದೆ, ಕಂಚಿಮೆ, ತಾಂಬೂಲ, ಚಾಮರ ಹಿಡಿಯುವ ಸೂಳೆಯರು ಇರುತ್ತಿದ್ದರು. ಹಂಪಿಯಲ್ಲಿ ಅವರಿಗಾಗಿಯೇ ಮೀಸಲಾದ ಬೀದಿಯನ್ನು ಇಂದಿಗೂ ಕಾಣಬಹುದು. ವಿಜಯನಗರ ಸಾಮ್ರಾಟರು 'ಸೂಳೆದೆರೆ' ಎಂದರೆ ಸೂಳೆಯರ ಮೇಲೆ ವಿಧಿಸುತ್ತಿದ್ದ ತೆರಿಗೆಯಿಂದ ಆದಾಯ ಗಳಿಸುತ್ತಿದ್ದರೆಂದು ವಸು ಮಳಲಿ ವಿವರಿಸುತ್ತಾರೆ.[೨೯]

**"ಪೋಜಿಶನ್ ಆಫ್ ವುಮೆನ್ ಇನ ಹಿಂದೂ ಸಿವಿಲೈಜೇಶನ್" ಎಂಬ ಗ್ರಂಥದಲ್ಲಿ, ಎ ಎಸ್. ಅಲ್ಟೇಕರ್(೧೯೫೬)** ಅವರು, ಬರೆದಿರುವುದನ್ನು ಚೆನ್ನಕ್ಕ ಎಲಿಗಾರವರು ತಮ್ಮ ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಎಂಬ ಕೃತಿಯಲ್ಲಿ ಹೀಗೆ ಉಲ್ಲೇಖಿಸುತ್ತಾರೆ. "ಇದೇ ಮಾದರಿಯ 'ದೇವದಾಸಿ ಸಂಪ್ರದಾಯ' ಭಾರತದಲ್ಲಿ ಕ್ರಿ.ಶ ೩ನೇ ಶತಮಾನದಲ್ಲಿ ಪ್ರಾರಂಭವಾಗಿರಬೇಕು. ದೇವರ ಪೂಜೆಯ ಕಾಲಕ್ಕೆ ವಾದ್ಯ ಮತ್ತು ಸಂಗೀತ ಸೇವೆಗೆ ಸ್ತ್ರೀಯರನ್ನು ನಿಯಮಿಸಿಕೊಳ್ಳಬೇಕೆಂದು, ಖರೀದಿಸಬೇಕೆಂದು ಕೆಲವು ಪುರಾಣಗಳ ಅಭಿಪ್ರಾಯ. ಸೂರ್ಯ ದೇವಸ್ಥಾನಕ್ಕೆ ವೇಶ್ಯೆಯರನ್ನು ಒದಗಿಸಿದರೆ ಸೂರ್ಯಲೋಕ ದೊರಕುವುದೆಂದು ಭವಿಷ್ಯಪುರಾಣ ತಿಳಿಸುತ್ತದೆ" ಎಂದು ಅಲ್ಟೇಕರ್ ವಿಶ್ಲೇಷಿಸುತ್ತಾರೆ.[೩೦]

**'ದೇವದಾಸಿ ಸಂಪ್ರದಾಯ' ಎಂಬ ಪುಸ್ತಕದಲ್ಲಿ ಜೋಗನ್ ಶಂಕರ್ (೧೯೯೩)** ಅವರು, ಪುರಿಯ ಜಗನ್ನಾಥ ದೇವಸ್ಥಾನಕ್ಕೆ ಅರ್ಪಿಸಲಾದ ದೇವದಾಸಿಯರ ಕುರಿತು ನಡೆಸಿದ ಅಧ್ಯಯನದಲ್ಲಿ, ಸಂಶೋಧಕಿ ಮಾರ್ಗಲಿನ್‌ಳ ವಿಚಾರವನ್ನು ಹೀಗೆ ಉಲ್ಲೇಖಿಸುತ್ತಾರೆ. "ದೇವದಾಸಿಯರನ್ನು ಮಂಗಳ ನಾರಿಯರು' ಎಂದು ಕರೆಯುತ್ತಿದ್ದರು. ಅವರು 'ಮಂಗಳ ಗೀತೆ'ಗಳನ್ನು ಹಾಡುತ್ತಿದ್ದರು ಎನ್ನಲಾಗಿದೆ. ದಿನದ ಕೆಲವೊಂದು ಸಮಯಗಳಲ್ಲಿ ಇತರೆ ಆಚರಣೆಯ ಪರಿಣಿತರು ಮಾತ್ರವಲ್ಲದೆ ಸಾರ್ವಜನಿಕರು ದೊಡ್ಡ ಪ್ರಮಾಣದಲ್ಲಿ ದೇವಸ್ಥಾನದ ಗರ್ಭಗೃಹಕ್ಕೆ ಪ್ರವೇಶಿಸಲು ಅವಕಾಶವಿತ್ತಾದರೂ ಮಂಗಳನಾರಿಯರಿಗೆ ಇರಲಿಲ್ಲ. ಅವರು ಲೈಂಗಿಕವಾಗಿ ಅಪವಿತ್ರರು ಎಂದು ಮತ್ತು ದೇವದಾಸಿಯರ ಸ್ಥಾನಮಾನವನ್ನು ವೇಶ್ಯೆಯರಿಗೆ ಸರಿದೂಗಿಸಿದ ನಿಷೇಧಾಜ್ಞೆಯು ಅವರನ್ನು ಗರ್ಭಗುಡಿಯಿಂದ ಹೊರಗುಳಿಯುವಂತೆ

ಮಾಡಿತ್ತು". ಎಂದು ಉಲ್ಲೇಖಿಸುತ್ತಾರೆ. ವೇಶ್ಯಾವಾಟಿಕೆ ಎಂಬುದು ಮಹಿಳೆಯರನ್ನು ಶೋಷಿಸುವ ವಿಕೃತರೂಪ. ಅದರಲ್ಲೂ ಜಾತೀಯತೆಯ ಕರಿನೆರಳಿನಲ್ಲಿ ತಾರತಮ್ಯ ಕಂಡುಬರುತ್ತದೆ. ತಾವು ಹರಸಿ ಕೊಂಡ ಹರಕೆಗಳನ್ನು ಪೂರೈಸಿಕೊಳ್ಳಲು ಮೇಲ್ಜಾತಿಯ ಜನರು ಕೆಳಜಾತಿಯ ಹೆಣ್ಣುಮಕ್ಕಳನ್ನು ಅವರ ತಂದೆ ತಾಯಿಗಳಿಗೆ ಹಣ ನೀಡಿ ದೇವರಿಗೆ ಅರ್ಪಿಸುತ್ತಿದ್ದರೆಂದು **ಮುಲ್ಲರ್** ಅವರ ವಿವರಣೆಯನ್ನು **ಜೋಗನ್ ಶಂಕರ್ 'ದೇವದಾಸಿ ಸಂಪ್ರದಾಯ'** ಪುಸ್ತಕದಲ್ಲಿ ಉಲ್ಲೇಖಿಸುತ್ತಾರೆ. ತಿನ್ನಲು ಒಂದು ತುತ್ತೂ ಅನ್ನ ಸಿಗದ ಸಂದರ್ಭದಲ್ಲಿ, ಹಣ, ಅಧಿಕಾರ, ಒಡೆತನಗಳು ಪರಿಶಿಷ್ಟ ಜಾತಿಯವರ ಮನೆಯ ಹೆಣ್ಣುಮಕ್ಕಳ ಮೇಲೆ ಧಾರ್ಮಿಕ ಒತ್ತಡವನ್ನು ಹೇರಿ ತಮ್ಮ ಲೈಂಗಿಕ ಸುಖಕ್ಕಾಗಿ ಮಹಿಳೆ ಮಕ್ಕಳನ್ನು ಬಳಸಿದಂತೆ ಕಂಡುಬರುತ್ತದೆ. ಪ್ರಪಂಚದ ಬ್ಯಾಬಿಲೋನಿಯಾ, ಸಿರಿಯಾ, ಫೋನೋಷಿಯಾ, ಕನಾನ್ ಮತ್ತು ಪಶ್ಚಿಮ ಆಫ್ರಿಕಾದಲ್ಲಿ ಧರ್ಮದ ನೆರಳಲ್ಲಿ ಪವಿತ್ರ ವೇಶ್ಯಾಗಾರಿಕೆ (Scared Prostitution) ನಡೆಯುವ ಕುರಿತು ಜೋಗನ್ ಶಂಕರ್ ತಮ್ಮ ಪುಸ್ತಕದಲ್ಲಿ ವಿವರಿಸುತ್ತಾರೆ.[೨೦]

**'ಧರ್ಮ ಮತ್ತು ರಾಜಕೀಯ'** ಎಂಬ ಗ್ರಂಥದಲ್ಲಿ **ಕೆ.ಜಿ ಗುರುಮೂರ್ತಿ(೧೯೯೭)** ಅವರು, ಸೇವಾಜಾತಿಯ ಕುಟುಂಬಗಳ ೫ ರಿಂದ ೬ ವಯಸ್ಸಿನ ಹೆಣ್ಣುಮಕ್ಕಳನ್ನು ಪವಿತ್ರ ಲೈಂಗಿಕ ಸಂಬಂಧಕ್ಕಾಗಿ, ಮಾತೃ ದೇವತೆಗೆ ಮೀಸಲಿಟ್ಟು ಋತುಮತಿಯಾದ ನಂತರ ದೇವಸ್ಥಾನದಲ್ಲಿಯೇ ಲೈಂಗಿಕ ಚಟುವಟಿಕೆಗೆ ಬಳಸಿಕೊಳ್ಳಲಾಗುತ್ತದೆ. ದೇವತೆಯ ಅಣ್ಣ ತಮ್ಮಂದಿರೆಂದು ಹೇಳುವ 'ತಾನಿಕರು' ಪವಿತ್ರ ಲೈಂಗಿಕ ಸಂಬಂಧ ಹೊಂದುವ ಪುರುಷ ಭಕ್ತರಿಂದ ಹಣ, ಕಾಣಿಕೆ ಸ್ವೀಕರಿಸುತ್ತಾರೆ. ಇವಳು ಋತುಮತಿಯಾದ ಕೂಡಲೇ ಕುಟುಂಬ ತೊರೆದು ದೇವಸ್ಥಾನಕ್ಕೆ ಬಂದ ಬೆನ್ನಲ್ಲಿಯೇ, ಅದೇ ಕುಟುಂಬದಲ್ಲಿ ಮತ್ತೆ ಅವಳ ಅಣ್ಣನ ಮಗಳೋ, ತಂಗಿಯ ಮಗಳೋ ಹೀಗೆ ಅವರ ಕುಟುಂಬಕ್ಕೆ ಸಂಬಂಧಿಸಿದ ಹೆಣ್ಣು ಮಗುವನ್ನು ಮೀಸಲಿಡುತ್ತಿದ್ದರು. ಇವಳು ಋತುಮತಿಯಾಗಿ ದೇವಸ್ಥಾನ ಸೇರುವ ದಿನ, ಈ ಮೊದಲು ಹೋದ ಹುಡುಗಿಯು ದೇವಸ್ಥಾನದಿಂದ ಬಿಡುಗಡೆಗೊಂಡು ಮತ್ತೆ ಮರಳಿ ಮನೆಗೆ ಬಂದು ಮುಕ್ತವಾಗಿ ವೇಶ್ಯಾವಾಟಿಕೆ ನಡೆಸುತ್ತಾಳೆ. ನಂತರದಲ್ಲಿ ಇವಳು ವೇಶ್ಯಾವೃತ್ತಿಯಿಂದ ಬಿಡುಗಡೆಗೊಂಡು ಜೋಗತಿಯಾಗಿ ಧರ್ಮ ಪ್ರಚಾರಕಿಯಾಗಿ ಕೆಲಸ ನಿರ್ವಹಿಸತೊಡಗುತ್ತಾಳೆ. ಹೀಗೆ ಹೆಣ್ಣು ಮಗು ದೇವದಾಸಿಯಾಗಿ, ಬಸವಿಯಾಗಿ, ಜೋಗತಿಯಾಗಿ ಕೆಲಸ ನಿರ್ವಹಿಸುತ್ತಾಳೆ ಎಂದು ಗುರುಮೂರ್ತಿ ಅವರು ವಿಶ್ಲೇಷಿಸುತ್ತಾರೆ.[೨೮]

**'ಹರದೇಸಿ ನಾಗೇಸಿ'** ಎಂಬ ಪುಸ್ತಕದಲ್ಲಿ **ಶೈಲಜಾ ಹಿರೇಮಠ(೨೦೧೧) ಅವರು,** ಊಳಿಗಮಾನ್ಯಶಾಹಿ ವ್ಯವಸ್ಥೆಯು "ಹೆಣ್ಣು ಭೋಗಿಸಲು ಅರ್ಹಳು" ಎಂಬುದನ್ನು ಸಾಮಾಜಿಕ ಮೌಲ್ಯವಾಗಿಸಿದೆ. ಭೋಗಕ್ಕೆಂದೇ ಜನಿಸಿದವರೆಂದು ಪರಿಭಾವಿಸಿಕೊಂಡು ಪಾತರದವರು, ಹರದೇಸಿ, ನಾಗೇಸಿಯಂತಹ ಕಲಾ ಪ್ರಕಾರಗಳಲ್ಲಿ ಕೆಳವರ್ಗದ ಹೆಣ್ಣುಮಕ್ಕಳನ್ನು ಮದುವೆಯ ಚೌಕಟ್ಟಿನಿಂದ ಹೊರಗಿರಿಸಿ, ಕಲೆಯ ಹೆಸರಿನಲ್ಲಿಯೂ ಸಹ ಲೈಂಗಿಕವಾಗಿ ಶೋಷಣೆ ಮಾಡಿದ್ದನ್ನು ವಿಶ್ಲೇಷಿಸುತ್ತಾರೆ.[೨೨]

**'ಜಾತಿ ಮೀಮಾಂಸೆ'** ಎಂಬ ಪುಸ್ತಕದಲ್ಲಿ **ಮೊಗಳ್ಳಿ ಗಣೇಶ್(೨೦೦೫)** ಅವರು, "ಊಳಿಗಮಾನ್ಯ ಸಮಾಜದ ಹಳೆಯ ಮೌಲ್ಯಗಳು ಜಾತಿ ಪದ್ಧತಿಯಲ್ಲಿ ಆಳವಾಗಿ ಬೇರು ಬಿಟ್ಟ ಕಾರಣದಿಂದಲೂ ದಲಿತ ಮಹಿಳೆಯ ಅಸ್ತಿತ್ವವನ್ನು ಮೇಲುಜಾತಿಯ ಸ್ತ್ರೀಯರ ಮೂಲಕ ಗುರುತಿಸಿಕೊಳ್ಳಲು ಬರುವುದಿಲ್ಲ. ಲೈಂಗಿಕವಾಗಿ ನಿರಂತರ ಶೋಷಣೆಗಾಗಿಯೆ ಕೆಲವೊಂದು ಸಮುದಾಯಗಳ ಸ್ತ್ರೀಲೋಕವನ್ನು ದೇವದಾಸಿಯರನ್ನಾಗಿಸಿಕೊಂಡ ಊಳಿಗಮಾನ್ಯ ಸಮಾಜವು ದೇವರ ಹೆಸರಲ್ಲೆ ಲೈಂಗಿಕ ಅಕ್ರಮಗಳನ್ನು ನಡೆಸುತ್ತದೆ. ಮೇಲು ಜಾತಿಯ ಸ್ತ್ರೀಯರಿಗೆ ಕುಟುಂಬದ ಚೌಕಟ್ಟಿನಲ್ಲಿ, ಜಾತಿಯ ಒಳಾವರಣದಲ್ಲಿ ಲೈಂಗಿಕ ಹಲ್ಲೆಗಳಿಗೆ ಇಡೀ ಪುರುಷ ಸಮಾಜವೇ ಪೈಪೋಟಿ ನಡೆಸಬಲ್ಲದು ಹಾಗೂ ದಿಗ್ವಿಜಯ ಪಡೆದು ಬೀಗಬಲ್ಲದು. ಸ್ತ್ರೀ ದೈವಗಳನ್ನೇ ಲೈಂಗಿಕ ಶೋಷಣೆಗೆ ಸೃಷ್ಟಿಸಿಕೊಂಡ ಊಳಿಗಮಾನ್ಯ ಪುರುಷ ಸಮಾಜವು ವೈದಿಕ ಧರ್ಮದಷ್ಟೇ ಕ್ರೂರವಾಗಿ ದಲಿತ ಮಹಿಳೆಯರನ್ನು ಹಿಂಸಿಸಿದೆ. ಇಂತಹ ಮೌಲ್ಯಗಳು ಹಳೆಯ ಕಾಲದವಾಗಿದ್ದರೂ ಅವು ಈ ಕಾಲದಲ್ಲೂ ಜೀವಂತವಾಗಿವೆ" ಎಂದು ಮೊಗಳ್ಳಿ ಗಣೇಶ್ ವಿಶ್ಲೇಷಿಸುತ್ತಾರೆ.[೩೪]

**'ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ'** ಎಂಬ ಪುಸ್ತಕದಲ್ಲಿ **ಕನಕ್ ಮುಖರ್ಜಿ (೨೦೧೩)** ಅವರು, "ಪಾಳೇಗಾರಿ ವ್ಯವಸ್ಥೆಯಲ್ಲಿ ಸಮಾಜ ಕಂದಾಚಾರಗಳಿಂದ ತುಂಬಿ ತುಳುಕುತ್ತಿತ್ತು. ಮಹಿಳೆ ಪುರುಷನ ವೈಯಕ್ತಿಕ ಆಸ್ತಿಯೆಂದೇ ಪರಿಗಣಿಸಲ್ಪಡುತ್ತಿದ್ದಳು. ಅವಳಿಗೆ ಯಾವುದೇ ಸ್ವಾತಂತ್ರ್ಯ ವಿರಲಿಲ್ಲ. ಹಾಗಾಗಿ ಅವಳು ಪುರುಷನ ಜೀತದಾಳಾಗಿ, ಗುಲಾಮಳಾಗಿ ಜೀವನ ಸಾಗಿಸುತ್ತಿದ್ದಳು. ಆಳುವವರ ಬೆಳಕಿನಲ್ಲಿಯೇ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಿದ್ದಳು. ಪರಿಣಾಮವಾಗಿ ಅವಳು ಧಾರ್ಮಿಕ ಮತಾಂಧತೆಯ ಬಲಿಪಶುವಾಗಿ ಅನೇಕ ಮೌಢ್ಯಗಳ ಹುದುಲಲ್ಲಿ ಸಿಕ್ಕು ಒದ್ದಾಡುತ್ತಿದ್ದಳು. ಹಲವಾರು ಪ್ರತಿಗಾಮಿ ಆಚಾರ ವಿಚಾರಗಳ ಜಂಜಡದಲ್ಲಿ ಸಿಕ್ಕು ಚಲನಹೀನಳಾಗಿದ್ದಳು. ಜೀವವಿರೋಧಿ ಕಾಯ್ದೆ ಕಟ್ಟಳೆಗಳ ಬಲಿಪಶುವಾಗಿ, ಅದೇ ತನ್ನ ಹಣೆಬರಹವೆಂದು ಬಗೆದು, ನಿರ್ಗತಿಕಳಾಗಿ ಬದುಕುತ್ತಿದ್ದಳು. ಸತಿಪದ್ಧತಿ, ಬಾಲ್ಯವಿವಾಹ, ಕುಲೀನವ್ಯವಸ್ಥೆ ಮತ್ತು ದೇವದಾಸಿ ಪದ್ಧತಿಗಳಂಥ ಕೆಟ್ಟ ರೂಢಿ, ಸಂಪ್ರದಾಯಗಳಿಂದ ಕೂಡಿದ್ದ ಸಮಾಜದಲ್ಲಿ ಕೊಳೆಯುತ್ತಿದ್ದಳು. ಅನೇಕ ಪತ್ನಿಯರನ್ನು ಪಡೆದಿರುವುದರ ಜೊತೆಗೆ ಉಪಪತ್ನಿಯರನ್ನೂ ಇಟ್ಟುಕೊಂಡು ಅಟ್ಟಹಾಸದಿಂದ ಮೆರೆಯುತ್ತಿದ್ದ ಪುರುಷರ ಕಾಲ್ತುಳಿತಕ್ಕೆ ಸಿಕ್ಕು ನಜ್ಜುಗುಜ್ಜಾಗಿದ್ದಳು. ಇದೆಲ್ಲಕ್ಕೂ ಕಳಶವಿಟ್ಟಂತೆ ಹೆಣ್ಣುಮಕ್ಕಳನ್ನು ಮಾರುವ ಪದ್ಧತಿಯೂ ಭಾರತೀಯ ಸಮಾಜದಲ್ಲಿ ಅಸ್ತಿತ್ವದಲ್ಲಿ ಇತ್ತು" ಎಂದು ವಿಶ್ಲೇಷಿಸುತ್ತಾರೆ.[೩೫]

**"ದಿ ಲೀಗಲೈಜೆಶನ್ ಆಫ್ ಪ್ರಾಸ್ಟಿಟ್ಯೂಶನ್"** ಎಂಬ ಪುಸ್ತಕದಲ್ಲಿ **ಜೇನ್ ಡಿ ಚುನ್ನಾ** (೧೯೯೧) ಅವರು, ರಾಜ್ಯವು ಸೈನ್ಯದಲ್ಲಿ ಸೈನಿಕರು ಮದುವೆ ಮಾಡಿಕೊಳ್ಳುವುದನ್ನು ನಿಷೇಧಿಸಿತ್ತು. ಆದರೆ ಲೈಂಗಿಕತೆ ಎಂಬುದು ಮನುಷ್ಯನ ಸಹಜ ಜೈವಿಕ ಪ್ರಕ್ರಿಯೆ ಆಗಿದ್ದರಿಂದ, ಸೈನಿಕರ ಬೇಡಿಕೆ ಅಲ್ಲಗಳೆಯಲು ಬಾರದಷ್ಟು ಪ್ರಬಲವಾಗಿತ್ತು. ಸೈನಿಕರ ತೃಪ್ತಿಗಾಗಿ ನ್ಯಾಯವಿರುದ್ಧವಾದಂತಹ ಲೈಂಗಿಕ ಸೇವೆ ಕೊಡಬೇಕೆಂಬುದನ್ನು ರಾಜ್ಯ ಸಮರ್ಥಿಸಿಕೊಂಡಿತು. ಆದ್ದರಿಂದ ಭಾರತದಲ್ಲಿ ಬ್ರಿಟಿಷ ಸೈನಿಕರ ಆರೋಗ್ಯ

ರಕ್ಷಣೆ, ಭಾರತೀಯ ಸೈನಿಕರ ಕಾರ್ಯಕ್ಷಮತೆ ಹೆಚ್ಚಿಸುವುದಕ್ಕಾಗಿ, ಅಲ್ಲದೇ ಭವಿಷ್ಯತ್ತಿನ ಪೀಳಿಗೆಯು ದೈಹಿಕವಾಗಿ ಕ್ಷೀಣಿಸುವುದನ್ನು ತಡೆಗಟ್ಟಲು ಸಾಂಸರ್ಗಿಕ ರೋಗ ಪೀಡಿತರಿಂದ ಅವರ ಮಕ್ಕಳಿಗೆ ರೋಗವು ತಗುಲದಂತೆ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಳ್ಳುವುದನ್ನು ಉದ್ದೇಶವಾಗಿಸಿಕೊಂಡು 'ದ ಕಾಂಟೇಜಿನಿಯಸ್ ಡಿಸೀಜಸ್ ಯ್ಯಾಕ್ಟ್' ಅನುಷ್ಠಾನಗೊಂಡಿತು. ಹೀಗಾಗಿ ಭಾರತದಲ್ಲಿ ಸಾಂಪ್ರದಾಯಿಕ ರೂಪದಲ್ಲಿದ್ದ ವೇಶ್ಯಾವಾಟಿಕೆಯು ಬಾಜಾರಿ ಸ್ವರೂಪದೆಡೆಗೆ ಹೊರಳಿಕೊಂಡಿತು ಎನ್ನಬಹುದು. ಇದಕ್ಕಾಗಿ ಅಕ್ಕ ಪಕ್ಕದ ಪ್ರದೇಶಗಳಿಂದ ಸುಂದರವಾದ, ಆಕರ್ಷಣೆಯ ಮತ್ತು ಎಳೆಯ(Tender Age) ವಯಸ್ಸಿನ ಹುಡುಗಿಯರನ್ನು ವೇಶ್ಯಾವಾಟಿಕೆಯಲ್ಲಿ ತೊಡಗಿಸುವಂತೆ ಮಾಡಲು 'ದಾಯಿ'ಗಳನ್ನು ನೇಮಿಸಿ ಅವರಿಗೆ ಸಂಬಳದ ಜೊತೆಗೆ ಕಮೀಶನ್ನನ್ನೂ ಕೂಡ ನೀಡಲಾಗುತ್ತಿತ್ತು. ಆದರೂ ಸಹ ಬೇಡಿಕೆಗೂ ಪೂರೈಕೆಗೂ ಅಜಗಜಾಂತರ ವ್ಯತ್ಯಾಸವಿದ್ದು, ಎಷ್ಟೋ ಹುಡುಗಿಯರ ಮೇಲೆ ಆದಂತಹ ನಿರಂತರ ಲೈಂಗಿಕ ಸಂಪರ್ಕದಿಂದ ಒಂದೇ ದಿನದಲ್ಲಿ ಅವಳು ಅದನ್ನು ತಡೆದುಕೊಳ್ಳದೇ ಸತ್ತು ಹೋದ ಘಟನೆಗಳು ನಡೆದಿವೆ ಎಂದು ಲೇಖಕರು ವಿಶ್ಲೇಷಿಸುತ್ತಾರೆ.[೩೬]

**"ಲಿಂಗೀಯ ಸಂಬಂಧಗಳು ಮತ್ತು ಸಮುದಾಯ ಚರ್ಚೆಗೆ ದಂಧೆ ಮಾಡುವವರ ಹಿನ್ನೆಲೆಯಲ್ಲಿ ಕೆಲವಿಚಾರಗಳು"** ಎಂಬ ಲೇಖನದಲ್ಲಿ **ಮನೋರಂಜನಿ (೨೦೦೭)**, ಅವರು, ಮಕ್ಕಳನ್ನು ಲೈಂಗಿಕ ಶೋಷಣೆಗೆ ಒಳಪಡಿಸುವಂತಹ ರೂಢಿ ವಸಾಹತು ಸಂದರ್ಭದಲ್ಲಿ ಬೆಳೆಯಿತು. ಆಗ ಹೆಚ್ಚಳಗೊಂಡ ವೇಶ್ಯಾಗೃಹಗಳು, ತಲೆಹಿಡುಕರು ಜೊತೆಗೆ ಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳತೊಡಗಿದಾಗ, ಸಮಾಜ ಸುಧಾರಕರ ಶಿಫಾರಸ್ಸಿನನ್ವಯ ಭಾರತ ದಂಡ ಸಂಹಿತೆಯ ೧೮೬೦ರ ಕಾಯ್ದೆಯಲ್ಲಿ ೩೭೨ ಮತ್ತು ೩೭೩ರ ಕಲಂಗಳನ್ನು ವೇಶ್ಯಾವೃತ್ತಿಗಾಗಿ ಅಪ್ರಾಪ್ತ ಮಕ್ಕಳನ್ನು ಬಳಸುವುದನ್ನು ನಿಷೇಧಿಸಿ ಕಾನೂನು ಜಾರಿಗೊಳಿಸುವ ಕುರಿತು ವಿವರಿಸುತ್ತದೆ. ಇದರಿಂದಾಗಿ ಮಹಿಳೆಯರ ಜೊತೆಗೆ ಮಕ್ಕಳನ್ನು ಸಹ ಶೋಷಣೆಗೆ ಒಳಪಡಿಸುವ ಪ್ರಕ್ರಿಯೆ ೧೮ರ ದಶಕದಿಂದಲೇ ಪ್ರಾರಂಭಗೊಂಡಿರುವುದನ್ನು ಈ ಲೇಖಕರು ವಿವರಿಸುತ್ತಾರೆ.[೩೭]

ಬರಗಾಲಕ್ಕೆ ತುತ್ತಾಗುತ್ತಿದ್ದ ಉತ್ತರ ಕಾರ್ನಾಟಕದ ಗ್ರಾಮವೊಂದರಲ್ಲಿ ದೇವದಾಸಿ ಪದ್ಧತಿ ಕುರಿತು ಅಧ್ಯಯನ ನಡೆಸಿದ್ದ **ಜೋಗನ್ ಶಂಕರ್** ಅವರು, ಆ ಗ್ರಾಮದ ಪರಿಶಿಷ್ಟ ಜಾತಿಯ ಸಮುದಾಯದಲ್ಲಿ ಕೃಷಿ ಕೂಲಿಯ ನಂತರ ವೇಶ್ಯಾವೃತ್ತಿಯು ಎರಡನೇ ಪ್ರಮುಖ ಉದ್ಯೋಗವಾಗಿರುವ ಬಗೆಯನ್ನು ವಿವರಿಸುತ್ತಾರೆ. ಇಂತಹ ಆಚರಣೆಗಳು ಮುಂದೆ ವಾರಸುದಾರಿಕೆಯ ಸಂಪ್ರದಾಯದಲ್ಲಿ ಮುಂದುವರೆಯುವ ರೀತಿಗಳು ಕೆಳವರ್ಗದ ಜನರನ್ನು ವ್ಯವಸ್ಥಿತವಾಗಿ ಹಿಂಸಿಸುವ ಮತ್ತು ಅವರ ಮೇಲೆ ಒಡೆತನ, ಅಧಿಕಾರ ಸ್ಥಾಪಿಸುವ ಮೇಲ್ಜಾತಿಯ ಜನರ ಹುನ್ನಾರಗಳಾಗಿವೆ ಎನ್ನಬಹುದು ಎಂದು ಹೇಳುತ್ತಾರೆ.[೩೮]

**'ರೆಡ್‌ಲೈಟ್ ಏರಿಯಾ ಸೋಷಿಯಲ್ ಎನ್ವಿರಾನ್ಮೆಂಟ್ ಆಫ್ ಸೆಕ್ಸ್ ವರ್ಕರ್ಸ್'** ಎಂಬ ಅಧ್ಯಯನದಲ್ಲಿ **ಸುಮತಿ ಕರ್ಮಾಕರ(೨೦೦೧)** ಅವರು, ಜಗತ್ತಿನಲ್ಲಿರುವ ಮಕ್ಕಳು ಮುಗ್ಧ, ಅಸಹಾಯಕ ಮತ್ತು ಅವಲಂಬಿತರಾದವರಾಗಿದ್ದಾರೆ. ಅದರ ಜೊತೆಗೆ ಎಲ್ಲವನ್ನೂ ತಿಳಿಯಬೇಕೆನ್ನುವ ಕುತೂಹಲದ

ಚಟುವಟಿಕೆಯುಳ್ಳವರು ಮತ್ತು ಆಶಾ ವಾದಿಗಳೂ ಕೂಡಾ ಆಗಿದ್ದಾರೆ. ಸಾಮರಸ್ಯ ಮತ್ತು ಸಹಕಾರಗಳಲ್ಲಿ ಸಂತೋಷ ಮತ್ತು ಶಾಂತಿಯುತ ಸಮಯ ಅವರದಾಗಬೇಕು. ವಿಶಾಲ ದೃಷ್ಟಿಕೋನವನ್ನು ಮತ್ತು ಹೊಸ ಹೊಸ ಅನುಭವಗಳನ್ನು ಪಡೆಯುವುದರೊಂದಿಗೆ ಅವರ ಭವಿಷ್ಯ ಒಂದು ಉತ್ತಮವಾದ ರೂಪು ತಳೆಯಬೇಕು. ಆದರೆ ಅದೆಷ್ಟೋ ಮಕ್ಕಳ ಬಾಲ್ಯದ ವಾಸ್ತವತೇನೇ ಸಂಪೂರ್ಣವಾಗಿ ಭಿನ್ನವಾಗಿರುತ್ತದೆ ಎಂದು ಅಧ್ಯಯನ ವಿವರಿಸುತ್ತದೆ.[೬]

**ಜರ್ಮನಿಯ ಪಬ್ಲಿಕ್ ಹೆಲ್ತ್**(೨೦೦೬) ಅವರು ನಡೆಸಿದ ಅಧ್ಯಯನವು, ಹೆಚ್ಚಾಗಿ ಎಲ್ಲ ದೇಶಗಳಲ್ಲೂ ಬಡತನವು ಅಪ್ರಾಪ್ತರನ್ನು ತನ್ನಷ್ಟಕ್ಕೆ ತಾನೆ ವೇಶ್ಯಾವೃತ್ತಿಯಲ್ಲಿ ತೊಡಗುವಂತೆ ಮಾಡುವ ಒಂದು ಪ್ರಮುಖ ಕಾರಣವಾಗಿದೆ. ೧೯೯೮ರಲ್ಲಿ ಥೈಲ್ಯಾಂಡಿನಲ್ಲಿ ಆರ್ಥಿಕ ಹಿಂಜರಿತ ಸಂಭವಿಸಿದ್ದರಿಂದ ವೇಶ್ಯಾವೃತ್ತಿಯಲ್ಲಿ ತೊಡಗಿದ್ದ ಅಪ್ರಾಪ್ತರಲ್ಲಿ ೨೦%ರಷ್ಟು ಹೆಚ್ಚಳ ಆಯಿತು. ಹಾಗೆಯೇ ಸೋವಿಯತ್ ಯುನಿಯನ್, ವಿಯಟ್ನಾಂ ಮತ್ತು ಕಾಂಬೋಡಿಯಾದಂತಹ ರಾಷ್ಟ್ರಗಳಲ್ಲಿ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ರಚನೆಯಲ್ಲಿನ ಬದಲಾವಣೆಗಳು, ಲಿಂಗಾಧಾರಿತ ವ್ಯತ್ಯಾಸಗಳಿಂದ ಮಕ್ಕಳು ಮಹಿಳೆಯರ ಲೈಂಗಿಕ ಶೋಷಣೆಗೆ ಕಾರಣವಾದವು ಎಂದು ವರದಿ ತಿಳಿಸುತ್ತದೆ. ಆಫ್ರಿಕಾ ಮತ್ತು ಏಷ್ಯದ ಕೆಲವು ಭಾಗಗಳಲ್ಲಿ ಮುರಿದು ಬಿದ್ದ ಕುಟುಂಬಗಳಿಂದ, ಪೋಷಕರಿಂದ ಬೇರ್ಪಟ್ಟ ಮತ್ತು ಪೋಷಕರ ಮರಣದಿಂದ ಕುಟುಂಬದ ಬ್ರೆಡ್ ಅರ್ನರ್ ಆಗುವಂತಹ ದೊಡ್ಡ ಜವಾಬ್ದಾರಿ ವಹಿಸಿಕೊಳ್ಳುವ ಸಣ್ಣ ಮಕ್ಕಳು ಮತ್ತು ಎಚ್.ಐ.ವಿ./ಏಡ್ಸ್‌ನಿಂದಾಗಿ ಪೋಷಕರನ್ನು ಕಳೆದುಕೊಂಡ ಮಕ್ಕಳು ಪರಿಸ್ಥಿತಿ ನಿಭಾಯಿಸಲು ತಮ್ಮಿಂದ ತಾವೇ ವೇಶ್ಯಾವೃತ್ತಿಗೆ ಸೇರುವಂತಹ ಒತ್ತಡಕ್ಕೆ ಒಳಗಾಗುತ್ತಾರೆಂದು ಈ ಅಧ್ಯಯನವು ತಿಳಿಸುತ್ತದೆ. ಹಾಗೆಯೇ ಕಾಂಬೋಡಿಯಾ, ವಿಯಟ್ನಾಂ ಮತ್ತು ಚೈನಾಗಳಲ್ಲಿ ಕುಮಾರಿ ಯರಾದ ಹುಡುಗಿಯರೊಂದಿಗೆ ಲೈಂಗಿಕ ಸಂಬಂಧ ಹೊಂದಿದರೆ, ಅವರಲ್ಲಿ ಪುನರ್ ಯೌವನ ಮತ್ತು ಪುನರ್ ಉತ್ಸಾಹಗಳು ಬರುತ್ತವೆ ಎಂಬ ನಂಬಿಕೆಗಳು ಮಕ್ಕಳ ಲೈಂಗಿಕ ಶೋಷಣೆಗೆ ಕಾರಣ ವಾಗಿವೆ ಎಂದು **ಜರ್ಮನಿಯ ಪಬ್ಲಿಕ್ ಹೆಲ್ತ್** ವರದಿಯು ತಿಳಿಸುತ್ತದೆ.[೧೦]

**"ಚೈಲ್ಡ್ ಸೆಕ್ಸುವಲ್ ಎಬ್ಯೂಸ್ ಫ್ಯಾಕ್ಟ್ಸ್ ಯ್ಯಾಂಡ್ ಫ್ಯಾಕ್ಟ್ಸ್"** ಎಂಬ ಸಂಶೋಧನಾ ಲೇಖನದಲ್ಲಿ **ಅನು ಪ್ರಿಯೋ ಮಲಿಕ್ ( ೨೦೦೪) ಅವರು,** ಬಡತನದ ಹೆಚ್ಚಳದಿಂದಾಗಿ ಸಾಕಷ್ಟು ಕುಟುಂಬಗಳು ಒತ್ತಡ ಅಥವಾ ಮೋಸಕ್ಕೆ ಬಲಿಯಾಗಿ ತಮ್ಮ ಹೆಣ್ಣುಮಕ್ಕಳನ್ನು ವೇಶ್ಯಾವೃತ್ತಿಗೆ ಮಾರುತ್ತಾರೆ. ಹಾಗೂ ಪ್ರಕೃತಿ ವಿಕೋಪಗಳಾದ ಭೂಕಂಪ, ಚಂಡ ಮಾರುತಗಳು, ಪ್ರವಾಹಗಳು ಮತ್ತು ಬರಗಾಲಗಳೂ ಸಹ ಜನರಲ್ಲಿ ಶಕ್ತಿ ಕುಂದಿಸಿ ಬಡವರನ್ನಾಗಿಸಿ, ಮಕ್ಕಳನ್ನು ವೇಶ್ಯಾವೃತ್ತಿಗೆ ಮಾರುವಂತಹ ಸ್ಥಿತಿ ಹೆಚ್ಚಾಗಿದೆ ಎಂದು ವಿಶ್ಲೇಷಿಸುತ್ತದೆ.[೧೧]

**"ಕಮರ್ಷಿಯಲ್ ಸೆಕ್ಸುವಲ್ ಎಕ್ಸಪ್ಲಾಯ್ಟೇಶನ್ ಆಫ್ ಚಿಲ್ಡ್ರನ್"** ಎಂಬ ಅಧ್ಯಯನದಲ್ಲಿ **ನಿಕೋಲೆ ಲೇವಿಸ್**(೨೦೦೧) ಅವರು ಕೆನಡಾ, ಮೆಕ್ಸಿಕೋ ಮತ್ತು ಯು ಎಸ್ ಎ ದೇಶಗಳಲ್ಲಿ ಮಕ್ಕಳ ಬಾಜಾರಿ ಲೈಂಗಿಕ ಶೋಷಣೆಗೆ ಕಾರಣಗಳನ್ನ ಅಧ್ಯಯನ ಮಾಡುತ್ತಾರೆ. ಕೆನಡಾದಲ್ಲಿ ಬಡತನ,

ಕಡಿಮೆ ಆದಾಯ ಮತ್ತು ಉದ್ಯೋಗಗಳ ಕೊರತೆಯಿಂದಾಗಿ ಮಕ್ಕಳು ಲೈಂಗಿಕ ಶೋಷಣೆಗೆ ಒಳಗಾಗುವಂತೆ ಮಾಡುತ್ತವೆ. ಕುಟುಂಬದ ವಿಘಟನೆಯಿಂದಾಗಿ ಮನೆಯಿಂದ ಓಡಿಹೋದ ಮಕ್ಕಳು ಬೀದಿ ಬದಿಯಲ್ಲಿ ಬದುಕು ನಡೆಸಬೇಕಾದ ಸಂದರ್ಭದಲ್ಲಿ ಆಹಾರ, ವಸತಿಗಳಿಗಾಗಿ ಅಸಹಾಯಕರಾದ ಮಕ್ಕಳು ವೇಶ್ಯಾವೃತ್ತಿಗಿಳಿಯುತ್ತಾರೆಂದು ಅಧ್ಯಯನವು ವಿಶ್ಲೇಷಿಸುತ್ತದೆ. ಹಾಗೆಯೇ ಮೆಕ್ಸಿಕೋ ದೇಶದಲ್ಲಿ ಕುಟುಂಬದ ಸದಸ್ಯರಿಂದ, ಸ್ನೇಹಿತರಿಂದ, ಅಪರಾಧಿ ಜಾಲಗಳಿಂದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಸಾಗಾಣಿಕೆ ಕಂಡುಬರುತ್ತಿದ್ದು, ಅದಕ್ಕೆ ಪೋಷಕರ ಅಥವಾ ಮಲ ತಂದೆಯರ ಮದ್ಯಪಾನ, ಅಕ್ರಮ ನಡುವಳಿಕೆಗಳು ಮುಖ್ಯವಾಗಿ ಕಾರಣ ಎಂದು ಅಧ್ಯಯನವು ಗುರುತಿಸುತ್ತದೆ. ಹಾಗೆಯೇ ಯು.ಎಸ್.ಎ.ನಲ್ಲಿ ಕುಟುಂಬ ವಿಘಟನೆ, ಕೌಟುಂಬಿಕ ಅಥವಾ ವೈಯಕ್ತಿಕ ಮಾದಕ ವಸ್ತು ಸೇವನೆಗಳು, ಶಾಲೆಯಿಂದ ಹೊರಗುಳಿಯುವ ಮತ್ತು ಸಾಮಾಜಿಕವಾಗಿ ವಿಫಲತೆ ಅನುಭವಿಸಿದವರು ತಮ್ಮ ಅಸಹಾಯಕ ಪರಿಸ್ಥಿತಿಗಳಿಂದಾಗಿ ಬಾಜಾರಿ ಲೈಂಗಿಕ ಶೋಷಣೆಗೆ ಗುರಿಯಾಗುತ್ತಾರೆಂದು ಅಧ್ಯಯನವು ಗುರುತಿಸುತ್ತದೆ. ಹಾಗೆಯೇ ಮನೆಯಿಂದ ಓಡಿಹೋದ ಮಕ್ಕಳು ವೇಶ್ಯಾವೃತ್ತಿಯೊಂದೆ ಬೀದಿಯ ಬದಿಯಲ್ಲಿ ಬದುಕಲು ದಾರಿ ಎಂಬಂತೆ ಭಾವಿಸುತ್ತಾರೆ. ಓಡಿಹೋದ ಮಕ್ಕಳಿಗೂ ಮತ್ತು ವೇಶ್ಯಾವೃತ್ತಿಗೂ ಇಷ್ಟು ಹತ್ತಿರದ ಸಂಬಂಧವಿದ್ದರೆ, ಎರಡೂ ನಿಟ್ಟಿನಲ್ಲಿ ಪ್ರತಿಬಂಧಕ ಕೆಲಸಗಳು ಆಗಬೇಕೆಂದು ನಿಕೋಲೆ ಲೇವಿಸ್ ಅಭಿಪ್ರಾಯ ಪಡುತ್ತಾರೆ.[೨೨]

**"ಕಮರ್ಶಿಯಲ್ ಸೆಕ್ಸ್ಯುವಲ್ ಎಕ್ಸಾಪ್ಲಾಯ್ಟೇಶನ್ ಆಫ್ ಚಿಲ್ಡ್ರನ್ ಯ್ಯಾಂಡ್ ಅಡೋಲಸಂಟ್ಸ್" ಕುರಿತು ನಡೆಸಿದ ಅಂತರಾಷ್ಟ್ರೀಯ ಕಾರ್ಮಿಕ ಸಂಘ (ಐ.ಎಲ್.ಓ) ವು** ಶೋಷಣೆಯು ಬಾಲಕಾರ್ಮಿಕತೆಯ ಒಂದು ಮುಖವಾಗಿದ್ದು, ಕುಟುಂಬಗಳಲ್ಲಿ, ಸಮುದಾಯಗಳಲ್ಲಿ ಮತ್ತು ಸಮಾಜದಲ್ಲಿ ನಡೆಯುವಂತಹ ಗಂಡಾಂತರ ಘಟನೆಗಳು ಮತ್ತು ಅಂಶಗಳು ಮಕ್ಕಳಲ್ಲಿ ಅಸಹಾಯಕತೆಯನ್ನು ನಿರ್ಮಿಸುತ್ತವೆ. ಮನೆಯಿಂದ ಓಡಿಹೋದ, ವಿಘಟಿತ ಕುಟುಂಬದ, ಲೈಂಗಿಕ ವೃತ್ತಿಯಲ್ಲಿರುವವರ, ಮನೆಯಿಲ್ಲದ, ಏಡ್ಸ್ ರೋಗದಿಂದ ಪೋಷಕರನ್ನು ಕಳೆದುಕೊಂಡ, ಶಾಲೆಯಿಂದ ಹೊರಗುಳಿದ, ಮನೆಗೆಲಸದಲ್ಲಿ ತೊಡಗಿಕೊಂಡಿರುವ ಮತ್ತು ಬೀದಿ ಬದಿಯಲ್ಲಿ ಕಸ ಗುಡಿಸುವಂತಹ ಹೆಣ್ಣುಮಕ್ಕಳು ಬಾಜಾರಿ ಲೈಂಗಿಕ ಶೋಷಣೆಗೆ ಬಲಿಯಾಗುತ್ತಾರೆಂದು ವಿಶ್ಲೇಷಿಸುತ್ತದೆ.[೨೩]

**"ಪ್ರಾಸ್ಟಿಟ್ಯೂಶನ್ ಇನ್ ಇಂಡಿಯಾ" ಎಂಬ ಅಧ್ಯಯದದಲ್ಲಿ ಜಯಶ್ರೀ ಮತ್ತು ಮೋಹನ ಮೂರ್ತಿ ಇವರು** ಭಾರತದಲ್ಲಿರುವ ಬಾಲವೇಶ್ಯಾ ಸಮಸ್ಯೆಯ ಕುರಿತು ಈ ರೀತಿ ವಿಶ್ಲೇಷಿಸುತ್ತಾರೆ. ಸಾಂಪ್ರದಾಯಿಕ ಮೂಢನಂಬಿಕೆಗಳು ಮತ್ತು ಲಿಂಗಭೇದದ ವಿಚಾರಗಳು ಭಾರತದಲ್ಲಿ ಬಾಲವೇಶ್ಯಾ ಸಮಸ್ಯೆಯು ಇತರೆ ಎಲ್ಲ ರಾಷ್ಟ್ರಗಳಿಗಿಂತ ಭೀಕರವಾಗಿರುವ ಕುರಿತು ತಿಳಿಸುತ್ತಾರೆ. ವೇಶ್ಯಾವೃತ್ತಿಗೆ ವರ್ಷವೊಂದಕ್ಕೆ ೮ ರಿಂದ ೧೦% ಮಕ್ಕಳು ಇಳಿಯುತ್ತಾರೆಂದು ಕಳವಳ ವ್ಯಕ್ತಪಡಿಸುತ್ತಾರೆ. ಅವರು ನಡೆಸಿದ ಸಮೀಕ್ಷೆಯ ಆಧಾರದ ಪ್ರಕಾರ ಮುಂಬಯಿಯ ಕಾಮಾಟಿಪುರದ ಘರವಾಲಿಯೊಬ್ಬರು ಹೇಳಿದಂತೆ ಮೊದಲು ೧೪ ರಿಂದ ೧೬ ವರ್ಷದ ಹುಡುಗಿಯರನ್ನು ವೇಶ್ಯಾವೃತ್ತಿಗಾಗಿ ತರುತ್ತಿದ್ದರು. ಆದರೆ ಈಗ ಎರಡು ವರ್ಷಗಳಿಂದ ಅದು ೧೦ ರಿಂದ ೧೪ ವರ್ಷಕ್ಕೆ ಇಳಿದಿದೆ ಎಂಬ ಆತಂಕಕಾರಿ ವಿಷಯವನ್ನು

ಅಧ್ಯಯನವು ತಿಳಿಸುತ್ತದೆ. ಅಧ್ಯಯನದಲ್ಲಿ ಘರವಾಲಿಯೊಬ್ಬಳು ಹೇಳಿದ್ದನ್ನು ಈ ರೀತಿ ಉಲ್ಲೇಖಿಸುತ್ತಾರೆ. ಮುಂಬೈನ ಕಾಮಾಟಿಪುರದಲ್ಲಿ, ೧೦ರಿಂದ ೧೨ ವಯಸ್ಸಿನ ಹುಡುಗಿಯರೊಂದಿಗೆ ಲೈಂಗಿಕ ಸಂಪರ್ಕ ಹೊಂದುವುದರಿಂದ ಏಡ್ಸ್ ರೋಗ ಮತ್ತು ಇತರೆ ಲೈಂಗಿಕ ಸಂಬಂಧಿ ಕಾಯಿಲೆಗಳು ದೂರವಾಗುತ್ತವೆ ಎಂಬ ಮಿಥ್ (ಸುಳ್ಳು ನಂಬಿಕೆ) ಗಳು ಬಾಲ ವೇಶ್ಯಾವಾಟಿಕೆ ಮತ್ತು ಅತೀ ಕಡಿಮೆ ವಯಸ್ಸಿನ ಹುಡುಗಿಯರು ಲೈಂಗಿಕವಾಗಿ ಶೋಷಿತಗೊಳ್ಳಲು ಕಾರಣವಾಗಿವೆ ಎಂದು ಘರವಾಲಿ ಅಭಿಪ್ರಾಯ ಪಡುತ್ತಾರೆ.[೪೪]

**"ರೀ ಹ್ಯಾಬಿಲಿಟೆಶನ್ ಆಫ್ ಡಿಸಡ್ವಾನ್ಸ್ಡ ಚಿಲ್ಡ್ರನ್ ಯ್ಯಾಂಡ್ ವುಮೆನ್ ಸೆಕ್ಸ್ ವರ್ಕರ್ಸ್"** ಎಂಬ ಅಧ್ಯಯನದಲ್ಲಿ **ಎಸ್ ಪಿ ಪಾಂಡೆ, ಅವದೇಸ್ ಕರ್ನಲ್ ಸಿಂಗ್ ಮತ್ತು ಸಂಜಯ ಕರ್ನಲ್ ಪನೆ (೨೦೦೮)** ಇವರು ಉತ್ತರ ಪ್ರದೇಶದಲ್ಲಿ ಕೆಲವು ಕಡೆಗೆ ನಡೆಸಿದ ಅಧ್ಯಯನದಲ್ಲಿ, ಸಾಮಾಜಿಕ ಭದ್ರತೆ ಇರದಿರುವುದು, ಲಿಂಗಭೇದ, ಪರಿಣಾಮಕಾರಿಯಾದ ಆಡಳಿತ ಇರದಿರುವುದು, ನಷ್ಟಗಳು, ಅಸಹಾಯ ಕತೆಗಳು ಸಾಗಾಣಿಕೆಗೆ ಕಾರಣವಾಗುತ್ತವೆ. ಜಾಗತೀಕರಣ, ಉದ್ಯೋಗ, ವ್ಯಾಪಾರ, ವಲಸೆಯ ನೀತಿಗಳು, ಸಂಘರ್ಷಗಳು ಮತ್ತು ಪ್ರಕೃತಿ ವಿಕೋಪಗಳಂತಹ ಸೂಕ್ಷ್ಮ ಅಂಶಗಳು ಅಸಹಾಯಕತೆಯನ್ನು ನಿರ್ಮಿಸುತ್ತವೆ ಎಂದು, ಹಾಗೆಯೇ ಹೆಚ್ಚುತ್ತಿರುವ ಪ್ರವಾಸಗಳು ಮತ್ತು ಕೈಗಾರಿಕೀಕರಣ, ಗ್ರಾಮೀಣ ನಗರ ವಲಸೆ, ಅತ್ಯಂತ ಕಡಿಮೆ ಕೂಲಿಯಲ್ಲಿ ಕಾರ್ಮಿಕರು ಬೇಕೆಂಬ ಬೇಡಿಕೆ, ಪುರುಷ ಪ್ರಧಾನವಾದ ಮಾಲೀಕ ವ್ಯವಸ್ಥೆಗಳು, ಎಲ್ಲಕ್ಕಿಂತ ಹೆಚ್ಚಾಗಿ ಬಡತನವು ವೇಶ್ಯಾವೃತ್ತಿಯಲ್ಲಿ ಹೆಣ್ಣುಮಕ್ಕಳು ತೊಡಗುವಂತೆ ಮಾಡುತ್ತವೆ ಎಂದು ಗುರುತಿಸುತ್ತಾರೆ. ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡದೇ, ೮ ರಿಂದ ೧೪ ವರ್ಷಗಳಲ್ಲಿ ತವಾಯಫ್ ಸಂಪ್ರದಾಯದ ಮೂಲಕ ಹಾಡುವುದನ್ನು ಕುಣಿಯುವುದನ್ನು ಕಲಿಸಿ ವೇಶ್ಯಾವೃತ್ತಿಗೆ ತಳ್ಳುವ ಕುರಿತು ಅಧ್ಯಯನವು ತಿಳಿಸುತ್ತದೆ.[೪೫]

**ಗ್ರೇಸೀ ಇವರು 'ಮೈಕ್ರೋ ಸ್ಟಡಿ ಆನ್ ಗರ್ಲ ಚಿಲ್ಡ್ರನ್ ಇನ್ ಪ್ರಾಸ್ಟಿಟ್ಯೂಶನ್'** ಈ ವಿಷಯದಲ್ಲಿ ಮುಂಬೈನ ಕಾಮಾಟಿಪುರದಲ್ಲಿ ವೇಶ್ಯಾವೃತ್ತಿ ನಡೆಸುತ್ತಿರುವ ಹೆಣ್ಣುಮಕ್ಕಳ ಕುರಿತ ಅಧ್ಯಯನದ ಮೂಲಕ ಬಹುತೇಕ ಹೆಣ್ಣುಮಕ್ಕಳು ಬಡತನದ ಗ್ರಾಮೀಣ ಪ್ರದೇಶಗಳಿಂದ ಬಂದವರಾಗಿದ್ದು, ಅವರ ಪಾಲಕರು ಅನಕ್ಷರಸ್ಥರಾಗಿದ್ದಾರೆ. ಹೆಚ್ಚಿನ ಸಂಖ್ಯೆಯ ಮಕ್ಕಳು ತಂದೆ ಇರದ, ವಿಚ್ಛೇದಿತ, ಮದ್ಯಪಾನಿಯಾದ, ಒಂದು ನಿಶ್ಚಿತ ಉದ್ಯೋಗ ಇರದಂತಹ ಕುಟುಂಬಗಳಿಂದ ಬಂದವರಾಗಿದ್ದಾರೆ. ಅಲ್ಲದೇ ಏನೂ ಇಲ್ಲದ ನಿರಾಶದಾಯಕ ಪರಿಸ್ಥಿತಿಗಳಲ್ಲಿ ಕೆಲಸದ ನೆಪದಲ್ಲಿ ಮೋಸ ಹೋಗಿ, ಮದುವೆ, ಪ್ರೇಮದ ಸೋಗಿನಲ್ಲಿ ಸುಳ್ಳು ಪ್ರಮಾಣಗಳನ್ನು ನಂಬಿಸಿ, ನಂತರ ಅದೇ ಹುಡುಗನಿಂದ ವೇಶ್ಯಾವಾಟಿಕೆಗೆ ಮಾರಲ್ಪಟ್ಟು ಬಂದವರಾಗಿದ್ದಾರೆ ಎಂದು ತಿಳಿಸುತ್ತಾರೆ.[೪೬]

**"ಸೆಕ್ಸ್ಯೂವಲ್ ಎಕ್ಸಪ್ಲಾಯ್ಟೇಶನ್ ಆ್ಯಂಡ್ ದ ದೇವದಾಸಿ ಟ್ರೆಡಿಶನ್ ಇನ್ ಸದರ್ನ ಇಂಡಿಯಾ"** ಈ ಅಧ್ಯಯನದಲ್ಲಿ **ಲ್ಯೂರೆನ್ ಬೆಥ್ ಜಾಕೋಬ್ (೨೦೦೯)** ಅವರು, ದಕ್ಷಿಣ ಭಾರತದಲ್ಲಿರುವ

ದೇವದಾಸಿ ಪದ್ಧತಿಯನ್ನು ಅಧ್ಯಯನ ಮಾಡಿದ್ದಾರೆ. ಅಧ್ಯಯನವು ವಿಶ್ಲೇಷಿಸುವಂತೆ, ದಕ್ಷಿಣ ಭಾರತದಲ್ಲಿಯೂ ಸಹ ಬಡತನವೇ ಇದಕ್ಕೆ ಪ್ರಮುಖ ಕಾರಣ ಎಂದು ತಿಳಿಸುತ್ತಾ, ಆರ್ಥಿಕ ದುಸ್ಥಿತಿಯ ಸಂದರ್ಭದಲ್ಲಿ ಪೋಷಕರು ಮಕ್ಕಳನ್ನು ಆದಾಯಕ್ಕಾಗಿ ಮಾರುತ್ತಾರೆ. ಕೆಲವು ಮಕ್ಕಳು ಸತತವಾಗಿ ಅದೇ ವೃತ್ತಿಯಲ್ಲಿದ್ದುಕೊಂಡು ಕುಟುಂಬಗಳಿಗೆ ಆದಾಯದ, ಸಂಪತ್ತಿನ ಮೂಲವಾಗುತ್ತಾರೆ. ಮತ್ತು ಕೆಲವು ಪೋಷಕರು ನಿಗದಿತ ಬೆಲೆಗೆ ಮಾರಿದರೆ ಅವರು ಹಿಂತಿರುಗುವುದೇ ಇಲ್ಲ. ಹಿರಿಯರನ್ನು ನೋಡಿಕೊಳ್ಳಬೇಕಾದ ಕಿರಿಯರ ಜವಾಬ್ದಾರಿಗಳು, ಲಿಂಗಭೇದ ಕಾರಣವಾಗಿ ಪರಿಣಮಿಸಿದ್ದರೆ, ಕೆಲವು ಸಾಂಸ್ಕೃತಿಕ ಧಾರ್ಮಿಕ ಸಮಾಜಗಳಲ್ಲಿ ಹೆಣ್ಣುಮಕ್ಕಳನ್ನು ಕೀಳಾಗಿ ಕಂಡು ಉದಾ: ಹೆಣ್ಣುಮಕ್ಕಳನ್ನು ಕೀಳಾಗಿ ನಡೆಸಿಕೊಳ್ಳುವ ಆಫ್ರಿಕಾದ ಟ್ರೋಕೋಸಿ ಪದ್ಧತಿ, ನೇಪಾಳ ಮತ್ತು ಭಾರತದ ದೇವದಾಸಿ ಪದ್ಧತಿಗಳು ಹೆಣ್ಣುಮಕ್ಕಳನ್ನು ಲೈಂಗಿಕವಾಗಿ ಶೋಷಣೆಗೆ ಈಡು ಮಾಡಲು ಮುಖ್ಯ ಕಾರಣಗಳಾಗುತ್ತವೆ. ಎಂದು ಸಂಶೋಧಕರು ಪ್ರತಿಪಾದಿಸುತ್ತಾರೆ. ಸಂಶೋಧಕರು ನಡೆಸಿದ ವ್ಯಕ್ತಿಗತ ಅಧ್ಯಯನ ಒಂದರಲ್ಲಿ, ಯಾವ ದೇವದಾಸಿಯಾದರೂ ತನ್ನ ಮಗಳನ್ನು ವೇಶ್ಯಾವೃತ್ತಿಗೆ ಇಳಿಸಲು ಇಷ್ಟಪಡುವುದಿಲ್ಲ. ಅವರು ಸಾಧ್ಯವಾದಷ್ಟು ಅವರನ್ನು ರಕ್ಷಿಸಲು ಬಯಸುತ್ತಾರೆ. ಆದರೆ ಯಾವಾಗ ದೇವದಾಸಿ ತಾಯಂದಿರ ವಯಸ್ಸು ಹೋಗಿ, ರೋಗ ಅಂಟಿಕೊಂಡು ಆದಾಯ ನಿಲ್ಲುತ್ತದೆಯೋ ಆಗ ಈ ಲೈಂಗಿಕ ಗುಲಾಮಗಿರಿಗೆ ತಮ್ಮ ಮಕ್ಕಳನ್ನು ದೂಡುತ್ತಾಳೆ. ಇಲ್ಲದಿದ್ದರೆ ಅವಳು ಹಸಿವಿನಿಂದ ಸಾಯಬೇಕಾಗುತ್ತದೆ. ಇದು ಅವರ ಅನಿವಾರ್ಯತೆಯ ರೂಪವೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಇವೆಲ್ಲ ಸಂದರ್ಭ ಸಂದಿಗ್ಧತೆಗಳ ಜೊತೆಗೆ ಜಾತಿ ಪದ್ಧತಿಯೂ ಇಲ್ಲಿ ಪ್ರಮುಖವಾಗಿದ್ದು, ಬಡವರಷ್ಟೇ ಅಲ್ಲದೇ, ದಲಿತರು ಮತ್ತು ಸಮಾಜದ ಕೆಳಸ್ತರದ ಜನರು ಈ ವೃತ್ತಿಯಲ್ಲಿ ತೊಡಗಿಸಿಕೊಂಡ ಕುರಿತು ಅಧ್ಯಯನವು ವಿಶ್ಲೇಷಿಸುತ್ತದೆ.[೪೭]

**ಜೋಗನ್ ಶಂಕರ್** ಅವರು ತಮ್ಮ, **Devadasi Cult: A Sociological Analysis–೧೯೯೦** ಎಂಬ ಅಧ್ಯಯನದಲ್ಲಿ ಗ್ರಾಮೀಣ ಭಾಗದಿಂದ ಮುಂಬೈ ವೇಶ್ಯಾಗೃಹಗಳಲ್ಲಿ ವೇಶ್ಯಾವೃತ್ತಿ ನಡೆಸುತ್ತಿರುವಂತಹ ಒಂದೇ ಗ್ರಾಮದ ೮೫ ದೇವದಾಸಿ ಮಹಿಳೆಯರ ಕುರಿತು ಅಧ್ಯಯನ ನಡೆಸಿದ್ದಾರೆ. ಅಧ್ಯಯನವು ವಿಶ್ಲೇಶಿಸುವಂತೆ, ದೇವದಾಸಿ ಸಂಪ್ರದಾಯಕ್ಕೆ ಮಹಿಳೆಯರನ್ನು ಅವರ ವಯಸ್ಸು ಅಪ್ರಾಪ್ತವಾಗಿದ್ದ, ಅವಳು ಋತುಮತಿಯಾಗುವ ಮುನ್ನವೇ( Pre-puberity) ಸೇರಿಸುತ್ತಾರೆ. ಈ ಪದ್ಧತಿಯು ಶೈಕ್ಷಣಿಕವಾಗಿ, ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಹೊಲೆಯ, ಮಾದಿಗ ಮತ್ತು ಸಮಗಾರ ಈ ಮೂರೂ ಕೆಳಜಾತಿಯ ಸಮುದಾಯಗಳಲ್ಲಿ ಮಾತ್ರ ಕಂಡುಬರುತ್ತದೆ. ಸಮಗಾರ ಸಮುದಾಯಗಳಲ್ಲಿ ಅದು ಇತ್ತೀಚೆಗೆ ಕಂಡು ಬರುತ್ತಿಲ್ಲ. ಆರ್ಥಿಕವಾಗಿ, ರಾಜಕೀಯವಾಗಿ ಸರ್ವಾಧಿಕಾರ ಮಾಡುವ ಲಿಂಗಾಯತ ಗುಂಪಿನ ಜನರೇ ದೇವಸ್ಥಾನದ ಪೂಜಾರಿಗಳಾಗಿರುತ್ತಾರೆ. ಆದರೆ ದೇವದಾಸಿಯಾಗುವವರು ಮಾತ್ರ ಕೆಳಸ್ತರದ ಜನರಾಗಿರುತ್ತಾರೆ. ಇವು ಸಾಮಾನ್ಯ ಸಂಗತಿಗಳಾದರೆ ವಿಶೇಷವಾಗಿ ಹಿಂದೂ ಧರ್ಮದ ಅನ್ಯಾಯದಿಂದ ಕೂಡಿದ ಯಜಮಾನಿಕೆಯ ಸಿದ್ಧಾಂತ, ಯಲ್ಲಮ್ಮ ಶಾಪ ನೀಡುತ್ತಾಳೆ

ಎಂಬ ಭಾವ, ದೇವಾರ್ಪಿತ ವೇಶ್ಯಾವೃತ್ತಿ, ಧಾರ್ಮಿಕ ವ್ರತ, ಜಡೆಯು ಬೆಳವಣಿಗೆ ಯಂತಹ ಅಂಧ ಶ್ರದ್ಧೆಗಳು, ಮೂಢನಂಬಿಕೆ, ಗಂಭೀರವಾದ ಬಡತನ, ಭೂಮಿ ಇರದಿರುವುದು, ಸರ್ವಾಧಿಕಾರ ನಡೆಸುವ ಗುಂಪಿನ ಮೇಲೆ ಸಂಪೂರ್ಣವಾಗಿ ಅವಲಂಬನೆ, ಬರಗಾಲದಿಂದ ಉಂಟಾಗುವ ದರಿದ್ರತೆಗಳು ಆರ್ಥಿಕ ಕಾರಣಗಳಾಗಿವೆ. ಹಾಗೆಯೇ ಅನಕ್ಷರತೆ, ಸಾಮಾನ್ಯ ನಿಷ್ಕಾಳಜಿ, ಕೆಳವರ್ಗದವರಲ್ಲಿ ತಮ್ಮ ಬಗ್ಗೆಯೇ ಇರುವ ಪರಕೀಯ ಭಾವಗಳು ಪದ್ಧತಿಯ ಮುಂದುವರಿಕೆಗೆ ಪುಷ್ಟಿ ಕೊಡುತ್ತವೆ ಎಂದು ಅಧ್ಯಯನವು ವಿಶ್ಲೇಷಿಸುತ್ತದೆ. ೧೯೩೪ರ ಬಾಂಬೆ ದೇವದಾಸಿ ಕಾಯ್ದೆ, ೧೯೪೭ರ ದೇವದಾಸಿ (ಸಮರ್ಪಣೆ ಮತ್ತು ಪ್ರತಿಬಂಧಕ), ಮದ್ರಾಸ್ ಕಾಯ್ದೆ, ೧೯೮೨ರ ಕರ್ನಾಟಕ ದೇವದಾಸಿ(ಸಮರ್ಪಣೆ ಮತ್ತು ಪ್ರತಿಬಂಧಕ) ಕಾಯ್ದೆಗಳು ಇದ್ದಾಗಲೂ ಸಹ ವೇಶ್ಯಾಗೃಹಗಳ ಏಜೆಂಟರಿಂದ, ತಲೆಹಿಡುಕರಿಂದ, ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಹೋದ ದೇವದಾಸಿ ಮತ್ತು ಘರವಾಲಿ ಇವರಿಂದ ಹಣ ಗಳಿಸುವ ಕುರಿತು ಉಂಟಾಗುವ ಪ್ರಚೋದನೆಗಳು, ಕುಮಾರಿಯರಾದ ಮಕ್ಕಳಿಗೆ ಇರುವಂತಹ ಬೇಡಿಕೆ ಮತ್ತು ದುಡ್ಡಿನ ಹಂಬಲ, ಮೇಲ್ವರ್ಗದವರ ಲೈಂಗಿಕ ಆಸಕ್ತಿ, ಬಯಕೆಗಳು, ಅವರ ಪ್ರೇರಣೆಗಳು ಒಂದು ಕಡೆ ಜನರನ್ನು ಮೋಸಕ್ಕೆ ಎಳೆಯುತ್ತಿದ್ದರೆ, ಕಾನೂನು ಕುರಿತ ಅಜ್ಞಾನ, ಹಣ ಸುಲಿಯುವ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಸರಕಾರದ ಹೆಸರಿಗಾಗಿ ಇರುವ ಪುನರ್ವಸತಿ ಕಾರ್ಯಕ್ರಮಗಳು, ಪೊಲೀಸ್ ಅಧಿಕಾರಿಗಳಿಂದ ನಡೆಯುವ ಕಾನೂನುಗಳ ಅರೆಬೆಂದ ಅನುಷ್ಠಾನಗಳು, ದೇವದಾಸಿ ಪದ್ಧತಿಯ ಮುಂದುವರಿಕೆಗೆ ಕಾರಣವಾಗುತ್ತವೆ ಎಂದು ಅಧ್ಯಯನವು ವಿಶ್ಲೇಷಿಸುತ್ತದೆ.[೮೮]

**"ಸೋಷಿಯೋ ಎಕಾನಾಮಿಕ್ ಸ್ಟಡಿ ಆನ್ ಫಿಮೇಲ್ ಪ್ರಾಸ್ಟಿಟ್ಯೂಟ್ಸ ಆ್ಯಂಡ್ ದೇರ್ ಚಿಲ್ಡ್ರನ್ ಇನ್ ಬೆಂಗಳೂರ ಸಿಟಿ"** ಎಂಬ ವರದಿಯಲ್ಲಿ **ಜೋಗನ್ ಶಂಕರ್ ಮತ್ತು ವಿ ಎಸ್ ಮನವಾಡೆ(೧೯೯೧) ಇವರು,** ಶೇಕಡಾ ೧೫ರಷ್ಟು ವೇಶ್ಯಾವೃತ್ತಿಯ ಮಹಿಳೆಯರು ತಮ್ಮ ಮಕ್ಕಳನ್ನು ತಮ್ಮ ಭವಿಷ್ಯದ ಬಂಡವಾಳ ಎಂದು ತಿಳಿಯುತ್ತಾರೆ ಹಾಗೂ ೩೪% ನಷ್ಟು ಮಹಿಳೆಯರು ತಮ್ಮ ನಂತರ ತಮ್ಮ ಮಕ್ಕಳೂ ಈ ವೃತ್ತಿಯಲ್ಲಿ ತೊಡಗಬಹುದು ಎಂಬ ಆಶಯವನ್ನು ವ್ಯಕ್ತಪಡಿಸುವಂತಹ ಆತಂಕಕಾರಿ ವಿಷಯವನ್ನು ಹೊರಗೆಡುಹುತ್ತಾರೆ.[೮೯]

**"ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯದಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು"** ಎಂಬ ಅಧ್ಯಯನದಲ್ಲಿ **ಲೀಲಾ ಸಂಪಿಗೆ (೨೦೦೪)** ಅವರು, ವೇಶ್ಯಾವೃತ್ತಿಯ ಮಹಿಳೆಯರು ತಾವೇ ಗಂಡಾಂತರದಲ್ಲಿ ಇದ್ದಾಗ, ಪ್ರಿಯಕರನೊಂದಿಗೋ, ಗಂಡನೆಂದು ಹೇಳಿಕೊಳ್ಳುವ ವ್ಯಕ್ತಿಯೊಂದಿಗೋ ಅಥವಾ ಆಕಸ್ಮಿಕವಾಗಿ ಗಿರಾಕಿಗಳೊಂದಿಗೋ ಮಕ್ಕಳನ್ನು ಪಡೆಯುವುದೇ ಅಲ್ಲದೇ ಅಂತಹ ಮಕ್ಕಳ ಬಾಳ್ವೆಗಾಗಿ ತಮ್ಮ ಜೀವನ ಪಣಕ್ಕಿಟ್ಟು ಹೋರಾಡುತ್ತಾರೆ. ಅದೆಷ್ಟೋ ಸಾರಿ ನವಜಾತ ಶಿಶುಗಳನ್ನೇ ಕಂಕುಳಲ್ಲಿ ಇರಿಸಿಕೊಂಡು ವೃತ್ತಿಗಿಳಿಯುವ ಅನಿವಾರ್ಯತೆ ಬಹುಜನರದ್ದಾಗಿದೆ. ತಾಯಿಗೆ ಬರುವ ಗಿರಾಕಿಗಳು, ಅವರುಗಳ ನಡತೆಗಳು, ಅಮ್ಮನನ್ನು ಕಾಡಿಸುವ ಗಂಡನೆಂಬ ಅಂಕಲ್ಗಳು, ಮಾಮಂದಿರು, ದುಷ್ಟಟಗಳು, ಅರಾಜಕ ನಡತೆಗಳು, ಮಕ್ಕಳನ್ನು ಕುಂದಿಸುತ್ತ ನಡೆಯುವುದಲ್ಲದೇ ಮಕ್ಕಳಿಗೆ ಆ ಒಂದು

ವಿಷಮ ಪರಿಸರವೇ ಮಕ್ಕಳನ್ನು ವೇಶ್ಯಾವೃತ್ತಿಗೆ ಇಳಿಯುವಲ್ಲಿ ಮತ್ತು ಅದನ್ನು ಎದುರಿಸದೇ ಇರುವಂತಹ ಮನೋಭಾವವನ್ನು ಬೆಳೆಸುವಲ್ಲಿ ಕಾರಣವಾಗುತ್ತವೆ ಎಂದು ಅಧ್ಯಯನವು ವಿಶ್ಲೇಷಿಸುತ್ತದೆ.

ಮೇಲಿನ ಎಲ್ಲ ಅಧ್ಯಯನಗಳನ್ನು ಅವಲೋಕಿಸಿದಾಗ ಲೈಂಗಿಕ ಜೀತವೆಂಬುದು ಮಕ್ಕಳನ್ನು ಕಾಡುತ್ತಿರುವ ಭೀಕರ ಸಮಸ್ಯೆ ಎಂಬುದು ಅರ್ಥವಾಗುತ್ತದೆ. ಧಾರ್ಮಿಕ ಆಚರಣೆಗಳು, ಸಂಪ್ರದಾಯಗಳು, ಅಂಧಶ್ರದ್ಧೆಗಳು ಜಾತೀಯತೆ ಇಂಥ ವೈಜ್ಞಾನಿಕ ಯುಗದಲ್ಲೂ ಬಾಲೆಯರನ್ನು ಕಾಡುತ್ತಿರುವುದನ್ನ ಅಧ್ಯಯನಗಳು ವ್ಯಕ್ತಪಡಿಸುತ್ತವೆ. ಅನಕ್ಷರಸ್ಥ, ಮದ್ಯಪಾನ ಪೀಡಿತ, ನಿರುದ್ಯೋಗದಿಂದ ಬಳಲುತ್ತಿರುವ, ಭೂರಹಿತ ಕುಟುಂಬಗಳು ತಮ್ಮ ಹೆಣ್ಣುಮಕ್ಕಳನ್ನು ತಾವೇ ವೇಶ್ಯಾಗೃಹಗಳಲ್ಲಿ ಲೈಂಗಿಕ ಜೀತಕ್ಕೆ ತಳ್ಳುತ್ತಿರುವುದನ್ನು ಗುರುತಿಸುತ್ತವೆ. ಬಹುತೇಕ ಅಧ್ಯಯನಗಳು ಈಗಾಗಲೇ ಲೈಂಗಿಕ ಜೀತವನ್ನ ಅನುಭವಿಸುತ್ತಿರುವವರ ಮಕ್ಕಳು ಅದೇ ವಾತಾವರಣದಲ್ಲಿದ್ದು, ಮತ್ತು ತಾಯಿಯ ಜೀವನ ಅನುಸರಿಸುವ ಸಾಧ್ಯತೆಗಳು ದಟ್ಟವಾಗಿರುವ ಕುರಿತು ಚರ್ಚಿಸುತ್ತಿವೆ.

**ಸಮಸ್ಯೀಕರಣ**

ಲೈಂಗಿಕ ಶೋಷಣೆಯ ಕುರಿತಂತೆ ಬಹು ಆಯಾಮದ ಸಾಹಿತ್ಯವನ್ನು ಇಲ್ಲಿ ಒಂದು ಕಡೆ ತರುವ ಪ್ರಯತ್ನ ಮಾಡಲಾಗಿದೆ. ಹೆಗೆಲ್, ಮಾರ್ಕ್ಸ್, ಡ್ಯೂರ್ಯಾಂಟೋ ಇನ್ನೂ ಮುಂತಾದವರ ತತ್ವಶಾಸ್ತ್ರೀಯ ಚಿಂತನೆಗಳು ಶೋಷಣೆಯ ಕಾರ್ಯಕಾರಣ ಸಂಬಂಧಗಳನ್ನು ಪ್ರಾಥಮಿಕ ವಿಶ್ಲೇಷಣೆಗೆ ಒಳಪಡಿಸಿರುವುದು ತಿಳಿದು ಬರುತ್ತದೆ. ತದನಂತರ ಮಹಿಳಾ ಶೋಷಣೆಯ ಆಯಾಮಗಳು ಹೇಗೆ ಮಹಿಳೆಯರ ಮೇಲೆ ಹಿಡಿತ ಸಾಧಿಸಿವೆ ಎನ್ನುವುದು ಈ ಕುರಿತು ನಡೆದಿರುವ ಅನೇಕ ಚರ್ಚೆ, ವಾದ, ವಿವಾದಗಳಿಂದ ತಿಳಿಯತ್ತದೆ. ಭಾರತದ ಪ್ರಥಮ ಶಿಕ್ಷಕರಾದ ಸಾವಿತ್ರಿಬಾಯಿ ಫುಲೆಯವರು ಮಹಿಳೆಯರಿಗೆ ಸಮಾನ ಅವಕಾಶ ಕೊಡಿಸುವ ದಿಕ್ಕಿನಲ್ಲಿ ಹೋರಾಟ ಪ್ರಾರಂಭಿಸಿದಾಗ ಭಾರತೀಯ ಶ್ರೇಣೀಕೃತ ಸಮಾಜವು ಅವರ ವಿರುದ್ಧ ತಿರುಗಿ ಬಿದ್ದಿದ್ದನ್ನು, ಅವರನ್ನು ಮಾನಸಿಕವಾಗಿ, ದೈಹಿಕವಾಗಿ ಘಾಸಿಗೊಳಿಸಿದ್ದನ್ನು ನಾವು ತಿಳಿದವರಾಗಿದ್ದೇವೆ. ನಂತರ ಈ ಜಗತ್ತು ಕಂಡ ಬಹುದೊಡ್ಡ ಸಮಾಜ ವಿಜ್ಞಾನಿಯಾದ ಡಾ. ಬಿ. ಆರ್. ಅಂಬೇಡ್ಕರ್ ಅವರು ಮಹಿಳೆಯರ ಹಕ್ಕುಗಳು ಮತ್ತು ಮಹಿಳೆಯರಿಗೆ ಮೀಸಲಾತಿ ಕೊಡಿಸುವ ಕುರಿತಂತೆ, ಸಂವಿಧಾನ ಕರಡು ರಚನಾ ಸಮಿತಿಯಲ್ಲಿ ಭಾರತೀಯ ಶ್ರೇಣೀಕೃತ ಸಮಾಜದಲ್ಲಿ ವಿಮರ್ಶಾತ್ಮಕವಾದ ವಿಶ್ಲೇಷಣೆಗೆ ಒಳಪಡಿಸಿ, ಅದರ ಭಾಗವಾಗಿಯೇ ಮಕ್ಕಳು ಮತ್ತು ಮಹಿಳೆಯರಿಗೆ ವಿಶೇಷವಾದ ಅವಕಾಶವನ್ನು ಕಲ್ಪಿಸಿಕೊಡುವ ದಿಕ್ಕಿನಲ್ಲಿ ಮೊದಲ ದೀವಟಿಗೆಯನ್ನು ಅಂಬೇಡ್ಕರ್ ಹಚ್ಚುತ್ತಾರೆ. ಅದರ ಭಾಗವಾಗಿಯೇ ಅನೇಕ ಸಂವಿಧಾನಾತ್ಮಕ ಕಾನೂನುಗಳು, ದಲಿತರು ಮತ್ತು ಮಹಿಳೆಯರ ಪರವಾಗಿ ರೂಪುಗೊಳ್ಳುತ್ತವೆ. ತದನಂತರ ಲೈಂಗಿಕ ಶೋಷಣೆಯ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಸಂವಿಧಾನ ತಿದ್ದುಪಡಿಗಳು, ಕಾನೂನುಗಳು ಜಾರಿಗೆ ಬರುತ್ತವೆ. ಅವುಗಳಲ್ಲಿ ಸಂವಿಧಾನ ಪೂರ್ವದ ಭಾರತೀಯ ದಂಡ ಸಂಹಿತೆಯ ೧೮೬೦ರ ಕಾಯ್ದೆಯಲ್ಲಿ ೩೭೦

ಮತ್ತು ೩೭೪ರ ಕಲಂಗಳು, ಅನೈತಿಕ ಸಾಗಾಣಿಕೆ(ತಡೆ) ಕಾಯಿದೆ ೧೯೫೬, ಕರ್ನಾಟಕ ದೇವದಾಸಿ(ಸಮರ್ಪಣಾ ಮತ್ತು ನಿಷೇಧ ಕಾಯಿದೆ) ೧೯೮೨, ಬಾಲ ಕಾರ್ಮಿಕ ನಿಷೇಧ ಕಾಯಿದೆ ೧೯೮೬, ಬಾಲನ್ಯಾಯ ಕಾಯಿದೆ(ರಕ್ಷಣೆ ಮತ್ತು ಕಾಳಜಿ) ೨೦೦೦, ಬಾಲ್ಯವಿವಾಹ ಕಾಯಿದೆ ೨೦೦೬, ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣಾ ಅಧಿನಿಯಮ ಮತ್ತು ನಿಯಮಗಳು ೨೦೧೨(ಪೋಸ್ಕೋ-ರೂಲ್ಸ್-೨೦೧೨) ಜಾರಿಯಲ್ಲಿವೆ. ಇವೆಲ್ಲವುಗಳಿಂತ ಮುಖ್ಯವಾಗಿ, “ಸಂವಿಧಾನದ ೪೫ನೇ ಕಲಂ (ಸಂವಿಧಾನದ ೮೬ನೇ ತಿದ್ದುಪಡಿಗೂ ಪೂರ್ವದಲ್ಲಿ) ಪ್ರಕಾರ, ೦-೦೩,೦೩-೦೬ ಮತ್ತು ೦೬-೧೪ ವರ್ಷದ ಎಲ್ಲಾ ಮಕ್ಕಳಿಗೆ ಕ್ರಮವಾಗಿ ನಿಯಮಿತ ಆಹಾರ, ಆರೋಗ್ಯ ಮತ್ತು ರಕ್ಷಣೆಯನ್ನು, ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಮತ್ತು ೧೪ ವರ್ಷದವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವುದು ರಾಜ್ಯ ವ್ಯವಸ್ಥೆಯ ಪ್ರಮುಖ ಕರ್ತವ್ಯ”[೨೫] (**ಎಚ್ ಡಿ ಪ್ರಶಾಂತ್**) ಎಂದು ಹೇಳುತ್ತದೆ. ಆದರೂ ಸಹ ಇಂದಿಗೂ ವರ್ಷ ಒಂದಕ್ಕೆ ಶೇ. ೧೦ ಮತ್ತು ಅದಕ್ಕಿಂತಲೂ ಹೆಚ್ಚು ಸಂಖ್ಯೆಯ ಮಕ್ಕಳು ಬಾಲ ವೇಶ್ಯಾವಾಟಿಕೆಗೆ ಬಲಿಯಾಗುತ್ತಿದ್ದಾರೆ. ಬಲಿಯಾದ ಒಟ್ಟು ಮಕ್ಕಳಲ್ಲಿ ಶೇ. ೮೯ರಷ್ಟು ಮಕ್ಕಳು ೧೩ ವರ್ಷಕ್ಕಿಂತ ಒಳಗಿನವರೆಂದು ಅಧ್ಯಯನಗಳು ವಿಶ್ಲೇಷಿಸುತ್ತವೆ. ಈ ಎಲ್ಲ ಅಧ್ಯಯನಗಳನ್ನು ಪರಾಮರ್ಶಿಸಿದಾಗ ಕೆಳಗೆ ಕಾಣಿಸಿದ ಸಂಶೋಧನಾ ಪ್ರಶ್ನೆಗಳು ಎದುರಾಗುತ್ತವೆ.

ಸಂವಿಧಾನ ಅನುಷ್ಠಾನಗೊಂಡು ೬೯ ವರ್ಷ ಮುಗಿಯುತ್ತಾ ಬಂದರೂ, ಸಂವಿಧಾನದ ಆಶಯಕ್ಕೆ ಧಕ್ಕೆಯುಂಟು ಮಾಡುತ್ತಿರುವ ಅಂಶಗಳು ಯಾವುವು? ಮಕ್ಕಳನ್ನು ರಕ್ಷಿಸಬೇಕಾದ ಕುಟುಂಬಗಳೇ ಮಕ್ಕಳನ್ನು ಜೀತಕ್ಕೆ ಕಳುಹಿಸಲು ಇರುವ ಒತ್ತಡಗಳೇನು? ಲೈಂಗಿಕ ಜೀತಕ್ಕೆ ಮುಖ್ಯ ಕಾರಣ ಯಾವುವು? ಸಂವಿಧಾನಿಕವಾಗಿ ಹಕ್ಕುಗಳು ಇದ್ದಾಗಲೂ ಸಹ ಮಕ್ಕಳ ಲೈಂಗಿಕ ಶೋಷಣೆ ಮತ್ತು ಲೈಂಗಿಕ ಜೀತವು ಇಂದಿಗೂ ನಿರಾತಂಕವಾಗಿಯೇ ಸಾಗುತ್ತಿದೆ ಯಾಕೆ? ಮಕ್ಕಳನ್ನು ರಕ್ಷಿಸುವ ಕಾನೂನುಗಳು, ಕಾರ್ಯಕ್ರಮಗಳು, ಯೋಜನೆಗಳು ಜಾರಿಯಲ್ಲಿದ್ದರೂ ಬಹಳಷ್ಟು ಮಕ್ಕಳು ಸಾಗಾಣಿಕೆದಾರರ ಪಾಲಾಗುತ್ತಿವೆ ಯಾಕೆ? ಕಾನೂನಾತ್ಮಕ ರಕ್ಷಣೆಯ ಬಗ್ಗೆ ಜಾಗೃತಿ ಮೂಡಿಲ್ಲವೇ? ಸ್ಥಳೀಯ ಮಟ್ಟದಲ್ಲಿ ಇರುವ ಮಕ್ಕಳು ಮತ್ತು ಮಹಿಳೆಯರ ಕಾವಲು ಪಡೆ ಸಮಿತಿ ಏನು ಮಾಡುತ್ತಿದೆ? ಅಥವಾ ಕಾವಲು ಮಾಡಬೇಕಾದ ಪಂಚಾಯತಿ ಸದಸ್ಯರಿಗೆ, ಪಂಚಾಯತಿ ಸಿಬ್ಬಂದಿಗೆ ಶಿಕ್ಷಕರಿಗೆ, ಅಂಗನವಾಡಿ ಕಾರ್ಯಕರ್ತೆಯರಿಗೆ ತಮ್ಮ ಜವಾಬ್ದಾರಿಯ ಕುರಿತು ಅರಿವು ಇಲ್ಲವೇ? ಅಥವಾ ಅರಿವು ಇದ್ದರೂ ಸುಮ್ಮನಿರುವರೇ? ಕರ್ನಾಟಕ ದೇವದಾಸಿ(ಸಮರ್ಪಣೆ ಮತ್ತು ನಿಷೇಧ) ಕಾಯಿದೆ ಜಾರಿಗೆ ಬಂದು ೩೪ ವರ್ಷ ಕಳೆದರೂ ಇಂದಿಗೂ ಮಕ್ಕಳನ್ನು ದೇವದಾಸಿ ಪದ್ಧತಿಗೆ ನೂಕುತ್ತಿದ್ದಾರೆ ಯಾಕೆ? ಆ ಕುರಿತಾಗಿ ಸಂಬಂಧಿಸಿದ ಇಲಾಖೆಗಳು, ಸರ್ಕಾರೇತರ ಸಂಸ್ಥೆಗಳು ಏನು ಮಾಡುತ್ತಿವೆ? ಸಾಗಾಣಿಕೆಗೊಂಡ ಮಕ್ಕಳ ರಕ್ಷಣಾ ಕಾರ್ಯ ಹೇಗೆ ನಡೆಯುತ್ತಿದೆ? ರಕ್ಷಣೆಗೊಂಡ ಮಕ್ಕಳ ಪುನರ್ವಸತಿ ಕಾರ್ಯ ಹೇಗೆ ನಡೆಯುತ್ತಿದೆ? ಪುನರ್ವಸತಿಗೊಂಡ ಮಕ್ಕಳು ತಮ್ಮ ಕುಟುಂಬದೊಂದಿಗೆ ಚೆನ್ನಾಗಿದ್ದಾರಾ? ಅಥವಾ

ಮತ್ತೆ ಮರು ಸಾಗಾಣಿಕೆಗೊಳ್ಳುತ್ತಿದ್ದಾರಾ? ಮರುಸಾಗಾಣಿಕೆಗೊಂಡಿದ್ದರೆ ಅದಕ್ಕೆ ಕಾರಣಗಳೇನು? ಮಕ್ಕಳು ಲೈಂಗಿಕ ಜೀತಕ್ಕೆ ಒತ್ತಾಯ ಪೂರ್ವಕವಾಗಿ ಒಳಗಾಗುತ್ತಿದ್ದಾರೆಯೇ? ಅಥವಾ ಪರಿಸ್ಥಿತಿ ಅವರನ್ನು ಹಾಗೆ ಮಾಡುತ್ತಿದೆಯೇ? ಲೈಂಗಿಕ ಜೀತಕ್ಕೆ ಇರುವ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಕಾರಣಗಳು ಯಾವುವು? ಒಂದು ಪಕ್ಷ ಆರ್ಥಿಕ ಕಾರಣಗಳಿದ್ದರೆ ಅವುಗಳ ಆಯಾಮ ಯಾವುದು? ಸಾಂಸ್ಕೃತಿಕ ಕಾರಣ ಇದ್ದರೆ ಅದರ ಆಯಾಮ ಯಾವುದು? ವೇಶ್ಯಾವಾಟಿಕೆ ಪ್ರವೇಶಿಸಿದ ನಂತರ ಅಲ್ಲಿ ಮಕ್ಕಳು ಅನುಭವಿಸುವ ಯಾತನೆ, ಎದುರಿಸುವ ಪರಿಸ್ಥಿತಿಗಳು ಯಾವುವು? ಅಲ್ಲಿ ನಡೆಯುವ ಆರ್ಥಿಕ ವ್ಯವಹಾರ ಯಾವುದು? ಆರ್ಥಿಕ ವ್ಯವಹಾರಕ್ಕೂ ಮತ್ತು ಲೈಂಗಿಕ ಜೀತಕ್ಕೆ ಒಳಗಾಗುವ ಮಹಿಳೆ ಪಡೆಯುವ ಹಣಕ್ಕೂ ಇರುವ ಸಂಬಂಧ, ಅಂತರ ಯಾವ ಬಗೆಯದ್ದು? ಪ್ರಾರಂಭಿಕ ಹಂತದಲ್ಲಿ ಎದುರಿಸುವ ಸವಾಲುಗಳು ಯಾವುವು? ಮಧ್ಯಮ ಹಂತದಲ್ಲಿ ಎದುರಿಸುವ ಸವಾಲುಗಳು ಯಾವುವು? ವಯಸ್ಸಾದ ಮೇಲೆ ಲೈಂಗಿಕ ಜೀತಕ್ಕೆ ಒಳಗಾದ ಮಹಿಳೆ ಎದುರಿಸುವ ಸವಾಲುಗಳು ಯಾವುವು? ಲೈಂಗಿಕ ಶೋಷಣೆಯಿಂದ ಮುಕ್ತವಾಗಿ ಹೊರಬಂದ ನಂತರ ವೈಯಕ್ತಿಕವಾಗಿ ಬದುಕಲು ಬಂದಾಗ ಎದುರಾಗುವ ಮಾನಸಿಕ ಮತ್ತು ಸಾಮಾಜಿಕ ಸಮಸ್ಯೆಗಳು ಯಾವುವು? ಲೈಂಗಿಕ ಜೀತಕ್ಕೆ ಒಳಗಾದವರನ್ನು ಸಮಾಜ ನೋಡುವ ಬಗೆ ಹೇಗೆ? ಅದರಲ್ಲೂ ಪುರುಷರು ನೋಡುವ ಬಗೆ ಹೇಗೆ? ಮಕ್ಕಳು ಮತ್ತು ಮಹಿಳೆಯರನ್ನು ರಕ್ಷಿಸಬೇಕಾದ ಸರ್ಕಾರ ಹೇಗೆ ಕಾರ್ಯ ನಿರ್ವಹಿಸುತ್ತಿದೆ? ಅದನ್ನು ಮೀರಿಸುವ ಮತ್ತು ಸಾಗಿಸುವ ಸಾಗಾಣಿಕೆದಾರರ ತಂತ್ರಗಳೇನು? ಇಂತಹ ಹಲವು ಪ್ರಶ್ನೆಗಳನ್ನು ವಿಶ್ಲೇಷಿಸಿ ಉತ್ತರ ಕಂಡುಕೊಳ್ಳುವ ಕೆಲಸ ಈ ಸಂಶೋಧನೆಗೆ ಇರುವ ಬಹುದೊಡ್ಡ ಸವಾಲು. ಈ ಪ್ರಶ್ನೆಗಳನ್ನು ಅಧ್ಯಯನದ ದೃಷ್ಟಿಯಿಂದ ಕ್ರೂಡೀಕರಿಸಿ ನಾಲ್ಕು ಉದ್ದೇಶಗಳನ್ನು ಪ್ರಸ್ತುತ ಅಧ್ಯಯನವು ರೂಪಿಸಿಕೊಂಡಿದೆ.

### ಅಧ್ಯಯನದ ಉದ್ದೇಶಗಳು

೧. ಮಕ್ಕಳ ಲೈಂಗಿಕ ಶೋಷಣೆಯ ಕಾರಣ ಮತ್ತು ಪರಿಣಾಮಗಳನ್ನು ವಿಶ್ಲೇಷಣೆ ಮಾಡುವುದು.

೨. ಶೋಷಿತರ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಗೆ ಇರುವ ಯೋಜನೆಗಳನ್ನು ಅರ್ಥ ಮಾಡಿಕೊಳ್ಳುವುದು.

೩. ಪುನರ್ನೆಲೆಗೊಂಡ ಮಕ್ಕಳ ಸ್ಥಿತಿ-ಗತಿ ವಿಶ್ಲೇಷಣೆ ಮಾಡುವುದು.

೪. ಶೋಷಿತ ಮಕ್ಕಳ ಪುನರ್ನೆಲೆಯ ಸವಾಲುಗಳು ಮತ್ತು ಸಾಧ್ಯತೆಗಳನ್ನು ಕಂಡುಕೊಳ್ಳುವುದು.

### ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕವಾದ ಅಧ್ಯಯನವಾಗಿದ್ದರೂ, ದುಷ್ಟಾಂತವಾದಿ(ಎಂಪೀರಿಕಲ್) ಅಧ್ಯಯನವಾಗಿದೆ. ಪ್ರತಿ ಉದ್ದೇಶಗಳನ್ನು ಅರ್ಥಮಾಡಿಕೊಳ್ಳುವ

ಮತ್ತು ಪ್ರಸ್ತುತ ಅಧ್ಯಯನ ಎತ್ತಿರುವ ಪ್ರಶ್ನೆಗಳಿಗೆ ವಾಸ್ತವಿಕವಾದ ಉತ್ತರವನ್ನು ಕಂಡುಕೊಳ್ಳುವ ದೃಷ್ಟಿಯಿಂದ ಸಾಮಾನ್ಯವಾಗಿ ಎಲ್ಲ ಸಂಶೋಧನಾ ಅಧ್ಯಯನಗಳು ಅನುಸರಿಸುವಂತೆ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಯನ್ನು ಅಧ್ಯಯನವು ಅವಲಂಬಿಸಿದೆ. ಪ್ರಸ್ತುತ ಅಧ್ಯಯನದ ವಿಷಯ ಅತ್ಯಂತ ಸಂಕೀರ್ಣ ಮತ್ತು ಸವಾಲಿನದ್ದಾಗಿದ್ದರಿಂದ, ಪ್ರಾಥಮಿಕ ಮಾಹಿತಿ ಸಂಗ್ರಹಿಸುವುದು ಸವಾಲಿನದಾಗಿತ್ತು. ಈ ಕಾರಣಕ್ಕಾಗಿ ನನ್ನ ಅಧ್ಯಯನದ ಮಾಹಿತಿ ಸಂಗ್ರಹವನ್ನು ಮೂರು ಹಂತಗಳಲ್ಲಿ ವಿಭಾಗಿಸಿಕೊಂಡು ಮಾಹಿತಿ ಸಂಗ್ರಹಣೆ ಮಾಡಲಾಯಿತು.

ಮೊದಲನೆ ಹಂತದಲ್ಲಿ ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕಾಗಿ ಹಳ್ಳಿಗಳಿಂದ ವೇಶ್ಯಾಗೃಹಗಳಿಗೆ ಸಾಗಣೆಗೊಂಡು, ಬದುಕು ನಡೆಸುತ್ತಿರುವ ೩೦ ಮಹಿಳೆಯರ ಸ್ಥಿತಿಗತಿಯನ್ನು ಅರ್ಥಮಾಡಿಕೊಳ್ಳಲಾಯಿತು. ವೇಶ್ಯಾಗೃಹಗಳಲ್ಲಿಯೇ ದೊರೆತ ಮಾಹಿತಿಗಳ ಆಧಾರದಲ್ಲಿ ಎರಡನೆಯ ಹಂತದಲ್ಲಿ, ತಮ್ಮ ಅಪ್ರಾಪ್ತ ವಯಸ್ಸಿನಲ್ಲಿ ಸಾಗಾಣಿಕೆಗೊಂಡು, ಪುನಃ ತಮ್ಮ ಮನೆ ಅಥವಾ ಹಳ್ಳಿಗಳಲ್ಲಿ (ಜಮಖಂಡಿ–ಮುಧೋಳ, ಅಥಣಿ–ರಾಯಭಾಗ ಮತ್ತು ಬಿಜಾಪೂರ–ಬಸವನ ಬಾಗೇವಾಡಿ) ಇರುವ ೬೦ ಮಹಿಳೆಯರ ಸ್ಥಿತಿಗತಿಯನ್ನು ಅಧ್ಯಯನ ಮಾಡಿ ಮಾಹಿತಿ ಸಂಗ್ರಹಣೆ ಮಾಡಲಾಯಿತು. ನಂತರ ಮೂರನೇಯ ಹಂತದಲ್ಲಿ ಬಾಲನ್ಯಾಯ(ಮಕ್ಕಳ ಪಾಲನೆ ಮತ್ತು ರಕ್ಷಣೆ) ಅಧಿನಿಯಮ ೨೦೦೦ರ ಅಡಿಯಲ್ಲಿ ರೆಡ್‌ಲೈಟ್ ಏರಿಯಾಗಳಿಂದ ರಕ್ಷಣೆಗೊಂಡು ಪುನರ್ವಸತಿ ಒಳಪಟ್ಟ ೧೯ ಹೆಣ್ಣುಮಕ್ಕಳನ್ನು ವಿವರವಾಗಿ ಅಧ್ಯಯನಕ್ಕೆ ಒಳಪಡಿಸಿ ಮಾಹಿತಿ ಸಂಗ್ರಹಣೆ ಮಾಡಲಾಗಿದೆ. ಈ ಮೂರು ಹಂತಗಳಲ್ಲಿ ಹೇಗೆ ಮಾಹಿತಿ ಸಂಗ್ರಹಣೆ ಮಾಡಲಾಯಿತು ಎನ್ನುವುದನ್ನು ಮುಂದೆ ವಿವರವಾಗಿ ವಿವರಿಸಲಾಗಿದೆ.

ಮೊದಲ ಹಂತದಲ್ಲಿ ಲೈಂಗಿಕ ಜೀತಕ್ಕೆ ಒಳಗಾದ ಮಹಿಳೆಯರ ಮಾಹಿತಿ ಸಂಗ್ರಹಿಸುವುದು ಬಹುದೊಡ್ಡ ಸವಾಲಾಗಿತ್ತು. ಇದನ್ನು ಪರಿಹರಿಸಿಕೊಳ್ಳುವ ಉದ್ದೇಶದಿಂದ ನಾನು ಈಗಾಗಲೇ ಕೆಲಸ ಮಾಡುತ್ತಿರುವ ಅಥಣಿ ವಿಮೋಚನಾ ಸಂಸ್ಥೆಯ ಜೊತೆ ಸಂಪರ್ಕವಿದ್ದ ಕೆಲವು ಸರ್ಕಾರಿ ಮತ್ತು ಸರ್ಕಾರೇತರ ಸಂಘ ಸಂಸ್ಥೆ(ಎನ್ ಜಿ ಓ)ಗಳನ್ನು ಮತ್ತು ಸಮುದಾಯ ಆಧಾರಿತ ಸಂಘಟನೆ(ಸಿ ಬಿ ಓ)ಗಳನ್ನು ಸಂಪರ್ಕ ಮಾಡಲಾಯಿತು. ಹೀಗೆ ಸಂಪರ್ಕಿಸುವಾಗ ಹಲವರೊಟ್ಟಿಗೆ ಚರ್ಚಿಸಿ ಈ ಸಂಘಟನೆಗಳ ತಾತ್ವಿಕ ನಿಲುವು ಮತ್ತು ಅವರ ಕೆಲಸದ ಆಶಯ ಹೇಗಿರುತ್ತದೆಂದು ತಿಳಿದುಕೊಂಡೆ. ನಂತರ ನಮ್ಮ ಅಧ್ಯಯನ ಕ್ಷೇತ್ರದ(ಬಾಗಲಕೋಟೆ, ಬಿಜಾಪೂರ ಮತ್ತು ಬೆಳಗಾವಿ) ಹಳ್ಳಿಗಳಿಂದ ಅಪ್ರಾಪ್ತ ಬಾಲೆಯರು ಲೈಂಗಿಕ ಜೀತಕ್ಕಾಗಿ ಹೇಗೆ ಸಾಗಾಣಿಕೆಗೊಳ್ಳುತ್ತಾರೆ ಎಂಬ ದಿಕ್ಕಿನತ್ತ ಕೆಲಸ ಮಾಡಲು ಪ್ರಾರಂಭಿಸಿದೆ.

ಎನ್ ಜಿ ಓ, ಸಿ ಬಿ ಓ ಮತ್ತು ಕೆಲವು ತಜ್ಞರ ಜೊತೆ ಸಂವಾದ ಮಾಡಿದಾಗ ದೊರೆತ ಪ್ರಾಥಮಿಕ ಮಾಹಿತಿಗಳು ಲೈಂಗಿಕ ಜೀತಕ್ಕೆ ತಳ್ಳಲ್ಪಡುವ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಮೊದಲ ಹಂತದಲ್ಲಿ ಸ್ಪ್ರಿಂಗ್ ಬೋರ್ಡನಂತೆ ಬಳಸುತ್ತಿರುವ ಸ್ಥಳಗಳನ್ನು ಗುರುತಿಸಿಕೊಳ್ಳಲಾಯಿತು. ಅವೆಂದರೆ,

ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಗಡಿಯ ಮೀರಜ್ ಮತ್ತು ಸಾಂಗ್ಲಿ, ಪುಣೆ ಮತ್ತು ಮುಂಬಯಿ ನಗರಗಳ ರೆಡ್‌ಲೈಟ್ ಏರಿಯಾಗಳಾಗಿದ್ದವು ಈ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಮಾಡುವುದು ಸವಾಲಾಗಿತ್ತು. ಆದ್ದರಿಂದ ಲೈಂಗಿಕ ದಂಧೆಯಲ್ಲಿ ತೊಡಗಿದ ಮಹಿಳೆಯರ ಮತ್ತು ಅವರ ಮಕ್ಕಳ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವ, ಮೀರಜ್‌ನ 'ಸಂಗ್ರಾಮ್', ಪುಣೆಯ 'ಸಹೇಲಿ', ಮುಂಬಯಿನ 'ಆಸ್ಥಾ ಪರಿವಾರ', 'ಪ್ರೇರಣಾ', 'ಪ್ರಯಾಸ್' ಮತ್ತು 'ರೆಸ್ಕ್ಯೂ ಫೌಂಢೇಶನ್' ಸಂಸ್ಥೆಗಳೊಂದಿಗೆ ಮಾತನಾಡಿ ಅಧ್ಯಯನಕ್ಕೆ ಸಹಕಾರ ಕೋರಲಾಯಿತು.

ಪ್ರಥಮ ಹಂತದಲ್ಲಿ 'ಸಂಗ್ರಾಮ್' ಸಂಸ್ಥೆಯ ಸಹಕಾರದಿಂದ ಮೀರಜ್‌ನ ರೆಡ್‌ಲೈಟ್ ಏರಿಯಾ ಪ್ರೇಮ್ ನಗರದಲ್ಲಿ, ಮೊದಲಿಗೆ ಲೈಂಗಿಕ ಜೀತಕ್ಕೆ ಬಲಿಯಾದ, ಅದರಿಂದ ಮುಕ್ತಗೊಂಡು ಸ್ವತಂತ್ರವಾಗಿ ಲೈಂಗಿಕ ದಂಧೆ ನಡೆಸುತ್ತಿರುವ, ಘರವಾಲಿಗಳಿಂದ ಕೂಡಿದ ೨೫ ಮಹಿಳೆಯರ ಗುಂಪಿನೊಂದಿಗೆ ಸಂವಾದ ನಡೆಸಲಾಯಿತು. ಈ ಸಂದರ್ಭದಲ್ಲಿ ನಾನು ಮತ್ತು ನನ್ನ ಮಾರ್ಗದರ್ಶಕರು ಹಾಗೂ ಸಂಗ್ರಾಮ್ ಸಂಸ್ಥೆಯ ಕಾರ್ಯಕರ್ತರು ಸಂವಾದದಲ್ಲಿ ಭಾಗಿಯಾಗಿ ಅವರ ಮಾತುಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಯಿತು. ನಂತರ ಪುಣೆಯ 'ಸಹೇಲಿ' ಸಂಸ್ಥೆಯ ಸಹಾಯದಿಂದ ಅಲ್ಲಿಯ ರೆಡ್‌ಲೈಟ್ ಏರಿಯಾ ಬುಧವಾರ ಪೇಟ್‌ದಲ್ಲಿ ಮಿರಜ್‌ನಲ್ಲಿ ಸಂವಾದ ನಡೆಸಿದಂತಹ ಗುಂಪಿನೊಂದಿಗೆ ಸಂವಾದ ಮತ್ತು ಗುಂಪು ಚರ್ಚೆ ನಡೆಸಲಾಯಿತು.

ಮುಂಬಯಿಯಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳಲು ಸಹಕಾರ ಕೋರಿ, ಮುಂಬಯಿಯ ಪೊಲೀಸ್ ಕಮೀಶನರ್ ಅವರಿಗೆ, ಕೆಲವು ಸಂಸ್ಥೆಗಳಿಗೆ ಮುಂಚಿತವಾಗಿ ಪತ್ರ ಬರೆಯಲಾಗಿತ್ತು. ಆದರೆ ಆ ಪತ್ರಕ್ಕೆ ಯಾವುದೇ ಸ್ಪಂದನೆ ಸಿಗದೇ, ಅಧ್ಯಯನದ ಸಮಯ ಮೀರುವ ಆತಂಕವಿದ್ದುದರಿಂದ, ನಾವೇ ನೇರವಾಗಿ ಮುಂಬಯಿಯ ಗ್ರ್ಯಾಂಟ್ ರೋಡಿನಲ್ಲಿರುವ ಪೊಲೀಸ್ ಕಛೇರಿಗೆ ಹೋಗಿ, ನಮ್ಮ ಅಧ್ಯಯನದ ಉದ್ದೇಶಗಳನ್ನು, ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಅವರಿಗೆ ತಿಳಿಸಿದಾಗ, ಅವರು ತಮ್ಮ ಒಬ್ಬ ಪೇದೆಯವರನ್ನು ಜೊತೆ ಮಾಡಿ, ಗ್ರ್ಯಾಂಟ್ ರೋಡಿನಲ್ಲಿರುವ 'ಆಶಾ ದರ್ಪಣ' ಸಮುದಾಯಾಧಾರಿತ ಸಂಸ್ಥೆಗೆ ಕಳಿಸಿಕೊಟ್ಟರು. ಆಶಾ ದರ್ಪಣದ ಸದಸ್ಯೆಯರಿಂದ ಅವರ ಮುಖ್ಯ ಕಛೇರಿ, ಆಸ್ಥಾ ಪರಿವಾರ, ಸರ್ಕಾರೇತರ ಸಂಸ್ಥೆಯ ಪರಿಚಯವಾಗಿ, ಅವರೂ ಸಹಕಾರ ನೀಡಲು ಒಪ್ಪಿಕೊಂಡರು. 'ಆಸ್ಥಾ ಪರಿವಾರ' ಸಂಸ್ಥೆಯ ಸಹಕಾರದೊಂದಿಗೆ ಮುಂಬಯಿಯಲ್ಲಿರುವ ರೆಡ್‌ಲೈಟ್ ಏರಿಯಾಗಳಲ್ಲಿ ಕೆಲಸ ಮಾಡುತ್ತಿರುವ ಸಮುದಾಯ ಆಧಾರಿತ ಸಂಸ್ಥೆ(ಸಿ ಬಿ ಓ)ಗಳ ಜೊತೆ ಸಂಪರ್ಕಿಸಲಾಯಿತು. ಅವುಗಳಲ್ಲಿ ನಮಗೆ ಈಗಾಗಲೇ ಆಸ್ಥಾ ಪರಿವಾರ ಸಂಸ್ಥೆಯನ್ನು ಪರಿಚಯಿಸಿಕೊಟ್ಟ 'ಗ್ರ್ಯಾಂಟ್ ರೋಡ್'ನಲ್ಲಿರುವ ಆಶಾ ದರ್ಪಣ ಸಿ.ಬಿ.ಓ. ಇದು ಲೈಂಗಿಕ ದಂಧೆಯಲ್ಲಿರುವ ಕರ್ನಾಟಕದ ಮಹಿಳೆಯರಿಂದಲೇ ನಡೆಯುತ್ತಿರುವ ಸಿ.ಬಿ.ಓ ಆಗಿದೆ. ಆಶಾ ದರ್ಪಣದ ಸದಸ್ಯರ ಜೊತೆಗೆ ಅಧ್ಯಯನದ ಉದ್ದೇಶ ಮತ್ತು ಮಹತ್ವವನ್ನು ಚರ್ಚಿಸಲಾಗಿ, ಸಂಸ್ಥೆಯು ಕರ್ನಾಟಕದ ಅದರಲ್ಲೂ ವಿಶೇಷವಾಗಿ ಅಧ್ಯಯನ ಕ್ಷೇತ್ರದ ಮಹಿಳೆಯರೇ ಹೆಚ್ಚಾಗಿರುವ ಕಾಮಾಟಿಪೂರ ಮತ್ತು ಬಿವಂಡಿಗಳ ರೆಡ್‌ಲೈಟ್

ಏರಿಯಾಗಳಲ್ಲಿ ಕೆಲಸ ಮಾಡುತ್ತಿರುವ ಸಂಸ್ಥೆ ಮತ್ತು ಸಿ.ಜಿ.ಓ.ದ ಮಾಹಿತಿ ಒದಗಿಸಿತ್ತಲ್ಲದೇ, ಆ ಸಂಸ್ಥೆಗಳ ಮುಖ್ಯಸ್ಥರೊಂದಿಗೆ ಮಾತನಾಡಿ, ಅವರ ಸಂಸ್ಥೆಯಲ್ಲಿಯೆ ಪೀಯರ್ ಆಗಿ ಕೆಲಸ ಮಾಡುವ ಬಿಜಾಪೂರದ ಮಹಿಳೆಯೊಬ್ಬಳನ್ನು ಕಾಮಾಟಿಪೂರದ 'ಆಶಾ ಮಹಿಳಾ' ಸಂಸ್ಥೆ ಮತ್ತು ಅಲ್ಲಿಯ ಕ್ಷೇತ್ರವನ್ನು ಪರಿಚಯಿಸಲು ಕಳಿಸಿಕೊಟ್ಟರು.

ಕಾಮಾಟಿಪೂರದಲ್ಲಿರುವ ಆಶಾ ಮಹಿಳಾ ಸಂಸ್ಥೆಯು ಒದಗಿಸಿದ ಮಾಹಿತಿಯ ಪ್ರಕಾರ ಕರ್ನಾಟಕದ ೭೩೧ ಮಹಿಳೆಯರು ಅವರಲ್ಲಿ ತಮ್ಮ ಹೆಸರನ್ನು ನೊಂದಾಯಿಸಿಕೊಂಡಿದ್ದರು. ಆದರೆ ಇದೇ ಸರಿಯಾದ ಅಂಕಿ ಅಂಶವಲ್ಲ. ಬಂದವರೆಲ್ಲ ನಮ್ಮ ಹತ್ತಿರ ಬರುವುದಿಲ್ಲ. ದಿನವೂ ಮಹಿಳೆಯರು ಪುಣೆ, ಕರಾಡ, ಕೊಲ್ಲಾಪುರ, ಇಸ್ಲಾಂಪುರ, ಮಿರಜ್, ಸಾಂಗ್ಲಿಯ ರೆಡ್‌ಲೈಟ್ ಏರಿಯಾಗಳಿಗೆ ಮೇಲಿಂದ ಮೇಲೆ ಹೋಗುವುದು ಬರುವುದು ನಡೆದೆ ಇರುತ್ತದೆ. ಆದ್ದರಿಂದ ನಿಖರವಾಗಿ ಅಂಕಿ ಸಂಖ್ಯೆಗಳನ್ನು ಕೊಡಲು ಸಾಧ್ಯವಿಲ್ಲ ಎಂದು ಯೋಜನಾ ವ್ಯವಸ್ಥಾಪಕರು ತಿಳಿಸಿದರು. ಮತ್ತು ಈ ಮಾಹಿತಿಯಿಂದಲೂ ಸಹ ಮಹಿಳೆಯರು ಕರ್ನಾಟಕದ ಯಾವ ಪ್ರದೇಶದವರು ಎಂದು ತಿಳಿಯುತ್ತಿರಲಿಲ್ಲ. ಹಾಗಾಗಿ 'ಆಶಾ ಮಹಿಳಾ' ಪೀಯರ್ ವರ್ಕರ್‌ಗಳ ಸಹಾಯದಿಂದ ವೇಶ್ಯಾಗೃಹಗಳಿಂದ ವೇಶ್ಯಾಗೃಹಗಳಿಗೆ ನಮ್ಮ ಅಧ್ಯಯನ ಕ್ಷೇತ್ರದ (ಬಾಗಲಕೋಟ, ಬೆಳಗಾವಿ ಮತ್ತು ಬಿಜಾಪೂರ) ಹೆಣ್ಣುಮಕ್ಕಳನ್ನು ಹುಡುಕುತ್ತಾ ಹೋದೆವು. ಹೀಗೆ ಸುಮಾರು ೨೦ದಿನಗಳ ವರೆಗೆ ನಡೆಸಿದ ಹುಡುಕಾಟದಲ್ಲಿ ಬಹಳಷ್ಟು ಜನರು ಸಿಕ್ಕರು. ಆದರೆ ಮಾಹಿತಿ ನೀಡಿದವರು ೨೨ ಮಹಿಳೆಯರು ಮಾತ್ರ, ಅವರಿಗೆ ಸಮಯದ ಅಭಾವ ತುಂಬಾ ಇರುತ್ತಿತ್ತು. ೧೦ ನಿಮಿಷ ಕುಳಿತು ಮಾತನಾಡುವಷ್ಟೂ ಸಮಯವಿರುತ್ತಿರಲಿಲ್ಲ.

ಮೊದಲನೇ ದಿನ ಒಬ್ಬಳು ಯುವತಿಯನ್ನು ವೇಶ್ಯಾಗೃಹದ ಮ್ಯಾನೇಜರ್ ಸಹಾಯದಿಂದ ಮಾತನಾಡಿಸಲು ಹೋದಾಗ, ಮ್ಯಾನೇಜರ್ ಯುವತಿಗೆ ಹೇಳಿದಳು, "ಯೇ ದೇಖ, ತೇರೆ ಗಾಂವ ಸೆ ಮಿಲನೆ ಕೆಲಿಯೆ ಆಯೆ ಹೈ. ಕ್ಯಾ ಪುಛತೆ ಹೈ, ತೋಡಾ ಬಾತ ಕರ. ಎಂದು ನನ್ನನ್ನ ಆ ಯುವತಿಯ ರೂಮಿನ ಮುಂದೆ ನಿಲ್ಲಿಸಿದ್ದಳು. ಅವಳು ಒಳಗೆ ನಿಂತು ಏನ ಬೇಕು? ಬಡಾ ಬಡಾ ಕೇಳ. ಅಂತ ನಿಂತಲ್ಲಿಂದೇ ಅಂದಳು. ನಾನು, ಅಕ್ಕಾ ಪ್ಲೀಸ್, ಹಂಗ ನಿಂತಕೊಂಡು ಮಾತಾಡೂದ ಅಲ್ರೀ, ಒಂದ ಅರ್ಧ ತಾಸ ಕೂಡುನು. ಮಾತಾಡೋನಂತ. ಅಂತ ಅಂದೆ. ಆಕೆಗೆ ಅದನ್ನು ಕೇಳಿದ ಕೂಡಲೇ ಸಿಟ್ಟು ಎಲ್ಲಿತ್ತೋ ಗೊತ್ತಿಲ್ಲ, ಏ ದೀದಿ, ಎ ಕ್ಯಾ ಹೈ. ತೇರಾ ಬಾತ ಮಾನತೆ ಹೈ ಇಸ್ಲಿಯೇ ಐಸೆ ಕರತೆ ಹೈ ಕ್ಯಾ? ಕಹಾಂ ಸೆ ಲೇಕರ ಆತಿ ಹೈ ಐಸೆ ಲೋಗೋಂ ಕೋ. ಇಸಕೋ ದೋ ತೀನ್ ಮಿನಿಟ್ ನಹಿಂ, ಮೆರಾ ಆದಾ ಘಂಟಾ ಮಾಂಗ ರಹಿ ಹೈ. ಆದಾ ಘಂಟಾ ಮೆ ಪಾಂಚ ಆದಮಿ ಲೋಗ್ ಆಕರ ಚಲಾ ಜಾತಾ ಹೈ. ಇಸಕೆ ಸಾತ್ ಬೈಟೆ ತೊ ಮೆರಾ ಬಿಸಿನೆಸ್ ಕಾ ಕ್ಯಾ ಹೋಗಾ. ಲೇಕರ್ ಚಲೋ ಇಸಕೋ. ಅಂತ ಮ್ಯಾನೇಜರ್‌ಳನ್ನು ಬೈದು ಧಡಕ್ಕಂತ ಬಾಗಿಲು ದೂಡಿ ಒಳ ಹೋಗಿದ್ದಳು. ಇಂಥ ಪರಿಸ್ಥಿತಿಯಲ್ಲಿ ೨೦ ದಿನಗಳವರೆಗೆ ೨೨ ಮಹಿಳೆಯರ ಅಧ್ಯಯನ ಮುಗಿಸಿ, ಥಾಣೆ ಜಿಲ್ಲೆಯ ಭೀವಂಡಿಯ ಮಹಿಮಾ ಮಹಿಳಾ ಮಂಡಳಕ್ಕೆ ಭೇಟಿ ಕೊಡಲಾಯಿತು.

ಮಹಿಮಾ ಮಂಡಳದ ಯೋಜನಾ ವ್ಯವಸ್ಥಾಪಕರು ತಾವು ಕರ್ನಾಟಕದ ೩೩೧ ಮಹಿಳೆಯುರೊಂದಿಗೆ ಕೆಲಸ ನಿರ್ವಹಿಸುತ್ತಿದ್ದೇವೆ, ಎಂದು ಹೇಳಿದ ಅವರೂ ಸಹ ಇದು ನಿಖರವಾದ ಮಾಹಿತಿ ಅಲ್ಲ. ಏಕೆಂದರೆ ದಿನವೂ ಎಷ್ಟೋ ಮಹಿಳೆಯರು ಬರುತ್ತಾರೆ. ಎಷ್ಟೋ ಮಹಿಳೆಯರು ಹೋಗುತ್ತಾರೆ. ಹಾಗಾಗಿ ನಿಖರವಾದ ಸಂಖ್ಯೆ ಸಿಗುವುದು ಕಷ್ಟ ಎಂದು ತಿಳಿಸಿದರು. ಹಾಗೆಯೇ ವೇಶ್ಯಾಗೃಹಗಳಲ್ಲಿ ತಾವು ಸಂಯೋಜನೆಗೊಂಡು ಕೆಲಸ ಮಾಡುವ ಭಾರತೀಯ ಕುಟುಂಬ ಯೋಜನಾ ಸಂಘದ (ಎಫ್.ಪಿ.ಎ.ಆಯ್) ಅಧಿಕಾರಿಗಳ ಜೊತೆ ಸಂಪರ್ಕ ಕಲ್ಪಿಸಿಕೊಟ್ಟರು. ಎಫ್.ಪಿ.ಎ.ಆಯ್‌ದ ಅಧಿಕಾರಿಗಳು, ತಮ್ಮ ಫೀಲ್ಡ್ ವರ್ಕರ್ ಅವರನ್ನು ನನ್ನ ಜೊತೆ ಕಳಿಸಿಕೊಟ್ಟರು. ಬೀವಂಡಿಯ ರೆಡ್‌ಲೈಟ್ ಏರಿಯಾದಲ್ಲಿ ಅಧ್ಯಯನ ಕ್ಷೇತ್ರದ ಮಹಿಳೆಯರನ್ನು ಹುಡುಕುತ್ತಾ ಮನೆ ಮನೆಗೆ ಹೋಗಿ ಭೇಟಿ ಮಾಡಲಾಯಿತು. ಬೀವಂಡಿಯ ರೆಡ್‌ಲೈಟ್ ಏರಿಯಾ ಅಪ್ಪಟ ಕರ್ನಾಟಕದ ಒಂದು ಹಳ್ಳಿಯಂತೆ ಕಾಣುತ್ತಿತ್ತು. ಅಲ್ಲಿ ಕನ್ನಡದವರೇ ತುಂಬಿಕೊಂಡಿದ್ದ ಕುರಿತು ಫ್ಯಾಮಿಲಿ ಪ್ಲ್ಯಾನಿಂಗ್ ಕಛೇರಿಯ ಕಾರ್ಯಕರ್ತರು ತಿಳಿಸಿದರು. ಆದರೆ ನಾನು ಅಧ್ಯಯನಕ್ಕೆ ಹೋಗುವ ಹಿಂದಿನ ದಿನವೇ ಪೊಲೀಸ್ ರೇಡ್ ಆಗಿ ೨೦ ಹುಡುಗಿಯರನ್ನು ಅರೆಸ್ಟ್ ಮಾಡಿಕೊಂಡು ಹೋಗಿದ್ದರು. ಹಾಗಾಗಿ ಹುಡುಗಿಯರು ಸ್ಥಳಾಂತರಗೊಂಡಿದ್ದರು. ದಂಧೆಯ ಮನೆಯಲ್ಲಿ ಇದ್ದರೂ ಸಹ, ನಾನೂ ಪೊಲೀಸಿನವರ ಒಂದು ಭಾಗವೇ ಆಗಿರಬಹುದೆಂದು ಶಂಕಿಸಿ ನನ್ನ ಜೊತೆ ಸ್ಪಂದನೆ ಮಾಡಲು ಹಿಂಜರಿದರು. ಹೀಗಾಗಿ ಬೀವಂಡಿಯಲ್ಲಿ ೪ ದಿನಗಳ ಕ್ಷೇತ್ರ ಕಾರ್ಯದಲ್ಲಿ ೮ ಮಹಿಳೆಯರನ್ನು ಅಧ್ಯಯನ ಮಾಡಲಾಯಿತು.

ಇದರ ಜೊತೆಗೆ ಟಾಟಾ ಇನ್ಸ್ಟ್ಯೂಟ್ ಆಫ್ ಸೋಷಿಯಲ್ ಸೈನ್ಸ್‌ದ ಪ್ರಾಧ್ಯಾಪಕರೊಬ್ಬರ ನೆರವಿನಿಂದ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ನಡೆಯುವ ಬಾಲಕಿಯರ ವಿಶೇಷ ಗೃಹದಲ್ಲಿ ರಕ್ಷಣೆಗೊಂಡು ಪುನರ್ವಸತಿಗೆ ಬಂದ ಬಾಲಕಿಯರೊಂದಿಗೆ ಸಂವಾದ ಮಾಡಲಾಯಿತು. ಮುಂಬಯಿ ನಗರದ ಪೊಲೀಸ್ ಕಮೀಶನರ್ ಅವರನ್ನ ಭೇಟಿಯಾಗಿ ಅವರಿಂದ ಮಕ್ಕಳ ರಕ್ಷಣೆ ಕುರಿತು ಮಾಹಿತಿ ಪಡೆಯಲು ಕೇಳಿಕೊಂಡಾಗ, ತಮ್ಮ ಸಹಾಯಕ ಕಮೀಶನರ್ ಅವರಿಗೆ ಮಾಹಿತಿ ನೀಡಲು ತಿಳಿಸಿದರು. ಸಹಾಯಕ ಪೊಲೀಸ್ ಕಮಿಶನರ್ ಅವರು ಮುಂಬಯಲ್ಲಿ ನಡೆಯುವ ಅನೈತಿಕ ಲೈಂಗಿಕ ಚಟುವಟಿಕೆ ಕುರಿತು ಚರ್ಚೆ ಮಾಡಿದರು. ಹಾಗೂ ಅವರಿಂದ ೨೦೦೫ರಿಂದ ೨೦೧೫ರವರೆಗೆ ವೇಶ್ಯಾವಾಟಿಕೆಯ ಮೇಲೆ ನಡೆದ ದಾಳಿಯಲ್ಲಿ ಸಿಕ್ಕ ಸಂತ್ರಸ್ತರ ಅಂಕಿ ಸಂಖ್ಯೆಗಳನ್ನು ಒದಗಿಸಿದರು. ಹಾಗೆಯೇ ಲೈಂಗಿಕ ದಂಧೆ ಮಾಡುತ್ತಿರುವ ಮಹಿಳೆಯರ ಮತ್ತು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗಾಗಿ ಕಾರ್ಯ ನಿರ್ವಹಿಸುತ್ತಿರುವ ಪ್ರೇರಣಾ ಸ್ವಯಂ ಸೇವಾ ಸಂಸ್ಥೆಯ ಸಹಾಯದಿಂದ ಲೈಂಗಿಕ ದಂಧೆಯಲ್ಲಿ ತೊಡಗಿರುವ ಮಹಿಳೆಯರ ಗಂಡುಮಕ್ಕಳ ಜೊತೆ ಗುಂಪು ಚರ್ಚೆ ಮತ್ತು ಸಂವಾದ ನಡೆಸಿ ಮಾಹಿತಿ ಸಂಗ್ರಹಿಸಲಾಯಿತು. ಹಾಗೂ ರೆಸ್ಕ್ಯೂ ಫೌಂಡೇಶನ್ ಸಂಸ್ಥೆಯಲ್ಲಿ ಪುನರ್ವಸತಿಗಾಗಿ ಬಂದ ಕರ್ನಾಟಕದ ಹೆಣ್ಣುಮಕ್ಕಳೊಂದಿಗೆ ಸಂವಾದ ನಡೆಸಲಾಯಿತು.

ಅಧ್ಯಯನದ ಎರಡನೇ ಹಂತದಲ್ಲಿ, ಈಗಾಗಲೇ ಮಹಾರಾಷ್ಟ್ರದ ಕಾಮಾಟಿಪುರ ಮತ್ತು ಬೀವಂಡಿಗಳಲ್ಲಿ

ನಡೆಸಿದ ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯಂತೆ, ಲೈಂಗಿಕ ಜೀತಕ್ಕೆ ಬಲಿಯಾದವರಲ್ಲಿ ಶೇಕಡಾ ೭೦ಕ್ಕೂ ಹೆಚ್ಚು ದೇವದಾಸಿ ಮಹಿಳೆಯರೆ ಇದ್ದರೆಂಬ ಮಾಹಿತಿಯ ಆಧಾರದ ಮೇಲೆ ಅಧ್ಯಯನ ಕ್ಷೇತ್ರದ(ಬಾಗಲಕೋಟೆ, ಬಿಜಾಪೂರ ಮತ್ತು ಬಾಗಲಕೋಟೆ) ಜಿಲ್ಲೆಗಳ ಜಿಲ್ಲಾ ದೇವದಾಸಿ ಪುನರ್ವಸತಿ ಯೋಜನೆಯ ಕಛೇರಿಯಿಂದ ಅಂಕಿ ಸಂಖ್ಯೆಗಳನ್ನು ಮತ್ತು ಮಾಹಿತಿಯನ್ನು ಕಲೆ ಹಾಕಲಾಯಿತು. ಅದರಂತೆ ೧೯೯೩-೯೪ ಮತ್ತು ೨೦೦೮-೦೯ರಲ್ಲಿ ಸಮೀಕ್ಷೆ ಮಾಡಿದ ವರದಿಯಂತೆ ಇಡೀ ಕರ್ನಾಟಕದಲ್ಲಿ ಒಟ್ಟು ೪೬,೬೦೦ ದೇವದಾಸಿ ಮಹಿಳೆಯರಿದ್ದಾರೆ. ಇದರಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿದ ಮೂರು ಜಿಲ್ಲೆಗಳಲ್ಲಿ  ಬಾಗಲಕೋಟೆ ಜಿಲ್ಲೆಯಲ್ಲಿ ಅತೀ ಹೆಚ್ಚು, ಅಂದರೆ ೭೮೨೭, ಬೆಳಗಾವಿಯಲ್ಲಿ, ೪೭೨೪ ಮತ್ತು ಬಿಜಾಪೂರ ಜಿಲ್ಲೆಯಲ್ಲಿ, ೪೧೦೩ ದೇವದಾಸಿ ಮಹಿಳೆಯರಿದ್ದದ್ದು ವರದಿಯಿಂದ ತಿಳಿದು ಬರುತ್ತದೆ. ಅದರ ಆಧಾರದಲ್ಲಿ ಮೂರೂ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವ ಎರಡೆರಡು ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಲಾಯಿತು. ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನಲ್ಲಿ ಅತೀ ಹೆಚ್ಚು ಅಂದರೆ ೨೫೦೩, ಮುಧೋಳ ತಾಲೂಕಿನಲ್ಲಿ-೨೧೦೬, ಬೆಳಗಾವಿಯ ಅಥಣಿ ತಾಲೂಕಿನಲ್ಲಿ- ೧೦೦೬ ಮತ್ತು ರಾಯಭಾಗ ತಾಲೂಕಿನಲ್ಲಿ-೮೪೪ ಹಾಗೂ ಬಿಜಾಪೂರ ಜಿಲ್ಲೆಯ, ಬಿಜಾಪೂರ ತಾಲೂಕಿನಲ್ಲಿ ೧೩೬೧ ಮತ್ತು ಬಸವನ ಬಾಗೇವಾಡಿಯಲ್ಲಿ-೧೧೩೮ ದೇವದಾಸಿ ಮಹಿಳೆಯರಿದ್ದಾರೆ. ತಮ್ಮ ಗ್ರಾಮಗಳಿಂದ ಲೈಂಗಿಕ ಜೀತಕ್ಕಾಗಿ ಅನೈತಿಕವಾಗಿ ಸಾಗಾಣಿಕೆಯಾದವರನ್ನು ನಿಗಮವು ವಲಸೆ ಎಂದು ಗುರುತಿಸಿದೆ. ಆ ಪ್ರಕಾರ ಅಥಣಿ ತಾಲೂಕಿನಲ್ಲಿ- ೬೩, ರಾಯಭಾಗ -೫೬, ಬಸವನ ಬಾಗೇವಾಡಿ-೫೦, ಬಿಜಾಪೂರ-೩೫, ಮುಧೋಳ-೨೨ ಮತ್ತು ಜಮಖಂಡಿ-೧೩ ಮಹಿಳೆಯರು ವಲಸೆ ಹೋಗಿದ್ದಾರೆಂದು ನಿಗಮದ ವರದಿ ತಿಳಿಸುತ್ತದೆ. ಆದರೆ ಮಹಾರಾಷ್ಟ್ರದ ವೇಶ್ಯಾಗೃಹಗಳನ್ನು ಅವಲೋಕಿಸಿದರೆ ಈ ನಿಗಮವು ನೀಡುವ ವಲಸೆಯ ಅಂಕಿ ಅಂಶಗಳು ಸತ್ಯದ ಜೊತೆಗೆ ತಾಳೆಯಾಗುವುದಿಲ್ಲ. ಆದ್ದರಿಂದ ಈ ಸಂಖ್ಯೆಯನ್ನು ಪರಿಗಣಿಸದೇ ಒಂದು ತಾಲೂಕಿನಿಂದ ೨೦ ಮಹಿಳೆಯರಂತೆ ಒಟ್ಟು ೬೦ ಮಹಿಳೆಯರನ್ನು ಅಧ್ಯಯನಕ್ಕೆ ಒಳಪಡಿಸ ಲಾಯಿತು.

ಕ್ಷೇತ್ರಕಾರ್ಯದ ಮೂರನೇ ಹಂತದಲ್ಲಿ, ಕ್ಷೇತ್ರ ಅಧ್ಯಯನ ಸಂದರ್ಭದಲ್ಲಿ ದೊರೆತ ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಯ ಆಧಾರದ ಮೇಲೆ, ಬಾಲನ್ಯಾಯ(ಮಕ್ಕಳ ಪಾಲನೆ ಮತ್ತು ಕಾಳಜಿ) ಅಧಿನಿಯಮದ ಅಡಿಯಲ್ಲಿ ರಕ್ಷಿತಗೊಂಡು, ಪುನರ್ವಸತಿಗೊಂಡು ಮತ್ತು ಪುನರ್ಮಿಲನಗೊಳಪಟ್ಟ ಲೈಂಗಿಕ ಜೀತದ ಮಕ್ಕಳನ್ನು ಅಧ್ಯಯನ ಮಾಡಲಾಗಿದೆ. ಮುಂಬಯಿಯಲ್ಲಿ ಮಕ್ಕಳ ರಕ್ಷಣೆ, ಪುನರ್ವಸತಿ ಕೆಲಸದಲ್ಲಿ ತೊಡಗಿರುವ ಸರ್ಕಾರಿ ಸಂಸ್ಥೆಯಾದ 'ಮಕ್ಕಳ ವಿಶೇಷ ಗೃಹ', 'ದೇವನಾರ್' ಮತ್ತು ಸರ್ಕಾರೇತರ ಸಂಸ್ಥೆಗಳಾದ, ಪ್ರಯಾಸ್ ಮುಂಬಯಿ ಮತ್ತು ರೆಸ್ಕ್ಯೂ ಫೌಂಡೇಶನ್, ಮುಂಬಯಿ ಇವರು, ಲೈಂಗಿಕ ಜೀತಕ್ಕೊಳಗಾಗಿದ್ದ ಬಾಲಕಿಯರನ್ನು, ಬಾಲನ್ಯಾಯ(ಮಕ್ಕಳ ಪಾಲನೆ ಮತ್ತು ಕಾಳಜಿ) ಅಧಿನಿಯಮ ದ ಅಡಿಯಲ್ಲಿ ರಕ್ಷಣೆ ಮಾಡಿ, ಪುನರ್ವಸತಿಗೊಳಿಸಿ ಅವರ ಪುನರ್ಮಿಲನಗಾಗಿ ಕರ್ನಾಟಕದಲ್ಲಿ ಲೈಂಗಿಕ ಜೀತಕ್ಕೊಳಗಾದ ಮತ್ತು ಒಳಗಾಗಬಹುದಾದ ಮಕ್ಕಳ ಪುನರ್ವಸತಿಯಲ್ಲಿ

ಕೆಲಸ ಮಾಡುತ್ತಿರುವಂತಹ, 'ವಿಮೋಚನಾ ಸಂಘ', ಅಥಣಿ, 'ವೇದ' ಸಂಸ್ಥೆ, ಬೆಂಗಳೂರು ಮತ್ತು 'ಒಡನಾಡಿ' ಸಂಸ್ಥೆ, ಮೈಸೂರು ಈ ಮೂರು, ಸಂಸ್ಥೆಗಳ ಸುಪರ್ದಿಗೆ ಒಪ್ಪಿಸಲಾದ ಬಾಲಕಿಯರ ಪ್ರಕರಣ ಅಧ್ಯಯನಗಳನ್ನು ಮತ್ತು ಅವರ ವಿಳಾಸಗಳನ್ನು ಸಂಬಂಧಿಸಿದ ಸಂಸ್ಥೆಗಳಿಂದ ಪಡೆಯಲಾಯಿತು. ಹೀಗೆ ಮಾಡುವ ಮೊದಲು, ಈಗಾಗಲೇ ಮೊದಲನೇ ಹಂತದ ಅಧ್ಯಯನದ ಸಂದರ್ಭದಲ್ಲಿ ಸಂಪರ್ಕಕ್ಕೆ ಬಂದಿದ್ದ, ಮುಂಬಯಿಯ ರೆಸ್ಕ್ಯೂ ಫೌಂಡೇಶನ್, ಪ್ರೇರಣಾ ಮತ್ತು ಪ್ರಯಾಸ್ ಸಂಸ್ಥೆಗಳಿಂದ ಮಾಹಿತಿ ಪಡೆಯಲು ಪ್ರಯತ್ನಿಸಲಾಗಿತ್ತು. ಆ ಪ್ರಯತ್ನದಲ್ಲಿ ರೆಸ್ಕ್ಯೂ ಫೌಂಡೇಶನ್ ಇವರು ಗುಣಾತ್ಮಕವಾಗಿ ಸ್ಪಂದಿಸಿ ಮಾಹಿತಿಯನ್ನು ಒದಗಿಸಿದ್ದರು. ಅವರು ಒದಗಿಸಿದ ಮಾಹಿತಿಯಲ್ಲಿ ಕಳೆದ ೨೦೦೫ ರಿಂದ ೨೦೧೫ರವರೆಗೆ ಕರ್ನಾಟಕ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ, ಆಂಧ್ರ ಪ್ರದೇಶ ಉತ್ತರ ಪ್ರದೇಶಗಳನ್ನು ಒಳಗೊಂಡು ಸುಮಾರು ೧೫ ರಾಜ್ಯಗಳ ಮಕ್ಕಳನ್ನು ರಕ್ಷಿಸಿದ ಅಂಕಿ ಅಂಶಗಳಿದ್ದವು. ಆ ಪ್ರಕಾರ ಕರ್ನಾಟಕದ ೧೪೧ ಮಕ್ಕಳನ್ನು ರಕ್ಷಣೆ ಮಾಡಲಾಗಿತ್ತು. ಇದು ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ಉತ್ತರ ಪ್ರದೇಶಗಳಿಗೆ ಹೋಲಿಸಿದರೆ ಕರ್ನಾಟಕವು ೪ನೇಯ ಸ್ಥಾನದಲ್ಲಿದ್ದುದು ಕಂಡು ಬರುತ್ತದೆ. ಹೀಗೆ ರಕ್ಷಿಸಿದ ೧೪೧ ಮಕ್ಕಳಲ್ಲಿ ೬೦ ಮಕ್ಕಳನ್ನು ಕರ್ನಾಟಕದ ಮೇಲೆ ತಿಳಿಸಿದ ಸಂಸ್ಥೆಗಳಿಗೆ ಕಳಿಸಲಾಗಿತ್ತು. ಅವುಗಳಲ್ಲಿ 'ವಿಮೋಚನಾ', ಮತ್ತು 'ಒಡನಾಡಿ' ಸಂಸ್ಥೆಗಳನ್ನು ಸಂಪರ್ಕಿಸಲಾಗಿ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ೯ ಹೆಣ್ಣುಮಕ್ಕಳ ಮಾಹಿತಿ ಲಭ್ಯವಾಯಿತು. ಹೀಗೆ ದೊರೆತ ಮಾಹಿತಿಯಿಂದ ಆ ಹೆಣ್ಣುಮಕ್ಕಳ ಮನೆಗಳಿಗೆ ಭೇಟಿಕೊಟ್ಟು ಅವರ ಪ್ರಕರಣ ಅಧ್ಯಯನ ಮಾಡಲಾಯಿತು. ಈ ಪ್ರಕಾರವಾಗಿ ಅಧ್ಯಯನ ಸಮಯದಲ್ಲಿ ವಿಮೋಚನಾ ಸಂಸ್ಥೆ ಮತ್ತು ಒಡನಾಡಿ ಸಂಸ್ಥೆಯ ಮುಖ್ಯಸ್ಥರೊಡನೆ ಚರ್ಚೆ ನಡೆಸಿ ಮಾಹಿತಿಯನ್ನು ಪರಿಶೀಲಿಸಿಕೊಳ್ಳಲಾಯಿತು.

ಹೀಗೆ ಸಂಗ್ರಹಿಸಿದ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ಕ್ಷೇತ್ರಕಾರ್ಯ ಟಿಪ್ಪಣಿಯ ಜೊತೆ ತಾಳೆ ನೋಡಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಗುಣಾತ್ಮಕ ಮಾಹಿತಿಯನ್ನು ಪ್ರಕರಣ ಅಧ್ಯಯನಗಳು, ಗುಂಪು ಚರ್ಚೆ, ಸಂವಾದದ ಮೂಲಕ ಪಡೆಯಲಾಗಿದೆ. ಇದರ ಜೊತೆಗೆ ಪರಿಮಾಣಾತ್ಮಕ ಮಾಹಿತಿಯನ್ನು ಪ್ರಶ್ನಾವಳಿಯ ಮೂಲಕ ಸಮೀಕ್ಷೆ ನಡೆಸಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಪರಿಮಾಣಾತ್ಮಕ ವಿಧಾನವನ್ನು ಅಧ್ಯಯನದ ಆಳವನ್ನು ಗುರುತಿಸುವಲ್ಲಿ ಬಳಸಿಕೊಳ್ಳದೇ, ಅಧ್ಯಯನದ ವಿಸ್ತಾರವನ್ನು ಮಾತ್ರ ತಿಳಿಯಲು ಬಳಸಿಕೊಳ್ಳಲಾಗಿದೆ. ಪರಿಮಾಣಾತ್ಮಕ ಮಾಹಿತಿಯನ್ನು ಪ್ರಮಾಣ ಆಧಾರದಲ್ಲಿ ವಿಶ್ಲೇಷಣೆ ಮಾಡುತ್ತಿದ್ದರೂ, ಅಲ್ಲಲ್ಲಿ ಕೋಷ್ಟಕಗಳ ಮೂಲಕ ವಿವರಿಸಲಾಗಿದೆ. ಗುಣಾತ್ಮಕ ಮಾಹಿತಿಯನ್ನು ಪರಿಮಾಣಾತ್ಮಕ ಮಾಹಿತಿಯ ಜೊತೆ ಜೋಡಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಯಿತು. ಹೀಗೆ ಪ್ರಯತ್ನಿಸಿದ ಸಂದರ್ಭದಲ್ಲಿ ಕೆಲವು ಕಡೆ ದೊರೆತ ಪರಿಮಾಣಾತ್ಮಕ ಆನುಷಂಗಿಕ ಮಾಹಿತಿಗಳು, ಗುಣಾತ್ಮಕ ಮಾಹಿತಿಯ ಜೊತೆ ತಾಳೆಯಾಗದಿದ್ದದ್ದು ತಿಳಿಯುತ್ತದೆ. ಇದು ನಮ್ಮ ಅಧ್ಯಯನದ ಮಿತಿ ಎಂದು ಭಾವಿಸಲಾಗಿದೆ. ಆದರೆ ಗುಣಾತ್ಮಕ ಮಾಹಿತಿಯನ್ನು ವಿವರಿಸುವಾಗ ಕ್ಷೇತ್ರಕಾರ್ಯದ ಅನುಭವ ಮತ್ತು ಕ್ಷೇತ್ರಕಾರ್ಯದ ಟಿಪ್ಪಣಿಯನ್ನು ಆಧರಿಸಿ ವಿಶ್ಲೇಷಣೆ ಮಾಡಲಾಗಿದೆ.

## ಅಧ್ಯಯನದ ಕ್ಷೇತ್ರ

ಪ್ರಸ್ತುತ ಅಧ್ಯಯನವು ಉತ್ತರ ಕರ್ನಾಟಕದ ಬೆಳಗಾವಿ ವಿಭಾಗದ, ಬೆಳಗಾವಿ ಜಿಲ್ಲೆಯ ಅಥಣಿ ಮತ್ತು ರಾಯಭಾಗ, ಬಿಜಾಪೂರ ಜಿಲ್ಲೆಯ ಬಿಜಾಪೂರ ಮತ್ತು ಬಸವನ ಬಾಗೆವಾಡಿ, ಹಾಗೂ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ್ತು ಮುಧೋಳ ತಾಲ್ಲೂಕುಗಳು ಅಧ್ಯಯನದ ಕ್ಷೇತ್ರಗಳಾಗಿವೆ. ಅಧ್ಯಯನಕ್ಕೆ ಪೂರಕವಾಗಿ ಮಹಾರಾಷ್ಟ್ರ ರಾಜ್ಯದ ಮೀರಜ್‌ನ ಪ್ರೇಮನಗರ, ಪುಣೆಯ ಬುದವಾರಪೇಟೆ, ಮುಂಬಯಿನ ಕಾಮಾಟಿಪುರ ಮತ್ತು ಥಾಣೆಯ ಬೀವಂಡಿ ರೆಡ್‌ಲೈಟ್ ಏರಿಯಾಗಳಿಗೆ ಅಧ್ಯಯನವನ್ನು ವಿಸ್ತರಿಸಲಾಗಿದೆ.

## ಅಧ್ಯಯನದ ಮಹತ್ವ

ಲೈಂಗಿಕ ಶೋಷಣೆಗೊಳಗಾದವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಅರ್ಥಮಾಡಿ ಕೊಳ್ಳುವ ಮೂಲಕ ಲೈಂಗಿಕ ಜೀತದ ವಿಕೃತಿಗಳನ್ನು ಈ ಅಧ್ಯಯನ ವಿಶ್ಲೇಷಣೆಗೆ ಒಳಪಡಿಸುತ್ತದೆ. ಇದು ಕೇವಲ ಒಂದು ಅಧ್ಯಯನ ಮಾತ್ರವಾಗಿರದೆ ಹೆಣ್ಣುಮಕ್ಕಳು ಮತ್ತು ಮಹಿಳೆಯರ ಮೇಲೆ ನಡೆಯುತ್ತಿರುವ ಮಾರುಕಟ್ಟೆ ಆಧಾರಿತ ಜೀತವನ್ನು ಅರ್ಥಮಾಡಿಕೊಳ್ಳುವಲ್ಲಿ ಮಹತ್ವದ್ದಾಗಿದೆ. ಲೈಂಗಿಕ ಜೀತವನ್ನು ತಡೆಯಲು ಈಗಾಗಲೇ ಜಾರಿಯಲ್ಲಿರುವ ಕಾನೂನು ಮತ್ತು ಕಾರ್ಯಕ್ರಮಗಳನ್ನು ವಿಮರ್ಶಾತ್ಮಕವಾಗಿ ಚರ್ಚೆಗೊಳಪಡಿಸುವ ಮೂಲಕ ಅವುಗಳ ಸಾಧಕ ಬಾಧಕಗಳನ್ನು ಈ ಅಧ್ಯಯನ ಒರೆಗೆ ಹಚ್ಚುತ್ತದೆ. ಅಧ್ಯಯನ ಕಂಡು ಕೊಂಡ ಫಲಿತಗಳಿಂದ ಲೈಂಗಿಕ ದೌರ್ಜನ್ಯ ಮತ್ತು ಜೀತ ತಕ್ಷಣವೇ ನಿಲ್ಲುತ್ತದೆ ಎಂಬ ಭ್ರಮೆ ಪ್ರಸ್ತುತ ಅಧ್ಯಯನಕ್ಕಿಲ್ಲ. ಆದರೆ ಲೈಂಗಿಕ ದೌರ್ಜನ್ಯ ಮತ್ತು ಜೀತವನ್ನು ತಡೆಗಟ್ಟಬಹುದಾದ ವ್ಯವಸ್ಥೆಯೇ ಹೇಗೆ ಲೈಂಗಿಕ ದೌರ್ಜನ್ಯವನ್ನು ಎಸಗುತ್ತದೆ ಎಂಬುದರ ಮಹತ್ವದ ಒಳ ಸುಳಿವುಗಳನ್ನು ಈ ಅಧ್ಯಯನವು ನೀಡುತ್ತದೆ. ಈ ಒಳಸುಳಿವುಗಳು ಲೈಂಗಿಕ ಜೀತದಲ್ಲಿ ಬಳಲುತ್ತಿರುವವರ ಬದುಕಿನ ವಿವಿಧ ಆಯಾಮಗಳಾಗಿದ್ದರೂ, ಮುಂದೆ ನಮ್ಮ ಹೆಣ್ಣುಮಕ್ಕಳು ಮತ್ತು ಮಹಿಳೆಯರು ಎದುರಿಸಬಹುದಾದ ಗಂಡಾಂತರಗಳನ್ನು ಹೇಗೆ ತಪ್ಪಿಸಬಹುದು ಎನ್ನುವ ಮಹತ್ವದ ವಿಷಯಗಳನ್ನು ಪ್ರಸ್ತುತ ಅಧ್ಯಯನ ಚರ್ಚಿಸುತ್ತದೆ. ಈ ಕಾರಣಕ್ಕಾಗಿಯೇ ಈ ಅಧ್ಯಯನ ಭಿನ್ನವಾದದ್ದು ಮತ್ತು ಮಹತ್ವವಾದದ್ದು.

## ಅಧ್ಯಯನದ ಮಿತಿ

ಪ್ರಸ್ತುತ ಅಧ್ಯಯನ ಕ್ಷೇತ್ರವನ್ನು ಉತ್ತರ ಕರ್ನಾಟಕದ ಬೆಳಗಾವಿ ವಿಭಾಗದ, ಬೆಳಗಾವಿ ಜಿಲ್ಲೆಯ ಅಥಣಿ ಮತ್ತು ರಾಯಭಾಗ, ಬಿಜಾಪೂರ ಜಿಲ್ಲೆಯ ಬಿಜಾಪೂರ ಮತ್ತು ಬಸವನ ಬಾಗೇವಾಡಿ, ಹಾಗೂ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ್ತು ಮುಧೋಳ ತಾಲೂಕುಗಳ ಆಯ್ದ ಗ್ರಾಮಗಳ, ಲೈಂಗಿಕ ಶೋಷಿತ ಮತ್ತು ಲೈಂಗಿಕ ಜೀತಕ್ಕೆ ಒಳಗಾದ ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳನ್ನು ಕೇಂದ್ರೀಕರಿಸಿ ಸೀಮಿತಗೊಳಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಮಹಾರಾಷ್ಟ್ರ ರಾಜ್ಯದ ಮೀರಜ್ ನ ಪ್ರೇಮನಗರ, ಪುಣೆಯ ಬುಧವಾರಪೇಟೆ, ಮುಂಬಯಿನ ಕಾಮಾಟಿಪುರ ಮತ್ತು ಥಾಣೆಯ

ಜೀವಂಡಿ ರೆಡ್‌ಲೈಟ್ ಏರಿಯಾಗಳಿಗೆ ಅಧ್ಯಯನವನ್ನು ವಿಸ್ತರಿಸಲಾಗಿದೆ. ಆದ್ದರಿಂದ ಅಧ್ಯಯನದ ವ್ಯಾಪ್ತಿಯು ಅಧ್ಯಯನದ ಮಿತಿಯಾಗಿದೆ.

ಅಧ್ಯಯನವು ಗುಣಾತ್ಮಕ ಮಾಹಿತಿ ಸಂಗ್ರಹಣಾ ವಿಧಾನವನ್ನು ಅನುಸರಿಸುತ್ತಿದ್ದು, ವಿಷಯದ ವಿಸ್ತಾರವನ್ನು ಹೇಳಲು ಮಾತ್ರ ಪರಿಮಾಣಾತ್ಮಕ ಮಾಹಿತಿ ಸಂಗ್ರಹಣಾ ವಿಧಾನವನ್ನು ಬಳಸಿಕೊಂಡು ಅಧ್ಯಯನವನ್ನು ವಿಶ್ಲೇಷಣೆ ಮಾಡಲಾಗಿದೆ. ಹೀಗೆ ಮಾಡುವಾಗ ಗುಣಾತ್ಮಕ ವಿಷಯಗಳನ್ನು ಪರಿಮಾಣಾತ್ಮಕ ವಿಷಯಗಳ ಜೊತೆಗೆ, ಪರಿಮಾಣಾತ್ಮಕ ವಿಷಯಗಳನ್ನು ಗುಣಾತ್ಮಕ ವಿಷಯಗಳ ಜೊತೆಗೆ ಇಟ್ಟು ತಾಳೆ ನೋಡಿ ವಿಶ್ಲೇಷಣೆಗೆ ಒಳಪಡಿಸಿದ ಸಂದರ್ಭದಲ್ಲಿ ವಿಷಯಗಳನ್ನು ಒಂದರ ಜೊತೆಗೆ ಮತ್ತೊಂದನ್ನು ವಿಶ್ಲೇಷಣೆಗೊಳಪಡಿಸುವಾಗ ಹೆಚ್ಚು ವಿವರಣಾತ್ಮಕವಾಗಿಯೇ ಇರುವುದು ಅಧ್ಯಯನದ ಮತ್ತೊಂದು ಮಿತಿಯಾಗಿದೆ.

**ಅಧ್ಯಯನದ ವಿನ್ಯಾಸ**

ಪ್ರಸ್ತುತ ಪ್ರಬಂಧವು ಒಟ್ಟು ಒಂಬತ್ತು ಅಧ್ಯಾಯಗಳನ್ನು ಒಳಗೊಂಡಿದೆ. **ಅಧ್ಯಾಯ ಒಂದರಲ್ಲಿ** ಸಂಶೋಧನಾ ವಿಷಯದ ಕುರಿತು ಪ್ರಸ್ತಾವನೆ, ಸಾಹಿತ್ಯ ಸಮೀಕ್ಷೆ, ಸಮಸ್ಯೀಕರಣ, ಅಧ್ಯಯನದ ಉದ್ದೇಶಗಳು, ಅಧ್ಯಯನದ ವಿಧಾನ, ಅಧ್ಯಯನ ಕ್ಷೇತ್ರದ ಪರಿಚಯ, ಅಧ್ಯಯನದ ಮಹತ್ವ ಅಧ್ಯಯನದ ಮಿತಿಗಳ ಮತ್ತು ಸಂಶೋಧಕರ ಅನುಭವ ಕುರಿತು ವಿವರಣೆ ನೀಡಲಾಗಿದೆ.

**ಅಧ್ಯಾಯ ಎರಡರಲ್ಲಿ** ಅಧ್ಯಯನಕ್ಕೆ ಒಳಪಡಿಸಿದ ಜಿಲ್ಲೆಗಳ ಚಾರಿತ್ರಿಕ, ಭೌಗೋಳಿಕ, ಸಾಮಾಜಿಕ ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ, ಕೈಗಾರಿಕೆ ಮತ್ತು ಪ್ರವಾಸದ ವಿಷಯಗಳನ್ನು ವಿವರಿಸಲಾಗಿದೆ. ಹಾಗೆಯೇ ಅಧ್ಯಯನಕ್ಕೊಳಪಡಿಸಿದ ತಾಲೂಕುಗಳ ಸಾಮಾನ್ಯ ಜನಸಂಖ್ಯೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ, ಒಟ್ಟು ಭೂ ಹಿಡುವಳಿದಾರರ ಸಂಖ್ಯೆ, ಮಳೆ ಪ್ರಮಾಣ, ಸಾಕ್ಷರತೆ, ಲಿಂಗ ಅಸಮಾನತೆ ಸೂಚ್ಯಾಂಕ, ಮಾನವ ಅಭಿವೃದ್ಧಿ ಸೂಚ್ಯಾಂಕ, ದೇವದಾಸಿ ಮಹಿಳೆಯರ ಸಂಖ್ಯೆ, ಎಚ್.ಐ.ವಿ. ಸೋಂಕಿತರ ಸಂಖ್ಯೆ, ಶಾಲಾ ದಾಖಲಾತಿ ಮತ್ತು ಮುಂದುವರಿಕೆ ಮತ್ತು ಮಕ್ಕಳ ಅಭಿವೃದ್ಧಿ ಸೂಚ್ಯಾಂಕಗಳನ್ನು ವಿವರಿಸಲಾಗಿದೆ.

**ಅಧ್ಯಾಯ ಮೂರರಲ್ಲಿ**, ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಶೋಷಣೆಗೊಳಗಾಗಿ ಇಂದಿಗೂ ಲೈಂಗಿಕ ಜೀತ, ಲೈಂಗಿಕ ದಂಧೆಯಲ್ಲಿ ಇರುವ ಅಧ್ಯಯನಕ್ಕೆ ಒಳಪಡಡಿಸಿದ ಮಹಿಳೆಯರ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರ, ಕೌಟುಂಬಿಕ ಮತ್ತು ಸಾಮುದಾಯಿಕ ಪರಿಸರ ಹಾಗೂ ಆರ್ಥಿಕ ಪರಿಸರವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಾಯ ನಾಲ್ಕರಲ್ಲಿ**, ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಶೋಷಣೆಗೊಳಗಾಗಿ ಇಂದಿಗೂ ಲೈಂಗಿಕ ಜೀತ, ಲೈಂಗಿಕ ದಂಧೆಯಲ್ಲಿ ಇರುವ, ಅಧ್ಯಯನಕ್ಕೆ ಒಳಪಡಡಿಸಿದ ಮಹಿಳೆಯರ ರಕ್ಷಣಾ ಪರಿಸರವನ್ನು

ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಾಯ ಐದರಲ್ಲಿ**, ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕೆ ಒಳಗಾಗಿ, ಇಂದು ತಮ್ಮ ಊರುಗಳಲ್ಲಿ ಇರುವ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಪರಿಸರದ ಪೂರ್ವಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ಅಧ್ಯಯನ ಕ್ಷೇತ್ರಕ್ಕೆ ಪೂರಕವಾಗಿ ವಿಸ್ತರಿಸಿಕೊಂಡಿರುವ ರೆಡ್‌ಲೈಟ್ ಏರಿಯಾಗಳಲ್ಲಿ ಇರುವಾಗ ಎದುರಿಸಿದ ರಕ್ಷಣಾ ಸವಾಲುಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಆರರಲ್ಲಿ**, ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕೆ ಒಳಗಾಗಿ, ಇಂದು ತಮ್ಮ ಊರುಗಳಲ್ಲಿ ಇರುವ ಮಹಿಳೆಯರು, ಮರಳಿ ಊರಿಗೆ ಬರಲು ಕಾರಣವಾದ ಸಂದರ್ಭಗಳು ಮತ್ತು ಪುನರ್ನೆಲೆಗೊಳ್ಳುವಾಗ ಎದುರಿಸಿದ ಸವಾಲುಗಳನ್ನು ಕುರಿತು ವಿಶ್ಲೇಷಿಸಲಾಗಿದೆ.

**ಅಧ್ಯಾಯ ಏಳರಲ್ಲಿ**, ಮಕ್ಕಳ ಲೈಂಗಿಕ ಜೀತವನ್ನು ತಡೆಗಟ್ಟುವಲ್ಲಿ ಮತ್ತು ಅವರಿಗೆ ಸಾಮಾಜಿಕ ಭದ್ರತೆ ಒದಗಿಸಿ ರಕ್ಷಿಸುವಲ್ಲಿ ಭಾರತದ ಸಂವಿಧಾನದಲ್ಲಿರುವ ಅಂಶಗಳು, ಅವುಗಳಿಗೆ ಪೂರಕವಾಗಿ ಸರ್ಕಾರ ರೂಪಿಸಿರುವ ಕಾನೂನುಗಳು, ಯೋಜನೆಗಳು ಹಾಗೂ ಕಾರ್ಯಕ್ರಮಗಳನ್ನು ವಿವರಿಸುವ ಮತ್ತು ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ ಎಂಟರಲ್ಲಿ**, ಲೈಂಗಿಕ ಜೀತಕ್ಕೆ ಒಳಗಾಗಿ, ಮಹಾರಾಷ್ಟ್ರದ ಮುಂಬಯಿ ಮತ್ತು ಥಾಣೆ ಜಿಲ್ಲೆಯ ರೆಡ್‌ಲೈಟ್ ಏರಿಯಾಗಳಲ್ಲಿ, ಬಾಲನ್ಯಾಯ(ಮಕ್ಕಳ ಪಾಲನೆ ಮತ್ತು ರಕ್ಷಣೆ) ಅಧಿನಿಯಮ ೨೦೦೦ರ ಅಡಿಯಲ್ಲಿ, ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಯ ಸಹಯೋಗದಲ್ಲಿ ರಕ್ಷಣೆಗೊಂಡು, ಪುನರ್ವಸತಿಗೊಳಪಟ್ಟು, ಪುನರ್ನೆಲೆಗೊಂಡ ಅಪ್ರಾಪ್ತ ಬಾಲಕಿಯರ ಸ್ಥಿತಿಗತಿಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ಒಂಬತ್ತರಲ್ಲಿ** ಪ್ರಸ್ತುತ ಅಧ್ಯಯನವು ಅರ್ಥಮಾಡಿಕೊಂಡ ವಿಷಯವನ್ನು ಇಡಿಯಾಗಿ ಒಂದೆಡೆ ತರುವ ಪ್ರಯತ್ನ ಮಾಡಲಾಗಿದೆ. ಹೀಗೆ ಮಾಡುವಾಗ ನಮ್ಮ ಕ್ಷೇತ್ರ ಅಧ್ಯಯನವನ್ನು ಆಧರಿಸಿ, ನಮಗೆ ಸ್ಪಷ್ಟವಾದ ಗುಣಾತ್ಮಕ ಮತ್ತು ವಿವರಣಾತ್ಮಕವಾದ ಮಾಹಿತಿಗಳ ಆಧಾರದಲ್ಲಿ ಕೆಲವು ತಾತ್ಕಾಲಿಕ ನಿಲುವುಗಳಿಗೆ ಇಲ್ಲಿ ಬರಲಾಗಿದೆ. ಹೀಗೆ ತಮ್ಮ ನಿಲುವುಗಳನ್ನು ಇಲ್ಲಿ ಸ್ಪಷ್ಟಪಡಿಸುವಾಗ ಲೈಂಗಿಕ ಜೀತಕ್ಕೆ ಒಳಗಾದ ಮಕ್ಕಳ ಮತ್ತು ಒಳಗಾಗಬಹುದಾದ(ಅಪಾಯದಂಚಿನಲ್ಲಿರುವ) ಅಪ್ರಾಪ್ತ ಹೆಣ್ಣುಮಕ್ಕಳನ್ನು ಗುರಿಯಾಗಿಸಿಕೊಂಡು ಮುಂದೆ ಯಾವ ಕಾರ್ಯ ಯೋಜನೆಗಳನ್ನು ಮಾಡಬಹುದು ಎಂಬ ಸೂಚನೆಗಳನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

**ಸಂಶೋಧಕರ ಅನುಭವ**

ಸಂಶೋಧನೆಗೂ ತೊಡಗುವ ಮುನ್ನ ಯಾವುದೋ ಒಂದು ಮಾಡಿದರಾಯಿತು, ಎಂಬ

ಧೋರಣೆ ಖಂಡಿತ ನನ್ನದಾಗಿರಲಿಲ್ಲ. ಮಾಡಿದರೆ ಇದೇ ವಿಷಯದಲ್ಲಿಯೇ ಮಾಡಬೇಕು ಎಂದು ೨೦೦೬-೨೦೦೭ರಲ್ಲಿಯೇ ನನ್ನಷ್ಟಕ್ಕೆ ನಾನೇ ತೀರ್ಮಾನ ಮಾಡಿಕೊಂಡಾಗಿತ್ತು. ಅದಕ್ಕೆ ಕಾರಣ ಇಲ್ಲದಿಲ್ಲ. ವಿಮೋಚನಾ ಸಂಸ್ಥೆ, ಅಥಣಿಯ ಜೊತೆ ಕೆಲಸ ಮಾಡುತ್ತಿರುವಾಗ, ಲೈಂಗಿಕ ಜೀತಕ್ಕೆ ಬಲಿಯಾಗಿ, ಪುನರ್ವಸತಿಗೆ ಬಂದಂತಹ ಬಾಲೆಯರಿಗೆ ಸಾಂತ್ವನ ಮಾಡಿ, ಸಮಾಲೋಚನೆ ನಡೆಸಿ, ಅವರು ಇಚ್ಛೆಸಿದಲ್ಲಿ ಅವರ ಪಾಲಕರ ಕಡೆಗೆ ಕಳಿಸುವ ಜವಾಬ್ದಾರಿ ನನ್ನದಾಗಿತ್ತು. ಹೀಗೆಯೇ ಬಂದಂತಹ ಒಂದು ಪ್ರಕರಣವನ್ನು ಸಮಾಲೋಚನೆಗೆ ಒಳಪಡಿಸಿ, ಅವರ ಮನೆಗೆ ಬಿಟ್ಟು ಬಂದಿದ್ದೆವು. ಹೀಗೆ ಬಿಟ್ಟು ಬಂದು ೪-೫ ತಿಂಗಳುಗಳ ಮೇಲೆ ಆಕೆಯನ್ನು ಭೇಟಿ ಮಾಡಲು ಅವಳ ಮನೆಗೆ ಹೋಗಿದ್ದೆ. ಆಗ ಅವಳು ಪಕ್ಕದ ಮನೆಯಲ್ಲಿ ಟಿ ವಿ ನೋಡುತ್ತಾ ಕುಳಿತಿದ್ದಳು. ನಾನು ಹೋಗಿ ಅವಳ ಅರ್ಧ ಮುರಿದ, ಅರ್ಧ ಬಿದ್ದ ಪಾಳು ಮನೆಯ ಒಂದು ಮಂಚದ ಮೇಲೆ ಕುಳಿತಿದ್ದೆ. ಅವಳು ಹೊರಗಿನಿಂದ ಬಂದು ನನ್ನ ಬಳಿ ಕುಳಿತಳು. ನಾವು ಅವಳನ್ನು ಮನೆಗೆ ಕಳಿಸುವಾಗ ಅವಳಲ್ಲಿದ್ದ ಸಂತೋಷ ಈಗ ಉಳಿದಂತೆ ಕಾಣಲಿಲ್ಲ. ಮೌನ ಆವರಿಸಿತ್ತು. ಯಾಕೆ ಏನೂ ಮಾತನಾಡುತ್ತಿಲ್ಲ? ಎಂದು ನಾನೇ ಮಾತು ಪ್ರಾರಂಭಿಸಿದೆ. ಅದಕ್ಕೆ ಅವಳು, ಏನು ಮಾತಾಡಬೇಕು ಮೇಡಂ? ಅಂದಳು. ಆರಾಮಿದ್ದೀಯಾ? ಎಂಬುದಕ್ಕೆ, ಹಿಂಗ ಅದೇನಿ ನೋಡ್ರಿ.. ಅಂತ ಮುಖ ತಿರುಗಿಸಿದಳು. ನಾನು ಅಲ್ಲಿಗೆ ಹೋಗಿದ್ದು ಅವಳಿಗೆ ಇಷ್ಟವಾದಂತೆ ತೋರಲಿಲ್ಲ. ಈ ಬಾರಿ ಅವಳೇ ಮಾತನಾಡಿದಳು. ನನಗೊಂದು ಪ್ರಶ್ನಾ ಅದರಿ.. ಕೇಳ್ಳೇನು? ಅಂದಳು. ನಾನು ಖುಷಿಯಿಂದ ಹಾಂ.. ಅಂದೆ. ನಮ್ಮನ್ನ ಮುಂಬಯಿದಿಂದ ಕರ್‍ಕೊಂಡು ಬಂದಿದ್ದಕ್ಕ ನಿಮಗೇನು ಸಿಕ್ತು? ಆ ಪ್ರಶ್ನೆಗೆ ನನಗೆ ಶಾಕ್ ಆದಂತಾಯಿತು. ಯಾಕೆ ಹಂಗೆ ಕೇಳುತ್ತಿದ್ದಿ. ನಮಗೆ ನೀನು ಮನೆಗೆ ಬಂದು ನಿಂತೆಯಲ್ಲಾ ಅದೆ ಸಂತೋಷ. ಆ ಸಂತೋಷವೇ ನಮಗೆ ಸಿಕ್ಕಿದ್ದು. ಅಂದೆ. ಹಂಗಾದರ ನಿಮಗ ಮತ್ತೇನೂ ಸಿಕ್ಕಲ್ಲ ಅಂದಂಗಾತು.. ರೊಕ್ಕಾ ರೂಪಾಯಿ.. ಅಂತ ಮಾತು ನಿಲ್ಲಿಸಿದಳು. ಛೆ ಛೆ! ಹಂಗೇನಿಲ್ಲವಾ.. ಯಾಕೆ ನಿನಗೆ ಖುಷಿ ಆಗಲಿಲ್ಲೇನು? ಅಂದೆ. ಹಂಗೇನಿಲ್ಲ ಬಿಡ್ರಿ, ನಿಮಗೂ ಏನು ಸಿಕ್ಕಿಲ್ಲ. ನನಗೂ ಏನು ಸಿಗಲಿಲ್ಲ. ಹಂಗಿದ್ದರ ಅಲ್ಲಿಂದ ಎದರ ಸಲುವಾಗಿ ನಮ್ಮನ್ನ ಕರ್‍ಕೊಂಡ ಬಂದ್ರಿ, ಅಂತ ಕೇಳಿದಳು. ನೀನು ಕೆಟ್ಟ ವಾತಾವರಣದಿಂದ ಪಾರಾದೆ. ಅಲ್ಲಿದ್ದಿದ್ದರೆ ನಿನ್ನ ಆರೋಗ್ಯ ಹಾಳಾಗಿ ಹೋಗುತ್ತಿತ್ತು. ಈಗ ನೀನು ಸುರಕ್ಷಿತಳು. ಅಂದಾಗ, ಏನಾಕ್ಕಿತ್ತರಿ, ಬಾಳ ಅಂದ್ರ ನನಗೊಂದು ಎಚ್ ಐ ವಿ ಆಗ್ತಿತ್ತು. ಆದರ ಅದರಿಂದ ನಾ ಒಬ್ಬಾಕಿನ ಸಾಯಿತಿದ್ದ್ಯಾ, ಅಲ್ಲಿ ದಂಧೆ ಮಾಡಿ ಕಳಿಸಿದ ೮೦೦ ರೂಪಾಯಿದಾಗ, ನನ್ನ ವಯಸ್ಸಾದ ಆಯಿ, ಹುಚ್ಚಿ ಅವ್ವ, ಸಣ್ಣ ತಂಗಿ ಎಲ್ಲಾರೂ ಒಂದ ಹೊತ್ತು ಉಂಡ ಇರತಿದ್ದರು. ಈಗ ನೋಡ್ರಿ, ಇಲ್ಲಿ ನಾ ಏನ ಕೆಲಸ ಮಾಡಬೇಕ, ಕೂಲಿ ಕೆಲಸಕ್ಕ ಹೋಗಬೇಕ, ಅಲ್ಲಿಂದ ಕೆಲಸ ಮಾಡಿ ಆದ ಮ್ಯಾಲ ಹೊಲದ ಮಾಲೀಕನನ ಜೊತಿ, ಇಲ್ಲಾ ಕೆಲಸ ಕೊಡಿಸಿದವನ ಜೊತಿ ಸೆರಗ ಹಾಸಬೇಕು, ಮುಂಬಯಿದಾಗ ರೊಕ್ಕಕ್ಕ ಮಾಡಿದ ಕೆಲಸಾನ ಇಲ್ಲಿ ಪುಕ್ಕಟೆ ಮಾಡಬೇಕು. ಇಲ್ಲದಿದ್ದರ ನಾಳೆ ಕೆಲಸ ಸಿಗಂಗಿಲ್ಲ". ಅಂತ ಪಟ ಪಟ ಹೇಳಿ ಸುಮ್ಮನೇ ಕುಳಿತಳು. ಹೀಗೆ ಹೇಳುತ್ತಿದ್ದವಳ ಕಣ್ಣಲ್ಲಿ ನೀರಾಡುತ್ತಿತ್ತು. ಅವಳು ಎತ್ತಿದ ಪ್ರಶ್ನೆ ನೈತಿಕ ನೆಲೆಯಿಂದ ಕೂಡಿತ್ತು. ಅಂದಿನಿಂದ ನನಗೆ ಪ್ರಶ್ನೆಯೊಂದು

ಕಾಡುತ್ತಲೇ ಇತ್ತು. ಅವಳಿಗೆ ಒಂದು ಹೊತ್ತು ಊಟ ಕೊಡಲು ಆಗದ ನಾವು ಅವಳನ್ನು ರಕ್ಷಿಸುವ ಅಗತ್ಯ ಏನಿತ್ತು? ಅಪ್ಪ, ಅಣ್ಣ, ತಮ್ಮ ಯಾರೂ ಇಲ್ಲದ ಮನೆಯಲ್ಲಿ ಅನಕ್ಷರಸ್ಥೆ, ದೇವದಾಸಿಯಾದ ಒಂದು ಹೆಣ್ಣು ಮಗು ಏನು ಮಾಡಲು ಸಾಧ್ಯವಿತ್ತು. ಒಳ್ಳೆಯದು ಯಾವುದು? ಕೆಟ್ಟದ್ದು ಯಾವುದು? ಒಂದೂ ಗೊತ್ತಿರಲಿಲ್ಲ. ಯಾರೋ ಪಕ್ಕದ ಮನೆ ಹೆಣ್ಣು ಮಗಳು ಈ ದಾರಿ ತೋರಿಸಿದ್ದಳು. ಇವಳು ಅದನ್ನೇ ಮಾಡುತ್ತಾ ಬಂದಿದ್ದಳು. ಆವಾಗಲೇ, ಹೀಗಲ್ಲ ಹೀಗೆ ಅಂತ ಗೌರವದ, ಆರೋಗ್ಯದ ದಾರಿ ತೋರಿಸಿದ್ದರೆ, ಇವತ್ತು ಮತ್ತೇನೋ ಆಗಿರುತ್ತಿದ್ದಳು. ಅವಳ ಪ್ರಶ್ನೆ ಸಹಜವಾಗಿತ್ತು. ಎಲ್ಲೋ ಇದ್ದ ಅವಳನ್ನು ರಕ್ಷಣೆ ಮಾಡಿದ್ದೆವೆಂದು ಹೇಳಿ ಹಿಡಿದು ತಂದು, ಪುನರ್ವಸತಿ ಒದಗಿಸಿದ್ದೇವೆಂದು ಹೇಳಿ, ಇರಲು ಒಂದು ಸರಿಯಾದ ಮನೆಯೂ ಇಲ್ಲದ ವ್ಯವಸ್ಥೆಯಲ್ಲಿ, ಕ್ರೂರ ಸಮಾಜದ ನಡುವೆ ಬಿಟ್ಟು ಬಂದರೆ, ಅವಳು ಹೇಗೆ ಬದುಕಬಹುದಿತ್ತು? ಇದು ಒಬ್ಬಳ ಕಥೆಯಲ್ಲ ದೇಶದ ಉದ್ದಗಲಕ್ಕೂ ಲಕ್ಷಾಂತರ ಬಾಲಕಿಯರ ಜೊತೆಗೆ ನಡೆಯುತ್ತಿರುವ ಘಟನೆಗಳಾಗಿವೆ. ಹಾಗಿದ್ದರೆ ಅವಳ ಇಂಥ ಪರಿಸ್ಥಿತಿಗೆ ಕಾರಣವೇನು? ಅವಳಿಗೆ ನ್ಯಾಯಯುತವಾದ ಜೀವನ ಸಿಗಬೇಕಾದರೆ ಏನು ಮಾಡಬೇಕು? ಹೀಗೆ ಪುನರ್ವಸತಿಗೆ ಬಂದ ಮಕ್ಕಳ ಸ್ಥಿತಿ ಏನಿದೆ, ಎಂದು ಕಂಡುಕೊಳ್ಳುವ ನಿರ್ಧಾರ ಮಾಡಿ ಪಿಎಚ್.ಡಿ.ಗೆ, ಬಂದಾಗ, ಮಾರ್ಗದರ್ಶಕರಿಂದ ಗ್ರೀನ್ ಸಿಗ್ನಲ್ ಸಿಕ್ಕು, ಕೆಲಸ ಪ್ರಾರಂಭಿಸಿದಾಗಲೇ ಅದರ ಆಳ ಹರವುಗಳು ಅರ್ಥವಾದದ್ದು. ಯಾವುದೂ ನಾನು ಅಂದುಕೊಂಡಂತೆ ಇರಲಿಲ್ಲ.

ಮೊದಲಿಗೆ ನಾನು ಆಯ್ಕೆ ಮಾಡಿಕೊಂಡ ಕ್ಷೇತ್ರ ತುಂಬಾ ವಿಶಾಲವಾಯಿತು. ಅದಕ್ಕೆ ಸಮಯ, ಹಣ, ಶಕ್ತಿ, ಆರೋಗ್ಯ ಎಲ್ಲವನ್ನೂ ವ್ಯಯಿಸಲೇಬೇಕಿತ್ತು. ಇದರ ಹಿಂದೆ ಬೆನ್ನು ಹತ್ತಿದಾಗ ನನ್ನ ಕುಟುಂಬದಲ್ಲೇನೋ ಅವ್ಯವಸ್ಥೆಯಾಗಿ ಕುಟುಂಬದ ಸದಸ್ಯರೊಂದಿಗೆ ಸಂಘರ್ಷ, ಮನಸ್ತಾಪ, ಅನಾರೋಗ್ಯ ಮಾನಸಿಕವಾಗಿ ಖಿನ್ನಳನ್ನಾಗಿ ಮಾಡಿತ್ತು. ನನ್ನನ್ನು ನಾನೇ ಸಂತೈಸಿಕೊಂಡು, ಅದರಿಂದ ಹೊರಬಂದು ಮತ್ತೆ ಸನ್ನದ್ಧಳಾಗಿ ಹೊರನಡೆಯುವ ಹೊತ್ತಿಗೆ, ಅಂದುಕೊಂಡ ಸಮಯ ಮೀರತೊಡಗಿತ್ತು. ಅಲ್ಲದೇ ಮಹಾರಾಷ್ಟ್ರದ ವೇಶ್ಯಾಗೃಹಗಳಿಗೆ ಹೋಗಿ, ಲೈಂಗಿಕ ಜೀತದಲ್ಲಿರುವವರನ್ನು ಭೇಟಿ ಮಾಡಲು, ಮಾತನಾಡಲು ಅಲ್ಲಿಯ ಪೊಲೀಸ್ ಇಲಾಖೆಯ ಮತ್ತು ಸ್ವಯಂ ಸೇವಾ ಸಂಸ್ಥೆಗಳ ಸಹಕಾರ ಬೇಕಾಗಿತ್ತು. ಅನುಮತಿ ಏನೂ ಅವಶ್ಯವಿರಲಿಲ್ಲ. ಆದರೆ ಸಹಕಾರವಿರದೇ ಒಂದು ಹೆಜ್ಜೆಯನ್ನೂ ಸಹ ಮುಂದಿಡಲು ಸಾಧ್ಯವಿರಲಿಲ್ಲ. ಅಲ್ಲದೇ ನಾನು ಕೆಲಸ ಮಾಡುವ ಸಂಸ್ಥೆ ಮತ್ತು ವೈಯಕ್ತಿಕವಾಗಿ ಲೈಂಗಿಕ ಶೋಷಿತರ ರೀಹ್ಯಾಬಿಲಿಟೇಶನ್ ವಲಯದಲ್ಲಿ ಗುರುತಿಸಿಕೊಂಡಿದ್ದೆ. ಮುಂಬಯಿಯಲ್ಲಿ ಲೈಂಗಿಕ ಶೋಷಿತರ ಸಲುವಾಗಿ ಕೆಲಸ ಮಾಡುವ ಬಹಳಷ್ಟು ಸಂಸ್ಥೆಗಳು. ಅವರ ಸಸ್ಟೇನೆಬಿಲಿಟಿಯ ವಲಯದಲ್ಲಿ ಕೆಲಸ ಮಾಡುವಂತಹವಾಗಿದ್ದವು. ರೀಹ್ಯಾಬಿಲಿಟೇಶನ್ ವಲಯದಲ್ಲಿ ಕೆಲಸ ಮಾಡುವವರಿದ್ದರು. ಆದರೆ ಅವರಿಂದ ನನ್ನ ಅಧ್ಯಯನದ ಉದ್ದೇಶ ಈಡೇರುತ್ತಿರಲಿಲ್ಲ. ಆದರೆ ಸಹಕಾರಕ್ಕಾಗಿ ಪತ್ರ ಬರೆದು ಸುಮ್ಮನೇ ಸಮಯ ಹಾಕಿಬಿಟ್ಟೆ. ಒಂದು ದಿನ ನಿರ್ಧರಿಸಿಕೊಂಡು ಮುಂಬಯಿಯ ಗ್ರ್ಯಾಂಟ್ ರೋಡಿಗೆ ಒಬ್ಬಳೇ ಹೋಗಿಬಿಟ್ಟೆ. ಅಲ್ಲಿಯ ಪೊಲೀಸ್ ಸ್ಟೇಶನ್ಗೆ ಭೇಟಿಯಾಗಿ, ನನ್ನ ಪರಿಚಯ ಮಾಡಿಕೊಂಡು,

ವೇಶ್ಯಾಗೃಹದಿಂದ ನೀವು ರಕ್ಷಿಸಿ ತಂದ ಕರ್ನಾಟಕದ ಹೆಣ್ಣುಮಕ್ಕಳನ್ನು ಭೇಟಿಯಾಗಿ ಮಾತನಾಡಬೇಕಿತ್ತು ಸಹಾಯ ಮಾಡಿ ಎಂದು ವಿನಂತಿಸಿಕೊಂಡೆ. ಪೊಲೀಸರು ನನ್ನನ್ನೇ ಒಂದು ವಿಲನ್ನನಂತೆ ಎನ್ಕ್ವಾಯಿರಿ ಮಾಡಿ, ಐಡಿ ಪ್ರೂಫ್‌ಗಳನ್ನ ತೆಗೆದುಕೊಂಡು, ಒಂದು ಕಡೆಗೆ ಕೂಡಿಸಿದರು. ನನಗೆ ನಿಜಕ್ಕೂ ಆ ಕ್ಷಣಕ್ಕೆ ಸತ್ತು ಹೋಗಿ ಬಿಡುತ್ತೇನೇನೋ ಎಂಬ ಅನುಭವ ಆಗಿತ್ತು. ಆದರೂ ಧೈರ್ಯ ತಂದುಕೊಂಡು ಮತ್ತೆ ಕೇಳಿದೆ. ಎಸ್ ಐ ಮ್ಯಾಡಂ ಬರ್ತಾರ ಕೂಡ್ರಿ, ಅಂತ ಹೇಳಿದಾಗ, ಮನಸ್ಸಿಗೆ ಸಮಾಧಾನವಾದದ್ದು. ಎಸ್ ಐ ಮ್ಯಾಡಂ ಬಂದು ಆ ಹೆಣ್ಣುಮಕ್ಕಳನ್ನು ಯಾಕೆ ಭೇಟಿಯಾಗಬೇಕು ಎಂಬುದನ್ನ ನನ್ನಿಂದ ಕೇಳಿ ಅರ್ಥೈಸಿಕೊಂಡು, ಒಬ್ಬರು ಪೊಲೀಸ್ ಅವರನ್ನು ನನ್ನ ಜೊತೆ ಕಳಿಸಿ, ಅದೇ ಗ್ರ್ಯಾಂಟ್ ರೋಡಿನಲ್ಲಿ, ವೇಶ್ಯಾ ಮಹಿಳೆಯರಿಗಾಗಿ ಕಾರ್ಯ ನಿರ್ವಹಿಸುತ್ತಿರುವ 'ಆಶಾ ದರ್ಪಣ' ಎಂಬ ಸಿಬಿಓ ವನ್ನು ಭೇಟಿ ಮಾಡಿಸಿದರು. ಅತ್ಯಂತ ಚಿಕ್ಕದಾದ ಒಂದು ರೂಮಿನಲ್ಲಿ, ಕೆಲಸ ಮಾಡುತ್ತಾ ಕುಳಿತಿದ್ದ ಒಬ್ಬರು ೫೦ ವಯಸ್ಸಿನ ಆಸುಪಾಸಿನಲ್ಲಿರುವ ಹೆಣ್ಣುಮಗಳಿಗೆ ಭೇಟಿಯಾಗಿ, 'ದೇಖೋ ಮಾ, ಮೇರಾ ನಾಮ ಭಾರತಿ ಹೈ. ಮೈ ಕರ್ನಾಟಕ ಸೇ ಆಯೀ ಹುಂ, ಎ ಮೇರಾ ಪೆಹಚಾನ ಕಿ ಪೇಪರ್ಸ ಹೈ. ಮುಝುಕೋ ಆಪಕೀ ಸಂಸ್ಥಾ ಕಿ ಡೈರೆಕ್ಟರ್ ಸೇ ಬಾತ್ ಕರನೇ ಕಾ ಥಾ, ಅಂದಾಗ ಅವರು ಆಯೀಯೇ ಪೆಹಲೇ ಬೈಠೀಯೇ, ಬಾದ ಮೇ ಬಾತ್ ಕರೆಂಗೇ. ಅಂದ ಅವರು, ಮೊದಲು ಚಹಾದ ವ್ಯವಸ್ಥೆ ಮಾಡಿ, ಎರಡು ನಿಮಿಷ ಬಿಟ್ಟು, 'ಹೇಳಿ ಭಾರತಿ, ನಿಮಗೆ ಬೇಕಾದ ಮಾಹಿತಿ ನಾನೇ ಕೊಡುತ್ತೇನೆ, ನಾನು ಈ ಸಂಸ್ಥೆಯ, ನಿರ್ದೇಶಕಿಯಾಗಿದ್ದೇನೆ. ನನ್ನ ಹೆಸರು ವಾಸಂತಿ ಅಂತ' ಅಂದಾಗ ನನಗೆ ಖುಷಿಯೋ ಖುಷಿ. ಅಷ್ಟರಲ್ಲೇ ದೇವತಾ, ರೇಖಾ, ಗುಲಾಬಿ, ಲಕ್ಷ್ಮಿ, ಯಲ್ಲೂ, ಕುಸುಮ್ ಇವರೂ ಸೇರಿಕೊಂಡಿದ್ದರು. ೨-೩ ನಿಮಿಷಗಳಲ್ಲಿ ಎಲ್ಲವೂ ಕನ್ನಡಮಯವಾಗಿತ್ತು. ಅವರೆಲ್ಲಾ ಯಾವ್ಯಾವುದೋ ಕಾರಣಕ್ಕೆ ಮುಂಬಯಿಗೆ ಬಂದು ಬಹಳ ದಿನಗಳಾಗಿದ್ದವು. ಕಾರವಾರ, ಮಡಿಕೇರಿ, ಕೊಡಗು, ಬೆಳಗಾವಿ, ಬಾಗಲಕೊಟೆ, ಬಿಜಾಪುರ ಕರ್ನಾಟಕದ ಎಲ್ಲ ದಿಕ್ಕಿನಿಂದಲೂ ಬಂದವರಿದ್ದರು. ನಾನು ಮಾಡುತ್ತಿರುವ ಅಧ್ಯಯನ ಅದರ ಉದ್ದೇಶ, ಅದರಿಂದಾಗುವ ಲಾಭಗಳ ಕುರಿತು ಚರ್ಚಿಸಿ, ಅವರೆಲ್ಲರೂ ನನಗೆ ಸಹಾಯ ಸಹಕಾರ ನೀಡಲು ಒಪ್ಪಿಕೊಂಡರು.

ಆಶಾ ದರ್ಪಣ ಸಂಸ್ಥೆಯ ವಾಸಂತಿ ಇವರಿಂದ ಅವರ ಮುಖ್ಯ ಸರ್ಕಾರೇತರ ಸಂಸ್ಥೆ ಆಸ್ಥಾ ಪರಿವಾರದೊಂದಿಗೆ ಸಂಪರ್ಕಗೊಂಡು, ಅವರು ಕ್ಷೇತ್ರದಲ್ಲಿ ಸಹಾಯ ಮಾಡಲು ಒಪ್ಪಿಕೊಂಡು ತಮ್ಮ ಎಲ್ಲ ಸಿಬಿಓಗಳ ಅಧ್ಯಕ್ಷರಿಗೆ ಮುಂದಿನ ಕ್ರಮಕ್ಕಾಗಿ ಮಾಹಿತಿ ನೀಡಿದರು. ಚೆಂಬೂರ್‌ನಲ್ಲಿರುವ ಟಾಟಾ ಇನ್ಸಿಟ್ಯೂಟ್ ಆಫ್ ಸೋಷಿಯಲ್ ಸಾಯಿನ್ಸ್‌ದವರು ಕಡಿಮೆ ದರದಲ್ಲಿ(ದಿನಕ್ಕೆ ೩೫೦ ರೂ) ಲೇಡೀಸ್ ಹಾಸ್ಟೆಲ್‌ನಲ್ಲಿ ವಸತಿ ವ್ಯವಸ್ಥೆ ಕಲ್ಪಿಸಿದರು. ಚೆಂಬೂರ್‌ನಿಂದ ಗ್ರ್ಯಾಂಟ್ ರೋಡ್, ಅಲ್ಲಿಂದ ಕಾಮಾಟಿಪೂರ ಗಳಿಗೆ ಹೋಗಲು ಎರಡು ಕಡೆ ಟ್ರೇನ್ ಬದಲಾಯಿಸಬೇಕಿತ್ತು. ಅತ್ಯಂತ ಜನನಿಬಿಡ ವಾಗಿರುತ್ತಿದ್ದಂತಹ ಲೋಕಲ್ ಟ್ರೇನ್‌ಗಳಲ್ಲಿ ಓಡಾಡುವುದೇ ಕಷ್ಟವಾಗಿತ್ತು. ಆಶಾ ದರ್ಪಣ ಸಂಸ್ಥೆಯಲ್ಲಿ ಕೆಲಸ ಮಾಡುವ ಸಂಕೇಶ್ವರದ ಕುಸುಮ್ ಟ್ರೇನ್ಗಳನ್ನು ಹಿಡಿಯುವ ಹತ್ತುವ, ಬದಲಾಯಿಸುವ ಎಲ್ಲ ಟ್ರಿಕ್ಸ್‌ಗಳನ್ನೂ

ಎರಡು ದಿನ ನನ್ನ ಜೊತೆ ಬಂದು ಕಲಿಸಿಕೊಟ್ಟಿದ್ದಳು.

ಮೊದಲ ದಿನ ದಿಲ್‌ಶಾದ್ ಎಂಬ ಮದ್ರಾಸ್ ದ ಯುವತಿಯೊಂದಿಗೆ ಗ್ರ್ಯಾಂಟ್ ರೋಡಿನಲ್ಲಿರುವ 'ಜಮುನಾ ಮೆನ್ಶನ್ ಎಂಬ ವೇಶ್ಯಾಗೃಹಕ್ಕೆ ಭೇಟಿ ಕೊಟ್ಟೆ. ಹೊರಗೆ ಏನೂ ಕಾಣಿಸದ ದೊಡ್ಡ ಕಟ್ಟಡದ ಒಳಗೆ ಕಾಲಿಟ್ಟ ಕೂಡಲೇ, ಪ್ರಪಂಚವೇ ಬದಲಾದಂತೆ ಅನ್ನಿಸತೊಡಗಿತ್ತು. ಕತ್ತಲು ಆವರಿಸಿಕೊಂಡ ಮಸಕು ಬೆಳಕಿನಲ್ಲಿ ಹೆಣ್ಣುಮಕ್ಕಳು ಕಾಣತೊಡಗಿದ್ದರು. ೫-೬ ಅಂತಸ್ತು ಇರುವ ಕಟ್ಟಡದಲ್ಲಿ, ನೆಲ ಮಾಳಿಗೆಯಿಂದ ಮೇಲೇರುವ ಮೆಟ್ಟಿಲುಗಳ ಎಡ ಬಲಗಳಲ್ಲಿ, ಅರ್ಧಂಬರ್ಧ ಬಟ್ಟೆ ಉಟ್ಟ ಮಹಿಳೆಯರು ಮಲಗಿದ ರೀತಿಯಲ್ಲಿ ಕುಳಿತುಕೊಂಡಿದ್ದರು. ಅವರ ದೇಹದಲ್ಲಿ ಎಲವುಗಳನ್ನು ಬಿಟ್ಟರೆ ಬೇರೆ ಏನೂ ಇರಲಿಲ್ಲ. ಹಾಕಿದ ಬಟ್ಟೆಗಳು ಒಂದು ಕೋಲಿಗೆ ಸಿಕ್ಕಿಸಿದಂತೆ ಕಾಣುತ್ತಿದ್ದವು. ದೇಹ ಮುಖ ಸುಕ್ಕುಗಟ್ಟಿ ಕಪ್ಪಡರಿದ್ದವು. ಸುಟ್ಟು ಹೋದಂತೆ ಕಾಣುತ್ತಿದ್ದರು. ಕಣ್ಣುಗಳು ನಿಸ್ತೇಜನಗೊಂಡು, ಶಕ್ತಿಯನ್ನೇ ಕಳೆದುಕೊಂಡಿದ್ದವು. ಅವರು ಮೇಲೇರಿ ಹೋಗುತ್ತಿರುವ ಗಿರಾಕಿಗಳಿಗೆ, "ಆಓ, ಸಿರ್ಫ ದಸ್ ರೂಪಯೇ ದೇ ದೋ, ಪಾಂಚ್ ರೂಪಯೇ ದೇ ದೋ, ಆಓ.." ಎಂದು ಅವರ ಕಾಲು ಹಿಡಿದು ಅಂಗಲಾಚಿ ಬೇಡುತ್ತಿದ್ದರು. ಅವರ ವಯಸ್ಸು ಬಹಳಾ ಅಂದರೆ ೪೦ ರಿಂದ ೪೫ರ ಒಳಗೆ ಇರಬಹುದು. ಅವರು ಭಿಕ್ಷೆ ಬೇಡುತ್ತಿರಲಿಲ್ಲ. ೫-೧೦ ರೂಪಾಯಿಗೆ ತಮ್ಮ ದೇಹವನ್ನು ಕೊಡಲು ಸಿದ್ಧವಾಗಿದ್ದರು. ಅವರನ್ನು ನೋಡುತ್ತಲೇ ನನ್ನಲ್ಲಿ ಇದ್ದ ಶಕ್ತಿ ಎಲ್ಲಾ ಉಡುಗಿ ಹೋದಂತೆ ಆಯಿತು. ಕೈ ಕಾಲುಗಳು ನಡುಗಲಾರಂಭಿಸಿದ್ದವು. ದಿಲ್‌ಶಾದ್‌ನ ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಸಾವರಿಸಿಕೊಳ್ಳಲು ಪ್ರಯತ್ನಿಸಿದೆ. ದಿಲ್‌ಶಾದ್ "ಮ್ಯಾಡಂ ವೈ ಯು ಆರ್ ಅಫ್ರೈಡಿಂಗ್, ಡೋಂಟ್ ವರಿ, ಆಯ್ ಯಾಮ್ ವಿತ್ ಯು ನೋ. ದಿಸ್ ಈಸ್ ಯುವರ್ ಫಸ್ಟ ಡೇ. ಹೌ ಯು ಆರ್ ಗೋಯಿಂಗ್ ಟು ಬೀ ಹಿಯರ್ ಫಾರ್ ಒನ್ ಮಂಥ್" ಎಂದು ಧೈರ್ಯ ತುಂಬುತ್ತಿದ್ದಳು. ಇಲ್ಲಿ ದಿಲ್‌ಶಾದ್ ಕುರಿತು ಒಂದು ಮಾತು ಹೇಳಲೇ ಬೇಕು. ದಿಲ್‌ಶಾದ್ ೪೦ ವಯಸ್ಸಿನ ಮುಸ್ಲಿಂ ಹೆಣ್ಣುಮಗಳು. ತನ್ನ ಅತ್ಯಂತ ಚಿಕ್ಕ ವಯಸ್ಸಿನಲ್ಲಿ ಕೌಟುಂಬಿಕ ಸಮಸ್ಯೆಯಿಂದ ಬಳಲುತ್ತಿರುವಾಗ ಯಾರೋ ತಲೆ ಹಿಡುಕರು ತೋರಿಸಿದ್ದು, ಮುಂಬಯಿಯ ರೆಡ್‌ಲೈಟ್ ಏರಿಯಾದ ದಾರಿಯನ್ನು. ಇವಳೂ ಲೈಂಗಿಕ ಶೋಷಿತೆಯೇ. ಈಗ ಅದೆಲ್ಲದರಿಂದ ಹೊರಗೆ ಬಂದು ಲೈಂಗಿಕ ಜೀತದಲ್ಲಿರುವವರ ಆರೋಗ್ಯಕ್ಕಾಗಿ ಕೆಲಸ ಮಾಡುತ್ತಿದ್ದಾಳೆ. ಕನ್ನಡ ಬರುವುದಿಲ್ಲ. ಹಿಂದಿ ಕಲಿತಿದ್ದಾಳೆ. ಇಂಗ್ಲೀಷ್ ಸರಾಗವಾಗಿ ಮಾತನಾಡುತ್ತಾಳೆ. ಅವಳು ನನಗೆ ನೀಡಿದ ಧೈರ್ಯದಿಂದಲೇ ಕ್ಷೇತ್ರಕಾರ್ಯ ಮುಂದುವರೆದದ್ದು.

ಹಾಗೆಯೇ ಮುಂದೆ ಮುಂದೆ ಮೇಲೆ ಮೇಲೆ ಹೋದಂತೆ ಚಿಕ್ಕ ಚಿಕ್ಕ ವಯಸ್ಸಿನ ಕನ್ನಡದ ಹುಡುಗಿಯರು, ತಮಿಳು, ತೆಲಗು, ಉತ್ತರ ಪ್ರದೇಶ, ಕಲ್ಕತ್ತಾ, ಬಾಂಗ್ಲಾ ದೇಶ, ನೇಪಾಳ ಮೊದಲಾದ ಕಡೆಯ ಹುಡುಗಿಯರು ಕಾಣಿಸತೊಡಗಿದ್ದರು. ಎಷ್ಟೋ ಹುಡುಗಿಯರು ಬಿಸಿಲಿನ ತಾಪಕ್ಕೆ ನೆಲದ ಮೇಲೆಯೇ ಮಲಗಿದ್ದರು. ನಾವು ಹೊದಾಗ ಮಧ್ಯಾಹ್ನ ಒಂದು ಗಂಟೆಯ ಸಮಯ. ಬಹಳಷ್ಟು ಹುಡುಗಿಯರು ಸ್ನಾನ ಮಾಡುವುದರಲ್ಲಿ, ಊಟ ಮಾಡುವುದರಲ್ಲಿ ನಿರತರಾಗಿದ್ದರು. ಕೆಲವು ಹುಡುಗಿಯರು ಗಿರಾಕಿಗಳನ್ನು ಕರೆಯುವಲ್ಲಿ ನಿರತರಾಗಿದ್ದರು. ನನಗೇನೊ ತುಂಬಾ ಸಮಯವಿರುತ್ತಿತ್ತು. ಆದರೆ

ಅವರಿಗೆ ನನ್ನ ಜೊತೆ ಮಾತನಾಡಲು ಕ್ಷಣ ಹೊತ್ತೂ ಬಿಡುವು ಇರುತ್ತಿರಲಿಲ್ಲ. ಅವರನ್ನು ಸಂದರ್ಶನ ಮಾಡಲು ನಾನು ತೆಗೆದುಕೊಂಡು ಹೋಗಿದ್ದ ಪ್ರಶ್ನಾವಳಿ ಸೂಚಿಯನ್ನು ಕಂಡರೇ ಅವರು ಸಿಟ್ಟು ಮಾಡಿಕೊಳ್ಳುತ್ತಿದ್ದರು. ಅವರಿಗೆ ೫ ನಿಮಿಷ ನನ್ನೊಡನೆ ಮಾತನಾಡುವುದೆಂದರೆ, ಅಸಾಧ್ಯವಾದ ಕೆಲಸವಾದಂತಾಗುತ್ತಿತ್ತು.

ಹೀಗೆ ಮರುದಿನ ನಾನೊಬ್ಬಳೇ ಗ್ರ್ಯಾಂಟ್ ರೋಡಿನ ದಯಾನಂದ್ ಬಿಲ್ಡಿಂಗ್‌ಗೆ ಹೋಗಿದ್ದೆ. ಅಲ್ಲಿ ಬಾಗಲಕೋಟೆ ಜಿಲ್ಲೆಯ ೭೦ ವಯಸ್ಸಿನ ಘರವಾಲಿಯೊಬ್ಬರು ಸಿಕ್ಕಿದ್ದರು. ಅವರ ಮನೆಯಲ್ಲಿ ಬಾಗಲಕೋಟೆ ಜಿಲ್ಲೆಯ  ಗ್ರಾಮಗಳ ಹುಡುಗಿಯರೇ ಇದ್ದರು. ಅವರನ್ನು ನನ್ನ ಜೊತೆ ಮಾತನಾಡಲು ಬಿಡದೇ ತಾವೇ ಅವರ ಮಾಹಿತಿಯನ್ನು ಹೇಳಿದರು. ಹಾಗೇ ಮಾತನಾಡುತ್ತಾ ಅವರು, "ನೀನು ಒಬ್ಬಳೇ ಇಂತ ಜಾಗೆಗಳಿಗೆಲ್ಲ ಬರಬಾರದು. ಯಾವ ಧೈರ್ಯದ ಮೇಲೆ ಇಲ್ಲಿಗೆ ನೀನು ಬಂದಿದಿ. ಇಲ್ಲಿ ಇರುವವರೆಲ್ಲ ನಮ್ಮಂತವರೇ. ಈಗ ನಿನ್ನನ್ನು ನಾವು ಬಿಡದೇ ಒಳಗೆ ಕೂಡಿ ಹಾಕಿಬಿಟ್ಟರೆ ಏನು ಮಾಡುತ್ತೀ? ಇಲ್ಲಿ ನಿನ್ನ ರಕ್ಷಣೆಗೆ ಯಾರೂ ಬರುವುದಿಲ್ಲ "ಎಂದು ನನ್ನ ಮುಖವನ್ನೇ ನೊಡತೊಡಗಿದಳು. ನಿಜಕ್ಕೂ ಆ ಕ್ಷಣವನ್ನು ನೆನಪಿಸಿಕೊಂಡರೆ, ನನಗೆ ಈಗಲೂ, ಸಾವು ಬಂದ ಅನುಭವವಾಗುತ್ತದೆ. ಆದರೂ ಸಾವರಿಸಿಕೊಂಡು, ಅಜ್ಜೀ, ಹಂಗೇನಿಲ್ಲ, ನಾನು ನಿಮ್ಮ ಸಲುವಾಗಿ ಇಲ್ಲೀವರೆಗೂ ಬಂದೀನಿ. ನಮ್ಮೂರವರಾಗಿ ನೀವೇನೂ ನನಗ ಹಂಗೆಲ್ಲ ಮಾಡೋದಿಲ್ಲ ಅನ್ನೋ ನಂಬಿಕೆ ಐತಿ" ಎಂದು ಹೆದರುತ್ತಲೇ ನುಡಿದಿದ್ದೆ. "ಆದರೂ, ನೀ ಹಿಂಗೆಲ್ಲ ಒಬ್ಬಳೇ ಬರಬಾರ್ದು. ಯಾರು ಒಳ್ಳೇಯವರು, ಯಾರು ಕೆಟ್ಟವರು ಅಂತ ಹೆಂಗ ಹೇಳ್ತೀ. ತಾವು ಹೆತ್ತ ಮಕ್ಕಳ್ನ ದಂಧೆಕ ಹಚ್ಚೋ ಮಂದಿ ಇರೋ ಜಾಗ ಇದು. ಇನ್ನು ನೀ ಯಾವ ಲೆಕ್ಕ ನಮಗ. ಈ ಏರಿಯಾದಾಗಿನ ಸುದ್ದೀ ನಿನಗೇನಾರ ಬೇಕಾಗಿದ್ದರ ನನ್ನ ಫೋನ್ ನಂಬರ ತುಗೋ. ನನಗ ಫೋನ್ ಮಾಡು. ಎಲ್ಲ ಹೇಳ್ತನಿ. ಆದ್ರ ನೀ ಮಾತ್ರ ಆದಷ್ಟು ಲಗೂನ ಊರಿಗೆ ಹೋಗು. ನೀನು ಮುಂಬೈದಾಗ ಇರೋತನ ನಿನಗೇನರ ಸಹಾಯ ಬೇಕಂದ್ರ ನನಗ ಫೋನ್ ಮಾಡು. ನಮ್ಮ ಮಂದಿ ಎಲ್ಲಾ ಕಡೀಗೂ ಅದಾರ" ಎಂದು ಧೈರ್ಯದ ಮಾತನ್ನು ಹೇಳಿದ್ದರು.

ಅವರು ಹೇಳಿದಂತೆ ನಿಜಕ್ಕೂ ನಾನು ಒಂದು ಗಂಡಾಂತರದ ಪರಿಸರದಲ್ಲಿಯೇ ಕೆಲಸ ಮಾಡುತ್ತಿದ್ದೆ. ಅಂಥ ಸಂದರ್ಭದಲ್ಲಿ ನನಗೆ ಸಹಕಾರ ಕೊಟ್ಟವರು, ಅಲ್ಲಿರುವ ಸಿಬಿಓ ಕಾರ್ಯಕರ್ತರು ಮತ್ತು ಉತ್ತರ ಕರ್ನಾಟಕದ ನಮ್ಮ ಹೆಣ್ಣುಮಕ್ಕಳೇ. ಚಂದಾ, ಶಾಲಾ, ಲಲಿತಾ, ಎಲ್ಲೂ, ಕುಸುಮಾ, ಜಯಶ್ರೀ ಯಾವಾಗಲೂ ನನ್ನ ಜೊತೆ ಇರೋರು. ಮೊದಮೊದಲು ಹೆಣ್ಣುಮಕ್ಕಳು ಮಾತನಾಡಲು ಸಿಟ್ಟು ಸಿಟ್ಟು ಮಾಡೋರು. ಮುಂದೆ ಸಮಯ ಹೋದಂತೆ, ತಮ್ಮ ಹತ್ತಿರ ಕೂಡ್ರಿಸಿಕೊಂಡು, ತಮ್ಮ ಹತ್ತಿರವಿದ್ದ ರೊಟ್ಟಿಯನ್ನು ತಿನ್ನಲು ಕೊಡೋರು. ಅಲ್ಲಿರುವ ಮಹಿಳೆಯರ ಗಂಡುಮಕ್ಕಳು ತಮ್ಮ ಒಬ್ಬ ಅಕ್ಕನಂತೆ ಪ್ರೀತಿಸಿದ್ದರು. ನಾನು ಅಲ್ಲಿಂದ ಹೊರಗೆ ಬರುವುದು ತಡವಾದರೆ, ನನ್ನ ಜೊತೆ ಸ್ಟೇಶನ್‌ವರೆಗೂ ಬಂದು, ಟ್ರೇನ್ ಹತ್ತೋವರೆಗೂ ಇದ್ದು ಹೋಗುತ್ತಿದ್ದರು.

ಇದು ಕರ್ನಾಟಕದ ಹೊರಗಿನ ಕ್ಷೇತ್ರಕಾರ್ಯದ ಅನುಭವವಾಗಿದ್ದರೆ, ಇನ್ನು ಕರ್ನಾಟಕದ ಒಳಗಿನ, ಬಿಜಾಪೂರ, ಬಾಗಲಕೋಟೆ ಮತ್ತು ಬೆಳಗಾವಿಯ ಅನುಭವ ಬೇರೆಯದೇ ಆಗಿತ್ತು. ಬಿಜಾಪೂರ ಜಿಲ್ಲೆಯ ಮಹಿಳೆಯರು ಯಾವೊಂದು ಮುಜುಗರ ಅನುಮಾನ ಬೇಸರ ಇಲ್ಲದೇ ತಮ್ಮ ನೋವನ್ನು ಅನುಭವವನ್ನು ಹಂಚಿಕೊಳ್ಳೋರು. ಬೆಳಗಾವಿಯ ಅಥಣಿ ಮತ್ತು ರಾಯಭಾಗ ನಾನು ಈ ಮೊದಲು ಕೆಲಸ ಮಾಡಿದ ಕ್ಷೇತ್ರಗಳಾಗಿದ್ದರಿಂದ ಅಲ್ಲಿಯೂ ಯಾವುದೇ ಸಮಸ್ಯೆ ಆಗಿರಲಿಲ್ಲ. ಆದರೆ ಬಾಗಲಕೋಟೆಯ ಜಮಖಂಡಿ ಮತ್ತು ಮುಧೋಳ ತಾಲೂಕುಗಳಲ್ಲಿ ಕೊಂಚ ವಿಭಿನ್ನವಾದ ಅನುಭವ ದೊರೆತಿತ್ತು. ನಾವು ಮಹಿಳೆಯರ ಮನೆಗೆ ಹೋದಾಗ, ಅವರ ಗಂಡು ಮಕ್ಕಳು ಮುಂದೆ ಕುಳಿತುಕೊಳ್ಳುತ್ತಿದ್ದರು. ಅವರ ಮುಂದೆ ಈ ವಿಷಯ ಮಾತನಾಡಲು ನಮ್ಮಿಂದ ಸಾಧ್ಯವಾಗುತ್ತಿರಲಿಲ್ಲ. ಮತ್ತು ಅವರೂ ಸಹ ಪ್ರತಿಕ್ರಿಯಿಸುತ್ತಿರಲಿಲ್ಲ. ದೇವದಾಸಿಯರಲ್ಲದ ಕೆಲವು ಮಹಿಳೆಯರು, ನಾವು ಅವರಲ್ಲಿ ಹೋದಾಗ ಮಾಹಿತಿ ನೀಡಲು ನಿರಾಕರಿಸಿ, ನಂತರ ಫೋನ್ ಮಾಡೋರು.

ಒಟ್ಟಿನಲ್ಲಿ ಇಡೀ ನನ್ನ ಸಂಶೋಧನೆಯ ಕ್ಷೇತ್ರ ಕಾರ್ಯವು ತುಂಬಾ ವಿಭಿನ್ನ ಅನುಭವಗಳಿಂದ ಕೂಡಿತ್ತು. ಕ್ಷೇತ್ರ ದೊಡ್ಡದಾಗಿದ್ದರಿಂದ ಸಮಯ ಮತ್ತು ಹಣದ ಅಭಾವ ತುಂಬಾ ಕಾಡಿತಾದರೂ, ಆ ಸಂದರ್ಭ ಕಳೆದು ಹೋದ ಮೇಲೆ ಅಲ್ಲಿ ಸಿಕ್ಕ ಜೀವನ, ಬದುಕಿನ ಆಯಾಮಗಳು ಮತ್ತೆಲ್ಲಿ ಸಿಕ್ಕಾವು ಎಂಬ ಭಾವವನ್ನು ಮೂಡಿಸುತ್ತಿವೆ. ಈ ಮಧ್ಯೆ ಇಡೀ ಕ್ಷೇತ್ರಕಾರ್ಯ ಮುಗಿಯುವವರೆಗೆ ಸಮಸ್ಯೆಗಳು ಎದುರಾದಾಗ, ಧೈರ್ಯಗುಂದಿದಾಗ ತುಂಬಾ ಆತ್ಮೀಯವಾಗಿ ಸ್ಪಂದಿಸಿ ದಾರಿ ತೋರಿದವರು ನನ್ನ ಮಾರ್ಗದರ್ಶಕರಾದ ಡಾ. ಎಚ್.ಡಿ. ಪ್ರಶಾಂತ್ ಅವರು ತಾಯಿ ಪ್ರೀತಿ ನೀಡಿದವರು. ಹಾಗೆಯೇ ಹಿತೈಷಿಗಳೂ ಗುರುಗಳಾದ ಡಾ. ಜೋಗನ್ ಶಂಕರ್ ಅವರು, ಡಾ. ಹುಸೇನ್ ಖಾನ್ ಅವರು, ಡಾ. ವಿನೀತಾ ಪೈ ಅವರು, ಡಾ. ಸಿದ್ದಗಂಗಮ್ಮ ಅವರಿಗೂ, ಡಾ. ಮರುಳಸಿದ್ಧಯ್ಯ ಅವರಿಗೂ, ಅಥಣಿಯ ಬಿ.ಎಲ್. ಪಾಟೀಲ್ ಅವರಿಗೂ, ಸ್ನೇಹಿತರಾದ ಟಿ.ಐ.ಎಸ್.ಎಸ್. ಮುಂಬಯಿಯ ಶರಾನ್, ಪಾಪ್ಯುಲೇಶನ್ ರೀಸರ್ಚ ಸೆಂಟರ್‌ನ ಎಚ್.ಆರ್. ಚೆನ್ನಕ್ಕಿ, ಎಫ್.ಪಿ.ಎ.ಐ.ನ ಮಂಜುನಾಥ ಬುಜಣ್ಣವರ ಇವರು ಇಡೀ ಕ್ಷೇತ್ರಕಾರ್ಯದುದ್ದಕ್ಕೂ ನನ್ನ ಜೊತೆಯೇ ಇದ್ದರೆಂಬ ಆತ್ಮೀಯ ಭಾವವನ್ನು ಹಾಗೂ ಬೆಂಬಲವನ್ನು ನೀಡಿದ್ದರು.

## ಉಲ್ಲೇಖಿತ ಗ್ರಂಥಗಳು


೧. ಸಿಮೊನ ದ ಬೊವಾ, (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ. ಪು. ೩೫೨-೩೫೩

೨. ಲೀಲಾ ಸಂಪಿಗೆ, (೨೦೧೪), ಬುದ್ಧನಿಲ್ಲದ ಅಮ್ರಪಾಲಿ, ಚಾರುಮತಿ ಪ್ರಕಾಶನ, ಬೆಂಗಳೂರು. ಪು. ೩೧೩-೩೧೪

೩. ಲೀಲಾ ಸಂಪಿಗೆ, (೨೦೧೪), ಬುದ್ಧನಿಲ್ಲದ ಅಮ್ರಪಾಲಿ, ಚಾರುಮತಿ ಪ್ರಕಾಶನ, ಬೆಂಗಳೂರು, ಪು. ೩೧೬

೪. ರೂಪಾ ಹಾಸನ, (೨೦೧೪), ಲೈಂಗಿಕ ಜೀತ ಅಪರಾಧಿ ಯಾರು?, ಪ್ರಜಾವಾಣಿ, ದಿನಾಂಕ: ೩೦-೦೯-೨೦೧೪, ಬೆಂಗಳೂರು.

೫. ಸಿಮೊನ ದ ಬೊವಾ, (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ. ಪು. ೫

೬. Ruth Dixon-Mueller, (1995), The Sexuality Connection in Reproductive Health,Sondra Zeidenstein and Kirsten Moore, Sexuality, The Population Council And International Women's Health Coalition,New York, Pp. 139-140

೭. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ. ಪು. ೨೭

೮. ಸೆಕ್ಸ್ಯುಯಾಲಿಟಿ ಇನ್‌ಫರ್ಮೇಶನ್ ಆಂಡ್ ಎಜ್ಯುಕೇಶನ್ ಕೌನ್ಸಿಲ್ ಆಫ್ ದಿ ಯುನೈಟೆಡ್ ಸ್ಟೇಟ್ಸ್, ಎಸ್.ಐ.ಇ.ಸಿ.ಯು.ಎಸ್., ೧೯೯೬.

೯. ಶಿವರಾಮ ಕಾರಂತ (೧೯೭೦), ಮೈ ಮನಗಳ ಸುಳಿಯಲ್ಲಿ, ಎಸ್ ಬಿ ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು. ಮುನ್ನುಡಿ.

೧೦. ಶ್ರೀಮತಿ ಎಚ್.ಎಸ್., (೨೦೧೨), ಸ್ತ್ರೀ ವಾದ ತಾತ್ವಿಕತೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ಪು. ೩೩೪

೧೧. ಬಾಲಗೋಪಾಲ ಕೆ., (೧೯೯೮), ಪ್ರಾಚೀನ ಭಾರತದ ಚರಿತ್ರೆ: ಡಿ ಡಿ ಕೋಸಾಂಬಿಯವರ ಚಿಂತನೆಗಳು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೧೨. ಅದೇ ಪು.

೧೩. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ. ಪು. ೩೯

೧೪. ವಿಲ್ ಡ್ಯೂರಾಂಟ್, (೨೦೦೭), ನಮ್ಮ ಪ್ರಾಚ್ಯ ಪರಂಪರೆ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೩೭

೧೫. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ, ಪು. ೨೫೭-೨೫೮

೧೬. ಫ್ರೆಡರಿಕ್ ಎಂಗೆಲ್ಸ್ (೧೯೮೦), ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ, ಮಾಸ್ಕೋ, ಅನುವಾದ, ಕೆ.ಎಲ್ ಗೋಪಾಲಕೃಷ್ಣರಾವ್ ಪು. ೪೭-೧೦೭

೧೭. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ.

೧೮. ಹಿರೇಮಠ, ಎಸ್.ಎಸ್., (೨೦೦೫)ರಲ್ಲಿ ಚಂದ್ರಶೇಖರ್, ಟಿ.ಆರ್., ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು. ೯೪

೧೯. ಮನೋರಂಜಿನಿ (೨೦೦೭), ದಂಧೆ ಮಾಡುವ ಮಹಿಳೆಯರ ಹೋರಾಟ ಅನುಭವ ಕಥನ, ಮಹಿಳಾ ಅಧ್ಯಯನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೫೬-೫೭

೨೦. S.P Pandey, Awadesh Kr.Singh, and Sanjay Kr. Paney., (2008), Rehabilitation of disadvanced Children and Women Sex Workers,Ministery of Women and Child Development , Social Justice and Empowerment, Govt. of India, P. 10

೨೧. ಟಾಟಾ ಇನ್ಸಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ ಇದು ೧೯೯೧ರಲ್ಲಿ ನಡೆಸಿದ 'ರೀ ಹ್ಯಾಬಿಲಿಟೇಶನ್ ಆಫ್ ಚಿಲ್ಡ್ರನ್ ಆಫ್ ಪ್ರಾಸ್ಟಿಟ್ಯೂಟ್ಸ್ ಅ್ಯಂಡ್ ದೇವದಾಸೀಸ್' ಪು. ೪

೨೨. ದಿ ಪಾಯೋನಿಯರ್, ೨೧ ಜುಲೈ, ೧೯೯೭

೨೩. ಡಾ. ಆಪ್ಟೆ, ಮಾನವಶಾಸ್ತ್ರಜ್ಞರು, ಪುಣೆ

೨೪. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ, ಪು. ೩೮-೩೯

೨೫. ವಿಲ್ ಡ್ಯೂರಾಂಟ್ (೨೦೦೭), ನಮ್ಮ ಪ್ರಾಚ್ಯ ಪರಂಪರೆ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೩೫

೨೬. ಕೌಟಲೀಯ ಅರ್ಥಶಾಸ್ತ್ರ (ಕನ್ನಡಕ್ಕೆ ಅನುವಾದ) ಕೂಡಲೀ ಶೃಂಗೇರಿ ಜಗದ್ಗುರು ಮತ್ತು ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು, ೧೯೬೩, ಅಂಕಿತಾ ಪುಸ್ತಕ, ಬೆಂಗಳೂರು, ಪು. ೧೯೪

೨೭. ಚೆನ್ನಕ್ಕ ಎಲಿಗಾರ (೧೯೯೦), ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ, ಪು. ೪೭-೪೮

೨೮. ಅದೇ ಪು. ೫೨-೭೬

೨೯. ವಸು ಮಳಲಿ (೨೦೧೩), ಅವಳ ಪ್ರಶ್ನೆಗಳು, ಅಖಿಲ ಭಾರತ ಜನವಾದಿ ಸಂಘಟನೆ, ಬೆಂಗಳೂರು, (ಸಂ), ವಿಮಲಾ ಕೆ.ಎಸ್., ಮೀನಾಕ್ಷಿ ಬಾಳಿ, ಶಾಂತಾಮಠ, ಪು. ೭೨

೩೦. ಚೆನ್ನಕ್ಕ ಎಲಿಗಾರ (೧೯೯೦), ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ, ಪು. ೫೨

೩೧. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೭೧

೩೨. ಗುರುಮೂರ್ತಿ, ಕೆ.ಜಿ., (೧೯೯೬), ಧರ್ಮ ಮತ್ತು ರಾಜಕೀಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೧೩೪

೩೩. ಶೈಲಜ ಹಿರೇಮಠ (೨೦೧೧), ಹರದೇಶಿ–ನಾಗೇಶಿ, ಕಲೆ ಮತ್ತು ಕಲಾವಿದರು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು. ೯೨

೩೪. ಮೊಗಳ್ಳಿ ಗಣೇಶ್ (೨೦೧೫), ಜಾತಿ ಮೀಮಾಂಶೆ, ಅಭಿನವ ಪ್ರಕಾಶನ, ಬೆಂಗಳೂರು, ಪು. ೨೯೨

೩೫. ಕನಕ್ ಮುಖರ್ಜಿ., (೨೦೧೩), ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ, ಲಡಾಯಿ ಪ್ರಕಾಶನ, ಗದಗ, ಪು. ೪೧

೩೬. Jean D'Cunha., (1989), The legalization of Prostitution, Wordmakers, Bangalore, Pp.160-165

೩೭. ಮನೋರಂಜಿನಿ (೨೦೦೭), ದಂಧೆ ಮಾಡುವ ಮಹಿಳೆಯರ ಹೋರಾಟ ಅನುಭವ ಕಥನ, ಮಹಿಳಾ ಅಧ್ಯಯನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೫೮

೩೮. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ, ಪು.೧೧೯

೩೯. Sumati Karmakar (2001), Red Light Area Social Environment of Sex workers. Pp.74-75

40. Bern (2006), Commercial Sexual Exploitation of Children and Young People in Oliver Razum, hajozeeb, Ulrich laser(Hrsg) Public Health Report of Germany.

41. Anupriyo Malik (2004), Child Sexual Abuse Facts and facets, Social Welfare Magazine, West Bengal.

42. Nicole Lves (2001), Commercial Sexual Exploitation of Children. School of Social Work, University of Pennsylvania, Philadelphia, Pp. 14-48

43. ILO., Commercial Sexual Exploitation of Children and Adolescents.

44. Jayashree and Mohan Murthy., (2009), Prostitution ion in India, Humanitarian Movement Against Child oppression of other Living Exploitation.

45. Pandey S.P., Awadesh Kr.Singh, and Sanjay Kr. Paney., (2008), Rehabilitation of disadvanced Children and Women Sex Workers,Ministery of Women and Child Development, Social Justice and Empowerment, Govt. of India.

46. Gracy Farnadis (2008), Micro Study on Girl Children in Prostitution in Kamatipura in Mumbai, Nirmal Niketan, School of Social Work, Mumbai.

47. Leuren Beth Jacobs (2009), Sexual Exploitation and the Devadasi tradition in So1uthern India, YPEP- Young Professionals in Foreign Policy.

48. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೧೯೬-೨೧೩

49. Jogan Shankar and V.S Manavade., (December1991), Socio-Economic Study on Female Prostitutes and their Children in Bangalore City, Central Social welfare Board, New Delhi, P.137

೫೦. ಲೀಲಾ ಸಂಪಿಗೆ (೨೦೦೪), ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೫೧. ಪ್ರಶಾಂತ್ ಎಚ್.ಡಿ., (೨೦೧೪), ಶಿಕ್ಷಣದ ಹಕ್ಕು ಕಾಯಿದೆ-೨೦೦೯ ಹಕ್ಕಲ್ಲ ಹಕ್ಕಿನ ಪ್ರತೀಕ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಪು. ೨

ಅಧ್ಯಾಯ ಎರಡು

# ಅಧ್ಯಯನ ಕ್ಷೇತ್ರ ಪರಿಚಯ

## ೨.೧ ಪ್ರಸ್ತಾವನೆ

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ಜಿಲ್ಲೆಗಳ ಭೌಗೋಳಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಉತ್ತರ ಕರ್ನಾಟಕದ ಬೆಳಗಾವಿ ವಿಭಾಗದ, ಬಿಜಾಪುರ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳು ಪ್ರಸ್ತುತ ಅಧ್ಯಯನದ ಕ್ಷೇತ್ರಗಳಾಗಿವೆ. ಇಲ್ಲಿ ಬಿಜಾಪೂರ ಜಿಲ್ಲೆಯ ಬಿಜಾಪೂರ ಮತ್ತು ಬಸವನ ಬಾಗೇವಾಡಿ, ಬೆಳಗಾವಿ ಜಿಲ್ಲೆಯ ಅಥಣಿ ಮತ್ತು ರಾಯಭಾಗ ಮತ್ತು ಬಾಗಲಕೋಟೆ ಜಿಲ್ಲೆಯಲ್ಲಿ ಜಮಖಂಡಿ ಮತ್ತು ಮುಧೋಳ ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅವುಗಳ ಸಂಕ್ಷಿಪ್ತ ಪರಿಚಯವನ್ನು ಈ ಮುಂದೆ ಮಾಡಲಾಗಿದೆ. ಇದಕ್ಕೆ ಮೊದಲು ಈ ಮೇಲೆ ತಿಳಿಸಿದ ಜಿಲ್ಲೆಯ ತಾಲೂಕುಗಳನ್ನು ಯಾಕೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಒಂದು ಪ್ರದೇಶದ ಸಾಕ್ಷರತೆ, ಆರ್ಥಿಕತೆ ಮತ್ತು ಆರೋಗ್ಯದ ವಿಚಾರಗಳು ಆ ಪ್ರದೇಶ ಯಾವ ಸ್ಥಿತಿಯಲ್ಲಿ ಇದೆ ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಅಮಾರ್ತ್ಯಸೇನ್ ಅವರು ಹೇಳುವಂತೆ, "ವರಮಾನಕ್ಕೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಉಪಕರಣವಾದಿ ಮಹತ್ವ ಇದೆ. ಅದಕ್ಕೆ ಅಂತಸ್ಥವಾದಿ ಮಹತ್ವ ಇಲ್ಲ. ವರಮಾನದ ಪ್ರಮಾಣದ ಏರಿಕೆ ಅಥವಾ ಅದರ ಬೆಳವಣಿಗೆಯ ಗತಿಯೇ ಉತ್ತಮ ಬದುಕಾಗಲು ಸಾಧ್ಯವಿಲ್ಲ. ಅಕ್ಷರ, ಆರೋಗ್ಯ, ಆಯಸ್ಸು, ಆಸರೆ, ಆಹಾರ ಮತ್ತು ಸ್ವಾತಂತ್ರ್ಯ ಸ್ವಾಭಿಮಾನ, ಸಹಭಾಗಿತ್ವ, ಸಮಾನತೆ, ಸುಸ್ಥಿರಗತಿ, ಮುಂತಾದವು ಕೇವಲ ಉಪಕರಣಗಳಾಗಿ ಮಾತ್ರ ಮಹತ್ವವಲ್ಲ. ಅವು ಅಭಿವೃದ್ಧಿಯ ಉತ್ತಮ ಬದುಕಿನ ಅಂತಸ್ಥ ಗುಣಗಳಾಗಿವೆ. ಸೇನ್ ಅವರ ಪ್ರಕಾರ, ಆರೋಗ್ಯದಿಂದ ಇರುವುದೇ ಅಭಿವೃದ್ಧಿ, ಹಸಿವಿನ ಹಾಹಾಕಾರದಿಂದ ಮುಕ್ತರಾಗಿರುವುದೇ ಅಭಿವೃದ್ಧಿ, ಅಕ್ಷರಸ್ಥರಾಗಿರುವುದೇ ಅಭಿವೃದ್ಧಿ, ಸ್ವಾತಂತ್ರ್ಯವೇ ಅಭಿವೃದ್ಧಿ"(ಚಂದ್ರಶೇಖರ್, ಟಿ.ಆರ್, ೧೯೯೮) ಹಾಗೆ ನೋಡಿದಾಗ ಬಿಜಾಪೂರ ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳು ಸಮಗ್ರವಾಗಿ ಮುಂದುವರೆದ ಜಿಲ್ಲೆಗಳಲ್ಲ ಎಂಬುದು ಆ ಜಿಲ್ಲೆಗಳ ಮಾನವ ಅಭಿವೃದ್ಧಿ ಸೂಚ್ಯಾಂಕವನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ.

ರಾಜ್ಯದ ೨೭ ಜಿಲ್ಲೆಗಳ ಅಭಿವೃದ್ಧಿಯನ್ನು ಆಧಾರವಾಗಿಟ್ಟುಕೊಂಡು ಮಾಡಿದ ವರ್ಗೀಕರಣವನ್ನು ಈ ಕೆಳಗಿನ ವೃತ್ತಚಿತ್ರ ಮತ್ತು ಕೋಷ್ಟಕದಿಂದ ಗಮನಿಸಬಹುದು.

**ವೃತ್ತಚಿತ್ರ ೨.೧. ಮಾನವ ಅಭಿವೃದ್ಧಿ ಸೂಚ್ಯಾಂಕ**




ಇಲ್ಲಿ ಕಾಣುವಂತೆ ಬೆಳಗಾವಿ ಜಿಲ್ಲೆಯು ಅಧ್ಯಯನಕ್ಕೊಳಪಡಿಸಿದ ಮೂರೂ ಜಿಲ್ಲೆಗಳಲ್ಲಿ ಅತೀ ಹೆಚ್ಚು ಸೂಚ್ಯಾಂಕಗಳನ್ನು ಹೊಂದಿ ರಾಜ್ಯದಲ್ಲಿ ೮ನೇ ಸ್ಥಾನ ಪಡೆದಿದ್ದರೆ, ಅಧ್ಯಯನದ ಜಿಲ್ಲೆಗಳಲ್ಲಿ ಮೊದಲ ಸ್ಥಾನದಲ್ಲಿದೆ. ಬಾಗಲಕೋಟೆ ೨೨ನೇ ಸ್ಥಾನ ಮತ್ತು ಬಿಜಾಪೂರ ೨೩ನೇ ಸ್ಥಾನದಲ್ಲಿದೆ.

**ಕೋಷ್ಟಕ ೨.೧. ಮಾನವ ಅಭಿವೃದ್ಧಿ ಸೂಚ್ಯಾಂಕ**

| ಅ.ಸ. | ತಾಲೂಕು | ಆರೋಗ್ಯ | | ಶಿಕ್ಷಣ | | ಜೀವನ ಮಟ್ಟ | |
|---|---|---|---|---|---|---|---|
| | | ಸೂಚ್ಯಾಂಕ | ಶ್ರೇಣಿ | ಸೂಚ್ಯಾಂಕ | ಶ್ರೇಣಿ | ಸೂಚ್ಯಾಂಕ | ಶ್ರೇಣಿ |
| ೧ | ಬಿಜಾಪುರ | ೦.೬೨೭ | ೨೪ | ೦.೬೪೨ | ೨೧ | ೦.೪೯೯ | ೨೩ |
| ೨ | ಬೆಳಗಾವಿ | ೦.೭೧೨ | ೨ | ೦.೬೯೯ | ೧೫ | ೦.೫೩೨ | ೧೩ |
| ೩ | ಬಾಗಲಕೋಟೆ | ೦.೫೯೭ | ೨೭ | ೦.೬೩೬ | ೨೨ | ೦.೫೩೯ | ೧೨ |

ಮೇಲಿನ ಕೋಷ್ಟಕದಲ್ಲಿ ಮಾನವ ಅಭಿವೃದ್ಧಿಯ ಸೂಚ್ಯಾಂಕ ಸೂಚಿಸುವ ಸೂಚ್ಯಾಂಕಗಳಾದ ಜೀವನಮಟ್ಟ(ವರಮಾನ) ಆರೋಗ್ಯ ಮತ್ತು ಶೈಕ್ಷಣಿಕ ಸೂಚ್ಯಾಂಕಗಳನ್ನು ಅವಲೋಕಿಸಿದಾಗ, ಬೆಳಗಾವಿ ಜಿಲ್ಲೆಯು ಆರ್ಥಿಕ ಅಭಿವೃದ್ಧಿಯಲ್ಲಿ ಕೆಳಮಟ್ಟದಲ್ಲಿದ್ದರೂ ಆರೋಗ್ಯ ಮತ್ತು ಶಿಕ್ಷಣದಲ್ಲಿ ಅಭಿವೃದ್ಧಿ ಹೊಂದಿದೆ. ಬಾಗಲಕೋಟೆ ಜಿಲ್ಲೆಯೂ ಆರ್ಥಿಕವಾಗಿ ಅಭಿವೃದ್ಧಿಯಲ್ಲಿ ರಾಜ್ಯದಲ್ಲಿ ೧೨ನೇ ಶ್ರೇಣಿ ಮತ್ತು ಮೂರೂ ಜಿಲ್ಲೆಗಳಲ್ಲಿ ಮೊದಲ ಸ್ಥಾನವನ್ನು ಹೊಂದಿದ್ದು, ಶಿಕ್ಷಣ ಮತ್ತು ಆರೋಗ್ಯದಲ್ಲಿ ಅತೀ ಹಿಂದುಳಿದ ಜಿಲ್ಲೆಯಾಗಿ ಕಂಡುಬರುತ್ತದೆ. ಬಿಜಾಪೂರ ಜಿಲ್ಲೆಯನ್ನು ಗಮನಿಸಿದಾಗ ಮುರೂ ಸೂಚ್ಯಾಂಕ ಗಳಲ್ಲಿಯೂ ಅತ್ಯಂತ ಹಿಂದುಳಿದದ್ದು ಕಂಡುಬರುತ್ತಿದೆ. ಡಿ.ಎಂ. ನಂಜುಡಪ್ಪ ಸಮಿತಿ ವರದಿ ಪ್ರಕಾರ

ಬೆಳಗಾವಿ ವಿಭಾಗದಲ್ಲಿ ಒಟ್ಟು ೫ ಹಿಂದುಳಿದ ತಾಲೂಕುಗಳಿವೆ. ಅವುಗಳಲ್ಲಿ ೪ ತಾಲೂಕುಗಳು ಬಿಜಾಪೂರ ಮತ್ತು ಒಂದು ತಾಲೂಕು ಬಾಗಲಕೋಟೆ ಜಿಲ್ಲೆಗೆ ಸೇರಿದೆ.

ಬಿಜಾಪೂರ ಜಿಲ್ಲೆಯನ್ನು ವಿಶೇಷವಾಗಿ ಗಮನಿಸಿದಾಗ ಅದು ೧೯೯೭ಕ್ಕಿಂತಲೂ ಮೊದಲು ೧೧ ತಾಲೂಕುಗಳನ್ನೊಳಗೊಂಡಿದ್ದ, ರಾಜ್ಯದ ಅತಿ ದೊಡ್ಡ ಜಿಲ್ಲೆಯಾಗಿತ್ತು. ಆದರೆ ವಿಭಜನೆಯ ಸಂದರ್ಭದಲ್ಲಿ ಸಮೃದ್ಧವಾದ ಜಲ ಸಂಪನ್ಮೂಲ, ಖನಿಜ ಸಂಪನ್ಮೂಲ, ನದಿ ಸಂಪನ್ಮೂಲ, ಕೈಗಾರಿಕೆಗಳು ಇದ್ದ ಎಲ್ಲ ಪ್ರದೇಶವೂ ಬಾಗಲಕೋಟೆ ಜಿಲ್ಲೆಗೆ ಸೇರಿತು. ಹೀಗಾಗಿ ಇಲ್ಲಿ ಉಂಟಾದ ಪ್ರಾದೇಶಿಕ ಅಸಮತೋಲನವು ಕೂಡ ಬಿಜಾಪುರ ಜಿಲ್ಲೆಯ ಹಿಂದುಳಿಯುವಿಕೆಯಲ್ಲಿ ಪಾತ್ರ ವಹಿಸುತ್ತದೆ ಎನ್ನಬಹುದು. ಒಟ್ಟಿನಲ್ಲಿ ಕೋಷ್ಟಕ ೧ರಲ್ಲಿ ತೋರಿಸುವಂತೆ ಒಟ್ಟು ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ಬೆಳಗಾವಿ ಜಿಲ್ಲೆಯು ರಾಜ್ಯದಲ್ಲಿ ೮ನೇ ಸ್ಥಾನದಲ್ಲಿ, ಬಾಗಲಕೋಟೆಯು ೨೨ನೇ ಸ್ಥಾನದಲ್ಲಿ, ಬಿಜಾಪೂರ ಜಿಲ್ಲೆಯು ೨೩ನೆ ಸ್ಥಾನದಲ್ಲಿ ಇರುವುದು ಕಂಡು ಬರುತ್ತದೆ. ಈ ಜಿಲ್ಲೆಗಳು ಇಂಥ ದುಸ್ಥಿತಿಯಲ್ಲಿರಲು ಕಾರಣಗಳು ಇಲ್ಲದಿಲ್ಲ. ಅದನ್ನು ಕಂಡುಕೊಳ್ಳಲು ಮೂರೂ ಜಿಲ್ಲೆಗಳ ಭೌಗೋಳಿಕ, ಚಾರಿತ್ರಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯನ್ನು ತುಲನಾತ್ಮಕವಾಗಿ ಅವಲೋಕಿಸುವುದು ಅಗತ್ಯವಿದೆ.

ಪ್ರಸ್ತುತ ಅಧ್ಯಯನವು ಅಲಕ್ಷಿತ ಸಮುದಾಯದ ಅಪ್ರಾಪ್ತ ಹೆಣ್ಣುಮಕ್ಕಳ ಮೇಲೆ ನಡೆದ ಮತ್ತು ನಡೆಯುತ್ತಿರುವ ಲೈಂಗಿಕ ಜೀತದ ಕುರಿತಾಗಿ ಇರುವುದರಿಂದ, ಆ ವಿಷಯವನ್ನು ಗಮನದಲ್ಲಿ ಇಟ್ಟುಕೊಂಡು ಅಧ್ಯಯನ ಕ್ಷೇತ್ರದ ಪರಿಸರದಲ್ಲಿದ್ದ ಒತ್ತಡಗಳನ್ನು ಅರ್ಥಮಾಡಿಕೊಳ್ಳಲು, ಅದರ ಪೂರ್ವದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಅವಲೋಕಿಸುವುದು ಅವಶ್ಯವಾಗಿದೆ. ಹಾಗಾಗಿ ಈಗಾಗಲೇ ಈ ಪ್ರದೇಶಗಳ ಕುರಿತು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿದ, ಜೋಗನ್ ಶಂಕರ್ ಅವರ 'ದೇವದಾಸಿ ಸಂಪ್ರದಾಯ', ಟಿ ಆರ್ ಚಂದ್ರಶೇಖರ್ ಅವರ 'ವಿಜಾಪೂರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ', ಎಚ್ ಡಿ ಪ್ರಶಾಂತ್ ಮತ್ತು ಸಂಗಡಿಗರು ಅನುವಾದಿಸಿದ(ಇಂಗ್ಲೀಷ ಮೂಲ ಎ.ಆರ್.ವಾಸವಿ) 'ಸಾಮಾಜಿಕ ಆಕಾರರೇಖೆ', ಮಾಸ್ ಸಂಸ್ಥೆ, ಘಟಪ್ರಭಾದ 'ಹೀಗೊಂದು ಪಯಣ', ಜೇನ್ ಡಿಚೋನಾ ಅವರ 'ದಿ ಲೀಗಲೈಜೇಶನ್ ಆಫ್ ಪ್ರಾಸ್ಟಿಟ್ಯೂಶನ್', ಪುಸ್ತಕಗಳಲ್ಲಿಯ ವಿಚಾರಗಳು ಹಾಗೂ ಜಿಲ್ಲಾ ಅಭಿವೃದ್ಧಿ ವರದಿಗಳು, ಜಿಲ್ಲಾ ಅಂಕಿ ಸಂಖ್ಯೆಗಳ ನೋಟ ಮತ್ತು ಕರ್ನಾಟಕ ಮಾನವ ಅಭಿವೃದ್ಧಿ ವರದಿಗಳ, ಮೂಲಕ ಅಧ್ಯಯನ ಕ್ಷೇತ್ರಗಳ ಸ್ಥಿತಿಯನ್ನು ಇಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

## ೨.೨. ಬಿಜಾಪೂರ ಜಿಲ್ಲೆ

### ೨..೨/೧ ಚಾರಿತ್ರಿಕ

ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿರುವ ಬಿಜಾಪುರ ಜಿಲ್ಲೆಯು ಐತಿಹಾಸಿಕವಾಗಿ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಆದಿಲ್‌ಶಾಹಿ ಮನೆತನದವರು ಬಿಜಾಪುರ ನಗರವನ್ನು ರಾಜಧಾನಿಯನ್ನಾಗಿ

ನಕ್ಷೆ: ೧

## ಕರ್ನಾಟಕ ರಾಜ್ಯದ ಜಿಲ್ಲೆಗಳು

ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳು

ಬೀದರ
ಗುಲಬರ್ಗಾ
ಬಿಜಾಪುರ
ಯಾದಗಿರಿ
ಬಾಗಲಕೋಟೆ
ಬೆಳಗಾವಿ
ರಾಯಚೂರು
ಕೊಪ್ಪಳ
ಗದಗ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಚಿಕ್ಕಬಳ್ಳಾಪುರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಬೆಂಗಳೂರು ಗ್ರಾಮಾಂತರ
ಕೋಲಾರ
ಬೆಂಗಳೂರು ನಗರ
ಹಾಸನ
ದಕ್ಷಿಣಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ

ಮಾಡಿ ೧೫ ರಿಂದ ೧೬ನೇ ಶತಮಾನದವರೆಗೆ ಆಳಿದ್ದಾರೆ. ಸಮಾಜ ಸುಧಾರಕ ಶ್ರೀ ಬಸವೇಶ್ವರರು ಇದೇ ಜಿಲ್ಲೆಯ ಬಸವನ ಬಾಗೇವಾಡಿಯಲ್ಲಿ ಜನ್ಮ ತಾಳಿದ್ದಾರೆ. ಜಗತ್ಪ್ರಸಿದ್ಧವಾದ ಗೋಳಗುಮ್ಮಟ, ಇಬ್ರಾಹಿಂ ರೋಜಾ, ಮುಲಕ್ ಮೈದಾನ ತೋಪ್‌ಗಳು ನಗರದಲ್ಲಿವೆ. ಹಾಗೆಯೇ ಕೃಷ್ಣಾ ನದಿಗೆ ಅಡ್ಡಲಾಗಿ ಕಟ್ಟಿರುವ ಬೃಹತ್ ಆಲಮಟ್ಟಿ ಆಣೆಕಟ್ಟು ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿದೆ. ಬೃಹತ್ ಜಿಲ್ಲೆಯನ್ನು ೧೯೯೭ರಲ್ಲಿ ವಿಂಗಡಿಸಿ ಬಾಗಲಕೋಟೆ ಮತ್ತು ಬಿಜಾಪೂರ ಜಿಲ್ಲೆಗಳನ್ನಾಗಿ ಅಸ್ತಿತ್ವಕ್ಕೆ ತರಲಾಗಿದೆ. ಈ ಜಿಲ್ಲೆಯಲ್ಲಿ ೧) ಬಸವನ ಬಾಗೇವಾಡಿ, ೨) ಬಿಜಾಪುರ, ೩) ಇಂಡಿ, ೪) ಮುದ್ದೇಬಿಹಾಳ, ೫) ಸಿಂದಗಿ ಹೀಗೆ ೫ ತಾಲೂಕುಗಳು ಇರುತ್ತವೆ.

ಈ ಅಧ್ಯಯನವನ್ನು ನಾವು ೧. ಬಸವೇಶ್ವರರ ಕಾಲಘಟ್ಟದ ಬಿಜಾಪೂರ ೨. ವಸಾಹತುಪೂರ್ವ ಬಿಜಾಪೂರ ೩. ವಸಾಹತು ನಂತರದ ಬಿಜಾಪೂರ ೪. ಬರಗಾಲದ ಬಿಜಾಪೂರ ಎಂದು ವಿಂಗಡಿಸಿ ಅಧ್ಯಯನ ಮಾಡಬಹುದು.

**೨.೨/೧.೧ ಬಸವೇಶ್ವರರ ಕಾಲಘಟ್ಟದ ಬಿಜಾಪೂರ:** ೧೨ನೇ ಶತಮಾನದಲ್ಲಿ ಸಮಾಜದಲ್ಲಿ ಬೇರೂರಿದ್ದ ಜಾತಿಪದ್ಧತಿ, ಅಸ್ಪೃಶ್ಯತೆ ಮೂಡನಂಬಿಕೆಗಳನ್ನು ಹೊಡೆದೋಡಿಸಲು ತಮ್ಮ ಇಡೀ ಜೀವಮಾನವನ್ನೇ ಮುಡಿಪಾಗಿಟ್ಟು ಹೋರಾಡಿದ ಬಸವಣ್ಣ ಹುಟ್ಟಿದ್ದು ಇದೆ ಬಿಜಾಪೂರ ಜಿಲ್ಲೆಯ ಬಸವನ ಬಾಗೆವಾಡಿಯಲ್ಲಿ. ಇಡೀ ಉತ್ತರ ಕರ್ನಾಟಕ ಅವರ ಕಾಯಕ ಕ್ಷೇತ್ರವಾಗಿತ್ತು. ಅವರು ಮಾಡಿದ ಕೆಲಸಗಳನ್ನು ಗಮನಿಸಿದರೆ, ಅಂದಿನ ಬಿಜಾಪೂರದ ಮತ್ತು ಉತ್ತರ ಕರ್ನಾಟಕದ ಸಾಮಾಜಿಕ ಪರಿಸ್ಥಿತಿ ಚೆನ್ನಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಸಮಾಜದಲ್ಲಿರುವ ವರ್ಗ ತಾರತಮ್ಯವನ್ನು ಅಳಿಸಿ ಹಾಕಲು ಅಂತರ್ಜಾತೀಯ ವಿವಾಹಗಳನ್ನು ಪ್ರೋತ್ಸಾಹಿಸಿದರು. ಅಲ್ಲಮಪ್ರಭುಗಳ, ಅಧ್ಯಕ್ಷತೆಯಲ್ಲಿ ನಡೆಸುತ್ತಿದ್ದ ಮಹಾಮನೆಯಲ್ಲಿ ಎಲ್ಲ ಜಾತಿಯ ಜನರೂ ಒಂದಾಗಿ ಸಮಾಜಮುಖಿ ಚಟುವಟಿಕೆಗಳನ್ನು ಮಾಡುತ್ತಿದ್ದರು. ಮಹಿಳೆಯರ ಶಿಕ್ಷಣ, ಸಮಾನತೆ, ಸ್ವಾತಂತ್ರ್ಯಗಳ ಕುರಿತು ಕ್ರಾಂತಿಕಾರಕ ಹೋರಾಟ ಚರ್ಚೆಗಳನ್ನು ಮಾಡಿದರು. ಸೂಳೆ ಸಂಕವ್ವೆಯೂ ಸಹ ತನ್ನ ವೃತ್ತಿಯನ್ನು ತೊರೆದು, ಮಹಾಮನೆಯ ಸದಸ್ಯೆಯಾಗಿ ವಚನಗಳ ಸೃಷ್ಟಿ ಮಾಡಿದ ಇತಿಹಾಸವಿದೆ. ಆದರೆ ಬಸವಣ್ಣನ ಈ ಸಮಾಜಮುಖಿ ಕೆಲಸವನ್ನು ಸಹಿಸದ ಕೆಲವರ ಕುತಂತ್ರಕ್ಕೆ ಮಹಾಮನೆಯೇ ಬಲಿಯಾಯಿತು. ಇದು ಅಂದಿನ ಬಿಜಾಪೂರ ಜಿಲ್ಲೆಯ ಮತ್ತು ಉತ್ತರ ಕರ್ನಾಟಕದ ವಾಸ್ತವ ಸಾಮಾಜಿಕ ಸ್ಥಿತಿಯಾಗಿತ್ತು. ಅಂದರೆ ರಾಜ್ಯದಲ್ಲಿ ಅಸ್ಪೃಶ್ಯತೆ, ಜಾತಿ ಆಚರಣೆ, ಮೂಢನಂಬಿಕೆಗಳು ತಮ್ಮದೇ ಪರಿಣಾಮವನ್ನು ಬೀರುತ್ತಿದ್ದವು ಎಂಬುದು ಅರ್ಥವಾಗುತ್ತದೆ.

**೨.೨/೧.೨. ವಸಾಹತು ಪೂರ್ವ ಬಿಜಾಪುರ:** ಬಿಜಾಪೂರ ಜಿಲ್ಲೆಯು ೧೭, ೧೮ ಮತ್ತು ೧೯ನೇಯ ಶತಮಾನಗಳಲ್ಲಿ ಮೊಗಲರು, ಹೈದರಾಬಾದಿನ ನಿಜಾಮ, ಮೈಸೂರಿನ ಹೈದರಾಲಿ–ಟಿಪ್ಪು ಸುಲ್ತಾನ, ಮರಾಠರು ಮತ್ತು ಬ್ರಿಟಿಷರ ಮುಂತಾದವರ ಆಕ್ರಮಣ ಪ್ರದೇಶವಾಗಿತ್ತು. ಈ ಆಕ್ರಮಣ, ಯುದ್ಧ, ಪಾಳೆಗಾರಿಕೆಗಳಿಂದಾಗಿ, ಜನರ ಬದುಕು ದಿಕ್ಕು ತಪ್ಪಿತ್ತು. ಮೇಲಿಂದ ಮೇಲೆ ನಡೆಯುವ

ಯುದ್ಧಗಳಿಂದ, ರಾಜ್ಯ ವಿಧಿಸುವ ತೆರಿಗೆಗಳಿಂದ, ಲೂಟಿಗಳಿಂದ, ಮೇಲಿಂದ ಮೇಲೆ ಸಂಭವಿಸುತ್ತಿದ್ದ ಬರಗಾಲ ಮತ್ತು ಪ್ಲೇಗು ರೋಗದಿಂದ ಜನರು ತತ್ತರಿಸಿ ಹೋಗಿದ್ದರು(ಟಿ. ಆರ್. ಚಂದ್ರಶೇಖರ್).[೨] ಈ ಕುರಿತು ಅಮರೇಶ್ ನುಗಡೋಣಿಯವರು ಬರೆಯುವ ಮಾತುಗಳನ್ನು ಟಿ. ಆರ್. ಚಂದ್ರಶೇಖರ್ ತಮ್ಮ ಪುಸ್ತಕದಲ್ಲಿ ಹೀಗೆ ಉಲ್ಲೇಖಿಸುತ್ತಾರೆ. "ಆದಿಲ್‌ಶಾಹಿಗಳ ವಿಜಾಪೂರವು ೧೬೮೬ರಲ್ಲಿ ಮೊಗಲರ ವಶವಾಯಿತು. ಮೊಗಲರ ದೊರೆ ಔರಂಗಜೇಬನು ದಖನ್ ಮೇಲೆ ದಾಳಿ ಮಾಡಿ ಆದಿಲ್‌ಶಾಹಿಗಳ ಸಾಮ್ರಾಜ್ಯವನ್ನು ಕೊನೆಗೊಳಿಸಿದನು. ಆದರೆ ಈ ಪ್ರದೇಶದಲ್ಲಿ ನೆಲೆ ನಿಂತು ಆಳ್ವಿಕೆ ನಡೆಸುವುದು ಔರಂಗಜೇಬನಿಗೆ ಸಾಧ್ಯವಿರಲಿಲ್ಲ. ಈ ಪ್ರದೇಶವು ಅಂದು ಮರಾಠರ ಹಾವಳಿಯಿಂದ ತತ್ತರಿಸತೊಡಗಿತ್ತು. ಔರಂಗಜೇಬನಿಂದಲೂ ಮರಾಠರ ಹಾವಳಿಯನ್ನು ನಿಲ್ಲಿಸಲಾಗಲಿಲ್ಲ. ೧೭ನೇ ಶತಮಾನ ಮುಗಿಯುತ್ತಿದ್ದಂತೆಯೇ ಅರಾಜಕತೆ ಉಲ್ಬಣಿಸಿತು. ನೆಲೆ ನಿಂತು ಆಳುವ ಪ್ರಭುತ್ವಗಳಿರಲಿಲ್ಲ. ದಾಳಿಗಳ ಮೇಲೆ ದಾಳಿ ನಡೆದವು. ಜೊತೆಗೆ ಬರಗಾಲ ಹಾಗು ಪ್ಲೇಗು ಒಟ್ಟಿಗೆ ಬಂದು ಇಡೀ ಪ್ರಾಂತ್ಯವು ದುಸ್ಥಿತಿಗೆ ಈಡಾಯಿತು. ವಿಜಾಪೂರ ನಗರವು ಪಾಳು ಬೀಳುವಂತಾಯಿತು. ವ್ಯಾಪಾರ, ವಹಿವಾಟು ನಿರ್ಲಕ್ಷ್ಯಕ್ಕೆ ಗುರಿಯಾದವು"[೩] ಹೀಗೆ ಬಿಜಾಪೂರ ೧೮೧೮ರಲ್ಲಿ ಬ್ರಿಟಿಷರ ವಶವಾಗುವವರೆಗೆ ಸಮಾಜದಲ್ಲಿ ಸ್ಥಿರತೆ ಇರಲಿಲ್ಲ. ಜನರಿಗೆ ಭದ್ರತೆ ಇರಲಿಲ್ಲ. ಹೀಗೆ ಬಿಜಾಪೂರದ ಜನ ಯಾವ ರೀತಿಯ ನೋವನ್ನು ಅನುಭವಿಸಿದರೆಂಬುದನ್ನು ಬಿಜಾಪೂರ ಜಿಲ್ಲಾ ಗೆಜೆಟಿಯರ್‌ದಲ್ಲಿ ಉಲ್ಲೇಖಿಸಿದ್ದನ್ನು ಟಿ ಆರ್ ಚಂದ್ರಶೇಖರ್ ಈ ರೀತಿ ಬರೆಯುತ್ತಾರೆ "೧೭೯೦–೯೧ರಲ್ಲಿ ಮತ್ತೊಮ್ಮೆ ಬರಗಾಲಕ್ಕೆ ತುತ್ತಾದ ವಿಜಾಪುರ ಪ್ರದೇಶವು ಅಶಾಂತಿಯ ಆಗರವಾಗಿತ್ತು. ಮರಾಠ ಪೇಶ್ವೆಗಳು ೧೭೯೫ರಲ್ಲಿ ಹೈದರಾಬಾದ್ ನಿಜಾಮನನ್ನು ಸೋಲಿಸಿ ಹುನಗುಂದ ಪ್ರದೇಶವನ್ನು ವಶಪಡಿಸಿಕೊಂಡರು. ಮರಾಠರ ಅಧೀನಕ್ಕೆ ಒಳಪಟ್ಟ ಇದು ಅವರ ತೆರಿಗೆ ಭಾರಕ್ಕೆ ಕುಸಿಯಿತು. ತೆರಿಗೆಯ ಹೊಡೆತಕ್ಕೆ ಹೆದರಿ ರೈತರು ಗುಳೆ ಹೋದರು...".[೪] ಇಂತ ಅಭದ್ರತೆಯ ವಾತಾವರಣದಲ್ಲಿ ೧೮೧೮ರಲ್ಲಿ ಬ್ರಿಟಿಷರು ಬಿಜಾಪೂರವನ್ನು ವಶಪಡಿಸಿಕೊಂಡರು.

**೨.೨/೧.೩ ವಸಾಹತು ನಂತರದ ಬಿಜಾಪುರ:** ಬ್ರಿಟಿಷರ ನೇರ ಆಳ್ವಿಕೆಯಲ್ಲಿದ್ದ ಬಿಜಾಪೂರ ಬಾಂಬೆ ಪ್ರಾಂತ್ಯದ ಭಾಗವಾಗಿತ್ತು. ಇದರ ಜೊತೆಗೆ ಅವಿಭಜಿತ ಧಾರವಾಡ ಜಿಲ್ಲೆ, ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಬಾಂಬೆ ಪ್ರಾಂತ್ಯದ ಭಾಗಗಳಾಗಿದ್ದವು. ಈ ಬಗೆಯ ಚಾರಿತ್ರಿಕ ಹಿನ್ನೆಲೆಯ ಕಾರಣಗಳಿಗಾಗಿಯೇ ಇಂದಿಗೂ ಈ ನಾಲ್ಕು ಜಿಲ್ಲೆಗಳನ್ನು ಒಳಗೊಂಡ ಪ್ರದೇಶವನ್ನು 'ಬಾಂಬೆ ಕರ್ನಾಟಕ' ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಅನೇಕ ಆಡಳಿತ ಬದಲಾವಣೆಗಳಿಗೆ ಒಳಗಾದ ಬಿಜಾಪೂರದ ಗಡಿರೇಖೆಗಳೂ ಬದಲಾದವು. ಮರಾಠಿ ಭಾಷೆಯನ್ನು ಆಡಳಿತ ಭಾಷೆಯಾಗಿ ಜನರ ಮೇಲೆ ಹೇರಲಾಯಿತು. ಇರುವ ವ್ಯಾಪಾರ, ಬರಗಾಲ, ಪ್ಲೇಗು ಸಮಸ್ಯೆಗಳೊಂದಿಗೆ ಆಡಳಿತ ಮತ್ತು ಭಾಷೆಗಳೂ ಸಹ ಜನರನ್ನ ಅಧೋಗತಿಗಿಳಿಸಿದವು. ಇದರಿಂದಾಗಿ ಅಭಿವೃದ್ಧಿಗೆ ಇಲ್ಲಿ ಅವಕಾಶವೇ ಇರಲಿಲ್ಲ. ಈ ಮೊದಲು ಅಲ್ಲಿ ಅಸ್ತಿತ್ವದಲ್ಲಿದ್ದ ಸಂಸ್ಥಾನಗಳಲ್ಲಿ ಪೇಶ್ವೆಗಳನ್ನೇ ಅಧಿಕಾರಕ್ಕೆ ಕೂಡಿಸಿದರು. ಹೀಗಾಗಿ ಕನ್ನಡ ಪ್ರದೇಶಗಳಲ್ಲಿದ್ದ ಜನರೂ ಸಹ ಅನಿವಾರ್ಯವಾಗಿ ಮರಾಠಿ ಭಾಷೆ, ಸಾಮಾಜಿಕತೆ ಮತ್ತು ಸಂಸ್ಕೃತಿಗೆ ಒಳಗೊಳ್ಳಬೇಕಾಯಿತು.

೧೮೬೪ರಲ್ಲಿ ಆಡಳಿತ ನಡೆಸುತ್ತಿದ್ದ ಬ್ರಿಟಿಷ ಸರಕಾರ 'ದಿ ಕಾಂಟೇಜಿಯಸ್ ಡಿಸೀಜಸ್ ಆ್ಯಕ್ಟ್'ನ್ನು ಆಮದು ಮಾಡಿಕೊಂಡಿತು. ಇದರ ಮುಖ್ಯ ಉದ್ದೇಶಗಳೆಂದರೆ, ಭಾರತದಲ್ಲಿ ಬ್ರಿಟಿಷ್ ಸೈನಿಕರ ಆರೋಗ್ಯವನ್ನು ಕಾಯ್ದುಕೊಳ್ಳುವುದು ಮತ್ತು ಭಾರತೀಯ ಸೈನಿಕರ ಸಾಮರ್ಥ್ಯತೆಯನ್ನು ಕಾಯ್ದುಕೊಳ್ಳುವುದು, ಈಗಾಗಲೇ ಸಾಂಸರ್ಗಿಕ ರೋಗಕ್ಕೆ ತುತ್ತಾದವರಿಂದ ಮುಂದಿನ ಪೀಳಿಗೆ ಬಲಿಯಾಗದಂತೆ ತಡೆಗಟ್ಟುವುದು, ಇದರಿಂದ ಮುಂದಿನ ಪೀಳಿಗೆಯ ದೈಹಿಕತೆ ಕ್ಷೀಣಿಸದಂತೆ ತಡೆಗಟ್ಟುವುದು ಈ ಕಾಯ್ದೆಯ ಅನುಷ್ಠಾನದ ಉದ್ದೇಶಗಳಾಗಿದ್ದವು. ಈ ಕಾಯ್ದೆಯು ಮಾನವೀಯತೆ ಮತ್ತು ಜನಹಿತಕ್ಕಿಂತಲೂ ಹೆಚ್ಚು ಆರ್ಥಿಕತೆಯ ತತ್ವವನ್ನು ಒಳಗೊಂಡಿತ್ತು. ರಾಜ್ಯವು ಸೈನಿಕರು ವಿವಾಹವಾಗುವುದನ್ನು ನಿರ್ಬಂಧಿಸಿತ್ತು. ಆದರೆ ಲೈಂಗಿಕತೆಯ ಸಹಜ ಬೇಡಿಕೆಯು ತಳ್ಳಿಹಾಕಲಾರದಷ್ಟು ವ್ಯಾಪಕವಾಗಿತ್ತು. ಆದ್ದರಿಂದ ಸೈನಿಕರು ತಮ್ಮ ಆರೋಗ್ಯ ಮತ್ತು ಸಾಮರ್ಥ್ಯವನ್ನು ಹಾಳುಮಾಡಿಕೊಳ್ಳದಂತೆ, ಸರ್ಕಾರವೇ ಅವರ ಲೈಂಗಿಕ ಬೇಡಿಕೆಯನ್ನು ತೃಪ್ತಿ ಪಡಿಸುವುದಕದಕ್ಕಾಗಿ ನ್ಯಾಯ ವಿರುದ್ಧವಾದ ವ್ಯವಸ್ಥೆಯನ್ನು ಈ ಮೂಲಕ ಮಾಡಿತು. ಈ ನಿರ್ಧಾರ ಮತ್ತು ವ್ಯವಸ್ಥೆಯು ನೇರವಾಗಿ ವೇಶ್ಯಾವಾಟಿಕೆಗಾಗಿ ಮಹಿಳೆಯರು ಮತ್ತು ಹೆಣ್ಣುಮಕ್ಕಳನ್ನು ಶೋಷಿಸುವ ಪ್ರಕ್ರಿಯೆಗೆ ನಾಂದಿ ಹಾಡಿತು. ಬಿಜಾಪೂರ ಬೆಳಗಾವಿ ಮತ್ತು ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಸುಮಾರು ಕಾಲಗಳ ಹಿಂದಿನಿಂದ ನಡೆದು ಕೊಂಡು ಬಂದಿದ್ದ ಸಾಂಪ್ರದಾಯಿಕ ದೇವದಾಸಿ ಪದ್ಧತಿಯು ಮಹಿಳೆಯರನ್ನ ಮಾರಾಟ ಮಾಡುವ ಹಂತಕ್ಕೆ ತಂದು ನಿಲ್ಲಿಸಿತು.



ಬ್ರಿಟಿಷರ ತರುಣ ಸೈನಿಕರು ತಮ್ಮ ದೇಶದಿಂದ ನೇರವಾಗಿ ಮುಂಬಯಿಯಲ್ಲಿದ್ದ 'ಡೆಯೋಲಾಲಿ ಮಿಲಿಟರಿ ಕ್ಯಾಂಪ್' ಪ್ರದೇಶಕ್ಕೆ ಬಂದು ಇಳಿಯುತ್ತಿದ್ದರು. ಅಲ್ಲಿಂದ ಮುಂದೆ ಅವರಿಗೆ ವಹಿಸುತ್ತಿದ್ದ ಪ್ರದೇಶಗಳಿಗೆ ತೆರಳುತ್ತಿದ್ದರು. ಡೆಯೋಲಾಲಿ ಮಿಲಿಟರಿ ಕ್ಯಾಂಪಿನಲ್ಲಿ ಉದ್ದೇಶಪೂರ್ವಕವಾಗಿಯೇ ಅನುಮತಿ ಪಡೆದ ವೇಶ್ಯೆಯರನ್ನು ಪೂರೈಕೆ ಮಾಡಲಾಗುತ್ತಿತ್ತು. ಒಂದೊಂದು ಸಾರಿ ಸೈನಿಕರು ಹೆಚ್ಚಿನ ಪ್ರಮಾಣದಲ್ಲಿ ಬಂದಾಗ, ಕ್ಯಾಂಪಿನ ಅಧಿಕಾರಿಗಳೇ ಕ್ಯಾಂಪ್ ಪ್ರದೇಶದಿಂದ ೫ ಕಿ ಮೀ ಸುತ್ತ ಹೋಗಿ, ಅಲ್ಲಿರುವ ಹೆಣ್ಣುಮಕ್ಕಳನ್ನು ಮತ್ತು ಅನೈತಿಕವಾಗಿ ನಡೆದುಕೊಳ್ಳುತ್ತಿರುವ ಹೆಣ್ಣುಮಕ್ಕಳನ್ನು ಬಂಧಿಸಿ ಕರೆತರುತ್ತಿದ್ದರು. ಈ ವ್ಯವಸ್ಥೆ ಕೆಲಸ ನಿಡದೇ ಹೋದಾಗ, ದಾಯಿಗಳನ್ನು ನೇಮಕ ಮಾಡಿ ಕೊಳ್ಳಬೇಕೆಂದು ಆದೇಶ ಹೊರಡಿಸಲಾಗುತ್ತದೆ. ಹೀಗೆ ನೇಮಿಸಿಕೊಂಡ ದಾಯಿಗಳು ಹಳ್ಳಿಗಳಿಗೆ ತಿರುಗಾಡಿ, ಸುಂದರವಾಗಿರುವ ಮತ್ತು ಎಳೆಯ ವಯಸ್ಸಿನ ಹುಡುಗಿಯರನ್ನು ಹಿಡಿದು ತರುವ ಕೆಲಸ ಮಾಡಬೇಕಿತ್ತು. ಇದಕ್ಕಾಗಿ ಸರ್ಕಾರದಿಂದ ಒಂದು ಹುಡುಗಿಗೆ ಇಂತಿಷ್ಟು ಎಂಬ ನಿಗದಿತ ಹಣವೂ ಸಿಗುತ್ತಿತ್ತು. ಆದರೆ ಅವಶ್ಯಕತೆ ಇದ್ದಷ್ಟು ಹುಡುಗಿಯರು ಸಿಗುವುದು ತುಂಬಾ ಕಷ್ಟವಾಗುತ್ತಿತ್ತು. ಆದ್ದರಿಂದ ಇರುವ ದಾಯಿಗಳಿಗೆ ತರಬೇತಿ ನೀಡಿ ಸಮರ್ಥಗೊಳಿಸಲಾಯಿತು ಮತ್ತು ಅವರು ಹಳ್ಳಿಗಳಿಗೆ ಹೋದಾಗ, ಅವಳು ಹುಡುಗಿಯರನ್ನು ಮತ್ತು ಅವರ ಮನೆಯವರನ್ನು ಮನವೊಲಿಸಿ ಕರೆ ತರುವಲ್ಲಿ. ಗ್ರಾಮದ ಮ್ಯಾಜಿಸ್ಟ್ರೇಟ್(ಊರ ಪಟೇಲ್) ಅವಳಿಗೆ ಎಲ್ಲ ರೀತಿಯ ಸಹಾಯ ಮಾಡಬೇಕಿತ್ತು.

ಇದರಲ್ಲಿ ದಾಯಿಗಳು ಅವರಿಗೆ ನೌಕರಿ ಹಚ್ಚುವ ಇಲ್ಲವೇ ಮದುವೆ ಮಾಡುವ ಆಸೆ ತುಂಬಿ ಮೋಸದಿಂದಲೂ ಹುಡುಗಿಯರನ್ನು ಕರೆದುಕೊಂಡು ಹೋಗುತ್ತಿದ್ದಳು. ಬಡತನವಿದ್ದ ಕುಟುಂಬಗಳು ದಾಯಿಗಳ ಇಂತ ಕುತಂತ್ರಕ್ಕೆ ಬಲಿಯಾಗುತ್ತಿದ್ದವು. ಹೀಗೆ ಹೋದ ಎಷ್ಟೋ ಹೆಣ್ಣುಮಕ್ಕಳು, ಬಹಳಷ್ಟು ಸೈನಿಕರ ಜೊತೆಗೆ ಲೈಂಗಿಕ ಸಂಪರ್ಕ ಹೊಂದಬೇಕಾದ್ದರಿಂದ, ಆ ಅತ್ಯಾಚಾರದ ನೋವನ್ನು ತಡೆಯಲಾಗದೇ, ಅಲ್ಲಿಗೆ ತಲುಪಿದ ಮೊದಲ ಅಥವಾ ಎರಡನೆಯ ಮುಂಜಾನೆ ಹೆಣವಾಗಿರುತ್ತಿದ್ದರು(ಜೇನ್ ಡಿಚೋನಾ, ೧೯೯೧).[೫]

ಈ ಕಾನೂನು ಅನುಷ್ಠಾನಗೊಂಡ ಉದ್ದೇಶ ಎಷ್ಟರ ಮಟ್ಟಿಗೆ ಈಡೇರಿತೋ ಗೊತ್ತಿಲ್ಲ. ಆದರೆ ಬರಗಾಲದಿಂದ, ರೋಗದಿಂದ, ಬಸವಳಿದು ಊರು ತೊರೆದು ಗುಳೆ ಹೋಗುತ್ತಿದ್ದ ಬಡ ಜನರ ಹೆಣ್ಣುಮಕ್ಕಳು ಶೋಷಣೆಗೆ ಗುರಿಯಾಗುವ ಪ್ರಸಂಗ ಎದುರಾಯಿತು. ಅರಸೊತ್ತಿಗೆಗಳ ಕಾಲದಲ್ಲಿ, ಆಶ್ರಿತಗೊಂಡು ಉಛ್ರಾಯ ಸ್ಥಿತಿಯಲ್ಲಿದ್ದ ವೇಶ್ಯಾ ಪದ್ಧತಿ, ದೇವದಾಸಿ ಪದ್ಧತಿಗಳು, ಆಶ್ರಯವಿಲ್ಲದೇ ಬೀದಿಗೆ ಬಂದು ನಿಂತಿದ್ದವು. ಇಂತ ಸಂದರ್ಭಗಳು ಆ ಸಮುದಾಯಕ್ಕೆ ಕ್ರಮೇಣ ಅವಕಾಶಗಳಾಗಿಯೂ ಮಾರ್ಪಟ್ಟಿರಬಹುದಾದ ಸಾಧ್ಯತೆಗಳೂ ಇವೆ. ಅಲ್ಲದೇ ೧೮೮೬ ರಲ್ಲಿ ಬ್ರಿಟಿಷ್ ಮಿಲಿಟರಿ ಪ್ರಾಂತೀಯ ಪಡೆಗಳ ಮಾರುಕಟ್ಟೆಗಳಲ್ಲಿ ಆಕರ್ಷಣೆಯ ಮಹಿಳೆಯರು ಹಣಕ್ಕಾಗಿ ಲೈಂಗಿಕ ಸೇವೆಯನ್ನು ನೀಡಬೇಕೆಂದು ಆದೇಶಿಸಿದನು. ಇದರಿಂದ ಲೈಂಗಿಕ ಸೇವೆಯು ವ್ಯಾಪಾರವಾಗಿ ಬದಲಾಯಿತು. ಅದಕ್ಕಾಗಿಯೇ ವೇಶ್ಯಾಗೃಹಗಳು ಕಾನೂನು ರೀತಿಯಲ್ಲಿ ಹುಟ್ಟಿಕೊಂಡವು. ತಲೆಹಿಡುಕರ ಸಂಖ್ಯೆಯು ಏರಿತು (ಮನೋರಂಜಿನಿ, ೨೦೦೭).[೬]

ಇಂತ ಸಂದರ್ಭಗಳೇ ಮುಂಬಯಿಯ ಕಮಾಟಿಪುರವು ಏಷ್ಯಾದ ಎರಡನೇ ದೊಡ್ಡ ಕೆಂಪು ದೀಪವಾಗಿ(ರೆಡ್‌ಲೈಟ್ ಏರಿಯಾ) ಬೆಳೆಯಲು ಕಾರಣವಾಗಿರಬಹುದು.

**೨.೨/೧.೪ ಬರಗಾಲದ ಬಿಜಾಪೂರ:** ಬಿಜಾಪೂರ ಜಿಲ್ಲೆಯನ್ನು ೧೮೧೮ರಲ್ಲಿ ಬ್ರಿಟಿಷರು ತಮ್ಮ ವಶ ಮಾಡಿಕೊಂಡ ಮೇಲೆ ಬರಗಾಲಗಳು ಬೀಳುವುದು ಹೆಚ್ಚಾಯಿತು. ೧೯ ಮತ್ತು ೨೦ನೇ ಶತಮಾನದಲ್ಲಿ ಜಿಲ್ಲೆಯಲ್ಲಿ ಬರಗಾಲಗಳು ಸಾಲು ಸಾಲಾಗಿ ಬಂದವು. ೧೮೧೮–೧೯, ೧೮೨೪–೨೫, ೧೮೫೩–೫೪, ೧೮೬೩–೬೪ ಮತ್ತು ೧೮೭೬–೭೭ ಇವು ತೀವ್ರ ಆಹಾರ ಕೊರತೆಯ ಬರಗಾಲದ ವರ್ಷಗಳು. ೧೮೯೧–೯೨, ೧೮೯೬–೯೭ ಮತ್ತು ೧೮೯೮–೯೯ ಇವು ಬರ, ಕ್ಷಾಮ ಮತ್ತು ಪ್ಲೇಗುಮಾರಿ ಆವರಿಸಿಕೊಂಡ ವರ್ಷಗಳು. ಇಪ್ಪತ್ತನೆಯ ಶತಮಾನದ ಮೊದಲ ಭಾಗದಲ್ಲಿ ಜಿಲ್ಲೆಯಲ್ಲಿ ಸಂಭವಿಸಿದ ಬರಗಳೆಂದರೆ, ೧೯೦೧, ೧೯೦೫–೦೬, ೧೯೧೧–೧೨ ಮತ್ತು ೧೯೪೨–೪೩. ೧೭೯೧ರಲ್ಲಿ ಸಂಭವಿಸಿದ ಬರವನ್ನು 'ಡೋಗಿ ಬರ'ವೆಂದು, ೧೮೭೬ರಲ್ಲಿ ಆಕ್ರಮಣ ಮಾಡಿದ ಬರವನ್ನು 'ಪಡಿ ಬರ'ವೆಂದು ಮತ್ತು ೧೯೪೨–೪೩ರಲ್ಲಿ ಸಂಭವಿಸಿದ ಬರವನ್ನು 'ಸಜ್ಜೆ ಬರ' ಎಂದೂ ಕರೆಯಲಾಗಿದೆ. ಆದ್ದರಿಂದ ಎ ಆರ್ ವಾಸವಿಯವರು, ವಸಾಹತುಶಾಹಿಯ ಕಾಲಘಟ್ಟಕ್ಕೆ ಸಂಬಂಧಿಸಿದ ದಾಖಲೆಗಳಲ್ಲಿ ಬಿಜಾಪೂರ ಪ್ರದೇಶವನ್ನು 'ಬಾಂಬೆ ಸಂಸ್ಥಾನದಲ್ಲೊಂದು ಕಪ್ಪು ಚುಕ್ಕೆ' ಎಂದೂ,

'ಬಾಂಬೆ ಸಂಸ್ಥಾನದಲ್ಲಿ ಅತ್ಯಂತ ಕ್ಷಾಮ-ಬರ ಪೀಡಿತ ಪ್ರದೇಶ' ಎಂದೂ ಬಣ್ಣಿಸಲಾಗಿರುವ ಕುರಿತು ಉಲ್ಲೇಖಿಸುತ್ತಾರೆ. ಇದಕ್ಕೆ ಜನರು ಕಂಡುಕೊಂಡಿರುವ ಪರಿಹಾರವೆಂದರೆ ಗುಳೆ ಹೋಗುವುದು ಎಂದು ಅವರು ವಿವರಿಸುತ್ತಾರೆ (ಟಿ.ಆರ್.ಚಂದ್ರಶೇಖರ್, ೨೦೧೧ ಮತ್ತು ಎಚ್.ಡಿ. ಪ್ರಶಾಂತ್, ೨೦೧೫).[೬]

೧೯೦೫ರ ಹೊತ್ತಿಗೆ ಬಿಜಾಪೂರ ಜಿಲ್ಲೆಯಲ್ಲಿ, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು ತೀರಾ ಹದಗೆಟ್ಟಿದ್ದವು. ಮಣ್ಣಿನ ಫಲವತ್ತತೆಯಲ್ಲಿ ಮತ್ತು ಜಾನುವಾರು ಸಂಖ್ಯೆಗಳಲ್ಲಿ ಇಳಿಕೆ ಕಂಡಿತ್ತು. ಜನಸಂಖ್ಯೆ ಹೆಚ್ಚಾಗಿತ್ತು ಮತ್ತು ಜಮೀನಿನ ಬೆಲೆ ಮತ್ತು ಋಣಭಾರ ಅಧಿಕವಾಗಿತ್ತು. ಆದ್ದರಿಂದ ಜನ ಸಮೂಹಕ್ಕೆ ತಮ್ಮನ್ನು ಸ್ಥಳೀಯವಾಗಿ ಸಲುಹಿಕೊಳ್ಳಲು ಅಸಾಧ್ಯವಾಯಿತು(ಎಚ್.ಡಿ.ಪ್ರಶಾಂತ್, ೨೦೧೫).[೮]

ಹೀಗಾಗಿ ವಿಭಜಿತ ಬಿಜಾಪುರ ಜಿಲ್ಲೆ ಮತ್ತು ಬೆಳಗಾವಿ ಜಿಲ್ಲೆಯ ರೈತಾಪಿ ವರ್ಗ, ಬಡ ಕೃಷಿ ಕಾರ್ಮಿಕ ವರ್ಗ, ದೇವದಾಸಿ ಸಂಪ್ರದಾಯಕ್ಕೊಳಪಟ್ಟಿದ್ದ ಕುಟುಂಬಗಳು ದೊಡ್ಡವರು, ಚಿಕ್ಕವರು, ಮಹಿಳೆಯರು ಎನ್ನದೆ ಮಹಾರಾಷ್ಟ್ರದ ಮಿರಜ್, ಸಾಂಗ್ಲಿ, ಪೂಣಾ, ಮುಂಬಯಿಗಳಿಗೆ ಮತ್ತು ಗೋವಾದ ರೆಡ್‌ಲೈಟ್ ಏರಿಯಾಗಳಿಗೆ ಸದ್ದಿಲ್ಲದೇ ಗುಳೆ ಹೋದದ್ದು ಸಾಮಾನ್ಯ ಸಂಗತಿಯಾಗಿತ್ತು. ಇದರಲ್ಲಿ ಸಾಮಾಜಿಕವಾಗಿ ಆರ್ಥಿಕವಾಗಿ ಕೆಳಸ್ತರದಲ್ಲಿದ್ದ ಸಮುದಾಯಗಳಿಗೆ ಜೀವನದ ಎಲ್ಲ ಆಯಾಮಗಳಿಗೂ ಬಹು ದೊಡ್ಡ ಗಾಯವನ್ನು ಈ ಪರಿಸ್ಥಿತಿ ತಂದೊಡ್ಡಿತ್ತು.

**೨.೨/೧.೫ ಸಂಶೋಧನೆಯ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಅಧ್ಯಯನ ಕ್ಷೇತ್ರದಲ್ಲಿ ಕಂಡು ಬಂದ ಅಂಶಗಳು:** ಅಥಣಿ ಪಕ್ಕದ ಹಳ್ಳಿಯ ೮೦ ವರ್ಷದ ದೇವದಾಸಿ ಮಹಿಳೆಯೊಂದಿಗೆ ಮಾತನಾಡುತ್ತಿದ್ದಾಗ, 'ನಿಮ್ಮ ಊರು ಕೃಷ್ಣಾ ನದಿಯ ಪಕ್ಕದಲ್ಲೇ ಇರೋದು, ಇಷ್ಟೊಂದು ನೀರು, ವ್ಯವಸಾಯ ಬಿಟ್ಟು ಮಿರಜ್‌ಗೆ ಹೊಗುವ ಅವಶ್ಯಕತೆ ಏನಿತ್ತು? ಅಂತ ಪ್ರಶ್ನೆ ಕೇಳಿದರೆ, ಈಗ ನಿಮಗ ನೀರ ಕಾಣಸ್ತೈತಿ? ಮಳೀ ಇಲ್ಲದಿದ್ರ ಆ ಹೊಳೀ ಹೆಂಗ ತುಂಬತೈತಿ? ಎಂತೆಂತ ಊರಿಗೆ ಊಟಾ ಹಾಕೂವಂತ ರೈತ್ರ ಊರ ಬಿಟ್ಟು, ದುಡ್ಯಾಕ ಮಾರಾಷ್ಟ್ರಾ ಸೇರಕೊಂಡಿದ್ರ, ಇನ್ನ ನಮ್ಮಂತವರ ಪಾಡೇನ ಕೇಳ್ತೀರಿ? ಭೂಮಿ ಇಲ್ಲ, ಒಡಹುಟ್ಟಿದೋರ ಇಲ್ಲ. ಹಸಿವು ಹಿಂಗಬೇಕ, ಅದ್ಕ ಏನ ಮಾಡಿದ್ರ ಏನು? ಹೋಗವರ ಜೋಡಿ ಹೋಗೇ ಬಿಟ್ವಿ, ನಾನೂ ಹಿಂಗ, ಊರ ಬಿಟ್ಟ ಹೋಗಿದ್ದ ರೈತನ ಜೋಡೀನ ಇದ್ನಿ. ಅವಾ ತನ್ನ ಎರಡು ಎತ್ತು, ಚಕ್ಕಡಿ ತುಗೊಂಡ ಬಂದಿದ್ದಾ. ಕುಪವಾಡದಾಗ ಅಷ್ಟ ದೊಡ್ಡ ರೈತ ಹಮಾಲಿ ದಗದಾ ಮಾಡತಿದ್ದ. ಮತ್ತ ಮಳಿ ಬಂದು ಸ್ಥಿತಿ ಚುಲೊ ಆದ ಮ್ಯಾಲ ಅವಾ ಹೊಳ್ಳಿ ಊರಿಗೆ ಬಂದ. ಆದರ ಅಷ್ಟ ದಿನದಾಗ ನನಗ ಒಬ್ಬಾಕಿ ಮಗಳ ಹುಟ್ಟಿದ್ಲು. ಆಕೀನ್ನ ದೇವದಾಸಿ ಮಾಡಿದ್ದ್ಯಾ. ಆಕಿ ಅಲ್ಲೇ ಮಿರ್ಜಾಗ ಗಳಸೊ ಜಗಾದಾಗ ಇದ್ದು ಒಂದು ಮನಿ ಮಾಡಿಕೊಂಡಿದ್ಲು. ಈಗ ಆಕಿ ಇಲ್ಲ. ಜಡ್ಡ ಬಂದು ಸತ್ತು ಹೋದ್ಲು. ಆದರ ಆ ಮನೀ ಏಕಿ. ಗಳಸೂ ಹುಡಗ್ಯಾರೆಗೆ ಬಾಡಿಗಿ ಕೊಟ್ಟೇನಿ". ಅಂತ ಅಜ್ಜಿ ಹೇಳಿದ್ದರಲ್ಲಿ, ಒಂದು ಸಮುದಾಯದ ನೋವೇ ಇದೆ. ಹಸಿವನ್ನು ಹಿಂಗಿಸಿಕೊಳ್ಳಲಾಗದೆ ಲೈಂಗಿಕ ಜೀತಕ್ಕೆ ತನ್ನನ್ನು ತಾನೆ ಒಪ್ಪಿಸಿಕೊಂಡು

ನಡೆದ ಬದುಕು ಇನ್ನೂ ಎಷ್ಟೋ ಅಮಾನುಷ ಹೆಣ್ಣುಮಕ್ಕಳನ್ನು ಇಂದಿಗೂ ಶೋಷಿಸುವ ತಾಣವಾಗಿರುವುದು ಕಂಡುಬರುತ್ತದೆ.

ಬಿಜಾಪುರದ ದಲಿತ ಮಹಿಳೆಯೊಬ್ಬರು, "ಹೊಲ ಇದ್ದವ್ರಿಗೆ ೪-೫ ವರಸದಾಗ ಒಮ್ಮೆ ಹೊಲ ತುಂಬ, ಜ್ವಾಳ ಬಂದ್ರ ಸಾಕ. ಅವನ್ನ ಹಗೇವಿಗೆ ಹಕ್ಕೊಂಡು ಬದುಕ ನಡಸ್ತಿದ್ರಿ. ಆದ್ರ ಆವರ ಹೊಲದಾಗ ಕೆಲಸ ಮಾಡಿ ಹೊಟ್ಟೆ ತುಂಬಕೋತಿದ್ದ ನಮಗ, ಇಂತಾ ಹೊತ್ತಿನ್ಯಾಗ ಕೆಲಸನೂ ಇಲ್ಲ. ಕೂಳು ಇಲ್ಲ. ಬಾಳ ಮಂದಿ ಮುಂಬೈ ಪೂಣಾ ಅಂತ ಹೋದರ್ರೀ. ಬರೇ ದೇವದಾಸ್ಯಾರ ಹೋದ್ರ ಅಂತ ತಿಳ್ಕೋಬ್ಯಾಡ್ರೀ, ಗಂಡುಳ್ಳವ್ರು, ಗಂಡ ಸತ್ತಾವ್ರ, ಚುಲೋ ಇದ್ದವರು, ಹಿಂಗ ಬಾಳ ಬಾಳ ಮಂದಿ ಹೋತ್ರಿ, ಊರಂದ್ರ ಸಮಶಾನ ಆಗಿರ್ತಿತ್ತು. ಅಂತಾದ್ದರಾಗ ಎಲ್ಲಿಗೀ ಹೋಗದ ಇಲ್ಲೇ ಇದ್ದ ನಮ್ಮಂತವ್ರ ಬದುಕಿದ್ದ ದೊಡ್ಡದೈತ್ರಿ, ಈಗ ಜೀವನ ಸುಧಾರ್ಸೇತಿ. ಪ್ಯಾಟ್ಯಾಗ ಹೋಗಿ ಮೆಂತಿ ಪಲ್ಲಿ, ಸಬಸಗಿ ಪಲ್ಲಿ ಅಂತ ತಿನ್ನೂ ಪಲ್ಲಿ ಆರಿಸಿ ತಗೊಂದ ಬರ್ತೇವಿ. ಆದ್ರ ಆಗ ಹಂಗ ಇರಲಿಲ್ಲ. ನೆಲದಾಗ ಬೆಳದಿದ್ದ, ಹಸರ ಕಂಡ್ರ ಸಾಕ ಹರಕೊಂಡ ಬಂದ ನೀರಾಗ ಕುದಿಸಿ ತಿಂತಿದ್ವಿ. ಅದ ಕಸಾ ಇರ್ತಿತ್ತೋ, ವಿಷ ಇರ್ತಿತ್ತೋ.. ಹಂಗ ದೇವ್ರ ಇವತ್ತೂ ಬದಕಿಸ್ಯಾನ". ಅಂತ ಹೇಳೂವಾಗ ಕಣ್ಣಾಲಿಯಲ್ಲಿ ನೀರಾಡುತ್ತಿತ್ತು.

ಬಿಜಾಪೂರ ಜಿಲ್ಲೆ, ಬೆಳಗಾವಿಯ ಅಥಣಿ ಮತ್ತು ರಾಯಭಾಗ ತಾಲೂಕುಗಳ ಅರ್ಧ ಭಾಗಗಳಲ್ಲಿ ಇಂದಿಗೂ ಆ ಪರಿಸ್ಥಿತಿ ಸುಧಾರಿಸಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಳ್ಳಿಗಳಿಗೆ ಹೋದಾಗ, ಊರಲ್ಲಿ, ವಯಸ್ಸಾದ ವೃದ್ಧರು ಮತ್ತು ಚಿಕ್ಕ ಚಿಕ್ಕ ಮಕ್ಕಳು, ಅವರನ್ನು ನೋಡಿಕೊಳ್ಳಲು, ದುಡಿಯಲು ಅಸಮರ್ಥಳಾದ ಒಬ್ಬಳು ಹೆಣ್ಣು ಮಗಳು ಇದ್ದರು. ಇದು ಹಳ್ಳಿಯ ಚಿತ್ರವೇ ಆಗಿತ್ತು. ಎಲ್ಲರ ಮನೆಗಳಿಗೂ ಕೀಲಿಗಳು ಬಿದ್ದಿದ್ದವು. ಬಿಸಿಲಿನ ತಾಪಕ್ಕೆ ಊರು ಬಿಕೋ ಅನ್ನುತ್ತಿತ್ತು. ಅಥಣಿ ತಾಲೂಕಿನ ಪೂರ್ವಕ್ಕೆ ಮಹಾರಾಷ್ಟ್ರ ಗಡಿಗೆ ಇರುವ ೨೨ ಹಳ್ಳಿಗಳಿಗೆ ಮಳೆಗಾಲವೆಂದರೆ ಗೊತ್ತೇ ಇಲ್ಲವೇನೋ. ಕೃಷ್ಣಾ ನದಿ ಹರಿದಿದ್ದರೂ ಪೂರ್ವದ ಭಾಗಕ್ಕೆ ನೀರು ತಲುಪಿಲ್ಲ. ಬೇಸಿಗೆಯ ದಿನಗಳಲ್ಲಿ ಕುಡಿಯಲು ಟ್ಯಾಂಕರ್ ನೀರು ಹಾಕಬೇಕಾಗುತ್ತದೆ. ಸಾರಿಗೆ ಸಂಪರ್ಕ, ಆಸ್ಪತ್ರೆಯಂತಹ ಮೂಲಭೂತ ಸೌಕರ್ಯಗಳೂ ಇಲ್ಲ. ಅವರ ಪಕ್ಕದ ಮಹಾರಾಷ್ಟ್ರ ರಾಜ್ಯದ ಹಳ್ಳಿಗಳು ನೀರಾವರಿಯಿಂದಾಗಿ ನಿತ್ಯ ಹಸುರಿನಿಂದ ಕೂಡಿರುತ್ತವೆ. ಆದ್ದರಿಂದ ಈ ೨೨ ಹಳ್ಳಿಗಳ ಜನ "ನಮ್ಮನ್ನ ಬಿಟ್ಟು ಬಿಡ್ರೀ. ನಾವು ಮಹಾರಾಷ್ಟ್ರಕ್ಕ ಹೋಗ್ತೇವಿ" ಅಂತ ಚಳುವಳಿ ಮಾಡುತ್ತಿರುತ್ತಾರೆ. ಆದರೂ ಸರಕಾರ ಮನಸ್ಸು ಮಾಡಿ ಅವರ ಕಷ್ಟ ಬಗೆಹರಿಸುತ್ತಿಲ್ಲ. ರಾಯಭಾಗದಲ್ಲಿ ಮಳೆಗಾಲದಲ್ಲೂ ಕುಡಿಯುವ ನೀರಿನ ಬವಣೆ ಇರುವುದು ಕಂಡುಬರುತ್ತದೆ.

ಹೀಗೆ ಮಾನವ ಅಭಿವೃದ್ಧಿಯಲ್ಲಿ ಹಿಂದುಳಿದ ಜಿಲ್ಲೆಗಳೆಂದು ಗುರುತಿಸಿಕೊಂಡ ಬಿಜಾಪೂರ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳು ಕಂಡ ಪೂರ್ವದ ಪರಿಸ್ಥಿತಿಗಳ ಪ್ರಭಾವ ಜಿಲ್ಲೆಗಳನ್ನು ಇಂದಿಗೂ ಬಾಧಿಸುತ್ತಿವೆ. ಈ ಜಿಲ್ಲೆಗಳ ಭೌಗೋಳಿಕ ಮತ್ತು ಪ್ರಸ್ತುತ ಶೈಕ್ಷಣಿಕ ಮತ್ತು ಆರ್ಥಿಕ ಬೆಳವಣಿಗೆಗಳನ್ನು ಈ ಮುಂದೆ ಅವಲೋಕಿಸೋಣ.

೨.೨/೨ ಭೌಗೋಳಿಕ

**ಅಕ್ಷಾಂಶ ಮತ್ತು ರೇಖಾಂಶ:** ಬಿಜಾಪೂರ ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು, ೧೫.೨೦ ರಿಂದ ೧೭.೨೮ ಅಕ್ಷಾಂಶದೊಂದಿಗೆ ಹಾಗೂ ೭೪.೫೦ ರಿಂದ ೭೭.೨೫ ರೇಖಾಂಶ ಇರುವುದು. ಇದು ಉತ್ತರಕ್ಕೆ ಮಹಾರಾಷ್ಟ್ರ ರಾಜ್ಯದ ಸೋಲ್ಲಾಪೂರ ಜಿಲ್ಲೆ, ದಕ್ಷಿಣಕ್ಕೆ ಬಾಗಲಕೋಟೆ ಜಿಲ್ಲೆ, ಪೂರ್ವಕ್ಕೆ ಗುಲಬುರ್ಗಾ ಜಿಲ್ಲೆ ಮತ್ತು ಪಶ್ಚಿಮಕ್ಕೆ ಬೆಳಗಾವಿ ಜಿಲ್ಲೆಗಳನ್ನು ಹೊಂದಿದೆ.

**ನದಿಗಳು:** ಜಿಲ್ಲೆಯಲ್ಲಿ ಕೃಷ್ಣಾನದಿ ದಕ್ಷಿಣ ಭಾಗದಲ್ಲಿಯೇ ಅತೀ ದೊಡ್ಡ ನದಿಯಾಗಿದ್ದು, ಬಿಜಾಪೂರ ಮತ್ತು ಬಾಗಲಕೋಟೆ ಜಿಲ್ಲೆಯ ಗಡಿಯಲ್ಲಿ ಹರಿದಿದೆ. ಈ ನದಿಗೆ ಆಲಮಟ್ಟಿಯಲ್ಲಿ ಅತೀ ದೊಡ್ಡದಾದ ಆಣೆಕಟ್ಟು ಕಟ್ಟಲಾಗಿದೆ. ಉತ್ತರಕ್ಕೆ ಮಹಾರಾಷ್ಟ್ರ ಮತ್ತು ಗುಲ್ಬುರ್ಗಾ ಗಡಿಯಲ್ಲಿ ಭೀಮಾನದಿ ಹರಿದಿದೆ. ಇದು ಮಳೆಗಾಲದಲ್ಲಿ ಮಾತ್ರ ಹರಿಯುತ್ತದೆ. ನದಿಗುಂಟ ನದಿಯ ನೀರಿನಿಂದ ವ್ಯವಸಾಯ ಮಾಡುತ್ತಾರೆ. ಅದರಂತೆ ಜಿಲ್ಲೆಯಲ್ಲಿ ದೋಣಿ ನದಿ ಹರಿದಿದ್ದು, ಅದು ಉಪ್ಪು ನೀರು ಇರುವುದರಿಂದ ವ್ಯವಸಾಯಕ್ಕೆ ಉಪಯೋಗವಿಲ್ಲ.

**ಮಳೆ:** ವಾರ್ಷಿಕ ಮಳೆಯ ಪ್ರಮಾಣ ಹೆಚ್ಚಿಲ್ಲದಿದ್ದರೂ ಮುಂಗಾರು ಮತ್ತು ಹಿಂಗಾರು ಮಾರುತಗಳಿಂದ ಮಳೆಯಾಗುತ್ತದೆ. ಕಳೆದ ೫೦ ವರ್ಷಗಳಲ್ಲಿ ಮಳೆಯ ಪ್ರಮಾಣ ೪೦೦ ರಿಂದ ೭೦೦ ಮಿ.ಮೀ ಮಳೆಯಾಗುತ್ತಿದೆ. ಆದರೂ ಸಹ ಜಿಲ್ಲೆಯು ಸತತ ಬರಗಾಲವನ್ನು ಅನುಭವಿಸುತ್ತಿದೆ (ವಾಸುದೇವ ಬಡಿಗೇರ).[೯]

**ಮಣ್ಣಿನ ರಚನೆ:** ಜಿಲ್ಲೆಯಲ್ಲಿ ಎರಡು ವಿಧವಾದ ಮಣ್ಣಿನಿಂದ ಕೂಡಿದ ಭೂಮಿ ಇದ್ದು, ಮೊದಲನೆಯದಾಗಿ ಕಪ್ಪು ಮಿಶ್ರಿತ ಎರೆಮಣ್ಣು ಇದ್ದು, ಖುಷ್ಕಿ ಬೆಳೆಗೆ ಯೋಗ್ಯವಾದ ಕಾರಣ, ಖುಷ್ಕಿ ಬೆಳೆಯನ್ನು ಬೆಳೆಯುತ್ತಾರೆ. ಎರಡನೆಯದಾಗಿ ದಪ್ಪ ಪದರುಳ್ಳ ಕೆಂಪು ಮಿಶ್ರಿತ ಮಣ್ಣಿನ ಭೂಮಿ ಇದೆ. ಇದು ಖುಷ್ಕಿ ಹಾಗೂ ನೀರಾವರಿಗೆ ಯೋಗ್ಯವಾಗಿದೆ. ಹಣ್ಣಿನ ಬೆಳೆಗೂ ಯೋಗ್ಯವಿದೆ. ಜಿಲ್ಲೆಯಲ್ಲಿ ಯಾವುದೇ ಬೆಟ್ಟ ಗುಡ್ಡಗಳು ಇರುವುದಿಲ್ಲ. ಪೂರ್ಣ ಬಯಲು ಸೀಮೆಯನ್ನು ಹೊಂದಿದೆ. ಯಾವುದೇ ಖನಿಜ ಸಂಪತ್ತು ಇರುವುದಿಲ್ಲ. ಮುದ್ದೇಬಿಹಾಳ ತಾಲೂಕಿನ ತಾಳಿಕೋಟಿ ಭಾಗದಲ್ಲಿ ಫರಸಿ ಕಲ್ಲುಗಳು ದೊರೆಯುತ್ತವೆ.

**ಹವಾಗುಣ:** ಜಿಲ್ಲೆಯಲ್ಲಿ ಬೇಸಿಗೆ ಕಾಲದಲ್ಲಿ ಅತೀ ಬಿಸಿಲು ಇರುತ್ತಿದ್ದು, ಎಪ್ರೀಲ್, ಮೇ ತಿಂಗಳಿನಲ್ಲಿ ೪೦ ರಿಂದ ೪೨ ಸೆಲ್ಸಿಯಸ್‌ವರೆಗೆ ಇರುತ್ತದೆ. ಚಳಿಗಾಲದಲ್ಲಿ ಸಾಮಾನ್ಯ ಚಳಿ ಇದ್ದು, ನವ್ಹೆಂಬರ್‌ದಿಂದ, ಜನವರಿಯವರೆಗೆ ೨೦ರಿಂದ ೧೫ ಸೆಲ್ಸಿಯಸ್‌ವರೆಗೆ ಇರುತ್ತದೆ. ಉಳಿದ ತಿಂಗಳಲ್ಲಿ ಸಾಮಾನ್ಯ ಹವಾಮಾನ ಇರುತ್ತದೆ.

**ವಿಸ್ತೀರ್ಣ ಜನಸಂಖ್ಯೆ ಮತ್ತು ಜನಸಾಂದ್ರತೆ:** ಜಿಲ್ಲೆಯು ೧೦.೫೪೧ ಚದರ ಕಿ ಮೀ ಪ್ರದೇಶವ ವಿಸ್ತೀರ್ಣವನ್ನು ಹೊಂದಿದ್ದು, ರಾಜ್ಯದ ಶೇಕಡಾ ೮.೯ರಷ್ಟು ಇದ್ದು, ಜಿಲ್ಲೆಗಳಲ್ಲಿ ೪ನೇ ಸ್ಥಾನವನ್ನು

ಪಡೆದಿದೆ. ೨೦೦೧ರ ಜನಗಣತಿಯ ಪ್ರಕಾರ, ಜಿಲ್ಲೆಯ ಒಟ್ಟು ಜನಸಂಖ್ಯೆ ೧೮.೦೬ ಲಕ್ಷ ಇದ್ದು ಜನಸಂಖ್ಯೆಯಲ್ಲಿ ೯.೨೬ ಲಕ್ಷ ಪುರುಷರು, ೮.೮೦ ಲಕ್ಷ ಸ್ತ್ರೀಯರು ಇರುತ್ತಾರೆ. ಇದರಲ್ಲಿ ೩.೩೪ ಲಕ್ಷ ಪರಿಶಿಷ್ಟ ಜಾತಿಯವರು ಮತ್ತು ೦.೩೦ ಲಕ್ಷ ಪರಿಶಿಷ್ಟ ಪಂಗಡದವರು ಇರುತ್ತಾರೆ. ಜಿಲ್ಲೆಯಲ್ಲಿ ಪ್ರತಿ ಚ.ಕಿ.ಮೀ ೧೭೧ ಜನಸಾಂದ್ರತೆ ಇದೆ. ಇದು ರಾಜ್ಯದ ಜನಸಾಂದ್ರತೆಯಾದ ೨೭೬ಕ್ಕಿಂತ ೧೦೫ರಷ್ಟು ಕಡಿಮೆ ಇರುವುದು ಗಮನಾರ್ಹವಾಗಿದೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆಯಲ್ಲಿ ಪುರುಷ ಮತ್ತು ಸ್ತ್ರೀಯರ ಪ್ರಮಾಣ ಪ್ರತಿ ಸಾವಿರ ಪುರುಷರಿಗೆ ೯೫೦ ಸ್ತ್ರೀಯರು ಇರುತ್ತಾರೆ.

**೨.೨/೩ ಸಾಮಾಜಿಕ**

ಅಧ್ಯಯನದ ವಿಷಯದ ದೃಷ್ಟಿಯಿಂದ ಬಿಜಾಪೂರ ಜಿಲ್ಲೆಯು ಸಾಮಾಜಿಕವಾಗಿ ಒಂದು ವಿಶಿಷ್ಟ ಸ್ಥಾನದಲ್ಲಿ ನಿಲ್ಲುತ್ತದೆ. ಬಸವಣ್ಣನ ಸಾಮಾಜಿಕ ಕ್ರಾಂತಿಯಿಂದಾಗಿ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಗಾಗಿ ಹಲವಾರು ಪ್ರಯತ್ನಗಳು ನಡೆದವು. ಜಾತಿ, ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಸಂಘಟಿತ ಕಾರ್ಯಗಳು ನಡೆದವು. ಆದರೂ ಸಹ ಜಿಲ್ಲೆಯಲ್ಲಿ ಜಾತಿ ಪದ್ಧತಿಯು ವ್ಯಾಪಕವಾಗಿತ್ತು. ಪರಿಶಿಷ್ಟ ಜಾತಿಯ ಮಹಿಳೆಯರು ತುಂಬಾ ನಿಕೃಷ್ಟವಾದ ಜೀವನ ಸಾಗಿಸುತ್ತಿದ್ದರು. ಧಾರ್ಮಿಕ, ಸಾಮಾಜಿಕ ಆಚರಣೆಗಳು ಅವರನ್ನು ಇನ್ನೂ ಹೆಚ್ಚು ಅಂಚಿನಲ್ಲಿ ಉಳಿಯುವಂತೆ ಮಾಡುತ್ತಿದ್ದವು. ಶತ ಶತಮಾನಗಳಿಂದಲೂ ಪರಿಶಿಷ್ಟ ಜಾತಿಯ ಸಮುದಾಯದ ಹೆಣ್ಣುಮಕ್ಕಳನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿದ್ದ ಜೋಗತಿ(ದೇವದಾಸಿ) ಪದ್ಧತಿಯ ಆಚರಣೆಯು ಜಿಲ್ಲೆಯಲ್ಲಿ ಆಚರಣೆಯಲ್ಲಿತ್ತು. ಚೆನ್ನಣ್ಣ ವಾಲೀಕಾರ ಇವರ ಪ್ರಕಾರ, "ಜಿಲ್ಲೆಯು ಐತಿಹಾಸಿಕವಾದ ಸ್ಥಳವಾಗಿದ್ದು, ಬಹಳಷ್ಟು ದೇವಾಲಯಗಳನ್ನು ಹೊಂದಿದೆ. ಈ ದೇವಾಲಯಗಳು ರಂಗಮಂಟಪಗಳನ್ನು ಹೊಂದಿದ್ದು, ಅಲ್ಲಿ ಅಂಗಭೋಗ ಮತ್ತು ರಂಗಭೋಗ ಎಂಬ ಸೇವೆಗಳನ್ನು ಮಾಡಲು ದೇವಾಲಯಗಳಲ್ಲಿ ದೇವದಾಸಿ ಮಹಿಳೆಯರು ಇರುತ್ತಿದ್ದರು. ಬಾದಾಮಿ, ಪಟ್ಟದಕಲ್ಲು, ಐಹೊಳೆಯಲ್ಲಿ ರಂಗಮಂಟಪಗಳಿದ್ದು, ಅಲ್ಲಿ ದೇವದಾಸಿಯರಿದ್ದರೆಂದು ಗುರುತಿಸಲಾಗಿದೆ. ದೇವದಾಸಿ ಸಂಪ್ರದಾಯಕ್ಕೆ ತೊಟ್ಟಿಲಾಗಿರುವ ಸವದತ್ತಿ ಎಲ್ಲಮ್ಮನ ಪ್ರದೇಶಕ್ಕೆ ಹೊಂದಿಕೊಂಡಿರುವ ಬಿಜಾಪೂರ ಜಿಲ್ಲೆಯ( ಅವಿಭಜಿತ ಬಿಜಾಪೂರ) ಬಾದಾಮಿ, ಬಾಲಗಲಕೋಟೆ, ಜಮಖಂಡಿ, ಮುಧೋಳ, ಬೀಳಗಿ, ಮುದ್ದೇಬಿಹಾಳ ತಾಲ್ಲೂಕುಗಳಲ್ಲದೇ, ಇಂಡಿ, ಸಿಂದಗಿ, ಬಸವನ ಬಾಗೇವಾಡಿ ತಾಲ್ಲೂಕುಗಳಲ್ಲಿ ಈ ಪ್ರಭಾವ ದಟ್ಟವಾಗಿದೆ. ಈ ದೇವಸ್ಥಾನಗಳ ಪರಂಪರೆ ಅಲ್ಲದೇ ಜಿಲ್ಲೆಯಲ್ಲಿ ಘಟಿಸುತ್ತಿದ್ದ ಮತ್ತು ಇಂದಿಗೂ ಘಟಿಸುತ್ತಿರುವ ಬರಗಾಲಗಳು. ಅದರಿಂದ ಉಂಟಾಗುವ ಬಡತನ. ಅನಕ್ಷರತೆಗಳಿಂದಾಗಿ ಈ ಪದ್ಧತಿಯ ಆಚರಣೆ ದಟ್ಟವಾಗಿರುವ ಕುರಿತು ಚೆನ್ನಣ್ಣ ವಾಲೀಕಾರ ಅವರು ಹೇಳುತ್ತಾರೆ. ಬಾದಾಮಿ ಬನಶಂಕರಿಯನ್ನು ಹೊರತುಪಡಿಸಿ, ಬೂದ್ಯಾಳ ಎಲ್ಲಮ್ಮ, ಕೋಳೂರು ಎಲ್ಲಮ್ಮ, ಸಿರಸ್ಯಾಡ ಎಲ್ಲಮ್ಮ, ಕೂಡಿಗಿ ಎಲ್ಲಮ್ಮ ಮತ್ತು ದೇವರ ಹಿಪ್ಪರಗಿ ಎಲ್ಲಮ್ಮನಿಗೆ ಹೆಣ್ಣುಮಕ್ಕಳನ್ನು ದೇವದಾಸಿಗಳಾಗಿ ಸಮರ್ಪಿಸಲಾಗುತ್ತದೆ. ಜಿಲ್ಲೆಯ ವಿವಿಧ ಭಾಗಗಳಲ್ಲಿ ಹರಡಿಕೊಂಡಿರುವ ಬ್ರಾಹ್ಮಣ. ದೇಸಾಯಿ. ದೇಶಪಾಂಡೆ. ಜಾಗೀರ್ದಾರ. ರೆಡ್ಡಿ. ಕುಡುಒಕ್ಕಲಿಗ.

ಗಾಣಿಗ ಮತ್ತು ನಾಡಗೌಡ ಜಾತಿಯ ಜನಗಳು, ಬಿಜಾಪೂರ ಜಿಲ್ಲೆಯಲ್ಲಿ ದೇವದಾಸಿ ಪದ್ಧತಿಯು ಇಂದಿಗೂ ಮುಂದುವರೆದು ಬಂದುದಕ್ಕೆ ಕಾರಣಾವಾಗಿದ್ದಾರೆಂದು ಚೆನ್ನಣ್ಣ ವಾಲೀಕಾರ ಇವರು ಹೇಳುತ್ತಾರೆ(ಚೆನ್ನಣ್ಣ ವಾಲೀಕಾರ, ೨೦೦೧).[೧೦] ಎಮ್ ರಿಟಾ ರೋಝಾರಿಯೋ ಅವರು ತಮ್ಮ 'ಟ್ರಾಫಿಕಿಂಗ್ ಇನ್ ವುಮೆನ್ ಆ್ಯಂಡ್ ಚಿಲ್ಡ್ರನ್ ಇನ್ ಇಂಡಿಯಾ(೧೯೮೮), ಎಂಬ ಪುಸ್ತಕದಲ್ಲಿ 'ಕರ್ನಾಟಕ ಮತ್ತು ಮಹಾರಾಷ್ಟ್ರದ ದೇವದಾಸಿ ಬೆಲ್ಟ್(ಬಿಜಾಪೂರ-ಬೆಳಗಾವಿ-ಮಿರಜ್) ಇದು ಬಿಜಾಪೂರ ಜಿಲ್ಲೆಯನ್ನು ತಲುಪುತಿದ್ದು, ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿಯೂ ದೇವದಾಸಿ ಪದ್ಧತಿಯ ಆಚರಣೆ ಮಾಡುತ್ತವೆ. ಹನುಮನ ಮಂದಿರವನ್ನು ಹೊಂದಿರುವ ತಿಕೋಟ ಗ್ರಾಮವು ಹೆಣ್ಣುಮಕ್ಕಳು ದೇವದಾಸಿಯರನ್ನಾಗಿ ಸಮರ್ಪಿಸಿಕೊಳ್ಳುವುದಕ್ಕೆ ಜಿಲ್ಲೆಯಲ್ಲಿಯೇ ಪ್ರಮುಖ ಕೇಂದ್ರವಾಗಿದೆ"[೧೧] ಎಂದು ಬರೆಯುತ್ತಾರೆ.

ಚೆನ್ನಣ್ಣ ವಾಲಿಕಾರ ಇವರು, "ಬಿಜಾಪೂರವು ಮಹಾರಾಷ್ಟ್ರ ಮತ್ತು ಕರ್ನಾಟಕದ ಗಡಿ ಪ್ರದೇಶ ವಾಗಿರುವುದರಿಂದ ಇಲ್ಲಿ ಜೋಗತಿ, ಬಸವಿ, ಸೂಳೆ, ಪಾತ್ರದವರು ಹೆಚ್ಚಿನ ಸಂಖ್ಯೆಯಲ್ಲಿ ಸಿಗುವರು. ಬಿಜಾಪೂರದ ಅಥರ್ಗಾ, ಮುಧೋಳ, ತಾಂಬಾ, ಜಮಖಂಡಿ, ಮುಳ್ಳಸಾವಟಗಿ ಮತ್ತು ತಿಕೋಟಾಗಳು ಗಡಿಗೆ ಹೊಂದಿಕೊಂಡ ಪ್ರದೇಶಗಳಾಗಿದ್ದು, ಈ ಪ್ರದೇಶಗಳಿಂದ ಮಹಾರಾಷ್ಟ್ರಾದ ವೇಶ್ಯಾಗೃಹಗಳಿಗೆ ಹೆಣ್ಣುಮಕ್ಕಳ ಸಾಗಾಣಿಕೆಯು ಸರಳವಾಗಿದೆ. ಪ್ರತಿನಿತ್ಯ ಸಾವಿರಾರು ಕಾರು, ಟ್ರಕ್ಕು, ಲಾರಿ, ಬಸ್ಸುಗಳು ಕೊಲ್ಲಾಪೂರ, ಸೊಲ್ಲಾಪೂರ, ಪುಣೆ, ಮೀರಜ, ಸಾಂಗ್ಲಿ, ಮುಂಬಯಿಗಳಿಗೆ ಹೋಗಿ ಬರುತ್ತಿರುವುದರಿಂದ, ಹಗಲೂ ರಾತ್ರಿ ಈ ಗಡಿಪ್ರದೇಶಗಳಲ್ಲಿ ಜನ ತಿರುಗಾಡುತ್ತಿರುವುದರಿಂದ ಇಲ್ಲಿ ದೇವದಾಸಿ ಪದ್ಧತಿಯು ಜೀವಂತವಾಗಿ ಉಳಿಯಲು ಕಾರಣವಾಗಿದೆ"[೧೨] ಎಂದು ಹೇಳುತ್ತಾರೆ.

ಪ್ರಸ್ತುತ ಬಿಜಾಪೂರ ಜಿಲ್ಲೆಯಲ್ಲಿ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು (೧೯೯೩-೯೪ ಮತ್ತು ೨೦೦೮-೦೯) ಮಾಡಿದ ಸಮೀಕ್ಷೆಯ ಪ್ರಕಾರ ಬಿಜಾಪೂರ ಜಿಲ್ಲೆಯಲ್ಲಿ ೪೧೦೩ ಮಹಿಳೆಯರು ದೇವದಾಸಿಯರಿದ್ದಾರೆ. ಇದು ಮಾಶಾಸನ ತೆಗೆದುಕೊಳ್ಳಲು ಅರ್ಹರಿರುವ ದೇವದಾಸಿ ಮಹಿಳೆಯರ ಸಂಖ್ಯೆಯಾಗಿದೆ. ಇದನ್ನು ಬಿಟ್ಟೂ ಚಿಕ್ಕ ವಯಸ್ಸಿನ ಮಹಿಳೆಯರು ದೇವದಾಸಿಯರಿರುವುದು ಕಂಡುಬರುತ್ತದೆ. ಹಾಗಾಗಿ ಸಾಮಾಜಿಕವಾಗಿ ಪರಿಶಿಷ್ಟ ಜಾತಿಯ ಮಹಿಳೆಯರನ್ನು ಧರ್ಮದ ಹೆಸರಿನಲ್ಲಿ ಅಂಚಿನಲ್ಲಿ ಇಟ್ಟಿರುವುದು ಮತ್ತು ಇಡುತ್ತಿರುವುದು ಕಂಡುಬರುತ್ತಿದೆ. ಸಾಕಷ್ಟು ಶೈಕ್ಷಣಿಕ ಸೌಲಭ್ಯಗಳು ಇದ್ದಾಗಲೂ ಸಹ ಮಹಿಳೆ ಮತ್ತು ಹೆಣ್ಣುಮಕ್ಕಳನ್ನು ಲೈಂಗಿಕವಾಗಿ ಇಲ್ಲಿ ವ್ಯವಸ್ಥಿತವಾಗಿ ಹಿಂಸಿಸಲಾಗುತ್ತಿದೆ.

**೨.೨/೪ ಶೈಕ್ಷಣಿಕ**

ಬಿಜಾಪೂರ ಜಿಲ್ಲೆಯು ವೃತ್ತಿಪರ ಶಿಕ್ಷಣದ ಒಂದು ವಲಯವಾಗಿ ಬೆಳೆಯುತ್ತಿದೆ. ೧೯೮೦ಕ್ಕಿಂತ ಮೊದಲು ಕೆಲವೇ ಕೆಲವು ವೃತ್ತಿಪರ ಶಿಕ್ಷಣ ಸಂಸ್ಥೆಗಳು ಇದ್ದವು. ಆದರೆ ಇತ್ತೀಚಿಗೆ ಅದರಲ್ಲಿ ಬೆಳವಣಿಗೆ ಕಂಡುಬರುತ್ತಿದೆ. ಅದರ ಜೊತೆಗೆ, ಕಲೆ, ವಿಜ್ಞಾನ ಮತ್ತು ಸಾಮಾಜಿಕ ವಿಜ್ಞಾನಗಳಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ ನೀಡುವ ಮಹಾವಿದ್ಯಾಲಯಗಳು ಪ್ರಾರಂಭವಾಗಿವೆ. ಇವು

ಬೆಳಗಾವಿಯ ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯದೊಂದಿಗೆ ಸಂಲಗ್ನಗೊಂಡಿವೆ. ಸ್ನಾತಕೋತ್ತರ ಪದವಿ ನೀಡಲು ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯದ ವಿಸ್ತೀರ್ಣ ಕೇಂದ್ರವೂ ಇಲ್ಲಿ ಪ್ರಾರಂಭಗೊಂಡಿದೆ. ವಿಶ್ವೇಶ್ವರಯ್ಯ ತಾಂತ್ರಿಕ ಮತ್ತು ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯಗಳೊಂದಿಗೆ ಇಂಜನೀಯರಿಂಗ್ ಮತ್ತು ಮೆಡಿಕಲ್ ಕಾಲೇಜ್‌ಗಳು ಕಾರ್ಯನಿರ್ವಹಿಸುತ್ತಿವೆ. ಮಹಿಳೆಯರ ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸಲು ೨೦೦೩ರಲ್ಲಿ ರಾಜ್ಯ ಮಹಿಳಾ ವಿಶ್ವವಿದ್ಯಾಲಯವು ಸ್ಥಾಪನೆಗೊಂಡಿದೆ. ಇಷ್ಟೆಲ್ಲ ಬೆಳವಣಿಗೆ ಕಂಡಿದ್ದರೂ ಸಹ ಜಿಲ್ಲೆಯ ಸಾಕ್ಷರತೆಯು ಉತ್ತಮವಾಗಿಲ್ಲ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೫೭.೪೬ರಷ್ಟು ಅಕ್ಷರಸ್ಥರು ಇದ್ದಾರೆ. ಸಾಕ್ಷರತೆ ಪ್ರಮಾಣವು ಪುರುಷರಲ್ಲಿ ೬೮.೧೦, ಸ್ತ್ರೀಯರಲ್ಲಿ ೫೬.೮೭ರಷ್ಟು ಇರುತ್ತದೆ.

**೨.೨/೫ ಆರ್ಥಿಕ**

ಬಿಜಾಪೂರ ಜಿಲ್ಲೆಯ ಮಾನವ ಅಭಿವೃದ್ಧಿ ಸೂಚ್ಯಾಂಕದ ಪ್ರಕಾರ ರಾಜ್ಯದಲ್ಲಿ ೨೩ನೇ ರ್‍ಯಾಂಕಿನಲ್ಲಿದ್ದು, ಆದಾಯದಲ್ಲಿ ೧೨ನೇ(೦.೫೪೯) ಮತ್ತು ಆರೋಗ್ಯದಲ್ಲಿ ೨೪ನೇ(೦.೬೨೭) ರ್‍ಯಾಂಕಿನಲ್ಲಿ ಇದೆ. ತೋಟಗಾರಿಕೆ ಮತ್ತು ಕೃಷಿಗೆ ಸಂಬಂಧಿಸಿದ ಕೆಲಸಗಳು ಮತ್ತು ವ್ಯಾಪಾರ ವಹಿವಾಟುಗಳು ಜಿಲ್ಲೆಯ ಪ್ರಮುಖ ಉದ್ಯೋಗವಾಗಿದೆ. ಒಟ್ಟು ೧೦,೫೪೧ ಚ.ಕಿ.ಮೀ, ವಿಸ್ತೀರ್ಣದಲ್ಲಿ, ೭,೭೬೦ ಚ.ಕಿ.ಮೀ ಪ್ರದೇಶವು ಸಾಗುವಳಿಗೆ ಒಳಪಟ್ಟಿದೆ. ಒಟ್ಟು ಸಾಗುವಳಿಗೊಂಡ ಭೂಮಿಯಲ್ಲಿ ಶೇಕಡಾ ೧೭.೩ ಭೂಮಿ ಮಾತ್ರ ನೀರಾವರಿಗೊಂಡಿದೆ. ಉಳಿದ ಅತೀ ಹೆಚ್ಚಿನ ಶೇಕಡಾ ೮೨.೭ರಷ್ಟು ಕೃಷಿ ಪ್ರದೇಶವು ಒಣ ಬೇಸಾಯವಾಗಿದ್ದು, ಮಳೆಯಾಶ್ರಿತವಾಗಿದೆ.

ಜಿಲ್ಲೆಯಲ್ಲಿ ಏಕದಳ ಆಹಾರ ಧಾನ್ಯಗಳಾದ ಜೋಳ, ಮುಸುಕಿನ ಜೋಳ, ಸಜ್ಜೆ ಮತ್ತು ಗೋಧಿ ಪ್ರಮುಖ ಬೆಳೆಗಳಾಗಿವೆ. ಹಾಗೂ ದ್ವಿದಳ ಧಾನ್ಯಗಳಾದ, ತೊಗರಿ, ಹುರುಳಿ, ಹೆಸರು, ಅವರೆ, ಅಲಸಂದಿ, ಕಡಲೆ ಬೆಳೆಯನ್ನೂ ಸಹ ಗಣನೀಯ ಪ್ರಮಾಣದಲ್ಲಿ ಬೆಳೆಯುತ್ತಾರೆ. ಇದರ ಜೊತೆಗೆ ಎಣ್ಣೆಕಾಳುಗಳಾದ ಶೇಂಗಾ, ಸೂರ್ಯಕಾಂತಿ, ಕುಸುಬೆ, ಎಳ್ಳು, ಹುಚ್ಚೆಳ್ಳು, ಅಗಸೆಯನ್ನು ಬೆಳೆಯುತ್ತಾರೆ. ತೋಟಗಾರಿಕಾ ಬೆಳೆಗಳಾಗಿ, ದ್ರಾಕ್ಷಿ, ದಾಳಿಂಬೆ, ಪೇರಲ, ಚಿಕ್ಕು ಮತ್ತು ಲಿಂಬೆ ಬೆಳೆಗಳನ್ನು ಬೆಳೆಯಲಾಗುತ್ತಿದೆ. ವಾಣಿಜ್ಯ ಬೆಳೆಗಳಾದ ಹತ್ತಿ, ಕಬ್ಬು, ತಂಬಾಕು ಮತ್ತು ಎಣ್ಣೆ ಕಾಳನ್ನೂ ಸಹ ಬೆಳೆಯಲಾಗುತ್ತಿದೆ.

ಜಿಲ್ಲೆಯಲ್ಲಿ ೩ ಸಕ್ಕರೆ ಕಾರ್ಖಾನೆಗಳನ್ನು ಬಿಟ್ಟರೆ, ಬೇರೆ ಯಾವ ಬೃಹತ್ ಪ್ರಮಾಣದ ಕೈಗಾರಿಕೆಗಳು ಕಂಡು ಬರುವುದಿಲ್ಲ. ವ್ಯಾಪಾರ, ಸಾರಿಗೆ, ಹೊಟೇಲ್, ಆಟೋಮೋಬೈಲ್ಸ್, ಎಲೆಕ್ಟ್ರಾನಿಕ್ಸ್ ಮತ್ತು ಎಲೆಕ್ಟ್ರಿಕಲ್ಸ್, ಆಹಾರ ಮತ್ತು ಮಾದಕ ವಸ್ತುಗಳು, ಗ್ಲಾಸ್ ಮತ್ತು ಸಿರೆಮಿಕ್ಸ್, ಜಾಬ್ ವರ್ಕ್ಸ್ ಮತ್ತು ರಿಪೇರಿ, ಚರ್ಮ, ಮೆಕ್ಯಾನಿಕ್ ಇಂಜನೀಯರಿಂಗ್, ಕಾಗದ ಮತ್ತು ಮುದ್ರಣ, ರಬ್ಬರ್ ಮತ್ತು ಪ್ಲಾಸ್ಟಿಕ್, ಟೆಕ್ಸ್ಟೈಲ್ಸ್ ನಂತಹ ಕಿರು ಕೈಗಾರಿಕಾ ಘಟಕಗಳು ಇವೆ.

**ಕೋಷ್ಟಕ ೨.೨. ಕೆಲಸಗಾರರ ವರ್ಗೀಕರಣ**

| ಅ.ಸ | ಕೆಲಸಗಾರರು | ಪುರುಷರು | ಮಹಿಳೆಯರು |
|---|---|---|---|
| ೧ | ಮುಖ್ಯ ಕೆಲಸಗಾರರು | ೪,೧೩,೮೫೦ | ೧,೩೮,೧೨೨ |
| ೨ | ಅರೆಕಾಲಿಕ ಕೆಲಸಗಾರರು | ೫೩,೮೧೬ | ೧,೧೨,೪೨೫ |
| ೩ | ಕೃಷಿ ಸಾಗುವಳಿದಾರರು | ೧,೭೦,೬೧೨ | ೪೬,೪೪೪ |
| ೪ | ಕೃಷಿ ಕಾರ್ಮಿಕರು | ೧,೨೨,೮೯೨ | ೧,೬೩,೮೪೭ |
| ೫ | ಗೃಹ ಕೈಗಾರಿಕೆ ಕೆಲಸಗಾರರು | ೧೪,೪೨೩ | ೬,೭೧೪ |
| ೬ | ಇತರೆ ಕೆಲಸಗಾರರು | ೧,೫೯,೭೩೯ | ೩೩,೫೪೨ |
| ೭ | ಕೃಷಿಯೇತರ ಕೆಲಸಗಾರರು | ೧,೭೪,೧೬೨ | ೪೦,೨೫೬ |

**ಆಧಾರ:** ವಿಜಾಪೂರ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೧-೨೦೧೨. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ.

ಮೇಲಿನ ಕೊಷ್ಟಕದಲ್ಲಿ ಕಂಡುಬರುವಂತೆ, ಕೃಷಿ ಕಾರ್ಮಿಕರಾಗಿ ದುಡಿಯುವ ಕೆಲಗಾರರಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಿಗೆ ಇರುವುದು ಕಂಡು ಬರುತ್ತದೆ. ಆದರೆ ಕೆಳಗಿನ ಕೋಷ್ಟಕ ಗಮನಿಸಿದಾಗ ಅತೀ ಕಡಿಮೆ ಸಂಖ್ಯೆಯ ಮಹಿಳೆಯರು ಭೂಹಿಡುವಳಿದಾರರಾಗಿರುವುದು ಕಂಡು ಬರುತ್ತದೆ. ಹಾಗಾಗಿ ತಮ್ಮ ಮತ್ತು ತಮ್ಮನ್ನು ಅವಲಂಬಿಸಿದವರ ಹಸಿವನ್ನು ಹಿಂಗಿಸಲು ತಳಸಮುದಾಯದ ಹೆಣ್ಣುಮಕ್ಕಳು ತಮ್ಮ ಕೂಲಿಗಾಗಿ ಮೇಲ್ಜಾತಿಯ ಜನರನ್ನೇ ಅವಲಂಬಿಸಬೇಕಾಗಿ ಬರುವುದರಿಂದ ಅಲ್ಲಿಯೂ ಸಹ ಈ ಹೆಣ್ಣುಮಕ್ಕಳು ದೈಹಿಕವಾಗಿ, ಲೈಂಗಿಕವಾಗಿ ಹಿಂಸೆಗೆ ಒಳಪಡುವ ಸಾಧ್ಯತೆಗಳು ದಟ್ಟವಾಗಿರುತ್ತವೆ.

**ಕೋಷ್ಟಕ ೨.೩. ಒಟ್ಟು ಕೃಷಿ ಭೂಹಿಡುವಳಿದಾರರು ಮತ್ತು ವಿಸ್ತೀರ್ಣ**

| ಅ.ಸ | ವರ್ಗ | ಪುರುಷರು | | ಮಹಿಳೆಯರು | |
|---|---|---|---|---|---|
| ೧ | ಪರಿಶಿಷ್ಟ ಜಾತಿ | ಸಂಖ್ಯೆ: | ೪೦,೩೭೮ | ಸಂಖ್ಯೆ: | ೭,೦೬೨ |
| | | ವಿಸ್ತೀರ್ಣ: | ೮೬,೬೬೨ | ವಿಸ್ತೀರ್ಣ: | ೧೨,೫೧೫ |
| ೨ | ಪರಿಶಿಷ್ಟ ಪಂಗಡ | ಸಂಖ್ಯೆ: | ೨,೨೨೫ | ಸಂಖ್ಯೆ: | ೩೭೫ |
| | | ವಿಸ್ತೀರ್ಣ: | ೫,೨೨೫ | ವಿಸ್ತೀರ್ಣ: | ೭೫೮ |
| ೩ | ಇತರೆ | ಸಂಖ್ಯೆ: | ೨,೫೭,೯೩೧ | ಸಂಖ್ಯೆ: | ೩೪,೧೬೩ |
| | | ವಿಸ್ತೀರ್ಣ: | ೭,೫೨,೫೧೯ | ವಿಸ್ತೀರ್ಣ: | ೯೧,೯೮೧ |

**ಆಧಾರ:** ವಿಜಾಪೂರ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೧-೨೦೧೨. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ.

**೨.೨/೬. ಸಾರಿಗೆ ಸಂಪರ್ಕ:** ಬಿಜಾಪೂರ ಜಿಲ್ಲೆಯಲ್ಲಿ ಸಾರಿಗೆ ಸಂಪರ್ಕವು ಉತ್ತಮವಾಗಿದೆ. ಜಿಲ್ಲೆಯ ಬಸವನ ಬಾಗೇವಾಡಿ, ಬಿಜಾಪೂರ ಮತ್ತು ಇಂಡಿ ತಾಲ್ಲೂಕುಗಳಲ್ಲಿ ಬ್ರಾಡ್ ಗೇಜ್ ಹೊಂದಿರುವ ೨೦ ರೇಲ್ವೆ ನಿಲ್ದಾಣಗಳಿವೆ.

**೨.೨/೭. ಪ್ರವಾಸ:** ಬಿಜಾಪೂರ ಜಿಲ್ಲೆಯು ಪ್ರವಾಸಿ ತಾಣವಾಗಿದೆ. ಜಗತ್ಪ್ರಸಿದ್ಧವಾದ ಗೋಳಗುಮ್ಮಟ, ಇಬ್ರಾಹಿಂ ರೋಜಾ, ಮುಲಕ್ ಮೈದಾನ ತೋಪ್‌ಗಳು ನಗರದಲ್ಲಿವೆ. ಹಾಗೆಯೇ ಕೃಷ್ಣಾ ನದಿಗೆ ಅಡ್ಡಲಾಗಿ ಕಟ್ಟಿರುವ ಬೃಹತ್ ಆಲಮಟ್ಟಿ ಅಣೆಕಟ್ಟು ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನಲ್ಲಿದೆ.

## ೨.೩ ಬೆಳಗಾವಿ ಜಿಲ್ಲೆ

**೨.೩/೧ ಚಾರಿತ್ರಿಕ:** ಬೆಳಗಾವಿಯು ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಬಹುಮನಿಗಳು, ಆದಿಲ್‌ಶಾಹಿಗಳು, ಸೇವುಣರು ಮತ್ತು ಬ್ರಿಟಿಷರ ಆಳ್ವಕೆಗೊಳಪಟ್ಟಿತ್ತು. ಬೆಳಗಾವಿಯ ಮೂಲ ಹೆಸರು, ಶಿಲಾಹಾರರ ಪ್ರಥಮ ದಾಖಲೆಯ ಪ್ರಕಾರ ವೇಲು ಗ್ರಾಮ ಅಥವಾ ವೇಣಿ ಗ್ರಾಮವೆಂದಾಗಿದೆ. ವೇಣು ಎಂದರೆ ಬೊಂಬು ಎಂದರ್ಥ. ಇದು ಈ ಭಾಗದ ದಟ್ಟವಾದ ಕಾಡುಗಳಲ್ಲಿ ಹೇರಳವಾಗಿ ಸಿಗುತ್ತಿತ್ತು. ಆದ್ದರಿಂದ ಈ ಹೆಸರು ಬಂದಿರಬಹುದು. ಇದು ೧೮೩೬ರಲ್ಲಿ ಹೊಸ ಜಿಲ್ಲೆಯನ್ನು ಹುಟ್ಟು ಹಾಕಿದಾಗ ಬೆಳಗಾಂ ಅದರ ಕೇಂದ್ರಸ್ಥಾನವಾಯಿತು. ಪ್ರಸ್ತುತ ಬೆಳಗಾವಿಯು ಉತ್ತರ ಕರ್ನಾಟಕದ ಡಿವಿಜನಲ್ ಹೆಡ್‌ಕ್ವಾರ್ಟರ್ ಆಗಿರುವ ಬೆಳಗಾವಿಯು ಬಾಂಬೆ ಕರ್ನಾಟಕದ ಒಂದು ಭಾಗವಾಗಿದ್ದು, ಅಥಣಿ, ಬೈಲಹೊಂಗಲ, ಬೆಳಗಾವಿ, ಚಿಕ್ಕೋಡಿ, ಗೋಕಾಕ, ಹುಕ್ಕೇರಿ, ಖಾನಾಪುರ, ರಾಯಭಾಗ, ರಾಮದುರ್ಗ, ಸವದತ್ತಿ ಎಂಬ ೧೦ ತಾಲೂಕುಗಳನ್ನು ಒಳಗೊಂಡ ದೊಡ್ಡ ಜಿಲ್ಲೆಯಾಗಿದೆ.

ಬೆಳಗಾವಿ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಾಕಷ್ಟು ಮಳೆ ಇಲ್ಲದೆ ಬೆಳೆಗಳು ಹಾಳಾಗುವುದು ಸರ್ವೇ ಸಾಮಾನ್ಯ. ಕ್ರಿ.ಶ ೧೩೭೮ರಿಂದ ಸತತವಾಗಿ ಎರಡು ದಶಕಗಳ ಕಾಲ ಮುಂದುವರೆದ 'ದುರ್ಗಿ ಬರ'ದಲ್ಲಿ ಪ್ರದೇಶದ ಎಲ್ಲ ಬೆಳೆಗಳೂ ನಾಶವಾದ ಬಗ್ಗೆ ದಾಖಲೆಗಳಿವೆ. ಆಗ ಬೆಳಗಾವಿ ಜಿಲ್ಲೆಯ ಬಹುಪಾಲು ಜನರು ಗುಳೆ ಹೋಗಿದ್ದರು. ಬೆಳಗಾವಿ ಜಿಲ್ಲೆಯ ಗೆಜೆಟಿಯರ್‌ನಲ್ಲಿ ಉಲ್ಲೇಖಿಸು ವಂತೆ, ಕ್ರಿ.ಶ. ೧೪೨೧ರಲ್ಲಿ ಉಂಟಾದ ತೀವ್ರ ಬರದಿಂದ ಜಿಲ್ಲೆಯ ಅನೇಕ ಜಾನುವಾರುಗಳು ಸಾವನ್ನಪ್ಪಿದವು. ಬಡವರ ಅನುಕೂಲಕ್ಕಾಗಿ ಅಹಮದ್ ಶಾ ಬಹಮನಿ (ಕ್ರಿ.ಶ.೧೪೨೨-೩೬) ಧಾನ್ಯಗಳ ಸಾರ್ವಜನಿಕ ಅಂಗಡಿಗಳನ್ನು ತೆರೆದನು. ಮರು ವರ್ಷವೂ ಬರಗಾಲ ಮುಂದುವರೆಯಿತು. ಕ್ರಿ.ಶ. ೧೪೭೨ ಮತ್ತು ೧೪೭೩ ಈ ಎರಡು ವರ್ಷಗಳಲ್ಲಿ ಮಳೆ ನಾಪತ್ತೆಯಾದ ಕಾರಣ ಜನರು ಹೊಲ ಗಳಲ್ಲಿ ಬಿತ್ತನೆ ಮಾಡಲೇ ಇಲ್ಲ. ಹಲವರು ಸತ್ತರು. ಇನ್ನೂ ಹಲವರು ಗುಳೆ ಹೋದರು. ಕ್ರಿ.ಶ. ೧೭೮೭-೮೮ನೆಯ ಇಸ್ವಿಯಲ್ಲಿ ಸಂಭವಿಸಿದ ಬರಕ್ಕೆ ಮಳೆ ಇಲ್ಲದೆ ಮತ್ತು ಮಿಡತೆಗಳ ಹಾವಳಿಯಿಂದ ಬೆಳೆಗಳು ಇಡಿಯಾಗಿ ನಾಶವಾದವು. ಈ ಪರಿಸ್ಥಿತಿಯು ಕ್ರಿ.ಶ. ೧೭೯೫-೯೬ರವರೆಗೂ ಮುಂದುವರೆಯಿತು.

ಮೈಸೂರಿನ ಮೇಲೆ ಯುದ್ಧ ಮಾಡಲು ಮರಾಠರು ಕ್ರಿ.ಶ. ೧೭೯೦ರಲ್ಲಿ ಬೆಳಗಾವಿ ಮತ್ತು ಧಾರವಾಡ ಮೂಲಕ ಹೋಗಿ ಯುದ್ಧದಲ್ಲಿ ಜಯಶಾಲಿಗಳಾಗಿ ಹಿಂದಿರುಗಿ ಬರುವಾಗ, ಆಹಾರಕ್ಕಾಗಿ ಸೈನ್ಯವು ಇಲ್ಲಿಯ ಜನರ ಬೆಳೆಯನ್ನು ನಾಶ ಮಾಡಿತು. ಕ್ರಿ.ಶ. ೧೭೯೧–೯೨ರಲ್ಲಿ ಮತ್ತೆ ಮಳೆಯ ಅಭಾವದಿಂದಾಗಿ ಕೃಷಿ ಮಾಡುವುದು ನಿಂತು ಇಡೀ ಬೆಳಗಾವಿ ಜಿಲ್ಲೆ ತೀವ್ರ ಬರಗಾಲಕ್ಕೆ ತುತ್ತಾಯಿತು. ಬರಗಾಲದ ತೀವ್ರತೆ ಎಷ್ಟಿತ್ತೆಂದರೆ, ಗೋಕಾಕ್ ನಲ್ಲಿ ಒಬ್ಬ ಮಹಿಳೆ ತನ್ನ ಮಗುವನ್ನೇ ಕೊಂದು ತಿಂದಳು. ಅದಕ್ಕೆ ಪ್ರತಿಯಾಗಿ ಅವಳನ್ನು ಎಮ್ಮೆಯ ಕಾಲಿಗೆ ಕಟ್ಟಿ ಹಾಕಿ, ಸಾಯುವವರೆಗೂ ಅವಳನ್ನು ಎಳೆದಾಡಲಾಯಿತು. 'ಡೋಗಿ ಬರ' ಎಂದು ಹೆಸರಾದ ಈ ಬರದಲ್ಲಿ ಸತ್ತವರನ್ನು ಎತ್ತಿ ಹಾಕುವವರೂ ಇರಲಿಲ್ಲ. ಈ ಬರದಲ್ಲಿ ಆಹಾರ ಧಾನ್ಯ ಸಿಗಲಾರದಾದಾಗ ಪ್ರಾಣಿ ಮಾಂಸವನ್ನು ತಿನ್ನಲಾಗದೆ ಕೆಲವು ಹಿಂದೂಗಳು ವಿಷ ಸೇವಿಸಿದರು. ಮತ್ತೆ ಕೆಲವು ಬಡವರು ಬದುಕುವುದಕ್ಕಾಗಿ ಗಿಡ ಮರಗಳ ಬೇರುಗಳು ಮತ್ತು ಬಳ್ಳಿಗಳನ್ನು, ಸತ್ತ ಪ್ರಾಣಿಗಳನ್ನು ತಿಂದರು. ಬಳಲಿಕೆ ಮತ್ತು ಸಾವಿನಿಂದ ರಕ್ಷಿಸಿಕೊಳ್ಳಲು ಅನೇಕ ರೈತರು ಲೇವಾದೇವಿಗಾರರಿಂದ ಸಾಲ ಪಡೆದು ಅವರ ಹಿಡಿತದಲ್ಲಿ ಸಿಕ್ಕಿ ಹಾಕಿಕೊಂಡರು. ಕ್ರಿ.ಶ. ೧೮೦೨–೧೮೦೩ರಲ್ಲಿ ಬೆಳಗಾವಿ ಜಿಲ್ಲೆ ಮತ್ತೆ ಬರಗಾಲಕ್ಕೆ ತುತ್ತಾಯಿತು. ಗೋಕಾಕ್ ತಾಲೂಕಿನಲ್ಲಿ ಸುಮಾರು ೧೫,೦೦೦ ಜನರು ಅಸುನೀಗಿದರು. ಕ್ರಿ.ಶ ೧೮೩೨–೩೩ರಲ್ಲಿ ಮುಂಗಾರು ಜಿಲ್ಲೆಯ ಪೂರ್ವ ಭಾಗದಲ್ಲಿ ವಿಫಲವಾಯಿತು. ಆ ಸಮಯದಲ್ಲಿ ಜಿಲ್ಲೆಯ ದನಕರುಗಳಿಗೆ ತೀವ್ರ ಹಾನಿಯನ್ನುಂಟು ಮಾಡಿತು.

೧೯೪೩–೪೪ರ ಬರಗಾಲದ ಹಾವಳಿಯನ್ನು ಕುರಿತು ಕಲ್ಕತ್ತಾ ವಿಶ್ವವಿದ್ಯಾಲಯದ ಮಾನವಶಾಸ್ತ್ರ ವಿಭಾಗವು ಮಾದರಿ ಸರ್ವೇಕ್ಷಣೆಗಳನ್ನು ಮಾಡಿತು. ಆ ಪರಿವೀಕ್ಷಣೆಯ ವರದಿಯಂತೆ, "ಕುಟುಂಬ ದೊಳಗಿನ ಆರ್ಥಿಕ ಆಧಾರ ಮತ್ತು ಸಾಮಾಜಿಕ–ಮಾನಸಿಕ ಸಂಬಂಧದೊಳಗೆ ಪ್ರಸ್ತುತ ಸಂಕ್ಷೋಭೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂದರೆ, ಶೇಕಡಾ ೨೪.೭ಕ್ಕಿಂತಲೂ ಹೆಚ್ಚು ಕುಟುಂಬಗಳು ದಿಕ್ಕಾಪಾಲಾದವು. ತಮ್ಮ ಹೆಂಡತಿಯರನ್ನು ಗಂಡಂದಿರು ಓಡಿಸಿದರು. ನರಳುವ ಗಂಡಂದಿರನ್ನು ಹೆಂಡತಿಯರು ತೊರೆದರು. ವಯಸ್ಸಾದ ಮತ್ತು ಅಂಗವಿಕಲರಾದ ತಂದೆ ತಾಯಿಗಳನ್ನು ಮಕ್ಕಳು ತ್ಯಜಿಸಿದರು ಮತ್ತು ತಂದೆ ತಾಯಿಗಳು ಹತಾಶೆಯಿಂದ ಮನೆ ತೊರೆದರು. ಇಂಥ ಸಂಕಷ್ಟಗಳಿಗೆ ಒಳಗಾದವರಲ್ಲಿ ಪರಿಶಿಷ್ಟ ಜಾತಿಗಳವರ ಪ್ರಮಾಣ ಶೇಕಡಾ ೫೨.೭ರಷ್ಟಿತ್ತು".

ಇಂತ ಸಂದರ್ಭದಲ್ಲಿ ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ, ಪೂಣಾ ಮತ್ತು ಬೆಳಗಾವಿಯಲ್ಲಿ ಸ್ಥಾಪಿಸಲಾದ ದಂಡು ಪ್ರದೇಶಗಳು ತಮ್ಮ ಸುತ್ತಲೂ ಗಣನೀಯವಾಗಿ ವೇಶ್ಯಾವಾಟಿಕೆ ಬೆಳೆಯಲು ಅನುಕೂಲವಾದ ವಾತಾವರಣವನ್ನು ಸೃಷ್ಟಿಸಿದವು. ಸೈನಿಕರ ಲೈಂಗಿಕ ಅಗತ್ಯಗಳನ್ನು ಪೂರೈಸಲು ಗ್ರಾಮಾಂತರ ಪ್ರದೇಶಗಳಲ್ಲಿದ್ದ ಪವಿತ್ರ ವೇಶ್ಯಾಗಾರಿಕೆಯು ನಗರ ಪ್ರದೇಶಗಳಿಗೆ ವರ್ಗಾವಣೆಗೊಂಡಿತು. ದೇವದಾಸಿ ಪದ್ಧತಿಯ ಮುಂದುವರಿಕೆಗೆ ಕೈಗಾರಿಕೀಕರಣ ಮತ್ತು ನಗರೀಕರಣಗಳೂ ಕಾಣಿಕೆ ನೀಡಿದವು(ಜೋಗನ್ ಶಂಕರ್, ೧೯೯೩)[೧೩]

## ೨.೩/೨. ಭೌಗೋಳಿಕ

**ಅಕ್ಷಾಂಶ ಮತ್ತು ರೇಖಾಂಶ:** ದಖ್ಖನ್ ಪ್ರಸ್ಥಭೂಮಿಯ ಮೇಲ್ಭಾಗದಲ್ಲಿದಲ್ಲಿರುವ ಬೆಳಗಾವಿ ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು, ೧೫ ಡಿಗ್ರಿ ೨೩' ರಿಂದ ೧೬ ಡಿಗ್ರಿ ೫೮' ಉತ್ತರ ಅಕ್ಷಾಂಶದೊಂದಿಗೆ ಹಾಗೂ ೭೪ ಡಿಗ್ರಿ ೦೫' ರಿಂದ ೭೫ ಡಿಗ್ರಿ ೨೮' ಪೂರ್ವ ರೇಖಾಂಶದೊಂದಿಗೆ ಇರುವುದು. ಇದು ಉತ್ತರ ಮತ್ತು ಪಶ್ಚಿಮಕ್ಕೆ ಮಹಾರಾಷ್ಟ್ರ ರಾಜ್ಯ, ಪೂರ್ವಕ್ಕೆ ಬಾಗಲಕೋಟೆ ಮತ್ತು ದಕ್ಷಿಣಕ್ಕೆ ಧಾರವಾಡ ಮತ್ತು ಕಾರವಾರ ಜಿಲ್ಲೆಗಳನ್ನು ಒಳಗೊಂಡಿದೆ.

**ನದಿಗಳು:** ಜಿಲ್ಲೆಯಲ್ಲಿ ಕೃಷ್ಣಾ, ಮಲಪ್ರಭಾ, ಘಟಪ್ರಭಾ ನದಿಗಳು ಹರಿದಿವೆ. ಕೃಷ್ಣಾ ನದಿಗೆ ಹಿಪ್ಪರಗಿ ಹತ್ತಿರ ಮತ್ತು ಘಟಪ್ರಭಾ ನದಿಗೆ ಹಿಡಕಲ್ ಹತ್ತಿರ ಮತ್ತು ಮಲಪ್ರಭಾ ನದಿಗೆ ನವಿಲು ತೀರ್ಥದ ಹತ್ತಿರ ಆಣೆಕಟ್ಟುಗಳನ್ನು ಕಟ್ಟಲಾಗಿದೆ.

**ಮಳೆ:** ಜಿಲ್ಲೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮಳೆ ಕಂಡುಬರುತ್ತದೆ. ಸುತ್ತ ಮುತ್ತಲಿನ ಕಣಿವೆ, ಗುಡ್ಡ, ಕಾಡನ್ನು ಹೊಂದಿದ್ದರಿಂದ ಸಹಜ ಮಳೆಯ ಪ್ರಮಾಣ ಹೆಚ್ಚಾಗಿದೆ. ಎಪ್ರೀಲ್, ಮೇ ತಿಂಗಳಿನಲ್ಲಿ ಸಾಧಾರಣವಾಗಿ ಪ್ರಾರಂಭಗೊಳ್ಳುವ ಮಳೆಯು ಜೂನ್‌ನಿಂದ ಅಕ್ಟೋಬರ್‌ದವರೆಗೆ ಹೆಚ್ಚಿನ ಪ್ರಮಾಣದಲ್ಲಿ ಬೀಳುತ್ತದೆ. ವರ್ಷದಲ್ಲಿ ಸುಮಾರು ೫೦ ಸೆ ಮೀ ನಿಂದ ೮೦ ಸೆ ಮೀ ವರೆಗೆ ಮಳೆ ಆಗಿರುವ ದಾಖಲೆಗಳಿವೆ. ಆದರೆ ಈ ಮಳೆಯು ಜಿಲ್ಲೆಯ ಎಲ್ಲ ತಾಲೂಕುಗಳಿಗೂ ಒಂದೇ ತೆರನಾಗಿ ಬೀಳುವುದಿಲ್ಲ. ಜಿಲ್ಲೆಯ ಅಥಣಿ, ರಾಯಭಾಗ ಮತ್ತು ಸವದತ್ತಿ ತಾಲೂಕುಗಳಲ್ಲಿ ಮಳೆಯ ಪ್ರಮಾಣ ಕಡಿಮೆ ಇರುತ್ತದೆ. ಮಲೆನಾಡು ವಲಯದಲ್ಲಿ ಬರುವ ಖಾನಾಪೂರದಲ್ಲಿ ಜಿಲ್ಲೆಯಲ್ಲಿಯೇ ಅತೀ ಹೆಚ್ಚಿನ ಮಳೆಯಾಗುತ್ತದೆ.

**ಪ್ರಾಕೃತಿಕ ಸ್ವರೂಪ:** ಪ್ರಾಕೃತಿಕವಾಗಿ ಬೆಳಗಾವಿ ಜಿಲ್ಲೆಯನ್ನು ಪಶ್ಚಿಮ ಘಟ್ಟ ವಲಯ, ಅರೆ ಮಲೆನಾಡು ಮತ್ತು ಶುಷ್ಕ ಮೈದಾನ ಎಂದು ಮೂರು ವಲಯಗಳನ್ನಾಗಿ ಗುರುತಿಸಲಾಗಿದೆ.

**ಮಣ್ಣಿನ ರಚನೆ:** ಅತ್ಯಂತ ಫಲವತ್ತಾದ ಮಣ್ಣಿನ ಹಂಚಿಕೆ ಬೆಳಗಾವಿ ಜಿಲ್ಲೆಯಲ್ಲಿದೆ. ಬೆಳಗಾವಿಯಲ್ಲಿ ಕೃಷಿ ಭೂಮಿ ಹೆಚ್ಚಿಗಿದ್ದು, ಅದು ಶೇಕಡಾ ೪೫ ರಿಂದ ೭೦ರಷ್ಟು ಇದೆ. ಇಲ್ಲಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿದ್ದು, ಕೆಲವು ಕಡೆ ಕೆಂಪು ಮಣ್ಣು ಹರಡಿಕೊಂಡಿದೆ.

**ಹವಾಗುಣ:** ಜಿಲ್ಲೆಯಲ್ಲಿ ಬೇಸಿಗೆ ಕಾಲದಲ್ಲಿ ಅತೀ ಬಿಸಿಲು ಇರುತ್ತಿದ್ದು, ಎಪ್ರೀಲ್, ಮೇ ತಿಂಗಳಿನಲ್ಲಿ ೪೦ ರಿಂದ ೪೨ ಸೆಲ್ಸಿಯಸ್‌ವರೆಗೆ ಇರುತ್ತದೆ. ಚಳಿಗಾಲದಲ್ಲಿ ಸಾಮಾನ್ಯ ಚಳಿ ಇದ್ದು, ನವ್ಹೆಂಬರ್‌ದಿಂದ, ಜನವರಿಯವರೆಗೆ ೨೦ ರಿಂದ ೧೫ ಸೆಲ್ಸಿಯಸ್‌ವರೆಗೆ ಇರುತ್ತದೆ. ಉಳಿದ ತಿಂಗಳಲ್ಲಿ ಸಾಮಾನ್ಯ ಹವಾಮಾನ ಇರುತ್ತದೆ.

**ವಿಸ್ತೀರ್ಣ ಜನಸಂಖ್ಯೆ ಮತ್ತು ಜನಸಾಂದ್ರತೆ:** ಜಿಲ್ಲೆಯು ೧೩.೪೫೪ ಚದರ ಕಿ.ಮೀ ಪ್ರದೇಶದ ವಿಸ್ತೀರ್ಣವನ್ನು ಹೊಂದಿದೆ. ನೈರುತ್ಯದ ಪಶ್ಚಿಮಘಟ್ಟ ಭಾಗ ಬಿಟ್ಟು, ಜಿಲ್ಲೆಯ ಬಹುತೇಕ ಭಾಗ

ಮೈದಾನ ಪ್ರದೇಶವಾಗಿದೆ. ಜಿಲ್ಲೆಯು ಧಾರವಾಡ ಶ್ರೇಣಿ, ನೈಸ್ (ಸ್ಫಟಿಕ ಪಟ್ಟ ಶಿಲೆ) ರಚನೆ, ಕಲಾದಗಿ ಶ್ರೇಣಿ ಹಾಗೂ ದಖಿನ್ ಪದರುಗಲ್ಲು ಶಿಲಾರಚನೆಯನ್ನು ಹೊಂದಿದೆ. ೨೦೧೧ರ ಜನಗಣತಿಯ ಪ್ರಕಾರ, ಜಿಲ್ಲೆಯ ಒಟ್ಟು ಜನಸಂಖ್ಯೆ ೪೭,೭೮,೪೩೯ ಇದ್ದು ಜನಸಂಖ್ಯೆಯಲ್ಲಿ ೨೪,೨೭,೧೦೪ ಪುರುಷರು, ೨೩,೫೧,೩೩೫ ಸ್ತ್ರೀಯರು ಇರುತ್ತಾರೆ. ಇದರಲ್ಲಿ ೯೧,೯೬೪ ಪರಿಶಿಷ್ಟ ಜಾತಿಯ ಕುಟುಂಬಗಳು ಮತ್ತು ೪೭,೪೧೭ ಪರಿಶಿಷ್ಟ ಪಂಗಡದವರ ಕುಟುಂಬಗಳು ಇವೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಪ್ರತಿ ಚ.ಕಿ.ಮೀ. ೩೫೫.೧೭ ಜನಸಾಂದ್ರತೆ ಇದೆ. ಹಾಗೂ ಜಿಲ್ಲೆಯ ಜನಸಂಖ್ಯೆಯಲ್ಲಿ ಪುರುಷ ಮತ್ತು ಸ್ತ್ರೀಯರ ಪ್ರಮಾಣ ಪ್ರತಿ ಸಾವಿರ ಪುರುಷರಿಗೆ ೯೬೯ ಸ್ತ್ರೀಯರು ಇದ್ದಾರೆ.

**೨.೩/೪ ಸಾಮಾಜಿಕ**

ಬೆಳಗಾವಿ ಜಿಲ್ಲೆಯು ಸಾಮಾಜಿಕವಾಗಿ ಮಹಿಳೆಯರ ಸ್ವಾತಂತ್ರ್ಯ ಸಮಾನತೆ ಧೀರತ್ವಕ್ಕೆ ಹೆಸರುವಾಸಿಯಾದ ಜಿಲ್ಲೆಯಾಗಿದೆ. ಕಿತ್ತೂರ ಚೆನ್ನಮ್ಮ ಬ್ರಿಟಿಷರ ಪಡೆಯನ್ನೇ ಸೋಲಿಸಿ ಹಿಮ್ಮೆಟ್ಟಿಸಿದ್ದಳು. ಬೆಳವಡಿ ಮಲ್ಲಮ್ಮ ದಕ್ಷ ಆಡಳಿತಗಾರಳೆನಿಸಿದ್ದಳು. ಆದರೂ ಸಹ ಜಾತಿ, ಅಸ್ಪೃಶ್ಯತೆಯಂತಹ ಸಾಮಾಜಿಕ ಸಮಸ್ಯೆಗಳು ತಳಸಮುದಾಯದ ಜನರನ್ನು ಅದರಲ್ಲಿಯೂ ಮಹಿಳೆಯರನ್ನು ಕಾಡುತ್ತಿದ್ದವು. ಅದರಲ್ಲಿ ಮುಖ್ಯವಾಗಿ ದೇವದಾಸಿ ಪದ್ಧತಿಯು ಹೆಣ್ಣುಮಕ್ಕಳನ್ನು ಲೈಂಗಿಕವಾಗಿ, ದೈಹಿಕವಾಗಿ, ಮಾನಸಿಕವಾಗಿ ಜರ್ಜರಿತಳನ್ನಾಗಿ ಮಾಡುತ್ತಿದ್ದವು. ಇದರ ಜೊತೆಗೆ ಕಾಡುವ ಬರಗಾಲಗಳು ಅವರನ್ನು ಆಹಾರ ಹುಡುಕಿಕೊಂಡು ಊರಿಂದೂರಿಗೆ ಪ್ರಯಾಣಿಸುವಂತೆ ಪ್ರೇರೇಪಿಸುತ್ತಿದ್ದವು.

ಚೆನ್ನಣ್ಣ ವಾಲಿಕಾರವರು, "ಕರ್ನಾಟಕದಲ್ಲಿಯೇ ಬೆಳಗಾವಿ ವಲಯವು ಅತಿ ಹೆಚ್ಚಿನ ದೇವದಾಸಿಯರನ್ನು ಹೊಂದಿದೆ. ಇದಕ್ಕೆ ಅಲ್ಲಿ ಆಳ್ವಿಕೆ ಮಾಡಿದ ಕದಂಬರು, ಬಾದಾಮಿ ಚಾಲುಕ್ಯರು, ರಟ್ಟರು ಮತ್ತು ವಿಜಯನಗರದ ಅರಸರು ಕಟ್ಟಿಸುತ್ತಿದ್ದ ದೇವಾಲಯಗಳಾಗಿವೆ. ಏಕೆಂದರೆ ಈ ಎಲ್ಲ ದೇವಾಲಯಗಳಲ್ಲಿ ದೇವರ ಸೇವೆ ಮಾಡಲು ದೇವದಾಸಿಯರ ಅವಶ್ಯಕತೆ ಇತ್ತು. ಹಾಗಾಗಿ ದೇವಾಲಯಗಳು ಹುಟ್ಟಿಕೊಂಡಂತೆ, ಅದಕ್ಕೆ ಸೇವೆ ಮಾಡಲು ದೇವದಾಸಿಯರಾಗಿ ಸಮರ್ಪಿಸಿಕೊಳ್ಳುವ ಮಹಿಳೆಯರ ಸಂಖ್ಯೆಯೂ ಹೆಚ್ಚಿತು. ಅಂದರೆ ಬೆಳಗಾವಿ ಜಿಲ್ಲೆಯಲ್ಲಿರುವ ದೇವಾಲಯಗಳ ಪರಂಪರೆಯಿಂದಲೇ ದೇವದಾಸಿ ಮಹಿಳೆಯರು ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ಇರಲು ಕಾರಣವಾಯಿತು. ಅಲ್ಲದೇ, ಬಡತನ, ನಿರುದ್ಯೋಗ, ಹಸಿವು, ಮೂಢನಂಬಿಕೆಗಳ ಜೊತೆಗೆ, ಹೆಚ್ಚುತ್ತಿದ್ದ ವ್ಯಾಪಾರ ವಹಿವಾಟುಗಳು, ಸಾರಿಗೆ, ಮುಂಬಯಿ ಜೊತೆಗಿನ ಸಂಬಂಧಗಳು ಬೆಳಗಾವಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿ ಮಹಿಳೆಯರು ಇರಲು ಕಾರಣವಾಗಿದೆ"[೧೪] ಎಂದು ತಿಳಿಸುತ್ತಾರೆ.

ಬೆಳಗಾವಿ ಜಿಲ್ಲೆಯ ಸವದತ್ತಿಯಲ್ಲಿರುವ ಎಲ್ಲಮ್ಮ ದೇವಸ್ಥಾನಕ್ಕೆ ಬ್ರಾಹ್ಮಣರಾದಿಯಾಗಿ ಎಲ್ಲ ಜಾತಿಯ ಹಿಂದೂಗಳು ಭಕ್ತರಾಗಿದ್ದಾರೆ. ಆದರೆ ಪರಿಶಿಷ್ಟ ಜಾತಿಯ ಮಹಿಳೆಯರು ದೇವದಾಸಿಯಾಗಿ ಸಮರ್ಪಣೆಗೊಳ್ಳುವ ಪ್ರಮುಖ ದೇವಾಲಯ ಇದಾಗಿದೆ. ಗ್ರಾಮೀಣ ಭಾಗದ ಜನರಿಂದ 'ಹಿರೇಗುಡ್ಡ'

ಎಂದೇ ಗುರುತಿಸಲ್ಪಡುವ ಈ ದೇವಸ್ಥಾನವು ದೇವದಾಸಿ ಪದ್ಧತಿಯ ಹುಟ್ಟಿಗೆ ಕಾರಣವಾಗಿದೆ ಎಂಬ ಐಹಿತ್ಯಗಳಿವೆ (ಕೆ.ಜಿ ಗುರುಮೂರ್ತಿ, ಕಮಲಾ ಹೆಮ್ಮಿಗೆ, ೧೯೯೮). ಕರ್ನಾಟಕ ದೇವದಾಸಿ ಸಮರ್ಪಣಾ ನಿಷೇಧ ಕಾಯಿದೆ, ೧೯೮೨ ರ ಮೊದಲು ಬಿಜಾಪೂರ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಯ ಮತ್ತು ಅದರಿಂದ ಪ್ರಭಾವಿತಗೊಂಡಿರುವ ಇನ್ನೂ ಹಲವಾರು ಪ್ರದೇಶಗಳು, ಮಹಾರಾಷ್ಟ್ರದ ಕೆಲವು ಪ್ರದೇಶಗಳು ಸೇರಿದಂತೆ, ಸವದತ್ತಿಯ ಎಲ್ಲಮ್ಮ ದೇವಸ್ಥಾನದಲ್ಲಿಯೇ ದೇವದಾಸಿಯಾಗಿ ಸಮರ್ಪಣೆ ಗೊಳ್ಳುತ್ತಿದ್ದರು. ಅದು ಈಗಲೂ ಕದ್ದು ಮುಚ್ಚಿ ನಡೆಯುತ್ತದೆ. ಈ ದೇವಸ್ಥಾನವಿರುವುದರಿಂದಲೇ ಬೆಳಗಾವಿ ಜಿಲ್ಲೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯ ದೇವದಾಸಿಯರು ಇರುವುದು ಕಂಡುಬರುತ್ತದೆ.

ಚೆನ್ನಣ್ಣ ವಾಲಿಕಾರ ಇವರು, "ಬೆಳಗಾವಿಯು ಮಹಾರಾಷ್ಟ್ರ ಮತ್ತು ಕರ್ನಾಟಕದ ಗಡಿ ಪ್ರದೇಶ ವಾಗಿರುವುದರಿಂದ ಇಲ್ಲಿ ಜೋಗತಿ, ಬಸವಿ, ಸೂಳೆ, ಪಾತ್ರದವರು ಹೆಚ್ಚಿನ ಸಂಖ್ಯೆಯಲ್ಲಿ ಸಿಗುವರು. ಬೆಳಗಾವಿಯ ನಿಪ್ಪಾಣಿ, ಅಥಣಿ, ಕೋಕಟನೂರು, ಸಂಕೇಶ್ವರ, ಖಾನಾಪುರಗಳು ಗಡಿಗೆ ಹೊಂದಿಕೊಂಡ ಪ್ರದೇಶಗಳಾಗಿದ್ದು, ಈ ಪ್ರದೇಶಗಳಿಂದ ಮಹಾರಾಷ್ಟ್ರದ ವೇಶ್ಯಾಗೃಹಗಳಿಗೆ ಹೆಣ್ಣುಮಕ್ಕಳ ಸಾಗಾಣಿಕೆಯು ಸರಳವಾಗಿದೆ. ಪ್ರತಿನಿತ್ಯ ಸಾವಿರಾರು ಕಾರು, ಟ್ರಕ್ಕು, ಲಾರಿ, ಬಸ್ಸುಗಳು ಕೊಲ್ಲಾಪೂರ, ಸೊಲ್ಲಾಪೂರ, ಪುಣೆ, ಮೀರಜ, ಸಾಂಗ್ಲಿ, ಮುಂಬಯಿಗಳಿಗೆ ಹೋಗಿ ಬರುತ್ತಿರುವುದರಿಂದ, ಹಗಲೂ ರಾತ್ರಿ ಈ ಗಡಿ ಪ್ರದೇಶಗಳಲ್ಲಿ ಜನ ತಿರುಗಾಡುತ್ತಿರುವುದರಿಂದ ಇಲ್ಲಿ ದೇವದಾಸಿ ಪದ್ಧತಿಯು ಜೀವಂತವಾಗಿ ಉಳಿಯಲು ಕಾರಣವಾಗಿದೆ"[೧೫] ಎಂದು ಹೇಳುತ್ತಾರೆ.

ಎಸ್ ಆರ್ ಸಿಂಘೆಯವರು, ತಮ್ಮ 'ಹೊಲೆಯರು: ಒಂದು ಅಧ್ಯಯನ' ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ, "ಕೃಷ್ಣಾ ನದಿಯ ಎಡಗಡೆ ಬರುವ ಅಥಣಿ ತಾಲೂಕದ ಕೋಹಳ್ಳಿ ,ತೆಲಸಂಗ, ಐಗಳಿ, ಬಡಚಿ, ದರೂರಗಳಲ್ಲಿ, ನದಿಯ ಬಲಗಡೆ ಬರುವ, ಜಮಖಂಡಿ, ಬಿಜಾಪೂರ, ಮುಧೋಳ, ಸಿಂದಗಿ, ಇಂಡಿ, ಬಸವನ ಬಾಗೇವಾಡಿ, ಬೀಳಗಿ, ಬಾಗಲಕೋಟೆಗಳಲ್ಲಿ ಬರಗಾಲವಿದ್ದುದಕ್ಕಾಗಿ ದೇವದಾಸಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ"[೧೬](ಚೆನ್ನಣ್ಣ ವಾಲೀಕಾರ, ೨೦೦೧) ಎಂದು ತಿಳಿಸುತ್ತಾರೆ. "ಬೆಳಗಾವಿ ಜಿಲ್ಲೆಯ ನಿಪ್ಪಾಣಿಯು ಹುಡುಗಿಯರನ್ನು ಮುಂಬಯಿಗೆ ಸಾಗಾಣಿಕೆ ಮಾಡುವ ಪೈಪ್ ಲೈನ್ ಆಗಿದೆ. ಅದರ ಜೊತೆಗೆ ಜಿಲ್ಲೆಯ ಅಥಣಿಯು ಒಂದು ಬಹುಮುಖ್ಯ ಸಾಗಾಣಿಕಾ ಕೇಂದ್ರವಾಗಿದೆ. ತೇರದಾಳ-ಮನಗೂಳಿ-ಅಥಣಿ ಇದು ವೇಶ್ಯಾವಾಟಿಕೆಗೆ ಗುರುತಿಸಿಕೊಂಡ ತ್ರಿಕೋನ ವ್ಯೂಹವಾಗಿದೆ" ಎಂದು ಎಮ್. ರೀಟಾ. ರೋಝಾರಿಯೋ ಅವರು ತಮ್ಮ 'ಟ್ರಾಫಿಕಿಂಗ್ ಇನ್ ವುಮೆನ್ ಆ್ಯಂಡ್ ಚಿಲ್ಡ್ರನ್ ಇನ್ ಇಂಡಿಯಾ(೧೯೮೮)[೧೭] ಎಂಬ ಪುಸ್ತಕದಲ್ಲಿ ಬರೆಯುತ್ತಾರೆ.

ಪ್ರಸ್ತುತ ಬೆಳಗಾವಿ ಜಿಲ್ಲೆಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು (೧೯೯೩-೯೪ ಮತ್ತು ೨೦೦೮-೦೯) ಮಾಡಿದ ಸಮೀಕ್ಷೆಯ ಪ್ರಕಾರ ಬೆಳಗಾವಿ ಜಿಲ್ಲೆಯಲ್ಲಿ ೪೭೨೪ ಮಹಿಳೆಯರು ದೇವದಾಸಿಯರಿದ್ದಾರೆ. ಇದು ಮಾಶಾಸನ ತೆಗೆದುಕೊಳ್ಳಲು ಅರ್ಹರಿರುವ ದೇವದಾಸಿ ಮಹಿಳೆಯರ ಸಂಖ್ಯೆಯಾಗಿದೆ. ಇದನ್ನು ಬಿಟ್ಟೂ ಚಿಕ್ಕ ವಯಸ್ಸಿನ ಮಹಿಳೆಯರು ದೇವದಾಸಿಯರಿರುವುದು ಕಂಡುಬರುತ್ತದೆ.

ಹಾಗಾಗಿ ಸಾಮಾಜಿಕವಾಗಿ ಪರಿಶಿಷ್ಟ ಜಾತಿಯ ಮಹಿಳೆಯರನ್ನು ಧರ್ಮದ ಹೆಸರಿನಲ್ಲಿ ಅಂಚಿನಲ್ಲಿ ಇಟ್ಟಿರುವುದು ಮತ್ತು ಇಡುತ್ತಿರುವುದು ಕಂಡುಬರುತ್ತಿದೆ.

ಬೆಳಗಾವಿ ಜಿಲ್ಲೆಯಲ್ಲಿ ೧೯೮೫-೮೬ರಲ್ಲಿ ಇದ್ದ ದೇವದಾಸಿ ಮಹಿಳೆಯರ ಸಂಖ್ಯೆಗೂ, ಈಗ ಇರುವ ಸಂಖ್ಯೆಗೂ ತುಂಬಾ ವ್ಯತ್ಯಾಸವಿದ್ದು ಗಣನೀಯವಾಗಿ ಇಳಿಮುಖವಾಗಿದೆ. ಆದರೆ ಸವದತ್ತಿ ಎಲ್ಲಮ್ಮನನ್ನೇ ಹೋಲುವ ಎಲ್ಲಮ್ಮನ ಗುಡಿಗಳು ಉತ್ತರ ಕರ್ನಾಟಕದ ಹಳ್ಳಿ ಹಳ್ಳಿಗೂ ಈಗ ಪ್ರತಿಷ್ಠಾಪಿಸಲ್ಪಟ್ಟಿವೆ. ಈಗ ಪೊಲೀಸರ ಕಣ್ಣು ತಪ್ಪಿಸಿ ಅಂತ ಚಿಕ್ಕ ಪುಟ್ಟ ಗುಡಿಗಳಲ್ಲಿ ಮುತ್ತು ಕಟ್ಟುವ ಕೆಲಸ ನಡೆಯುತ್ತದೆ.

ಜಿಲ್ಲೆಯ ಅಥಣಿ ತಾಲೂಕಿನಲ್ಲಿರುವ ವಿಮೋಚನಾ ಮತ್ತು ಘಟಪ್ರಭಾದಲ್ಲಿ ಇರುವ ಮಾಸ್ ಎಂಬ ಸಂಸ್ಥೆಗಳು ಮಾಡಿದ ಪ್ರಯತ್ನದಿಂದಾಗಿ ದೇವದಾಸಿಯರ ಮಕ್ಕಳು ಶಿಕ್ಷಣ ಪಡೆದು ಉತ್ತಮ ಉದ್ಯೋಗಗಳನ್ನು ಪಡೆಯುತ್ತಿದ್ದಾರೆ. ಸಾಕಷ್ಟು ಶೈಕ್ಷಣಿಕ ಮತ್ತು ಪುನರ್ವಸತಿ ಸೌಲಭ್ಯಗಳು ಇದ್ದಾಗಲೂ ಸಹ ಇನ್ನೂ ಹೆಣ್ಣುಮಕ್ಕಳನ್ನು ದೇವದಾಸಿ ಮಾಡುವ ಮತ್ತು ವೇಶ್ಯಾಗೃಹಗಳಿಗೆ ಸಾಗಾಣಿಕೆ ಮಾಡುವ ಚಟುವಟಿಕೆಗಳು ಕಾನೂನಿಗೆ ಕಾಣದಂತೆ ನಡೆಯುತ್ತಿವೆ. ಬಾಲ್ಯವಿವಾಹ, ಬಾಲಕಾರ್ಮಿಕ ಸಮಸ್ಯೆಗಳೂ ಸಹ ಜಿಲ್ಲೆಯಲ್ಲಿ ಕಂಡುಬರುತ್ತದೆ.

**೨.೩/೫ ಶೈಕ್ಷಣಿಕ**

ಕೈಗಾರಿಕೆಯಲ್ಲಿ ತಾಂತ್ರಿಕತೆಯಲ್ಲಿ ಮುಂದುವರೆದ ಬೆಳಗಾವಿ ಜಿಲ್ಲೆಯು ಶೈಕ್ಷಣಿಕವಾಗಿ ಜಗತ್ತಿನಲ್ಲಿಯೇ ಗುರುತಿಸಲ್ಪಟ್ಟಿದೆ. ಕರ್ನಾಟಕದ ಎಲ್ಲ ತಾಂತ್ರಿಕ ಮತ್ತು ಎಂಜನೀಯರಿಂಗ್ ಕಾಲೇಜ್‌ಗಳನ್ನು ಒಳಗೊಂಡಿರುವ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯವು ಬೆಳಗಾವಿಯಲ್ಲಿದೆ. ಇಂಡಿಯನ್ ಏರ್ ಫೋರ್ಸ ತರಬೇತಿ ಸಂಸ್ಥೆಯು ಸಾಂಬ್ರಾದಲ್ಲಿದೆ. ದಿ ಕಮ್ಯಾಂಡೋ ಸ್ಕೂಲ್ & ಸ್ಕೂಲ್ ಆಫ್ ಜಂಗಲ್ ವಾರ್ ಫೇರ್ ಮತ್ತು ಇಂಡಿಯನ್ ಆರ್ಮಿ ಸಹ ಬೆಳಗಾವಿಯಲ್ಲಿದೆ. ಏಶಿಯಾದಲ್ಲಿಯೇ ಎರಡನೇಯ ದೊಡ್ಡ ಆಸ್ಪತ್ರೆ ಅನ್ನಿಸಿಕೊಂಡಿರುವ ಕರ್ನಾಟಕ ಲಿಂಗಾಯತ ಸಂಸ್ಥೆಯ (ಕೆ.ಎಲ್.ಇ) ಆಸ್ಪತ್ರೆಯು ಬೆಳಗಾವಿಯಲ್ಲಿ ಇದೆ. ಅಲ್ಲದೇ ಕೆ.ಎಲ್.ಇ ಸಂಸ್ಥೆಯು ವೈದ್ಯಕೀಯ, ತಾಂತ್ರಿಕ ಮಹಾವಿದ್ಯಾಲಯಗಳು ಇವೆ. ಹಾಗೆಯೇ ಪೂರ್ವ ಪ್ರಾಥಮಿಕ ಶಿಕ್ಷಣದಿಂದ ಸ್ನಾತಕೋತ್ತರ ಪದವಿ ಮತ್ತು ಸಂಶೋಧನಾ ಕೇಂದ್ರಗಳನ್ನು ಜಿಲ್ಲೆಯಾದ್ಯಂತ ಪ್ರಾರಂಭಿಸಿದೆ. ಭಾರತದಲ್ಲಿರುವ ಐದು ಮಿಲಿಟರಿ ಶಾಲೆಗಳಲ್ಲಿ ಒಂದು ಶಾಲೆಯು ಬೆಳಗಾವಿಯಲ್ಲಿದೆ. ಈ ಶಾಲೆಯು ೬ನೇಯ ಕಿಂಗ್ ಜಾರ್ಜ ಇವರಿಂದ ೧೯೪೫ರಲ್ಲಿ ಸ್ಥಾಪಿಸಲ್ಪಟ್ಟಿದೆ. ಜಿಲ್ಲೆಯಲ್ಲಿ ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯವು ಕಾರ್ಯ ನಿರ್ವಹಿಸುತ್ತಿದೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೬೪.೫೭ ರಷ್ಟು ಸಾಕ್ಷರಸ್ಥರು ಇರುತ್ತಾರೆ. ಸಾಕ್ಷರತೆ ಪ್ರಮಾಣವು ಪುರುಷರಲ್ಲಿ ೭೨.೧೯, ಸ್ತ್ರೀಯರಲ್ಲಿ ೫೬.೭೦ರಷ್ಟು ಇರುತ್ತದೆ.

## ೨.೩/೬ ಆರ್ಥಿಕ

ಜಿಲ್ಲೆಯು ೨೦೦೫ರ ಕರ್ನಾಟಕ ಮಾನವ ಅಭಿವೃದ್ಧಿ ವರದಿಯ ಪ್ರಕಾರ, ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ೮ನೇ(೦.೬೪೮) ರ್‍ಯಾಂಕ್ ಹೊಂದಿದ್ದು, ಜೀವನಮಟ್ಟ ಸೂಚ್ಯಾಂಕದಲ್ಲಿ ೧೩ನೇ(೦.೫೩೨) ಮತ್ತು ಆರೋಗ್ಯ ಸೂಚ್ಯಾಂಕದಲ್ಲಿ ೨ನೇ(೦.೭೧೨) ರ್‍ಯಾಂಕ್ ಹೊಂದಿದೆ. ಜಿಲ್ಲೆಯ ಪ್ರತಿಶತ ೮೦ರಷ್ಟು ಕೆಲಸಗಾರರು ಗ್ರಾಮೀಣ ಪ್ರದೇಶದವರಾಗಿರುವುದರಿಂದ, ಹೆಚ್ಚಿನ ಸಂಖ್ಯೆಯ ಜನರು ಒಕ್ಕಲುತನ ಮತ್ತು ಒಕ್ಕಲುತನ ಆಧಾರಿತ ವೃತ್ತಿಯಲ್ಲಿ ತೊಡಗಿದ್ದಾರೆ. ಆದ್ದರಿಂದ ತಲಾ ಆದಾಯವು ಕಡಿಮೆ ಇರುವುದು ಕಂಡುಬರುತ್ತದೆ. ಒಟ್ಟು ಸಾಗುವಳಿ ಭೂಮಿಯಲ್ಲಿ ಶೇಕಡಾ ೭೫.೨ರಷ್ಟು ಭೂಮಿಯಲ್ಲಿ ಬಿತ್ತನೆಯಾಗಿದೆ. ಇದರಲ್ಲಿ ಶೇಕಡಾ ೫೧.೭೩ರಷ್ಟು ಭೂಮಿಯು ನೀರಾವರಿಗೆ ಒಳಪಟ್ಟಿದೆ. ೨೦೦೪ ರಿಂದ ೨೦೦೯ರ ಅವಧಿಯಲ್ಲಿ ಪ್ರಾಥಮಿಕ ವಲಯದ ಕೊಡುಗೆಯು ಪ್ರತಿಶತ ೨೪.೭೧ರಿಂದ ಪ್ರತಿಶತ ೨೩.೯೧ಕ್ಕೆ ಇಳಿದಿದೆ. ಇದೇ ಅವಧಿಯಲ್ಲಿ ದ್ವಿತೀಯ ವಲಯದ ಕೊಡುಗೆಯು ೨೭.೦೧ ಪ್ರತಿಶತದಿಂದ ೨೯.೬೨ ಪ್ರತಿಶತಕ್ಕೆ ಏರಿದೆ. ಆದರೆ ಮೂರನೆಯ ವಲಯದ ಕೊಡುಗೆಯು ೪೮.೨೬ ರಿಂದ ೪೬.೬೪ ಪ್ರತಿಶತಕ್ಕೆ ಇಳಿದಿದೆ.

ಜಿಲ್ಲೆಯಲ್ಲಿ ಜೋಳ, ಮುಸುಕಿನ ಜೋಳ ಮತ್ತು ಗೋಧಿ ಹೆಚ್ಚು ಪ್ರದೇಶಗಳಲ್ಲಿ ಬೆಳೆಯುತ್ತಿದೆ. ಬೆಳಗಾವಿ, ಬೈಲಹೊಂಗಲ ಮತ್ತು ಖಾನಾಪೂರಗಳಲ್ಲಿ ಭತ್ತವು ಬೆಳೆಯುತ್ತದೆ. ದ್ವಿದಳ ಧಾನ್ಯಗಳಾದ ತೊಗರಿ, ಹುರುಳಿ, ಉದ್ದು, ಹೆಸರು, ಅಲಸಂದಿ, ಕಡಲೆಗಳು ಸಾಮಾನ್ಯವಾಗಿ ಬಹುತೇಕ ತಾಲೂಕುಗಳಲ್ಲಿ ಬೆಳೆಯುತ್ತಿದೆ. ಎಣ್ಣೆ ಕಾಳುಗಳಾದ ಶೇಂಗಾ ಮತ್ತು ಸೂರ್ಯ ಕಾಂತಿಯು ಬಹುತೇಕ ಕಡೆಗೆ ಬೆಳೆಯುತ್ತದೆ.

ವಾಣಿಜ್ಯ ಬೆಳೆಯಾದ ಕಬ್ಬು ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿಯೂ ಬೆಳೆಯುತ್ತಿದ್ದು, ಒಟ್ಟು ೨೦ ಸಕ್ಕರೆ ಕಾರ್ಖಾನೆಗಳು ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇವುಗಳಲ್ಲಿ ಅಥಣಿ ತಾಲ್ಲೂಕಿನಲ್ಲಿಯೆ ೫ ಸಕ್ಕರೆ ಕಾರ್ಖಾನೆಗಳಿವೆ. ಹೆಚ್ಚುವರಿಯಾದ ಬೆಳೆಯು ಮಹಾರಾಷ್ಟ್ರ ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಪೂರೈಕೆಯಾಗುತ್ತಿದೆ. ಇದರಿಂದಾಗಿ ಬೆಳಗಾವಿ ಜಿಲ್ಲೆಗೆ 'ಸಕ್ಕರೆ ಜಿಲ್ಲೆ'ಯೆಂದೇ ಕರೆಯಲಾಗುತ್ತದೆ. ಸಕ್ಕರೆ ಉತ್ಪಾದನೆಯ ಜೊತೆಗೆ ಕಬ್ಬು ತಯಾರಿಸುವ ಘಟಗಳೂ ಸಹ ಜಿಲ್ಲೆಯ ಅಥಣಿ ಮತ್ತು ರಾಯಭಾಗಗಳಲ್ಲಿ ಇವೆ. ಬಹುತೇಕ ಎಲ್ಲ ತಾಲೂಕುಗಳಲ್ಲಿಯೂ ಹತ್ತಿಯನ್ನು ಬೆಳೆಯಲಾಗುತ್ತಿದೆ. ಜಿಲ್ಲೆಯ ಚಿಕ್ಕೋಡಿ ಮತ್ತು ಹುಕ್ಕೇರಿಗಳಲ್ಲಿ ತಂಬಾಕು ಸಹ ಬೆಳೆಯಲಾಗುತ್ತದೆ. ಜಿಲ್ಲೆಯ ಬೆಳಗಾವಿ, ಬೈಲಹೊಂಗಲ, ಗೋಕಾಕ, ಖಾನಾಪೂರ, ರಾಯಭಾಗ, ರಾಮದುರ್ಗ ಮತ್ತು ಸವದತ್ತಿಗಳಲ್ಲಿ ತೆಂಗನ್ನು ಬೆಳೆಯಲಾಗುತ್ತದೆ. ಖಾನಾಪೂರ ಮತ್ತು ಬೆಳಗಾವಿಯಲ್ಲಿ ಗೋಡಂಬಿ ಬೆಳೆಯನ್ನೂ ಸಹ ವಾಣಿಜ್ಯ ಬೆಳೆಯಾಗಿ ಬೆಳೆಯುತ್ತಾರೆ. ಮುಖ್ಯ ತೋಟಗಾರಿಕಾ ಬೆಳೆಗಳಾಗಿ ಬಾಳೆ, ಮಾವು, ನಿಂಬೆ, ಸೀಬೆ, ದ್ರಾಕ್ಷಿ, ಸಪೋಟಗಳನ್ನು ಬೆಳೆಯಲಾಗುತ್ತದೆ. ಜಿಲ್ಲೆಯ ಅಥಣಿ ಮತ್ತು ರಾಮದುರ್ಗಗಳಲ್ಲಿ ದಾಳಿಂಬೆಯನ್ನು ಬೆಳೆಯುತ್ತಾರೆ.

ಅರಣ್ಯ ಮತ್ತು ಕಟ್ಟಿಗೆ ಕೆಲಸ, ಮೀನುಗಾರಿಕೆ, ಗಣಿ ಮತ್ತು ಕ್ವಾರಿ ಉದ್ಯೋಗ, ವಿದ್ಯುತ್, ಗ್ಯಾಸ್ ಮತ್ತು ನೀರು ಪೂರೈಕೆ, ರೈಲು, ಮಳಿಗೆಗಳು, ಸಂಪರ್ಕ, ಹೋಟೆಲ್, ಗೃಹ ನಿರ್ಮಾಣ, ರಿಯಲ್ ಎಸ್ಟೇಟ್ ವ್ಯವಹಾರಗಳೂ ಜಿಲ್ಲೆಯಲ್ಲಿ ನಡೆಯುತ್ತವೆ.

### ೨.೩/೭ ಕೈಗಾರಿಕೆ

ಕೃಷಿಯಷ್ಟೇ ಮುಖ್ಯವಾಗಿ ಗಣನೀಯ ರೀತಿಯಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಕೈಗಾರಿಕೆಯೂ ಬೆಳೆಯುತ್ತಿದೆ. ಭೌಗೋಳಿಕವಾಗಿ ಬೆಂಗಳೂರು, ಪುಣೆ ಮತ್ತು ಮುಂಬೈ ನಗರಗಳು ಹತ್ತಿರವಾಗಿರುವುದರಿಂದ ಮತ್ತು ಉತ್ತಮ ಸಾರಿಗೆ ಸಂಪರ್ಕ ಹೊಂದಿರುವುದರಿಂದ ಅಟೋಮೋಬೈಲ್ ಮತ್ತು ಏರೋಸ್ಪೇಸ್ ಉದ್ಯಮಗಳಿಗೆ ಸಹಕಾರಿಯಾಗಿದೆ. ಜಿಲ್ಲೆಯು ಅಗ್ರೋ ಮತ್ತು ಆಹಾರ ಸಂಸ್ಕರಣಾ ಘಟಕಗಳನ್ನು ಹೊಂದಿದೆ. ಅಲ್ಯೂಮಿನಿಯಂ ಉದ್ಯಮಕ್ಕೆ ಅನುಕೂಲವಾಗುವ ಬಾಕ್ಸೈಟ್ ನಿಕ್ಷೇಪಗಳನ್ನು ಹೊಂದಿದೆ. ಜಿಲ್ಲೆಯ ದೇಶನೂರ್ ಗ್ರಾಮದಲ್ಲಿ ಯುರೇನಿಯಂ ನಿಕ್ಷೇಪಗಳಿರುವುದು ಕಂಡು ಬಂದಿದೆ. ಬೆಳಗಾವಿ ಜಿಲ್ಲೆಯು ಭಾರೀ ಯಂತ್ರಗಳ ಬಿಡಿ ಭಾಗಗಳನ್ನು ಮತ್ತು ಹೈ ಪ್ರೆಶರ್ ಆಯಿಲ್ ಹೈಡ್ರೋಲಿಕ್ಸ್ ತಯಾರು ಮಾಡುವ ಮುಖ್ಯ ಕೇಂದ್ರವಾಗಿದೆ. ಜಿಲ್ಲೆಯಲ್ಲಿ ೧೯೩೨.೫೩ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಪ್ರಾರಂಭಗೊಂಡ ೨೬ ಬೃಹತ್ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳು ನಡೆಯುತ್ತಿವೆ. ೬೮,೭೪೯ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ೩೩,೭೩೭ ಕಿರು ಪ್ರಮಾಣದ ಉದ್ಯಮಗಳು ನಡೆಯುತ್ತಿದ್ದು, ೧,೪೩,೦೩೬ ಜನರಿಗೆ ಉದ್ಯೋಗ ಒದಗಿಸಿವೆ. ಜಿಲ್ಲೆಯಲ್ಲಿ ಈಗ ೯ ಉದ್ಯಮ ಭಾಗ್‌ಗಳು, ೬ ಕೈಗಾರಿಕಾ ಪ್ರದೇಶಗಳು ಮತ್ತು ೩ ಸಹಕಾರಿ ಕೈಗಾರಿಕಾ ಪ್ರದೇಶಗಳಿವೆ.

ಜಿಲ್ಲೆಯ ನಿಪ್ಪಾಣಿ ಮತ್ತು ಚಿಕ್ಕೋಡಿ ಭಾಗದಲ್ಲಿ ಬೀಡಿ ಉತ್ಪಾದನಾ ಘಟಕಗಳಿದ್ದು, ಬಹುತೇಕ ಕುಟುಂಬಗಳು ಮನೆ ಮನೆಗಳಲ್ಲಿ ಬೀಡಿ ತಯಾರಿಸುತ್ತಾರೆ. ಅಥಣಿಯ ಹಲವಾರು ಹಳ್ಳಿಗಳಲ್ಲಿ ಚರ್ಮದ ಚಪ್ಪಲಿಗಳು ತಯಾರಾಗುತ್ತಿದ್ದು ವಿದೇಶದಲ್ಲಿಯೂ ಮಾರುಕಟ್ಟೆ ಹೊಂದಿದೆ. ಇದು ಕೋಲ್ಹಾಪೂರದ ಮೂಲಕ ಮಾರುಕಟ್ಟೆ ಪಡೆದದ್ದರಿಂದ 'ಕೋಲ್ಹಾಪೂರ ಚಪ್ಪಲಿ' ಎಂದೇ ಹೆಸರುವಾಸಿಯಾಗಿವೆ. ಆದರೆ ಅವುಗಳ ತಯಾರಿ ಅಥಣಿಯಲ್ಲಿಯೇ ಆಗುತ್ತದೆ.

**ಕೋಷ್ಟಕ ೨.೪. ಕೆಲಸಗಾರರ ವರ್ಗೀಕರಣ**

| ಅ.ಸ | ಕೆಲಸಗಾರರು | ಪುರುಷರು | ಮಹಿಳೆಯರು |
|---|---|---|---|
| ೧ | ಮುಖ್ಯ ಕೆಲಸಗಾರರು | ೧೧,೧೬,೯೯೭ | ೪,೧೯,೯೨೮ |
| ೨ | ಅರೆಕಾಲಿಕ ಕೆಲಸಗಾರರು | ೮೪,೨೮೬ | ೨,೫೪,೭೯೯ |
| ೩ | ಕೃಷಿ ಸಾಗುವಳಿದಾರರು | ೪,೭೯,೪೩೩ | ೨,೨೭,೭೮೦ |
| ೪ | ಕೃಷಿ ಕಾರ್ಮಿಕರು | ೨,೪೫,೮೪೫ | ೩,೪೧,೫೫೫ |
| ೫ | ಗೃಹ ಕೈಗಾರಿಕೆ ಕೆಲಸಗಾರರು | ೪೧,೮೪೯ | ೪೨,೯೬೩ |
| ೬ | ಇತರೆ ಕೆಲಸಗಾರರು | ೪,೧೯,೦೦೨ | ೮೧,೦೦೦ |
| ೭ | ಕೃಷಿಯೇತರ ಕೆಲಸಗಾರರು | ೧,೭೪,೧೬೨ | ೪೦,೨೫೬ |

ಆಧಾರ: ಬೆಳಗಾವಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೧-೨೦೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಬೆಳಗಾವಿ ಜಿಲ್ಲೆಯಲ್ಲಿ ಮಹಿಳೆಯರ ಕೆಲಸದ ಸ್ಥಿತಿಯು ಗಂಭೀರವಾಗಿದೆ. ಮಹಿಳೆಯರು ಪುರುಷರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಕೃಷಿಕೂಲಿ ಕಾರ್ಮಿಕರಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ.

ಕೆಳಗಿನ ಕೋಷ್ಟಕದ ಪ್ರಕಾರ ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯುವ ಪರಿಶಿಷ್ಟ ಜಾತಿಯ ಮಹಿಳೆಯರಿಗೆ ಭೂಮಿ ಇಲ್ಲದಿರುವುದು ಮತ್ತು ಪರಿಶಿಷ್ಟ ಜಾತಿಯ ಮಹಿಳೆಯರಲ್ಲಿ ಅತೀ ಕಡಿಮೆ ಪ್ರಮಾಣದ ಮಹಿಳೆಯರು ಭೂ ಹಿಡುವಳಿದಾರರಾಗಿರುವುದು ಕಂಡುಬರುತ್ತದೆ.

**ಕೋಷ್ಟಕ ೨.೫. ಒಟ್ಟು ಕೃಷಿ ಭೂಹಿಡುವಳಿದಾರರು ಮತ್ತು ವಿಸ್ತೀರ್ಣ**

| ಅ.ಸ | ವರ್ಗ | ಪುರುಷರು | | ಮಹಿಳೆಯರು | |
|---|---|---|---|---|---|
| ೧ | ಪರಿಶಿಷ್ಟ ಜಾತಿ | ಸಂಖ್ಯೆ: | ೩೧,೬೧೪ | ಸಂಖ್ಯೆ: | ೫,೧೫೪ |
| | | ವಿಸ್ತೀರ್ಣ: | ೩೫,೧೩೩.೬೮ | ವಿಸ್ತೀರ್ಣ: | ೫,೧೭೭.೬೮ |
| ೨ | ಪರಿಶಿಷ್ಟ ಪಂಗಡ | ಸಂಖ್ಯೆ: | ೨೦,೩೨೪ | ಸಂಖ್ಯೆ: | ೧೬೨೯ |
| | | ವಿಸ್ತೀರ್ಣ: | ೩೧,೨೭೪.೨೩ | ವಿಸ್ತೀರ್ಣ: | ೨,೧೫೯.೨೯ |
| ೩ | ಇತರೆ | ಸಂಖ್ಯೆ: | ೪,೩೫,೯೨೦ | ಸಂಖ್ಯೆ: | ೩೬,೧೫೬ |
| | | ವಿಸ್ತೀರ್ಣ: | ೮,೫೨,೮೩೬.೭೧ | ವಿಸ್ತೀರ್ಣ: | ೬೨,೧೭೭೯೭ |

**ಆಧಾರ:** ಬೆಳಗಾವಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೧೧-೨೦೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ

**೨.೩/೮ ಪ್ರವಾಸ:** ಜಿಲ್ಲೆಯು ಪ್ರವಾಸೀ ತಾಣವೂ ಆಗಿದ್ದು, ಹಲವಾರು ಧಾರ್ಮಿಕ ಸಂಸ್ಥೆಗಳನ್ನು ಹೊಂದಿದೆ. ಕಮಲ ನಾರಾಯಣ ಗುಡಿ, ದೇಗಾಂವ, ೧೨ನೇ ಶತಮಾನದಲ್ಲಿ ಕದಂಬರಿಂದ ಕಟ್ಟಿದ ಶಿಲಾರಚನೆಯಾಗಿದೆ. ಪಾರ್ಶ್ವನಾಥ ಮಂದಿರವು ೧೧ನೆ ಶತಮಾನಕ್ಕೆ ಸೇರಿದ ವಿಗ್ರಹ ಮೂರ್ತಿಯಾಗಿದೆ. ಬೆಳಗಾವಿ ಫೋರ್ಟ, ಕಮಲ ಬಸದಿ, ಚಿಕ್ಕ ಬಸದಿಗಳು ಬೆಳಗಾವಿ ಪಟ್ಟಣದಲ್ಲಿಯೇ ನೋಡಲು ಸಿಗುತ್ತವೆ. ಗೋಕಾಕ ತಾಲೂಕಿನಿಂದ ೬ ಕಿ ಮೀ ದೂರದಲ್ಲಿ ಗೋಕಾಕ ಫಾಲ್ಸ್ ಇದೆ. ಇದು ಚಿಕ್ಕ ಪ್ರಮಾಣದ್ದಾಗಿದ್ದರೂ, ರಚನೆಯಲ್ಲಿ ಪ್ರಸಿದ್ಧ ನಯಾಗರಾ ಫಾಲ್ಸನ್ನು ನೆನಪಿಸುತ್ತದೆ.

ಸವದತ್ತಿಯಲ್ಲಿ ಎಲ್ಲಮ್ಮನ ಗುಡ್ಡ ಎಂದೇ ಹೆಸರು ಪಡೆದ ರೇಣುಕಾ ಎಲ್ಲಮ್ಮನ ದೇವಸ್ಥಾನವಿದೆ. ಇದು ಹಿಂದೂಗಳ ಪವಿತ್ರ ಯಾತ್ರಾ ಸ್ಥಳವಾಗಿದ್ದು, ಬ್ರಾಹ್ಮಣರನ್ನು ಮೊದಲ್ಗೊಂಡು ಎಲ್ಲ ಜಾತಿಯ ಜನರು ಈ ಸ್ಥಳದ ಭಕ್ತರಾಗಿರುತ್ತಾರೆ. ಉತ್ತರ ಕರ್ನಾಟಕ, ಮಹಾರಾಷ್ಟ್ರದಲ್ಲಿರುವ ದೇವದಾಸಿ ಸಂಪ್ರದಾಯ ಪರಂಪರೆಯು ಸವದತ್ತಿ ಎಲ್ಲಮ್ಮನ ಒಂದು ಅವಿಭಾಜ್ಯ ಭಾಗವಾಗಿದೆ.

**೨.೩/೯ ಸಾರಿಗೆ ಸಂಪರ್ಕ:** ಜಿಲ್ಲೆಯಲ್ಲಿ ಸಾರಿಗೆ ಸಂಪರ್ಕವು ಉತ್ತಮವಾಗಿದೆ. ಜಿಲ್ಲೆಯ ೧೦ ತಾಲೂಕುಗಳಲ್ಲಿ, ಬೈಲಹೊಂಗಲ, ರಾಮದುರ್ಗ ಮತ್ತು ಸವದತ್ತಿಯನ್ನು ಹೊರತು ಪಡಿಸಿ, ಉಳಿದ ೭ ತಾಲೂಕುಗಳಲ್ಲಿ ಬ್ರಾಡ್ ಗೇಜ್ ಹೊಂದಿರುವ ೨೨ ರೇಲ್ವೆ ನಿಲ್ದಾಣಗಳಿವೆ.

## ೨.೪. ಬಾಗಲಕೋಟ ಜಿಲ್ಲೆ

### ೨.೪/೧. ಚಾರಿತ್ರಿಕ

ಬಾಗಲಕೋಟೆ ಜಿಲ್ಲೆಯು ಬಿಜಾಪುರ ಜಿಲ್ಲೆಯಿಂದ ೧೯೯೭ರಲ್ಲಿ ವಿಭಜಿತವಾಗಿರುವುದರಿಂದ ಪೂರ್ವದ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುವಾಗ ಅವಿಭಜಿತ ಬಿಜಾಪೂರ ಜಿಲ್ಲೆಯ ಸ್ಥಿತಿಯೇ ಬಾಗಲಕೋಟ ಜಿಲ್ಲೆಯ ಪರಿಸ್ಥಿತಿಯಾಗಿತ್ತು. ಚಾಲುಕ್ಯರ ಕಾಲದ ಶಿಲಾಶಾಸನಗಳು ಗುರುತಿಸುವಂತೆ, 'ಬಗಾದಿಗೆ' ಎಂಬುದು ಬಾಗಲಕೋಟೆಯ ಮೂಲ ನಾಮ. ದಂತಕಥೆಗಳ ಪ್ರಕಾರ ಲಂಕಾ ದೇಶದ ಅಧಿಪತಿ ರಾವಣನು ತನ್ನ ಸಂಗೀತಗಾರರಿಗೆ ಈ ಪ್ರದೇಶವನ್ನು ಬಳುವಳಿಯಾಗಿ ಕೊಟ್ಟಿದ್ದನೆಂದು ಐಹಿತ್ಯಗಳಿವೆ. ಘಟಪ್ರಭಾ ನದಿಯ ದಡದಲ್ಲಿರುವ ಬಾಗಲಕೋಟೆಯನ್ನು, ಸವಣೂರಿನ ನವಾಬ, ಮರಾಠರೂ ಸಹ ಆಳಿದ್ದ ಕುರಿತು ಇತಿಹಾಸದಿಂದ ತಿಳಿದುಬರುತ್ತದೆ. ಕರ್ನಾಟಕದ ಉತ್ತರ ಭಾಗದಲ್ಲಿರುವ ಜಿಲ್ಲೆಯು ಮೂಲತಃ ಬಿಜಾಪುರ ಜಿಲ್ಲೆಯ ಒಂದು ಭಾಗವಾಗಿತ್ತು. ನಂತರ ೧೯೯೭ರಲ್ಲಿ ಬಿಜಾಪೂರ ಜಿಲ್ಲೆಯಿಂದ ವಿಭಜನೆಗೊಂಡ ಸ್ವತಂತ್ರ ಜಿಲ್ಲೆಯಾಗಿದೆ. ಬದಾಮಿ, ಬಾಗಲಕೋಟ, ಬೀಳಗಿ, ಹುನಗುಂದ, ಜಮಖಂಡಿ ಮತ್ತು ಮುಧೋಳ ಹೀಗೆ ೬ ತಾಲೂಕುಗಳನ್ನು ಒಳಗೊಂಡಿದೆ.

### ೨.೪/೨. ಭೌಗೋಳಿಕ

**ಅಕ್ಷಾಂಶ ಮತ್ತು ರೇಖಾಂಶ:** ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು, ೧೫ಡಿಗ್ರಿ ೪೬' ಮತ್ತು ೧೬ಡಿಗ್ರಿ ಉತ್ತರ ಅಕ್ಷಾಂಶದೊಂದಿಗೆ ಹಾಗೂ ೭೪ಡಿಗ್ರಿ ೪೦' ಮತ್ತು ೭೪ ಡಿಗ್ರಿ ೫೯' ಪೂರ್ವ ರೇಖಾಂಶದೊಂದಿಗೆ ಇರುವುದು. ಹವಾಮಾನವು ಗರಿಷ್ಠ ೩೮೦ ಡಿಗ್ರಿ ಸೆಲ್ಸಿಯಸ್ ಮತ್ತು ಕನಿಷ್ಠ ೧೮ ಡಿಗ್ರಿ ಸೆಲ್ಸಿಯಸ್ ತಾಪಮಾನವಿರುತ್ತದೆ.

**ನದಿಗಳು:** ಕೃಷ್ಣಾ ನದಿಯು ಜಿಲ್ಲೆಯ ಅತ್ಯಂತ ದೊಡ್ಡ ನದಿಯಾಗಿ ಬಿಜಾಪೂರ ಮತ್ತು ಬಾಗಲಕೋಟೆಯ ಗಡಿಯಲ್ಲಿ ಹರಿಯುತ್ತದೆ. ಮಲಪ್ರಭಾ, ಘಟಪ್ರಭಾ ನದಿಗಳು ಹರಿದಿವೆ. ಕೃಷ್ಣಾ ನದಿಗೆ ಹಿಪ್ಪರಗಿ ಹತ್ತಿರ ಒಂದು ಚಿಕ್ಕ ಮತ್ತು ಬಿಜಾಪೂರದ ಆಲಮಟ್ಟಿ ಬಳಿ ಬೃಹತ್ ಅಣೆಕಟ್ಟನ್ನು ಕಟ್ಟಲಾಗಿದೆ. ಇದರಿಂದಾಗಿ ಬಾಗಲಕೋಟೆ ನಗರವು ಮುಳುಗಡೆಯಾಗಿದ್ದು, ನಗರವನ್ನು ಸ್ಥಳಾಂತರ ಗೊಳಿಸಲಾಗಿದೆ. ಅದಕ್ಕೆ ನವನಗರವೆಂದು ಕರೆಯುತ್ತಿದ್ದು ಭಾಗಶಃ ಜನರು ತಮ್ಮ ವಸತಿಯನ್ನು ನವನಗರಕ್ಕೆ ಸ್ಥಳಾಂತರಗೊಳಿಸಿಕೊಂಡಿದ್ದಾರೆ.

**ಮಳೆ:** ಜಿಲ್ಲೆಯಲ್ಲಿ ೨೦೦೪ ರಿಂದ ೨೦೧೪ರ ಅವಧಿಯಲ್ಲಿ ೫೨೯ ರಿಂದ ೬೫೯ ಮಿ.ಮಿ ಮಳೆಯಾದ ದಾಖಲೆ ಇದೆ.

**ಪ್ರಾಕೃತಿಕ ಸ್ವರೂಪ:** ಸಮುದ್ರ ಮಟ್ಟದಿಂದ ೨೩೦೦ ಅಡಿ ಎತ್ತರವಾಗಿರುವ ಬಾದಾಮಿ ಬೆಟ್ಟ ಅತ್ಯಂತ ಎತ್ತರವಾದದ್ದು. ಹೆರಕಲ್ಲ ಬೆಟ್ಟ ಶ್ರೇಣಿ, ಮುಚಖಂಡಿ ಬೆಟ್ಟಶ್ರೇಣಿ ಮುಖ್ಯವಾಗಿವೆ. ಕೆರೂರ ಗುಡ್ಡ, ಬಾದಾಮಿ, ತೇರದಾಳ, ಜಮಖಂಡಿ ಬೆಟ್ಟಶ್ರೇಣಿಗಳೂ ಇವೆ.

**ಮಣ್ಣಿನ ರಚನೆ:** ಮೂರು ನದಿಗಳಗುಂಟ ಎರೆ ಮಣ್ಣು, ಬಯಲು ಪ್ರದೇಶದ ಎರೆ ಭೂಮಿ, ಅರಣ್ಯಕ್ಕೆ ಹತ್ತಿರದ ಮಸಾರಿ ಹಾಗೂ ಉಸುಕು ಭೂಮಿ ಮತ್ತು ಗರಸು ಭೂಮಿ ಮಣ್ಣುಗಳನ್ನು ಒಳಗೊಂಡ ಪ್ರದೇಶಗಳಾಗಿವೆ.

**ವಿಸ್ತೀರ್ಣ ಜನಸಂಖ್ಯೆ ಮತ್ತು ಜನಸಾಂದ್ರತೆ:** ಜಿಲ್ಲೆಯು ಒಟ್ಟು ೬,೫೮೮.೭೭ ಚದರ ಕಿ.ಮೀ. ಪ್ರದೇಶದ ವಿಸ್ತೀರ್ಣವನ್ನು ಹೊಂದಿದ್ದು, ೧೮,೯೬,೭೫೨ ಜನಸಂಖ್ಯೆಯನ್ನು ಹೊಂದಿದೆ. ಅದರಲ್ಲಿ ೯,೫೦,೧೧೧ ಪುರುಷರು ಮತ್ತು ೯,೩೯,೬೪೧ ಮಹಿಳೆಯರು ಇದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ೩,೧೯,೧೪೯ ಪರಿಶಿಷ್ಟ ಜಾತಿಗೆ ಮತ್ತು ೯೭,೨೦೩ ಜನರು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿದ್ದಾರೆ. ೨೦೧೧ ರ ಜನಗಣತಿಯ ಪ್ರಕಾರ, ಪುರುಷ ಮತ್ತು ಸ್ತ್ರೀಯರ ಪ್ರಮಾಣ ಪ್ರತಿ ಸಾವಿರ ಪುರುಷರಿಗೆ ೯೮೦ ಸ್ತ್ರೀಯರು ಇರುತ್ತಾರೆ ಮತ್ತು ಪ್ರತಿ ಚದರ ಕಿ.ಮೀ.ಗೆ ೨೫೧ ಜನಸಾಂದ್ರತೆಯನ್ನು ಹೊಂದಿದೆ.

### ೨.೪/೩. ಸಾಮಾಜಿಕ

ಬಿಜಾಪೂರ ಜಿಲ್ಲೆಯಿಂದ ೧೯೯೭ರಲ್ಲಿ ವಿಭಜಿತಗೊಂಡ ಬಾಗಲಕೋಟೆ ಜಿಲ್ಲೆಯು, ಬಿಜಾಪುರ ಜಿಲ್ಲೆಯ ಮತ್ತು ಬಾಗಲಕೋಟೆ ಜಿಲ್ಲೆಗೆ ಹೊಂದಿಕೊಂಡಂತಿರುವ ಬೆಳಗಾವಿ ಜಿಲ್ಲೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು, ಬಾಗಲಕೋಟೆ ಜಿಲ್ಲೆಯ ಮೇಲೆ ಪ್ರಭಾವಿಸಿವೆ.

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ಮೂರು ಜಿಲ್ಲೆಗಳಲ್ಲಿ ಬಾಗಲಕೋಟೆ ಜಿಲ್ಲೆಯು ಅತೀ ಹೆಚ್ಚಿನ ಅಂದರೆ ೭೮೨೭ ದೇವದಾಸಿ ಮಹಿಳೆಯರನ್ನು ಹೊಂದಿದೆ. ಸ್ವಾತಂತ್ರ್ಯ ಪೂರ್ವದಿಂದಲೂ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ್ತು ಮುಧೋಳ ತಾಲೂಕುಗಳ ದೇವದಾಸಿ ಮಹಿಳೆಯರು ಮುಂಬಯಿಯಲ್ಲಿ ಲೈಂಗಿಕ ದಂಧೆ ನಡೆಸುತ್ತಾ, ತಮ್ಮವೇ ಸ್ವಂತ ಲೈಂಗಿಕ ದಂಧೆಯ ಮನೆಗಳನ್ನು ಹೊಂದಿದ್ದಾರೆ. ಅವರ ಕುಲದವರು ಇಂದಿಗೂ ಮುಂಬಯಲಿ ಇದ್ದು, ಘರವಾಲಿಗಳಾಗಿದ್ದಾರೆ. ಅವರು ತಮ್ಮ ದಂಧೆಯ ಮನೆಗಳಿಗಾಗಿ ಬೇಕಾಗುವ ಹುಡುಗಿಯರನ್ನು ತಮ್ಮ ತಮ್ಮ ಊರುಗಳಿಂದಲೇ ಕರೆದುಕೊಂಡು ಹೋಗುತ್ತಿದ್ದರು. ಇಂದಿಗೂ ಅದೇ ಸ್ಥಿತಿ ಮುಂದುವರೆದಿದ್ದು, ದೇವದಾಸಿ ಪದ್ಧತಿ ಜೀವಂತವಾಗಿರಲು ಕಾರಣವಾಗಿದೆ.

### ೨.೪/೪. ಶೈಕ್ಷಣಿಕ

ಜಿಲ್ಲೆಯಲ್ಲಿ ಹಲವಾರು ಶಿಕ್ಷಣ ಸಂಸ್ಥೆಗಳು ಇವೆ. ಬಸವೇಶ್ವರ ವಿದ್ಯಾವರ್ಧಕ ಸಂಘ, ರಾಣಿ ಚೆನ್ನಮ್ಮ ವಿಶ್ವವಿದ್ಯಾಲಯ ಬೆಳಗಾವಿಯ ಸ್ನಾತಕೋತ್ತರ ಕೇಂದ್ರಗಳು ಇವೆ. ಬಸವೇಶ್ವರ ಇಂಜಿನೀಯರಿಂಗ್ ಕಾಲೇಜ್, ಎಸ್. ನಿಜಲಿಂಗಪ್ಪ ಮೆಡಿಕಲ್ ಕಾಲೇಜ್, ಹಾನಗಲ್ ಶ್ರೀ ಕುಮಾರೇಶ್ವರ ಆಸ್ಪತ್ರೆ ಮತ್ತು

ಸಂಶೋಧನಾ ಕೇಂದ್ರಗಳು ಇವೆ. ಬಾಗಲಕೋಟೆಯ ನವನಗರದಲ್ಲಿ ತೋಟಗಾರಿಕಾ ವಿಶ್ವವಿದ್ಯಾಲಯ ಇದೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೬೪.೨೦ರಷ್ಟು ಅಕ್ಷರಸ್ಥರು ಇರುತ್ತಾರೆ. ಸಾಕ್ಷರತೆ ಪ್ರಮಾಣವು ಪುರುಷರಲ್ಲಿ ೭೫.೭೭, ಸ್ತ್ರೀಯರಲ್ಲಿ ೫೨.೫೮ರಷ್ಟು ಇರುತ್ತದೆ.

**೨.೪/೫. ಆರ್ಥಿಕ**

ಜಿಲ್ಲೆಯು ೨೦೦೫ರ ಕರ್ನಾಟಕ ಮಾನವ ಅಭಿವೃದ್ಧಿ ವರದಿಯ ಪ್ರಕಾರ, ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ೨೨ನೇ(೦.೫೯೧) ರ್‍ಯಾಂಕ್ ಹೊಂದಿದ್ದು, ಜೀವನಮಟ್ಟ ಸೂಚ್ಯಾಂಕದಲ್ಲಿ ೧೨ನೇ(೦.೫೪೯) ಮತ್ತು ಆರೋಗ್ಯ ಸೂಚ್ಯಾಂಕದಲ್ಲಿ ೨೭ನೇ(೦.೫೯೭) ರ್‍ಯಾಂಕ್ ಹೊಂದಿದೆ. ಕೃಷಿಯು ಜಿಲ್ಲೆಯ ಮುಖ್ಯ ವೃತ್ತಿಯಾಗಿದ್ದು, ಸುಮಾರು ಪ್ರತಿಶತ ೬೫ರಷ್ಟು ಜನರು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ. ಅಂದಾಜು ಪ್ರತಿಶತ ೮೦ರಷ್ಟು ಮಹಿಳೆಯರು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ.

ಜಿಲ್ಲೆಯ ಬಹತೇಕ ಎಲ್ಲ ತಾಲೂಕುಗಳಲ್ಲಿ ಜೋಳ, ಮುಸುಕಿನ ಜೋಳ ಮತ್ತು ಗೋಧಿಯನ್ನು ಬೆಳೆಯಲಾಗುತ್ತಿದೆ. ದ್ವಿದಳ ಧಾನ್ಯಗಳಾದ ತೊಗರಿ, ಹುರುಳಿ, ಹೆಸರು, ಕಡಲೆಗಳು ಸಾಮಾನ್ಯವಾಗಿ ಬಹುತೇಕ ತಾಲೂಕುಗಳಲ್ಲಿ ಬೆಳೆಯುತ್ತಿದೆ. ಎಣ್ಣೆ ಕಾಳುಗಳಾದ ಶೇಂಗಾ, ಸೂರ್ಯಕಾಂತಿ ಮತ್ತು ಅಗಸೆ ಜಿಲ್ಲೆಯ ಅತಿ ಹೆಚ್ಚು ಪ್ರದೇಶದಲ್ಲಿ ಬೆಳೆಯುತ್ತದೆ. ಜಮಖಂಡಿ ಮತ್ತು ಮುಧೋಳಗಳಲ್ಲಿ ಸೋಯ ಅವರೆ ಬೆಳೆಯುತ್ತದೆ.

ವಾಣಿಜ್ಯ ಬೆಳೆಯಾದ ಕಬ್ಬು ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿಯು ಬೆಳೆಯುತ್ತಿದ್ದು, ಜಿಲ್ಲೆಯಲ್ಲಿ ಒಟ್ಟು ೯ ಸಕ್ಕರೆ ಕಾರ್ಖಾನೆಗಳು ಇವೆ. ಬದಾಮಿ ಮತ್ತು ಹುನಗುಂದ ತಾಲೂಕುಗಳಲ್ಲಿ ಹತ್ತಿಯನ್ನು ಬೆಳೆಯಲಾಗುತ್ತಿದೆ. ಮುಖ್ಯ ತೋಟಗಾರಿಕಾ ಬೆಳೆಗಳಾಗಿ ಬಾಳೆ, ಮಾವು, ನಿಂಬೆ, ಸೀಬೆ, ದ್ರಾಕ್ಷಿ, ಸಪೋಟ, ದಾಳಿಂಬೆ ಪಪ್ಪಾಯಿಗಳನ್ನು ಬೆಳೆಯಲಾಗುತ್ತದೆ. ಜಿಲ್ಲೆಯಲ್ಲಿ ಮುಖ್ಯ ತರಕಾರಿ ಬೆಳೆಯಾಗಿ ಈರುಳ್ಳಿ, ಬದನೆ ಮತ್ತು ಟೊಮೆಟೋ ಬೆಳೆಯುತ್ತಾರೆ.

**೨.೪/೬. ಕೈಗಾರಿಕೆ**

ಬಾಗಲಕೋಟೆ ಜಿಲ್ಲೆಯು ಸಿಮೆಂಟ್ ಉದ್ಯಮಕ್ಕೆ ಹೇಳಿ ಮಾಡಿಸಿದಂತಹ ಪ್ರದೇಶವಾಗಿದೆ. ರೇಷ್ಮೆ ಮತ್ತು ಕೈಮಗ್ಗ ಉದ್ಯಮಗಳು ಜಿಲ್ಲೆಯ ಆರ್ಥಿಕ ಬೆಳವಣಿಗೆಗೆ ಸಹಕಾರಿಯಾಗಿವೆ. ಬಾಗಲಕೋಟೆಯು ಮಹಾರಾಷ್ಟ್ರ ರಾಜ್ಯಕ್ಕೆ ಉತ್ತಮ ಮತ್ತು ನೇರ ಸಾರಿಗೆ ಸಂಪರ್ಕ ಹೊಂದಿರುವುದರಿಂದ ಅಟೋ ಇಂಡಸ್ಟ್ರೀಗೆ ಉತ್ತಮವಾಗಿದೆ. ಜಿಲ್ಲೆಯಲ್ಲಿ ೨೦೫೦ ಕೋಟಿ ರೂಪಾಯಿ ವೆಚ್ಚದಲ್ಲಿ ೧೭ ದೊಡ್ಡ ಮತ್ತು ಚಿಕ್ಕ ಕೈಗಾರಿಕೆಗಳು ಉತ್ಪಾದನೆಯನ್ನು ಮಾಡುತ್ತಿವೆ. ಅವುಗಳಲ್ಲಿ ನಿರಾಣಿ ಸಿಮೆಂಟ್, ಜಯಕಾಯಸೆಮ್ ಲಿಮಿಟೆಡ್, ನಿರಾಣಿ ಶುಗರ್ಸ ಮತ್ತು ಬಾಗಲಕೋಟ್ ಇಂಡಸ್ಟ್ರೀಸ್ ಮುಖ್ಯವಾಗಿವೆ. ೧೭.೬೫೦ ಲಕ್ಷ ರೂಪಾಯಿ ವೆಚ್ಚದ ೭೭೩೮ ಸಣ್ಣ ಪ್ರಮಾಣದ ಇಂಡಸ್ಟ್ರೀಗಳು ಉತ್ಪಾದನೆಯನ್ನು ಮಾಡುತ್ತಿದ್ದು, ೩೬,೪೦೦ ಜನರಿಗೆ ಉದ್ಯೋಗ ಒದಗಿಸಿವೆ.

**೨.೪/೭. ಪ್ರವಾಸ:** ಬಾದಾಮಿ, ಪಟ್ಟದಕಲ್ಲು, ಐಹೊಳೆ, ಮಾಹಾಕೂಟ, ಬಾದಾಮಿ ಬನಶಂಕರಿ, ಕೂಡಲ ಸಂಗಮ, ಕವಿ ರನ್ನ ಜನಿಸಿದ ಮುಧೋಳಗಳು ಕರ್ನಾಟಕದಲ್ಲಿಯೇ ಪ್ರಸಿದ್ಧವಾದ ಪ್ರವಾಸಿ ತಾಣಗಳಾಗಿವೆ.

**೨.೪/೮. ಸಾರಿಗೆ ಸಂಪರ್ಕ:** ಜಿಲ್ಲೆಯಲ್ಲಿ ಸಾರಿಗೆ ಸಂಪರ್ಕವು ಉತ್ತಮವಾಗಿದೆ. ಜಿಲ್ಲೆಯ ಬಾಗಲಕೋಟ ಮತ್ತು ಬದಾಮಿ ತಾಲೂಕುಗಳಲ್ಲಿ ರೇಲ್ವೆ ನಿಲ್ದಾಣಗಳಿವೆ.

ಈ ಹಿನ್ನೆಲೆಯನ್ನು ಇಟ್ಟುಕೊಂಡು ಇಂದಿಗೂ ಹಿಂದುಳಿದ ಜಿಲ್ಲೆಯಾಗಿರುವ ಬಿಜಾಪೂರ, ಬಾಗಲಕೋಟೆ ಮತ್ತು ಬೆಳಗಾವಿ ಜಿಲ್ಲೆಗಳ ಆಯ್ದ ತಲಾ ಎರಡು ತಾಲೂಕುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು.

## ೨.೫. ಅಧ್ಯಯನಕ್ಕೊಳಪಡಿಸಿದ ಆರು ತಾಲೂಕಗಳ ಕುರಿತು ಕಿರುನೋಟ

**ಕೋಷ್ಟಕ ೨.೬. ಜಿಲ್ಲಾವಾರು ಆಯ್ದ ತಾಲೂಕುಗಳು ಮತ್ತು ಜನಸಂಖ್ಯೆ**

| ಅ.ಸ. | ಜಿಲ್ಲೆಗಳು | ತಾಲೂಕುಗಳು | ಜನಸಂಖ್ಯೆ |
|---|---|---|---|
| ೧ | ಬಿಜಾಪುರ | ಬಿಜಾಪೂರ | ೭,೧೯,೨೫೦ |
| | | ಬಸವನ ಬಾಗೇವಾಡಿ | ೩,೪೮,೫೧೨ |
| ೨ | ಬಾಗಲಕೋಟೆ | ಜಮಖಂಡಿ | ೪,೪೦,೧೭೬ |
| | | ಮುಧೋಳ | ೩,೨೧,೯೭೦ |
| ೩ | ಬೆಳಗಾವಿ | ಅಥಣಿ | ೫,೨೫,೭೨೨ |
| | | ರಾಯಭಾಗ | ೪,೦೫೪೮೧ |

ಬಿಜಾಪುರ ಜಿಲ್ಲೆಯ ಬಿಜಾಪೂರ ಮತ್ತು ಬಸವನ ಬಾಗೇವಾಡಿ, ಬಾಗಲಕೋಟೆಯ ಜಮಖಂಡಿ ಮತ್ತು ಮುಧೋಳ, ಬೆಳಗಾವಿ ಜಿಲ್ಲೆಯ ಅಥಣಿ ಮತ್ತು ರಾಯಭಾಗ, ಈ ಆರು ತಾಲೂಕುಗಳೂ ಒಂದಕ್ಕೊಂದು ಹೊಂದಿಕೊಂಡಿದ್ದು, ಹೆಚ್ಚು ಕಡಿಮೆ, ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಹೋಲಿಕೆ ಕಂಡುಬರುತ್ತದೆ. ಅಥಣಿ ಮತ್ತು ರಾಯಭಾಗ ತಾಲೂಕುಗಳು ಮುಂದುವರೆದ ಬೆಳಗಾವಿ ಜಿಲ್ಲೆಗೆ ಬರುತ್ತಿದ್ದರೂ ಸಹ, ಅವು ಬಿಜಾಪುರ ಜಿಲ್ಲೆಯ ವಾತಾವರಣ, ಸಾಮಾಜಿಕ ಜೀವನ, ಭೌಗೋಳಿಕ ಪರಿಸರಕ್ಕೆ ಹೊಂದಿಕೊಳ್ಳುತ್ತದೆ. ಆರೂ ತಾಲೂಕುಗಳು ಮಹಾರಾಷ್ಟ್ರ ರಾಜ್ಯದ ಗಡಿ ತಾಲೂಕುಗಳಾಗಿವೆ. ಈ ಜನರ ಆರ್ಥಿಕ ಮತ್ತು ಸಾಮಾಜಿಕ ಜೀವನದ ಮೇಲೆ ಮಹಾರಾಷ್ಟ್ರ ರಾಜ್ಯದ ಪ್ರಭಾವವಿದೆ.

ನಕ್ಷೆ:೨. ಬೆಳಗಾವಿ, ಬಿಜಾಪೂರ ಹಾಗೂ ಬಾಗಲಕೋಟೆ ಜಿಲ್ಲೆಯ ತಾಲ್ಲೂಕುಗಳು ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳಾಗಿವೆ

ಬೆಳಗಾವಿ ಜಿಲ್ಲೆ




ಬಿಜಾಪೂರ ಜಿಲ್ಲೆ




ಬಾಗಲಕೋಟೆ ಜಿಲ್ಲೆ



## ಕೋಷ್ಟಕ ೨.೭. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆ

| ಅ.ಸ. | ತಾಲೂಕು | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | |
|---|---|---|---|---|---|---|---|
| | | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು | ಒಟ್ಟು |
| ೧ | ಬಿಜಾಪುರ | ೫೪,೩೪೯ | ೫೧,೩೧೪ | ೧,೦೫,೬೬೦ | ೩,೦೩೦ | ೨೭೭೨ | ೫,೮೦೨ |
| ೨ | ಬ.ಬಾಗೇವಾಡಿ | ೨೯,೩೯೭ | ೨೮,೬೧೪ | ೫೮,೦೧೧ | ೨,೯೯೩ | ೨,೭೧೫ | ೫,೭೦೮ |
| ೩ | ಜಮಖಂಡಿ | -- | -- | ೮೦,೧೩೮ | -- | -- | ೫,೮೬೬ |
| ೪ | ಮುಧೋಳ | -- | -- | ೬೦,೨೭೫ | -- | -- | ೧೨,೯೬೧ |
| ೫ | ಅಥಣಿ | ೩೪,೪೨೩ | ೩೩೬೯೧ | ೬೮,೧೧೪ | ೬೦೦೮ | ೫೬೫೨ | ೧೧,೬೬೦ |
| ೬ | ರಾಯಭಾಗ | ೩೧,೦೮೨ | ೩೦,೦೧೫ | ೬೧,೦೯೭ | ೩,೩೬೯ | ೩,೧೯೫ | ೬,೫೬೪ |

ಮೇಲಿನ ಕೋಷ್ಟಕದಲ್ಲಿ ಕಾಣಬವಂತೆ ಎಲ್ಲ ತಾಲೂಕುಗಳಲ್ಲಿ ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಪುರುಷರ ಜನಸಂಖ್ಯೆಗೆ ಸರಿಸುಮಾರಾಗಿ ಪ.ಜಾ ಮತ್ತು ಪ.ಪಂ ಮಹಿಳೆಯರ ಜನಸಂಖ್ಯೆ ಇರುವುದು ಕಂಡುಬರುತ್ತದೆ. ಪ.ಜಾತಿ ಮತ್ತು ಪ.ಪಂಗಡದ ಜನರು ಮುಖ್ಯವಾಗಿ ಕೃಷಿ ಕೂಲಿ ಕಾರ್ಮಿಕರಾಗಿದ್ದಾರೆ.

**ಕೋಷ್ಟಕ ೨.೮. ಒಟ್ಟು ಭೂ ಹಿಡುವಳಿದಾರರು**

| ಅ.ಸ | ತಾಲೂಕು | ಪಜಾ | | ಪಪಂ | | ಇತರೆ | |
|---|---|---|---|---|---|---|---|
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಬಿಜಾಪುರ | ೧೨,೩೧೨ | ೧೮೮೨ | ೧೭೪ | ೨೯ | ೬೨,೪೧೨ | ೮೭೪೭ |
| ೨ | ಬ.ಬಾಗೇವಾಡಿ | ೬೭೨೧ | ೧೪೬೮ | ೬೪೦ | ೧೪೦ | ೪೬೨೩೧ | ೬೨೯೫ |
| ೩ | ಜಮಖಂಡಿ | – | – | – | – | – | – |
| ೪ | ಮುಧೋಳ | – | – | – | – | – | – |
| ೫ | ಅಥಣಿ | ೫೮೭೧ | ೧೨೦೯ | ೧೩೬೧ | ೧೧೩ | ೭೨೭೮೨ | ೬೮೪೦ |
| ೬ | ರಾಯಭಾಗ | ೩೨೪೫ | ೩೬೧ | ೫೩೩ | ೨೭ | ೩೮೯೧೬ | ೨೧೪೬ |

ಮೇಲಿನ ಕೋಷ್ಟಕ ವಿವರಿಸುವಂತೆ ಕೃಷಿ ಭೂಮಿಯ ಹಿಡುವಳಿಯಲ್ಲಿ ಬಹುಪಾಲು ಇರುವ ಪ.ಜಾತಿಯ ಜನರು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಭೂಮಿಯ ಹಿಡುವಳಿದಾರರಾಗಿರುವುದು ಕಂಡುಬರುತ್ತದೆ. ಹಾಗೆಯೇ ಜನಸಂಖ್ಯೆಯಲ್ಲಿ ಕಡಿಮೆ ಇರುವ ಪ.ಪಂಗಡದ ಜನರಲ್ಲಿಯೂ ಕಡಿಮೆ ಪ್ರಮಾಣದ ಭೂ ಹಿಡುವಳಿದಾರರು ಇರುವುದು ಕಂಡುಬರುತ್ತದೆ.

**ಕೋಷ್ಟಕ ೨.೯. ಮಳೆ ಪ್ರಮಾಣ**

| ಅ.ಸ | ತಾಲೂಕು | ವಾಡಿಕೆ ಮಳೆ ಪ್ರಮಾಣ |
|---|---|---|
| ೧ | ಬಿಜಾಪುರ | ೬೪೬ |
| ೨ | ಬ.ಬಾಗೇವಾಡಿ | ೬೫೫ |
| ೩ | ಜಮಖಂಡಿ | ೫೫೩ |
| ೪ | ಮುಧೋಳ | ೫೧೪ |
| ೫ | ಅಥಣಿ | ೫೫೯ |
| ೬ | ರಾಯಭಾಗ | ೫೨೦ |

ಕೋಷ್ಟಕವು ವಿವರಿಸುವಂತೆ ವಾರ್ಷಿಕವಾಗಿ ಬೀಳುವ ವಾಡಿಕೆ ಮಳೆಯ ಪ್ರಮಾಣ ಕಡಿಮೆ ಇದ್ದು, ಬಿದ್ದ ಮಳೆ ನೀರನ್ನು ಸಂಗ್ರಹಿಸಿಡಲು, ಬಾಂದಾರಗಳು ಕೆರೆಗಳು ಇಲ್ಲದ್ದರಿಂದ ನೀರು ನಿಲ್ಲದೇ ಹರಿದು ಹೋಗುತ್ತದೆ. ಮಳೆ ಬಿದ್ದೇ ಬೀಳುತ್ತದೆ ಎಂಬ ನಿಶ್ಚಿತತೆ ಇಲ್ಲ. ನಿರಂತರವಾದ ಬರಗಾಲದಿಂದ ಮಳೆಯು ತುಂಬಾ ಅನಿಶ್ಚಿತವಾಗಿದೆ.

**ಕೋಷ್ಟಕ ೨.೧೦. ಸಾಕ್ಷರತೆ**

| ಅ.ಸ. | ತಾಲೂಕು | ಪುರುಷ | ಮಹಿಳೆ | ಒಟ್ಟು |
|---|---|---|---|---|
| ೧ | ಬಿಜಾಪುರ | ೭೯.೮೫ | ೬೩.೫೯ | ೭೧.೮೭ |
| ೨ | ಬ.ಬಾಗೇವಾಡಿ | ೭೬.೩೩ | ೫೩.೨೪ | ೬೪.೭೬ |
| ೩ | ಜಮಖಂಡಿ | ೭೬.೪೧ | ೫೯.೨೪ | ೬೭.೮೬ |
| ೪ | ಮುಧೋಳ | ೭೫.೮೩ | ೫೭.೩೮ | ೬೬.೫೭ |
| ೫ | ಅಥಣಿ | ೬೮.೯೬ | ೫೩.೮೧ | ೬೧.೫೬ |
| ೬ | ರಾಯಭಾಗ | ೬೫.೨೪ | ೫೦.೩೦ | ೫೭.೯೫ |

ಕೋಷ್ಟಕವು ವಿವರಿಸುವಂತೆ ಎಲ್ಲ ತಾಲೂಕಿನಲ್ಲಿ ಸಾಕ್ಷರತಾ ಪ್ರಮಾಣವು ಸಮಾಧಾನಕರವಾಗಿದೆ. ಆದರೆ ಮಹಿಳೆಯರ ಸಾಕ್ಷರತಾ ಪ್ರಮಾಣವು ಅಗತ್ಯಕ್ಕಿಂತ ಕಡಿಮೆ ಇದ್ದು, ಬಿಜಾಪೂರ ತಾಲೂಕಿನಲ್ಲಿ ಮಾತ್ರ ಸ್ವಲ್ಪ ಉತ್ತಮವಾಗಿದೆ.

**ಕೋಷ್ಟಕ ೨.೧೧. ಲಿಂಗಾನುಪಾತ**

| ಅ.ಸ | ತಾಲೂಕು | ಜನಸಾಂದ್ರತೆ | ಲಿಂಗಾನುಪಾತ |
|---|---|---|---|
| ೧ | ಬಿಜಾಪುರ | ೨೭೦.೫ | ೯೫೭ |
| ೨ | ಬ.ಬಾಗೇವಾಡಿ | ೧೭೬.೧ | ೯೬೫ |
| ೩ | ಜಮಖಂಡಿ | – | ೯೭೪ |
| ೪ | ಮುಧೋಳ | – | ೯೭೫ |
| ೫ | ಅಥಣಿ | ೨೬೩.೫೨ | ೯೫೫ |
| ೬ | ರಾಯಭಾಗ | ೪೨೩.೨೬ | ೯೫೪ |

ಮಹಿಳೆಯರಿಗೆ ಪುರುಷರಂತೆ ಸಮಾನವಕಾಶಗಳು ದೊರೆತಿದ್ದರೆ, ಲಿಂಗಾನುಪಾತವು ಪುರುಷರಿಗೆ ಸಮಾನವಾಗಿ ಇರಬೇಕಾಗಿತ್ತು. ಆದರೆ ಆರೂ ತಾಲೂಕುಗಳಲ್ಲಿ ಲಿಂಗಾನುಪಾತದ ಪ್ರಮಾಣವು ಕಡಿಮೆ ಇರುವುದು ಕಂಡುಬರುತ್ತಿದೆ. ಶೈಕ್ಷಣಿಕ ಸ್ಥಿತಿ ಹಿಂದುಳಿದಿರುವುದು ಇದಕ್ಕೆ ಪೂರಕವೆನಿಸುತ್ತದೆ.

**ಕೋಷ್ಟಕ ೨.೧೨. ಮಾನವ ಅಭಿವೃದ್ಧಿ ಸೂಚ್ಯಾಂಕ**

| ಅ.ಸ. | ತಾಲೂಕು | ಜೀವನಮಟ್ಟ | ಆರೋಗ್ಯ | ಶಿಕ್ಷಣ | ಮಾನವ ಅಭಿವೃದ್ಧಿ |
|---|---|---|---|---|---|
| ೧ | ಬಿಜಾಪುರ | ೬೫ | ೫೮ | ೧೩೩ | ೭೧ |
| ೨ | ಬ.ಬಾಗೇವಾಡಿ | ೧೬೩ | ೯೧ | ೧೫೫ | ೧೫೪ |
| ೩ | ಜಮಖಂಡಿ | ೧೧೫ | ೧೦೮ | ೭೧ | ೧೦೨ |
| ೪ | ಮುಧೋಳ | ೧೪೨ | ೧೦೧ | ೧೧೯ | ೧೨೬ |
| ೫ | ಅಥಣಿ | ೧೫೩ | ೧೫ | ೧೧೧ | ೧೦೮ |
| ೬ | ರಾಯಭಾಗ | ೧೬೧ | ೬೬ | ೧೪೨ | ೧೪೩ |

ಮೇಲಿನ ಕೋಷ್ಟಕದ ಪ್ರಕಾರ ಬಿಜಾಪೂರ ನಗರ ಒಂದನ್ನು ಹೊರತುಪಡಿಸಿ, ಉಳಿದೆಲ್ಲ ತಾಲೂಕುಗಳ ಮಾನವ ಅಭಿವೃದ್ಧಿ ಸೂಚ್ಯಾಂಕವು ದುಸ್ಥಿತಿಯನ್ನು ಸೂಚಿಸುತ್ತದೆ. ಅಥಣಿಯ ಮಾನವ ಅಭಿವೃದ್ಧಿ ಸೂಚ್ಯಾಂಕವು ೧೦೮ನೇ ಸ್ಥಾನದಲ್ಲಿದ್ದರೂ ಸಹ ಆರೋಗ್ಯ ಸೂಚಿಯು ೧೫ನೆ ಸ್ಥಾನದಲ್ಲಿದ್ದು ಉತ್ತಮ ಬೆಳವಣಿಗೆಯನ್ನು ಸೂಚಿಸುತ್ತದೆ.

**ಕೋಷ್ಟಕ ೨.೧೩. ದೇವದಾಸಿ ಮಹಿಳೆಯರ ಸಂಖ್ಯೆ**

| ಅ.ಸ. | ತಾಲೂಕು | ದೇವದಾಸಿ |
|---|---|---|
| ೧ | ಬಿಜಾಪುರ | ೧೩೬೧ |
| ೨ | ಬ.ಬಾಗೇವಾಡಿ | ೧೧೩೮ |
| ೩ | ಜಮಖಂಡಿ | ೨೫೦೩ |
| ೪ | ಮುಧೋಳ | ೨೧೦೬ |
| ೫ | ಅಥಣಿ | ೧೦೦೬ |
| ೬ | ರಾಯಭಾಗ | ೮೪೪ |

ಕರ್ನಾಟಕದಲ್ಲಿ ೨೦೦೭-೨೦೦೮ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ, ರಾಜ್ಯದಲ್ಲಿ ಒಟ್ಟು ೪೬,೬೦೦ ದೇವದಾಸಿ ಮಹಿಳೆಯರಿದ್ದಾರೆ. ಬಿಜಾಪೂರ, ಬೆಳಗಾವಿ ಮತ್ತು ಬಾಗಲಕೋಟೆ ಜಿಲ್ಲೆಗಳ ತಾಲೂಕುಗಳಲ್ಲಿ ಅತಿ ಹೆಚ್ಚು ಸಂಖ್ಯೆಯನ್ನು ಹೊಂದಿದ ಎರಡೆರಡು ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿ ಕೊಳ್ಳಲಾಗಿದೆ. ಆ ಪ್ರಕಾರ ಜಮಖಂಡಿ ತಾಲೂಕು ಹೆಚ್ಚು ದೇವದಾಸಿ ಮಹಿಳೆಯರನ್ನು ಒಳಗೊಂಡಿದ್ದು, ರಾಯಭಾಗ ತಾಲೂಕು ಅತಿ ಕಡಿಮೆ ಅಂದರೆ ೮೪೪ ದೇವದಾಸಿ ಮಹಿಳೆಯರನ್ನು ಒಳಗೊಂಡಿದೆ. ಆದರೆ ಇದು ಸರ್ಕಾರದ ಯೋಜನೆ ಪಡೆಯುವಲ್ಲಿ ಅರ್ಹ ಫಲಾನುಭವಿಗಳ ಪಟ್ಟಿಯಾಗಿದೆ. ಇದರ ೨೦-೩೦ ಪಟ್ಟು ಮಹಿಳೆಯರು ಮಹಾರಾಷ್ಟ್ರದ ವೇಶ್ಯಾಗೃಹಗಳಲ್ಲಿ ಇರುವುದು ಕ್ಷೇತ್ರ ಅಧ್ಯಯನದಿಂದ ಕಂಡುಬಂದಿದೆ. ಅಲ್ಲದೇ ಊರಲ್ಲೇ ಇರುವ ಬಹಳಷ್ಟು ಚಿಕ್ಕ ವಯಸ್ಸಿನ ದೇವದಾಸಿ ಮಹಿಳೆಯರೂ ಈ ಅಂಕಿ ಸಂಖ್ಯೆಯಲ್ಲಿ ಸೇರ್ಪಡೆಯಾಗಿರುವುದಿಲ್ಲ.

೧೯೯೩-೯೪ರಲ್ಲಿ ಸಮೀಕ್ಷೆ ಮಾಡಿದಾಗ ಅಥಣಿ ತಾಲೂಕು ಬೆಳಗಾವಿ ಜಿಲ್ಲೆಯಲ್ಲಿಯೇ ಅತೀ ಹೆಚ್ಚಿನ ಸಂಖ್ಯೆಯ ದೇವದಾಸಿ ಮಹಿಳೆಯರನ್ನು ಹೊಂದಿತ್ತು(ಮಾಸ್:೨೦೦೮). ಆದರೆ ಇಂದು ಅದು ೫ನೇಯ ಸ್ಥಾನಕ್ಕೆ ಇಳಿದಿದೆ. ತಾಲೂಕಿನಲ್ಲಿ ೧೯೮೫-೮೬ರಲ್ಲಿ ಪ್ರಾರಭವಾದ ವಿಮೋಚನಾ ಸಂಸ್ಥೆಯ ಮತ್ತು ೧೯೯೫ರಲ್ಲಿ ಪ್ರಾರಂಭವಾದ ಘಟಪ್ರಭಾದ ಮಾಸ್ ಸಂಸ್ಥೆಯ ಪ್ರಯತ್ನದಿಂದ ಈ ಇಳಿಮುಖದ ಫಲಿತಾಂಶವನ್ನು ಕಾಣಬಹುದಾಗಿದೆ. ಅದೇ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಗಡಿಭಾಗದಲ್ಲಿ ನಡೆಯುವ ಸಾಗಾಣಿಕೆಯನ್ನು ತಪ್ಪಿಸಲು ಮತ್ತು ರಕ್ಷಿಸಿದ, ಅನಾಥ ಹೆಣ್ಣುಮಕ್ಕಳಿಗೆ ಆಶ್ರಯ ನೀಡಲು, ರಾಜ್ಯ ಮಹಿಳಾ ನಿಲಯವನ್ನೂ ಸಹ ಪ್ರಾರಂಭಿಸಿತ್ತು.

**ಕೋಷ್ಟಕ ೨.೧೪. ಲೈಂಗಿಕ ಕಾರ್ಯಕರ್ತರ ಸಂಖ್ಯೆ**

| ಅ.ಸ. | ತಾಲೂಕು | ಲೈಂಗಿಕ ಕಾರ್ಯಕರ್ತೆಯರು |
|---|---|---|
| ೧ | ಬಿಜಾಪುರ | ೭೦೦ |
| ೨ | ಬ.ಬಾಗೇವಾಡಿ | ೫೫೨ |
| ೩ | ಜಮಖಂಡಿ | ೧೨೧೦ |
| ೪ | ಮುಧೋಳ | ೧೧೩೦ |
| ೫ | ಅಥಣಿ | ೬೮೮ |
| ೬ | ರಾಯಭಾಗ | ೬೫೫ |

**ಆಧಾರ:** ಆಯಾ ತಾಲೂಕುಗಳ ಸಮುದಾಯಾಧಾರಿತ ಸಂಸ್ಥೆಗಳು(ಸಿಬಿಓ)

ಕರ್ನಾಟಕ ರಾಜ್ಯ ಏಡ್ಸ್ ಪ್ರಿವೆನ್ಶನ್ ಸೊಸಾಯಿಟಿಯ ಅಡಿಯಲ್ಲಿ ಇಂದು ಕರ್ನಾಟಕದಾದ್ಯಂತ ಹಲವಾರು ಸಮುದಾಯ ಆಧಾರಿತ ಸಂಸ್ಥೆಗಳು (ಸಿಬಿಓ) ಕೆಲಸ ಮಾಡುತ್ತಿವೆ. ಅವರ ವರದಿಯಂತೆ ಜಮಖಂಡಿ ಮತ್ತು ಮುಧೋಳ ತಾಲೂಕುಗಳಲ್ಲಿ ಹೆಚ್ಚಿನ ಲೈಂಗಿಕ ಕಾರ್ಯಕರ್ತೆಯರು ಇದ್ದಾರೆ. ಅದರಲ್ಲಿ ದೇವದಾಸಿ ಮಹಿಳೆಯರೂ ಇರಬಹುದು. ಜನರಲ್ ಪಾಪ್ಯುಲೇಶನ್ ಸಹ ಇರಬಹುದು. ಆದರೆ ಎಲ್ಲ ದೇವದಾಸಿ ಮಹಿಳೆಯರೂ ಲೈಂಗಿಕ ಕಾರ್ಯಕರ್ತೆಯರಲ್ಲ.

**ಕೋಷ್ಟಕ ೨.೧೫. ಎಚ್.ಐ.ವಿ ಸೋಂಕಿತರ ಸಂಖ್ಯೆ**

| ಅ.ಸ. | ತಾಲೂಕು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| ೧ | ಬಿಜಾಪುರ | ೭೫೮ | ೭೩೬ | ೧೪೯೪ |
| ೨ | ಬ.ಬಾಗೇವಾಡಿ | ೧೨೭ | ೧೩೬ | ೨೬೩ |
| ೩ | ಜಮಖಂಡಿ | ೨೬೯ | ೨೭೫ | ೫೪೪ |
| ೪ | ಮುಧೋಳ | ೨೭೬ | ೩೨೭ | ೬೦೩ |
| ೫ | ಅಥಣಿ | ೨೪೨ | ೨೫೨ | ೪೯೪ |
| ೬ | ರಾಯಭಾಗ | ೧೫೬ | ೧೪೪ | ೩೦೦ |

ಜಿಲ್ಲಾ ಸಂಖ್ಯಾಶಾಸ್ತ್ರ ಇಲಾಖೆಯು ನೀಡಿದ ಅಂಕಿ ಸಂಖ್ಯೆಗಳ ಪ್ರಕಾರ ಎಚ್.ಆಯ್.ವಿಯಿಂದ ಸೋಂಕಿತರಾದ ಮಾಹಿತಿಯನ್ನು ಈ ಮೇಲಿನ ಕೋಷ್ಟಕದಲ್ಲಿ ವಿವರಿಸಲಾಗಿದೆ. ಆ ಪ್ರಕಾರ ಬಿಜಾಪುರವು ಹೆಚ್ಚು ಮತ್ತು ಅದರ ನಂತರ ಜಮಖಂಡಿ ಮತ್ತು ಮುಧೋಳಗಳು ಹೆಚ್ಚಿನ ಸೋಂಕಿತರನ್ನು ಹೊಂದಿವೆ. ಉಳಿದಂತೆ ಅಥಣಿ ರಾಯಭಾಗ ಮತ್ತು ಬಸವನ ಬಾಗೇವಾಡಿಯಲ್ಲಿ ಕಡಿಮೆ ಸೋಂಕಿತರು ಇರುವ ವರದಿ ಇದೆ.

## ಕೋಷ್ಟಕ ೨.೧೬. ಶಾಲಾ ದಾಖಲಾತಿ ಮತ್ತು ಮುಂದುವರಿಕೆ

| ಅ.ಸ | ತಾಲೂಕ | ಕಿ.ಪ್ರಾ.ಶಾಲೆ | | ಹಿ.ಪ್ರಾ.ಶಾಲೆ | | ಪ್ರೌಢ ಶಾಲೆ | | ಶಿಕ್ಷಣದ ದಾಖಲಾತಿ ಮತ್ತು ಮುಂದುವರಿಕೆಯಲ್ಲಿನ ಅಂತರ (ಕಿರಿಯ ಪ್ರಾಥಮಿಕದಿಂದ ಪ್ರೌಢ ಶಾಲೆಯವರೆಗೆ) | |
|---|---|---|---|---|---|---|---|---|---|
| | | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು |
| ೧ | ಬಿಜಾಪೂರ | ೯೦೭೬ | ೧೧೫೯೭ | ೪೯೩೮೯ | ೫೫೮೭೩ | ೧೨೬೯೮ | ೧೪೦೫೪ | + ೩೬೨೨ | + ೩೫೪೭ |
| ೨ | ಬ.ಬಾಗೇವಾಡಿ | ೪೨೩೩ | ೫೬೦೮ | ೨೩೩೭೩ | ೨೫೨೫೭ | ೫೮೭೧ | ೭೨೧೪ | + ೧೬೩೮ | + ೧೬೦೬ |
| ೩ | ಜಮಖಂಡಿ | ೨೬೧೧೯ | ೨೭೯೮೨ | ೧೫೦೪೩ | ೧೩೮೮೫ | ೭೦೮೪ | ೭೮೮೭ | – ೯೦೩೫ | – ೨೦೦೯೫ |
| ೪ | ಮುಧೋಳ | ೧೮೨೨೫ | ೧೯೪೬೨ | ೯೬೨೪ | ೧೦೦೧೧ | ೪೫೬೩ | ೫೧೪೪ | – ೧೩೬೬೨ | – ೧೪೦೧೮ |
| ೫ | ಅಥಣಿ | ೨೪೦೧೯ | ೨೬೬೮೩ | ೩೧೦೭೨ | ೩೬೮೪೧ | ೧೫೧೫೦ | ೧೬೧೦೯ | – ೮೮೭೯ | – ೧೦೫೭೪ |
| ೬ | ರಾಯಭಾಗ | ೨೦೨೮೦ | ೨೨೯೬೩ | ೨೭೭೭೨ | ೩೧೦೯೮ | ೪೪೩೪ | ೬೧೩೨ | – ೧೬೮೪೬ | – ೧೬೮೩೧ |

ಆಧಾರ: ಜಿಲ್ಲಾ ಅಂಕಿ ಸಂಖ್ಯೆ ನೋಟ (ಬಿಜಾಪೂರ:೨೦೧೨-೧೩, ಬಾಗಲಕೋಟ:೨೦೧೪-೧೫,ಬೆಳಗಾವಿ:೨೦೧೧-೧೨)

ಶೈಕ್ಷಣಿಕ ವಿಚಾರದಲ್ಲಿ ಅಧ್ಯಯನದ ಮೂರೂ ಜಿಲ್ಲೆಗಳು (ಬಿ, ಬೆ, ಬಾ) ಉತ್ತಮ ಸೂಚ್ಯಂಕಗಳನ್ನು ಹೊಂದಿರುವುದಿಲ್ಲ. ೧೪ ವರ್ಷಗಳವರೆಗೆ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕೊಡಬೇಕೆಂದು ಸಂವಿಧಾನದಲ್ಲಿ ಹೇಳಲಾಗಿದ್ದರೂ ಸಹ, ಕಿರು ಪ್ರಾಥಮಿಕ (೧ ರಿಂದ ೪) ಶಾಲೆಗೆ ದಾಖಲಾದ ಮಕ್ಕಳು ಕ್ರಮೇಣ ಕಡಿಮೆಯಾಗುತ್ತಾ ಬರುತ್ತಾರೆ. ಪ್ರೌಢ ಶಿಕ್ಷಣದ ಹಂತಕ್ಕೆ ಬರುವಷ್ಟರಲ್ಲಿ ಗಣನೀಯ ಸಂಖ್ಯೆಯಲ್ಲಿ ಮಕ್ಕಳು ಶಾಲಾ ಮುಂದುವರಿಕೆಯಲ್ಲಿ ಕಡಿತಗೊಂಡಿರುವುದನ್ನು ಮೇಲಿನ ಕೋಷ್ಟಕದಲ್ಲಿ ಗಮನಿಸಬಹುದು. ಹಾಗೆಯೇ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ದಾಖಲಾತಿ ಮಾಡಿಕೊಳ್ಳದೇ ಇರುವ ಮಕ್ಕಳು, ಪ್ರೌಢ ಶಿಕ್ಷಣದವರೆಗೆ ಕ್ರಮೇಣ ಬಂದು ಸೇರಿಕೊಂಡ ಅಂಶಗಳು ಕಂಡುಬರುತ್ತವೆ. ಅದು ಬಿಜಾಪೂರದಲ್ಲಿ ೩೬೨೨ ಹೆಣ್ಣುಮಕ್ಕಳು ಮತ್ತು ೩೫೪೭ ಗಂಡು ಮಕ್ಕಳು, ಬಸವನ ಬಾಗೇವಾಡಿಯಲ್ಲಿ ೧೬೩೮ ಹೆಣ್ಣುಮಕ್ಕಳು ಮತ್ತು ೧೬೦೬ ಗಂಡುಮಕ್ಕಳು ಪ್ರೌಢಶಾಲೆಯ ಹಂತದಲ್ಲಿ ಸೇರ್ಪಡೆಯಾಗಿರುವುದು ಕಂಡುಬರುತ್ತಿದೆ. ಬಹುಶಃ ಈ ಭಾಗದಲ್ಲಿ ಇಂದಿಗೂ ಜನರನ್ನು ಬಳಲಿಸುತ್ತಿರುವ ಬರಗಾಲಗಳು, ಕಡಿಮೆ ಕೂಲಿ, ವರ್ಷದುದ್ದಕ್ಕೂ ಗುಳೆ ಹೋಗುವಂತೆ ಮಾಡುತ್ತಿರಬಹುದು. ಬೆಳಗಾವಿ, ಜಮಖಂಡಿ, ಮುಧೋಳ, ಮಹಾರಾಷ್ಟದ ಪ್ರದೇಶಗಳಲ್ಲಿ ನೀರಾವರಿಯ ಲಭ್ಯತೆಯಿಂದಾಗಿ ಸರ್ವಋತುವಿನಲ್ಲೂ ಕಬ್ಬು ಬೆಳೆಯನ್ನು ಬೆಳೆಯುತ್ತಿದ್ದಾರೆ. ಅದರ ಕಟಾವಿಗೆ ಇಡೀ ಕುಟುಂಬವೇ ಗುಳೆ ಹೋಗುವುದು ಸರ್ವೇ ಸಾಮಾನ್ಯವಾಗಿರುತ್ತದೆ. ಅದನ್ನು ಶಿವಾನಂದ ಜಾಮದಾರ ಅವರು ತಮ್ಮ 'ತಾರತಮ್ಯ' ಪುಸ್ತಕದಲ್ಲಿ "ಬಡತನವೇ ಉತ್ತರ ಕರ್ನಾಟಕದ ಬಂಡವಾಳ. ಬರಗಾಲದಲ್ಲಿ ವಲಸೆ ಹೋಗುವವರ ಜೀವನ ಯಾತನಾಮಯವಾಗಿರುತ್ತಗೆ. ಬಡ ಊರಿನ ಖಾಲಿ ಮನೆಗಳಿಗೆ ಬೀಗ ಜಡಿದು ಗಂಟು ಮೂಟೆ ಕಟ್ಟಿಕೊಂಡು ಮಕ್ಕಳು ಮರಿಗಳನ್ನು ಲಾರಿಯಲ್ಲೋ ಕಿಕ್ಕಿರಿದ ಬಸ್ಸಿನೊಳಗೋ ಎತ್ತಿಕೊಂಡು ಗುಳೆ ಹೊರಟ ಜನರ ಅವಸ್ಥೆಯನ್ನು ನೋಡಲಿಕ್ಕಾಗದು".[೧೮] ಹೀಗೆ ಹೋದವರು ಮತ್ತೆ ಮರಳಿ ಬಂದಾಗ ಶಾಲೆಗೆ ಮರುದಾಖಲೀಕರಣಗೊಂಡ ಸಾಧ್ಯತೆಗಳು ಈ ರೀತಿ ದಾಖಲಾತಿಯ ಹೆಚ್ಚಳಕ್ಕೆ ಕಾರಣವಿರಬಹುದು.

ಆದರೆ ಜಮಖಂಡಿ, ಮುಧೋಳ, ಅಥಣಿ, ರಾಯಭಾಗಗಳಲ್ಲಿ ಈ ಅಂಶವು ದಾಖಲಾದ ಮಕ್ಕಳು ಮುಂದುವರಿಕೆಯಾಗದೇ ಇರುವುದು ಕಂಡುಬರುತ್ತದೆ. ಮುಧೋಳದಲ್ಲಿ ೧೮೨೨೫ ಹೆಣ್ಣುಮಕ್ಕಳು ಕಿರಿಯ ಪ್ರಾಥಮಿಕ ಶಾಲೆಗೆ ದಾಖಲಾತಿ ಮಾಡಿಕೊಂಡವರು ೮ನೇ ತರಗತಿಗೆ ಬರುವ ಹೊತ್ತಿಗೆ ೪೫೬೩ ಆಗಿರುತ್ತಾರೆ. ಅಂದರೆ ಸುಮಾರು ೧೩೬೬೨ ಮಕ್ಕಳು ೭ ವರ್ಷಗಳಲ್ಲಿ ಶಾಲೆಯನ್ನು ಬಿಟ್ಟಿದ್ದಾರೆ. ಅದೇ ರೀತಿ ರಾಯಭಾಗದಲ್ಲಿಯೂ ಸಹ ೧೬೮೪೬, ಜಮಖಂಡಿಯಲ್ಲಿ ೯೦೩೫ ಮತ್ತು ಅಥಣಿಯಲ್ಲಿ ೮೮೬೯ ಮಕ್ಕಳು ಶಿಕ್ಷಣವನ್ನು ಮುಂದುವರೆಸದೇ ಇರುವುದು ಕಂಡುಬರುತ್ತದೆ. ಸರ್ಕಾರ ಇದಕ್ಕೆ ಕೊಡುವ ಸಮಜಾಯಿಸಿ ಏನೆಂದರೆ, ಶಿಕ್ಷಣ ಹಕ್ಕು ಕಾಯ್ದೆಯಲ್ಲಿ ಬೇರೆ ಖಾಸಗಿ ಶಾಲೆಗಳಿಗೆ ಹೋಗಿರಬಹುದು. ಅಥವಾ ಬೇರೆ ಊರಿಗೆ ವರ್ಗವಾಗಿ ಹೋಗಿರಬಹುದು ಎಂಬುದು. ಆದರೆ ಹಾಗೆ ಎಷ್ಟು ಮಕ್ಕಳು ಹೋಗಿರಲು ಸಾಧ್ಯ? ಎಲ್ಲೋ ಆತಂಕಕಾರಿ ವಿಷಯ ಘಟಿಸುತ್ತಿರುವಂತೆ

ತೋರುತ್ತದೆ. ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಸಮೀಕ್ಷೆಯಲ್ಲಿ, ಕ್ಷೇತ್ರಕಾರ್ಯ ಅನುಭವದಲ್ಲಿ ಕಂಡುಕೊಂಡಂತೆ ಆಹಾರಕ್ಕಾಗಿ ವಲಸೆ ಹೋದ, ಬಾಲ್ಯ ವಿವಾಹಗಳಾದ, ಬಾಲ ಕಾರ್ಮಿಕರಾದ, ದೇವದಾಸಿಯರಾದ ಅಪೌಷ್ಟಿಕತೆಯಿಂದ ಮರಣ ಹೊಂದಿದ ಸಾಧ್ಯತೆಗಳು ಇರಬಹುದು ಎಂಬ ದಟ್ಟತೆ ಎದ್ದು ಕಾಣುತ್ತದೆ. ಇದರ ಜೊತೆಗೆ ಪ.ಜಾತಿಯ ಸಮುದಾಯದ ಹೆಣ್ಣುಮಕ್ಕಳನ್ನು ಲೈಂಗಿಕ ಜೀತಕ್ಕಾಗಿ ಮಹಾರಾಷ್ಟ್ರದ ವೇಶ್ಯಾಗೃಹಗಳಿಗೆ ಸಾಗಾಣಿಕೆ ಮಾಡಿರುವ ಸಾಧ್ಯತೆಗಳೂ ಕಂಡು ಬರುತ್ತವೆ.

**ಕೋಷ್ಟಕ ೨.೧೭ ಮಕ್ಕಳ ಅಭಿವೃದ್ಧಿ ಸೂಚ್ಯಾಂಕ (ಸಿಡಿಐ)**

| ಅ.ಸ | ತಾಲೂಕು | ಆರೋಗ್ಯ | | ಪೌಷ್ಟಿಕ | | ಶಿಕ್ಷಣ | | ಸಿಡಿಐ | |
|---|---|---|---|---|---|---|---|---|---|
| | | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ | ಮೌಲ್ಯ | ಶ್ರೇಣಿ |
| ೧ | ಬಿಜಾಪೂರ | ೦.೭೧೧ | ೬೧ | ೦.೬೪೬ | ೧೧೮ | ೦.೮೩೦ | ೩೩ | ೦.೭೦೮ | ೪೯ |
| ೨ | ಬ.ಬಾಗೇವಾಡಿ | ೦.೫೦೬ | ೧೨೬ | ೦.೬೩೧ | ೧೨೪ | ೦.೮೩೯ | ೨೯ | ೦.೬೫೨ | ೮೦ |
| ೩ | ಜಮಖಂಡಿ | ೦.೫೯೦ | ೧೦೧ | ೦.೭೩೧ | ೮೬ | ೧.೦೦೦ | ೧ | ೦.೭೬೩ | ೩೨ |
| ೪ | ಮುಧೋಳ | ೦.೪೨೨ | ೧೩೬ | ೦.೬೮೫ | ೯೮ | ೧.೦೦೦ | ೧ | ೦.೬೯೮ | ೫೪ |
| ೫ | ಅಥಣಿ | ೦.೭೮೩ | ೩೨ | ೦.೬೬೯ | ೧೦೯ | ೦.೨೯೨ | ೧೪೧ | ೦.೬೦೩ | ೧೧೪ |
| ೬ | ರಾಯಭಾಗ | ೦.೭೨೩ | ೫೪ | ೦.೫೭೪ | ೧೫೪ | ೦.೭೮೨ | ೪೪ | ೦.೬೬೩ | ೭೩ |

**ಆಧಾರ:** ನ್ಯಾಶನಲ್ ಫ್ಯಾಮಿಲಿ ಹೆಲ್ತ್ ಸರ್ವೇ, ೨೦೧೪

ಮಕ್ಕಳ ಅಭಿವೃದ್ಧಿ ಸೂಚ್ಯಾಂಕದಲ್ಲಿ ಆರೂ ತಾಲೂಕುಗಳು ತುಂಬಾ ಗಂಭೀರವಾದ ಶ್ರೇಣಿಯನ್ನು ಹೊಂದಿವೆ. ಜಮಖಂಡಿ ಮತ್ತು ಮುಧೋಳ ತಾಲೂಕುಗಳ ಶಿಕ್ಷಣ ಸೂಚ್ಯಾಂಕದಲ್ಲಿ ಮೊದಲ ಶ್ರೇಣಿಯಲ್ಲಿ ಕಾಣುವುದು ಉತ್ತಮ ಬೆಳವಣಿಗೆಯಾಗಿದ್ದರೆ, ಅದನ್ನು ಹೊರತುಪಡಿಸಿ ಉಳಿದ ಎಲ್ಲ ವಿಷಯಗಳಲ್ಲಿ ಎಲ್ಲ ತಾಲೂಕುಗಳು ಹಿಂದುಳಿದಿರುವುದು ಕಂಡುಬರುತ್ತದೆ. ಅಥಣಿ ಮತ್ತು ಬಸವನ ಬಾಗೇವಾಡಿಗಳು ೧೧೪ ಮತ್ತು ೮೦ನೇ ಶ್ರೇಣಿಯನ್ನು ಹೊಂದಿ ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿವೆ.

ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳ ಲೈಂಗಿಕ ಜೀತ, ಅದಕ್ಕೆ ಕಾರಣ, ಪರಿಣಾಮ ಮತ್ತು ಪರಿಹಾರಗಳನ್ನು ಕಂಡುಕೊಳ್ಳುವ ದಿಶೆಯಲ್ಲಿ ನಡೆಯುತ್ತಿರುವ ಈ ಅಧ್ಯಯನಕ್ಕೆ, ವಿಕೃತ ಬರಗಾಲ, ಹಸಿವು, ಮಹಿಳಾ ಅನಕ್ಷರತೆ, ಧಾರ್ಮಿಕ ಸಂಪ್ರದಾಯಗಳು, ಲೈಂಗಿಕತೆಯ ವ್ಯಾಪಾರೀಕರಣ, ಮಕ್ಕಳು ಶಾಲೆಯಿಂದ ಹೊರಗುಳಿಯುವ ಮತ್ತು ದಾಖಲಾಗದೇ ಉಳಿಯುವ ಅಂಶಗಳ ಪ್ರಭಾವದಲ್ಲಿ ಹಿನ್ನಡೆ ಅನುಭವಿಸುತ್ತಿರುವ ಈ ಆರೂ ತಾಲೂಕಾ ಪ್ರದೇಶಗಳು ಸೂಕ್ತವಾಗಬಹುದೆಂಬ ತಿಳುವಳಿಕೆಯ ಆಧಾರದಲ್ಲಿ ಈ ಪ್ರದೇಶಗಳಲ್ಲಿ ಅಧ್ಯಯನವನ್ನು ನಡೆಸಲಾಗಿದೆ.

ನಕ್ಷೆ: ೪.೩

## ಮಹಾರಾಷ್ಟ್ರ ರಾಜ್ಯದ ಜಿಲ್ಲೆಗಳು

### ಸಮೀಕ್ಷೆಗೊಳಪಟ್ಟ ಅಧ್ಯಯನದ ಕ್ಷೇತ್ರಗಳು




ಪ್ರಸ್ತುತ ಅಧ್ಯಯನವು ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಪ್ರದೇಶಗಳಿಗೆ ಸಂಬಂಧಿಸಿದ್ದಾಗಿದೆ ಈಗಾಗಲೇ ಕರ್ನಾಟಕ ರಾಜ್ಯದ ಅಧ್ಯಯನ ಕ್ಷೇತ್ರಗಳನ್ನು ವಿವರವಾಗಿ ಪರಿಚಯಿಸಲಾಗಿದೆ. ಮಹಾರಾಷ್ಟ್ರ ರಾಜ್ಯದ ಕ್ಷೇತ್ರಗಳ ಪರಿಚಯವನ್ನು ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಉಲ್ಲೇಖಿಸಲಾಗಿದೆ. ಅವುಗಳನ್ನು ನಕ್ಷೆಯನ್ನು ಮೇಲೆ ನೀಡಲಾಗಿದೆ.

**ಸಮೀಕ್ಷೆಗೊಳಪಟ್ಟ ಕೆಂಪುದೀಪ ನೆಲೆಗಳು**

೧. ಸಾಂಗ್ಲಿ ಜಿಲ್ಲೆಯ ಮಿರಜ್ ನಗರದ – ಪ್ರೇಮನಗರ ಕೆಂಪುದೀಪ

೨. ಪುಣೆ ನಗರದ – ಬುಧವಾರಪೇಟೆ ಕೆಂಪುದೀಪ

೩. ಮುಂಬಯಿ ನಗರದ – ಕಾಮಟೀಪುರ ಕೆಂಪುದೀಪ

೪. ಥಾಣೆ ಜಿಲ್ಲೆಯ ಬೀವಂಡಿ ನಗರದ – ಹನುಮಾನ ಠೇಕಡಿ ವೃತ್ತದ ಕೆಂಪುದೀಪ

## ಉಲ್ಲೇಖಿತ ಗ್ರಂಥಗಳು

೧. ಚಂದ್ರಶೇಖರ್ ಟಿ.ಆರ್., (೧೯೯೮), ಅಮಾರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು, ಕನ್ನಡ ಸಂಘ, ಕ್ರೈಸ್ಟ ಕಾಲೇಜು, ಬೆಂಗಳೂರು ಪು. ೨೧

೨. ಚಂದ್ರಶೇಖರ್ ಟಿ.ಆರ್., (೨೦೧೧), ವಿಜಾಪೂರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೨೯

೩. ಅದೇ ಪು. ೨೯

೪. ಅದೇ ಪು. ೪೦

೫. ಜೀನ್ ದಿ ಚುನ್ಹಾ (೧೯೯೧), ದ ಲೀಗಲೈಜೇಶನ್ ಆಫ್ ಪ್ರಾಸ್ಟಿಟ್ಯೂಶನ್,ವರ್ಡ ಮೇಕರ್ಸ್, ಬೆಂಗಳೂರು, ಪು. ೧೬೦-೧೬೫

೬. ಮನೋರಂಜಿನಿ (೨೦೦೭),ಲಿಂಗೀಯ ಸಂಬಂಧಗಳು ಮತ್ತು ಸಮುದಾಯ ಚರ್ಚೆಗೆ ದಂಧೆ ಮಾಡುವವರ ಹಿನ್ನೆಲೆಯಲ್ಲಿ ಕೆಲ ವಿಚಾರಗಳು, ಮಹಿಳಾ ಅಧ್ಯಯನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೫೬-೫೭

೭. ವಾಸವಿ ಎ.ಆರ್., (೨೦೧೫), ಸಾಮಾಜಿಕ ಆಕಾರರೇಖೆ, ಕನ್ನಡ ಅನುವಾದ, ಪ್ರಶಾಂತ್.ಎಚ್.ಡಿ ಮತ್ತು ಇತರರು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೨೧

೮. ಅದೇ ಪು. ೨೦

೯. ವಾಸುದೇವ ಬಡಿಗೇರ (೨೦೧೦), ಬಸವನ ಬಾಗೇವಾಡಿ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ,

೧೦. ಚೆನ್ನಣ್ಣ ವಾಲೀಕಾರ (೨೦೦೧), ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ಪು. ೨೫೯-೨೬೧

೧೧. ರಿಟಾ ರೋಝಾರಿಯೋ,(೧೯೮೮), ಟ್ರ್ಯಾಫಿಕಿಂಗ್ ಇನ್ ವುಮೆನ್ ಯ್ಯಾಂಡ್ ಚಿಲ್ಡ್ರನ್ ಇನ್ ಇಂಡಿಯಾ, ಉಪ್ಪಲ್ ಪಬ್ಲಿಶಿಂಗ್ ಹೌಸ್, ನ್ಯೂ ದೆಹಲಿ, ಪು. ೫೩

೧೨. ಚೆನ್ನಣ್ಣ ವಾಲೀಕಾರ (೨೦೦೧), ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ಪು. ೩೦೫-೩೦೬

೧೩. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ,ವಿಮೋಚನಾ ಪ್ರಕಾಶನ, ಅಥಣಿ, ಪು. ೧೪೨-೧೪೭

೧೪. ಚೆನ್ನಣ್ಣ ವಾಲೀಕಾರ,(೨೦೦೧), ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ಪು. ೨೫೪-೨೫೫

೧೫. ಅದೇ ಪು. ೩೦೫-೩೦೬

೧೬. ಅದೇ ಪು. ೨೫೭

೧೭. ರಿಟಾ ರೋಝಾರಿಯೋ,(೧೯೮೮), ಟ್ರ್ಯಾಫಿಕಿಂಗ್ ಇನ್ ವುಮೆನ್ ಯ್ಯಾಂಡ್ ಚಿಲ್ಡ್ರನ್ ಇನ್ ಇಂಡಿಯಾ, ಉಪ್ಪಲ್ ಪಬ್ಲಿಶಿಂಗ್ ಹೌಸ್, ನ್ಯೂ ದೆಹಲಿ, ಪು. ೪೯

೧೮. ಶಿವಾನಂದ ಎಂ. ಜಾಮದಾರ (೨೦೧೬), ತಾರತಮ್ಯ,ಮನೋಹರ ಗ್ರಂಥ ಮಾಲಾ, ಧಾರವಾಡ, ಪು. ೪೧

೧೯. ಮಾಳಿ ವಿ.ಎಸ್ (ಸಂ), (೨೦೦೭), ಅಥಣಿ ತಾಲೂಕು: ಸಮಗ್ರ ದರ್ಶನ, ವಿಮೋಚನಾ ಪ್ರಕಾಶನ, ಅಥಣಿ

೨೦. ವಿಜಾಪೂರ ಜಿಲ್ಲೆಯ ಅಂಕಿಅಂಶಗಳ ನೋಟ ೨೦೧೧-೨೦೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ

೨೧. ಬೆಳಗಾವಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೧೧-೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ

ಕಛೇರಿ, ಬೆಳಗಾವಿ

೨೨. ಬಾಗಲಕೋಟ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೧೪-೨೦೧೫, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಾಗಲಕೋಟೆ

೨೩. ಕರ್ನಾಟಕ ಮಾನವ ಅಭಿವೃದ್ಧಿ ವರದಿ ೨೦೦೫

## ಅಧ್ಯಾಯ ಮೂರು

# ಲೈಂಗಿಕ ಜೀತದ ವಾಸ್ತವಿಕ ಜಗತ್ತು

### ೩.೧. ಪ್ರಸ್ತಾವನೆ

ಲೈಂಗಿಕ ಜೀತಕ್ಕೆ ಒಳಗಾದ ಬಾಲೆಯರ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಪ್ರಸ್ತುತ ಅಧ್ಯಾಯವನ್ನು ರೂಪಿಸಲಾಗಿದೆ. ಮಾನವ ಸಮಾಜದ ಇತಿಹಾಸವನ್ನು ಗಮನಿಸಿದಾಗ ವರ್ಣ, ವರ್ಗ, ಜಾತಿ ಅಸಮಾನತೆಗಳು ಸಾಮಾಜಿಕ ಸಂರಚನೆಯಲ್ಲಿ ಬಹುದೊಡ್ಡ ಕಂದಕವನ್ನು ನಿರ್ಮಾಣಮಾಡಿವೆ. ಈ ರೀತಿಯ ಪರಿಸರವು ಸಾಂಸ್ಕೃತಿಕವಾಗಿ ಮೇಲು, ಕೀಳು ಎನ್ನುವ ಭಾವಗಳನ್ನು ಉಂಟುಮಾಡುವುದರ ಜೊತೆಗೆ, ಪುರುಷ ಸ್ತ್ರೀ ಇವರಲ್ಲಿಯೂ ಮೇಲು ಕೀಳುಗಳನ್ನೊಳಗೊಂಡ ಎರಡು ವರ್ಗಗಳನ್ನೇ ಸೃಷ್ಟಿ ಮಾಡಿದೆ. ಇದು ಮಹಿಳೆಯನ್ನು ದ್ವಿತೀಯ ಪ್ರಜೆಯನ್ನಾಗಿ ಪರಿಗಣಿಸುವಂತೆ ಮಾಡಿತಲ್ಲದೇ, ಇಂದೂ ಸಹ ಅವಳನ್ನು ಅದೇ ಸ್ಥಾನದಲ್ಲಿಟ್ಟು ನೋಡಲಾಗುತ್ತಿದೆ. ಹಾಗಾಗಿ ಮಹಿಳೆ ಸಮಾಜದಲ್ಲಿ ತುಂಬಾ ಸಂಕೀರ್ಣವಾದ ಸವಾಲುಗಳನ್ನು ಎದುರಿಸುತ್ತಿದ್ದಾಳೆ. ಅದರಲ್ಲೂ ಅವಳ ಗರ್ಭವನ್ನು ಕೇಂದ್ರೀಕರಿಸಿ, ಅವಳನ್ನು ಸಾಮಾಜಿಕವಾಗಿ ಅಂಚಿನಲ್ಲಿರಿಸಲಾಗಿದೆ. ಇದರಲ್ಲಿಯೂ ತಳಸಮುದಾಯದ ಮಹಿಳೆ ಮತ್ತು ಹೆಣ್ಣುಮಕ್ಕಳು ಎದುರಿಸುವ ಸಮಸ್ಯೆಗಳು ಅತ್ಯಂತ ಭೀಕರ ಮತ್ತು ಅಮಾನವೀಯವಾಗಿವೆ.

ಮಹಿಳೆಯನ್ನು ದ್ವಿತೀಯ ದರ್ಜೆಯ ಪ್ರಜೆಯಾಗಿ ಕಾಣುವ ಪ್ರವೃತ್ತಿ ಕುರಿತು ನಮ್ಮ ಸಾಮಾಜಿಕ ಚರಿತ್ರೆಗಳು ವಿವರಿಸುತ್ತವೆ. ಅದರಲ್ಲಿಯೂ ರೂಮಿಲಾ ತಾಪರ್ ಅವರು ಭಾರತದ ಚಾರಿತ್ರಿಕ ಸಂದರ್ಭದಲ್ಲಿ ಹೇಗೆ ಮಹಿಳೆಯರ ಮೇಲೆ ಶೋಷಣೆ ದೌರ್ಜನ್ಯಗಳು ನಡೆದಿವೆ ಎನ್ನುವುದನ್ನು ವಿವರಿಸುತ್ತಾರೆ. ಹೀಗೆ ನಡೆದಿರುವ ದೌರ್ಜನ್ಯಗಳ ಪಾರಂಪರಿಕ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಅನೇಕ ಅಧ್ಯಯನಗಳು ಈಗಾಗಲೇ ಹಿಡಿದಿಟ್ಟಿವೆ(ಜೋಗನ್ ಶಂಕರ್, ೧೯೯೩, ಸಿಮನ್ ದ ಬೋವಾ, ೨೦೦೭, ವಿಲ್ ಡ್ಯೂರ್ಯಾಂಟೋ. ೨೦೦೭). ವಿಶೇಷವಾಗಿ ಮಹಿಳೆಯರ ಮುಕ್ತ ಚಲನೆಯನ್ನು ಹಿಂದೂ ಸಮಾಜ ಹೇಗೆ ಸಂಸ್ಕೃತಿಯ ಹೆಸರಿನಲ್ಲಿ ನಿರ್ಬಂಧಿಸಿತು ಎಂಬುದನ್ನು ಅಂಬೇಡ್ಕರ್ ವಿಶ್ಲೇಷಿಸಿದ್ದಾರೆ. ಪರಂಪರೆ ಮತ್ತು ಸಂಸ್ಕೃತಿಗಳು ಮಹಿಳೆ ಯಾವ ಕೆಲಸ ಮಾಡಬೇಕು. ಹೇಗೆ ಇರಬೇಕು, ಯಾರೊಂದಿಗೆ

ಇರಬೇಕು, ಯಾರೊಂದಿಗೆ ಇರಬಾರದು ಎನ್ನುವುದರಿಂದ ಪ್ರಾರಂಭಿಸಿ ಅವಳ ಇಡೀ ದೇಹ ಮತ್ತು ಲೈಂಗಿಕತೆಯನ್ನು ಸಂಸ್ಕೃತಿಯ ಹೆಸರಿನಲ್ಲಿ, ಧರ್ಮ, ಜಾತಿಯ ಹೆಸರಿನಲ್ಲಿ ಬಂಧಿಸಿಟ್ಟಿವೆ. ಅದರಲ್ಲಿಯೂ ತಳಸಮುದಾಯದ ಪುರುಷರು, ಮೇಲ್ಜಾತಿಯ ಮಹಿಳೆ ಯರನ್ನಾಗಲೀ ಪುರುಷರನ್ನಾಗಲೀ ಶೋಷಿಸುವುದಿರಲಿ ನೋಡುವುದೂ ಕೂಡ ಅಪರಾಧವಾಗಿತ್ತು. ಆದರೆ ಮೇಲ್ಜಾತಿಗೆ ಸೇರಿದ ಬ್ರಾಹ್ಮಣರು ತಳಸಮುದಾಯದ ಹೆಣ್ಣುಮಕ್ಕಳನ್ನು ಒಂದು ಬಳಕೆಯ ವಸ್ತುವಿನ ರೂಪದಲ್ಲಿ ಶೋಷಿಸುವುದನ್ನು ಮನುಸ್ಮೃತಿ ವಿವರಿಸುವುದು ನಮಗೆಲ್ಲ ತಿಳಿದಿರುವ ವಿಷಯ. ಮೇಲ್ಜಾತಿಗೆ ಸೇರಿದ ಬ್ರಾಹ್ಮಣರು ಮತ್ತು ಭೂಮಾಲೀಕರು ತಮಗೆ ಬೇಕಾದ ತಳಜಾತಿಯ ಹೆಣ್ಣುಮಕ್ಕಳನ್ನು ಮಹಿಳೆಯರನ್ನು ಮನಸೋ ಇಚ್ಛೆ ಬಳಸಿಕೊಳ್ಳಬಹುದಿತ್ತು ಎನ್ನುವುದು ನಮಗೆ ತಿಳಿದಿರುವ ವಿಷಯ. ಹೀಗೆ ಶೋಷಣೆ ಮಾಡುವ ಪರಂಪರೆಯನ್ನು ರೂಪಿಸಿದ ಪ್ರಬಲರು ತಾವು ವಾಸಿಸುವ ಹಳ್ಳಿಗಳ ಸುತ್ತ ಮುತ್ತ ತಳಜಾತಿಗಳಲ್ಲಿ ಹುಟ್ಟುವ ಹೆಣ್ಣುಮಕ್ಕಳನ್ನು ಋತುಮತಿಯಾದ ಸಂದರ್ಭದಲ್ಲಿ ಲೈಂಗಿಕವಾಗಿ ಮೊದಲು ಬಳಸುವ ಉದ್ದೇಶದಿಂದಲೇ ಅನೇಕ ಬಗೆಯ ಸಾಂಪ್ರದಾಯಿಕ ಆಚರಣೆಗಳನ್ನು ಮತ್ತು ನಂಬಿಕೆಗಳನ್ನು ಹುಟ್ಟು ಹಾಕಿದ್ದಾರೆ. ಅಂತವುಗಳಲ್ಲಿ ದೇವದಾಸಿ ಪದ್ಧತಿಯೂ ಒಂದು. ದೇವದಾಸಿ ಪದ್ಧತಿಯು ಪಾರಂಪರಿಕವಾಗಿ ತಳಸಮುದಾಯದ ಮನೆಗಳಲ್ಲಿ ಒಂದು ಆಚರಣೆಯಾಗಿ ಬೆಳೆದು ಬಂದು, ಹೆಣ್ಣುಮಕ್ಕಳನ್ನು ಅವರ ಬಾಲ್ಯಾವಸ್ಥೆಯಲ್ಲಿಯೇ, ಕೆಲವು ಸಂದರ್ಭಗಳಲ್ಲಿ ಹುಟ್ಟುವ ಮೊದಲೇ ಹರಸಿಕೊಂಡ ಹರಕೆಯ ಪ್ರಕಾರ ದೇವರ ಹೆಸರಿನಲ್ಲಿ ಮುತ್ತು ಕಟ್ಟಿ ದೇವರೊಂದಿಗೆ ಮದುವೆ ಮಾಡಲಾಗುತ್ತಿತ್ತು. ಇದಕ್ಕೆ ಆಯಾ ಪ್ರದೇಶಗಳಿಗೆ ಒಂದೊಂದು ದೇವ ದೇವಿಯರು ಇರುತ್ತಿದ್ದರು. ಈ ರೀತಿ ದೇವರಿಗೆ ಅರ್ಪಿಸಲ್ಪಟ್ಟ ಬಾಲೆಯು ಮುಂದೆ ಯಾರ ಜೊತೆಗೂ ವಿವಾಹವಾಗುವಂತಿಲ್ಲ. ಆಕೆಯು ದೇವರ ಸೇವೆ ಮಾಡಿಕೊಂಡಿರುವುದರ ಜೊತೆಗೆ, ಪೂಜಾರಿಗಳು, ಊರ ಜಮೀನ್ದಾರರು, ಸಾಹುಕಾರರಿಗೆ ಮುಕ್ತವಾಗಿ ಲೈಂಗಿಕ ಸೇವೆ ಒದಗಿಸಬೇಕಾಗುತ್ತಿತ್ತು. ಹೀಗೆ ಬೆಳೆದು ಬಂದ ಕುಟುಂಬಗಳು ನೂರಾರು ವರ್ಷಗಳ ಇತಿಹಾಸವನ್ನು ಹೊಂದಿವೆ. ಹೀಗೆ ಸಂಸ್ಕೃತಿಯ ಹೆಸರಿನಲ್ಲಿ ನಂಬಿಕೆಗಳ ಹೆಸರಿನಲ್ಲಿ ಮಹಿಳೆಯರ ಮೇಲೆ ಪಾರಂಪರಿಕವಾಗಿ ಪ್ರಾರಂಭವಾದ ಲೈಂಗಿಕ ದೌರ್ಜನ್ಯ ಮತ್ತು ಹಿಂಸೆಯು ಕಾಲಕ್ಕನುಗುಣವಾಗಿ ಬೇರೆ ಬೇರೆ ರೂಪಾಂತರಗಳನ್ನು ಪಡೆದುಕೊಂಡಿದೆ. ನಮ್ಮ ಅಧ್ಯಯನದ ಸಂದರ್ಭದಲ್ಲಿ, ನಂಬಿಕೆ, ಸಂಪ್ರದಾಯ, ದೇವರು ಇತ್ಯಾದಿಗಳಿಂದಾಚೆಗೆ ಹೇಗೆ ಬಾಲೆಯರು ಲೈಂಗಿಕ ಜೀತಕ್ಕೆ ಒಳಗಾಗುತ್ತಿದ್ದಾರೆ ಮತ್ತು ಯಾವ ಒತ್ತಡಗಳು ಅವಳನ್ನು ಲೈಂಗಿಕ ಜೀತ ಮತ್ತು ದಂಧೆಯಲ್ಲಿ ಇರುವಂತೆ ಮಾಡುತ್ತಿವೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

ಉತ್ತರ ಕರ್ನಾಟಕದ ವಿಜಯಪೂರ, ಬಾಗಲಕೋಟೆ ಮತ್ತು ಬೆಳಗಾವಿ ಜಿಲ್ಲೆಗಳ ವ್ಯಾಪ್ತಿಯಿಂದ, ಮಹಾರಾಷ್ಟ್ರ ರಾಜ್ಯದ ಮುಂಬಯಿಯ ಕಾಮಾಟಿಪುರ ಮತ್ತು ಥಾಣೆ ಜಿಲ್ಲೆಯ ಬೀವಂಡಿ ಪ್ರದೇಶಗಳ ಕೆಂಪುದೀಪದ ಪ್ರದೇಶಗಳಿಗೆ ತಮ್ಮ ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕಾಗಿ ಸಾಗಾಣಿಕೆಗೊಂಡು, ಇಂದಿಗೂ ಅದೇ ಸ್ಥಳಗಳಲ್ಲಿ ಬದುಕುತ್ತಿರುವ ಹೆಣ್ಣುಮಕ್ಕಳ ಮೂಲಕ ಬಾಲೆಯರ ಲೈಂಗಿಕ ಜೀತಕ್ಕೆ

ಇರುವ ಸಾಮಾಜಿಕ, ಆರ್ಥಿಕ ಕಾರಣಗಳೇನು ಮತ್ತು ಅವರ ಆರೋಗ್ಯದ ಸ್ಥಿತಿಗತಿಗಳೇನು ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ

ಸಾಮಾಜಿಕ ಸಂಶೋಧನಾ ಅಧ್ಯಯನ ವಿಧಾನದಲ್ಲಿ ಸಂಖ್ಯಾತ್ಮಕ ಮಾಹಿತಿಗಳಿಗಿಂತಲೂ, ಹೆಚ್ಚು ಮಹತ್ವವಿರುವುದು ಗುಣಾತ್ಮಕ ಮಾಹಿತಿಗೆ. ಶೋಷಣೆಗೆ ಒಳಗಾದ ಪೂರ್ವ ಪರಿಸ್ಥಿತಿಯನ್ನು ಚಾರಿತ್ರಿಕ ಅಧ್ಯಯನ ವಿಧಾನದ ಮೂಲಕ ಅವರದೇ ಭಾಷೆಯಲ್ಲಿ, ಅವರೇ ವಿವರಿಸುವ ಪರಿಸ್ಥಿತಿಯನ್ನು ಕಟ್ಟಿಕೊಡಲು ಇಲ್ಲಿ ಪ್ರಯತ್ನ ಮಾಡಲಾಗಿದೆ. ಹೀಗೆ ಮಾಡುವಾಗ ಅವರ ಈ ಸ್ಥಿತಿಗೆ ಕಾರಣವಾದ ಒತ್ತಡಗಳು ಮತ್ತು ಅವರು ಲೈಂಗಿಕ ದಂಧೆಯಲ್ಲಿ ಎದುರಿಸಿದ ಸಾಮಾಜಿಕ, ಆರ್ಥಿಕ, ಆರೋಗ್ಯ ಮತ್ತು ಅವರ ರಕ್ಷಣೆಯ ವಿಷಯಗಳನ್ನು ವಿಶ್ಲೇಷಣೆ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಒಬ್ಬ ಮಹಿಳೆ ವಯಸ್ಸಿಗನುಗುಣವಾಗಿ, ದೈಹಿಕ ಸೌಂದರ್ಯಕ್ಕನುಗುಣವಾಗಿ, ಪರಿಸ್ಥಿತಿಗನುಗುಣವಾಗಿ ಎದುರಿಸಿದ ಸಾಂಸ್ಕೃತಿಕ, ಆರ್ಥಿಕ ಸವಾಲುಗಳನ್ನು ಇಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ. ಹೀಗೆ ಮಾಡುವಾಗ ಅಧ್ಯಯನದ ವಿಸ್ತಾರವನ್ನು ಕಂಡುಕೊಳ್ಳಲು ಸಂಖ್ಯಾತ್ಮಕ ಮಾಹಿತಿ ಸಂಗ್ರಹಣಾ ವಿಧಾನವನ್ನು ನಾವು ಬಳಸಿಕೊಂಡಿದ್ದೇವೆ. ಮೊದಲನೆಯದಾಗಿ ಸಂದರ್ಶನ ನಮೂನೆಯ ಮೂಲಕ ಕ್ಷೇತ್ರಕಾರ್ಯ ಮಾಡಲಾಯಿತು. ರಕ್ಷಣಾತ್ಮಕ ಅಂಶಗಳ ಭಾಗದಲ್ಲಿ ಕೆಲವು ಸೂಕ್ಷ್ಮ ಪ್ರಶ್ನೆಗಳನ್ನು, ಅವರ ವಿವೇಚನೆಗೆ ಬಿಟ್ಟು, ಅವರು ನೀಡಿದ ಉತ್ತರಗಳನ್ನು ದಾಖಲಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರ ಜೊತೆಗೆ, ಕ್ಷೇತ್ರಕಾರ್ಯದಲ್ಲಿ ನಾವೇ ಗಮನಿಸಿದ, ಅವಲೋಕಿಸಿದ ಕ್ಷೇತ್ರಕಾರ್ಯ ವಿಷಯಗಳನ್ನು, ಮಾಡಿಕೊಂಡ ಟಿಪ್ಪಣಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಇದರ ಜೊತೆಗೆ ಈಗಾಗಲೇ ಲೈಂಗಿಕ ಜೀತಕ್ಕೆ ಸಾಗಾಣಿಕೆಯಾಗಿ ಅಲ್ಲಿಂದ ರಕ್ಷಣೆಗೊಂಡು ಪುನರ್ವಸತಿಯಲ್ಲಿರುವ ಬಾಲೆಯರ ಜೊತೆ ನಡೆಸಿದ ಸಂವಾದ, ಅಲ್ಲಿ ಗಮನಿಸಿದ ಸೂಕ್ಷ್ಮವಾದ ಮಾಹಿತಿಗಳನ್ನು ಮಕ್ಕಳ ಹಕ್ಕುಗಳ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇದರೊಟ್ಟಿಗೆ ಲೈಂಗಿಕ ದಂಧೆಯಲ್ಲಿಯೇ ಇರುವ(ಈಗಲೂ) ಮಹಿಳೆಯರ ಗಂಡು ಮಕ್ಕಳನ್ನು ನಮ್ಮ ಅಧ್ಯಯನವು ಒಳಗು ಮಾಡಿಕೊಂಡಿದೆ. ಅವರು ಆ ಪರಿಸರದಲ್ಲಿ ಹೇಗೆ ಬದುಕುತ್ತಿದ್ದಾರೆ, ಅವರ ಸಾಮಾಜಿಕ ಸಾಂಸ್ಕೃತಿಕ ಹಾಗೂ ಭವಿಷ್ಯದ ನಿಲುವುಗಳೇನು ಎಂಬುದನ್ನು ಅವರದೇ ಮಾತುಗಳಲ್ಲಿ ಇಲ್ಲಿ ಕಟ್ಟಿಕೊಡಲು ಪ್ರಯತ್ನ ಮಾಡಲಾಗಿದೆ.

### ೩.೨. ವೈಯಕ್ತಿಕ ಮಾಹಿತಿ

ಪ್ರಸ್ತುತ ಅಧ್ಯಯನದ ವಿಷಯ ಅತ್ಯಂತ ಸೂಕ್ಷ್ಮ ಮತ್ತು ಸವಾಲಿನದ್ದಾಗಿದ್ದರಿಂದ ಮುಂಬೈ ರೆಡ್‌ಲೈಟ್ ಏರಿಯಾದಲ್ಲಿ ಇರುವ ಕರ್ನಾಟಕದ ಎಲ್ಲ ಬಾಲೆಯರನ್ನು ಮತ್ತು ಮಹಿಳೆಯರನ್ನು ಅಧ್ಯಯನಕ್ಕೆ ಗುರುತಿಸಲು ಸಾಧ್ಯವಾಗಿಲ್ಲ. ಯಾಕೆಂದರೆ ಈ ಅಧ್ಯಯನವನ್ನು ಒಂದು ಕಾಲಮಿತಿಯ ಒಳಗಡೆ ಪೂರ್ಣಗೊಳಿಸಬೇಕಾಗಿರುವುದರಿಂದ ಹಾಗೆ ಮಾಡಲು ಸಾಧ್ಯವಾಗಲಿಲ್ಲ. ಮತ್ತೊಂದು ಕಾರಣವೆಂದರೆ, ಯಾವುದೇ ಅಧ್ಯಯನಕ್ಕೂ ಆ ಅಧ್ಯಯನದ ವಸ್ತುವಿಗೆ ಪೂರಕವಾಗಿ ಎಲ್ಲವನ್ನೂ ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಿಲ್ಲದ ವಿಷಯ. ಹೀಗಾಗಿ ನಾವು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗುರುತಿಸಿದ ಮಹಿಳೆಯರ ವಿವರಗಳನ್ನಷ್ಟೇ ಇಲ್ಲಿ ನೀಡಲಾಗಿದೆ. ಲೈಂಗಿಕ ಜೀತಕ್ಕೊಳಗಾದ ಬಾಲೆಯರ

ಮೂಲಸ್ಥಳ (ಊರು/ಗ್ರಾಮ), ಲೈಂಗಿಕ ದೌರ್ಜನ್ಯಕ್ಕೊಳಗಾದ ಸಂದರ್ಭದ ವಯಸ್ಸು, ಇಂದು ಅವರ ವಯಸ್ಸು, ಅವರ ಶೈಕ್ಷಣಿಕಮಟ್ಟ, ಜಾತಿ, ಧರ್ಮ, ಅವರ ಪ್ರಸ್ತುತ ಉದ್ಯೋಗ ಮತ್ತು ಆದಾಯ ಕುರಿತ ಮಾಹಿತಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಹಾಗೆ ವಿವರಿಸುವಾಗ ಕೋಷ್ಟಕಗಳನ್ನು ಬಳಸಿಕೊಂಡಿದ್ದು, ಅವಶ್ಯವೆನಿಸಿದಲ್ಲಿ ಪ್ರಕರಣಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

**ಕೋಷ್ಟಕ ೩.೧: ವಕ್ತೃವಿನ ಜಿಲ್ಲೆ (ಕರ್ನಾಟಕದಲ್ಲಿ) ಮತ್ತು ಮುಂಬಯಿಯಲ್ಲಿ ವಾಸಿಸುತ್ತಿರುವ ರೆಡ್‌ಲೈಟ್ ಏರಿಯಾ**

| ಕರ್ನಾಟಕ → | ವಿಜಯಪುರ | ಬಾಗಲಕೋಟೆ | ಬೆಳಗಾವಿ | ಒಟ್ಟು |
|---|---|---|---|---|
| ಮುಂಬಯಿ ▼ | | | | |
| ಕಾಮಾಟಿಪುರ | ೦೫ | ೦೬ | ೧೧ | ೨೨ |
| ಬೀವಂಡಿ | ೦೩ | ೦೫ | – | ೦೮ |
| ಒಟ್ಟು | ೦೮ | ೧೧ | ೧೧ | ೩೦ |

**ಮೂಲ:** ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ನಾವು ನಮ್ಮ ಅಧ್ಯಯನಕ್ಕೆ ಒಳಪಟ್ಟ ೩೦ ಮಹಿಳೆಯರಲ್ಲಿ, ಕಾಮಾಟಿಪುರದಿಂದ ೨೨ ಮಹಿಳೆಯರು ಮತ್ತು ಬೀವಂಡಿಯಿಂದ ೮ ಮಹಿಳೆಯರು ಇದ್ದು, ಅವರು ಉತ್ತರ ಕರ್ನಾಟಕದ ಜಿಲ್ಲೆಗಳಿಗೆ ಸೇರಿದವರಾಗಿದ್ದಾರೆ. ಕಾಮಾಟಿಪೂರದಲ್ಲಿ ವಿಜಯಪುರದ ಐದು ಮಹಿಳೆಯರು, ಬಾಗಲಕೋಟೆಯ ಆರು ಮಹಿಳೆಯರು, ಮತ್ತು ಬೆಳಗಾವಿಯ ಹನ್ನೊಂದು ಮಹಿಳೆಯರು ಮತ್ತು ಬೀವಂಡಿಯಲ್ಲಿ ವಿಜಯಪುರದ ಮೂವರು ಮಹಿಳೆಯರು, ಬಾಗಲಕೋಟೆಯ ಐದು ಮಹಿಳೆಯರು ನಮ್ಮ ಕ್ಷೇತ್ರಕಾರ್ಯದಲ್ಲಿ ಕಂಡುಬಂದರು. ಇವರು ಅಧ್ಯಯನದ ಅವಧಿಯಲ್ಲಿ ದೊರೆತ ಪ್ರಕರಣಗಳಷ್ಟೇ ಎಂದು ಹೇಳಬಹುದು.

ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿ ಜಿಲ್ಲೆಯಾದ ಬೆಳಗಾವಿಯ ಅಥಣಿ ಮತ್ತು ರಾಯಭಾಗ್ ತಾಲೂಕುಗಳು ಮತ್ತು ಅದಕ್ಕೆ ಅಂಟಕೊಂಡಂತಿರುವ ಬಾಗಲಕೋಟೆ ಜಿಲ್ಲೆಯ ಜಮಖಂಡಿ ಮತ್ತು ಮುಧೋಳ ತಾಲೂಕುಗಳನ್ನು ಆಯ್ದುಕೊಳ್ಳಲಾಗಿತ್ತು. ಈ ನಾಲ್ಕೂ ತಾಲ್ಲೂಕುಗಳಿಗೆ ಮಹಾರಾಷ್ಟ್ರದ ಮಿರಜ್‌ನಲ್ಲಿರುವ ರೆಡ್‌ಲೈಟ್ ಏರಿಯಾ ತುಂಬಾ ಹತ್ತಿರವಾಗಿದೆ.(ಅಥಣಿಯಿಂದ ೫೭ ಕಿ ಮೀ, ರಾಯಭಾಗ್‌ದಿಂದ ೪೫, ಜಮಖಂಡಿಯಿಂದ ೯೫ ಮತ್ತು ಮುಧೋಳದಿಂದ ೧೧೦ ಕಿ ಮೀ) ಹಾಗೆಯೇ ಉಗಾರ್ ಮತ್ತು ಶೇಡ್‌ಬಾಳ್, ರಾಯಭಾಗ್, ಚಿಂಚಲಿ ಮತ್ತು ಕುಡಚಿ ರೇಲ್ವೆ ನಿಲ್ದಾಣಗಳು ಮಿರಜ್‌ಗೆ ತುಂಬಾ ಹತ್ತಿರದ ರೇಲ್ವೆ ನಿಲ್ದಾಣಗಳಾಗಿವೆ. ಅಲ್ಲದೇ ಚಿಂಚಲಿ ಮತ್ತು ಘಟಪ್ರಭಾ ಸ್ಟೇಶನ್‌ಗಳಿಂದ ಹೋಗುವ ಕೆಲವು ರೈಲುಗಳನ್ನು ಹತ್ತಿದರೆ, ಮಿರಜ್, ಸಾಂಗ್ಲಿ, ಕರಾಡ, ಸಾತಾರಾ, ಪೂಣಾ, ಕಲ್ಯಾಣ, ಥಾಣಾ ಮತ್ತು ಮುಂಬಯಿಯ ದಾದರವರೆಗೂ ತಲುಪುತ್ತವೆ.

ಮಹಾರಾಷ್ಟ್ರದ ಮಿರಜ್‌ನಿಂದ ಮುಂಬಯಿವರೆಗೂ ಸಿಗುವ ಎಲ್ಲ ಸ್ಥಳಗಳಲ್ಲಿಯೂ ರೆಡ್‌ಲೈಟ್ ಏರಿಯಾಗಳು ಇವೆ. ಈ ಎಲ್ಲ ರೆಡ್‌ಲೈಟ್ ಏರಿಯಾಗಳನ್ನು ತಲುಪಲು ಅಥಣಿ, ರಾಯಬಾಗ್, ಜಮಖಂಡಿ ಮತ್ತು ಮುಧೋಳದಿಂದ ಕಡಿಮೆ ವೆಚ್ಚದಲ್ಲಿ ಇರುವಂತಹ ವ್ಯವಸ್ಥೆ ಬಿಜಾಪೂರ ಮತ್ತು ಬಸವನ ಬಾಗೇವಾಡಿ ತಾಲೂಕುಗಳಿಗಿಲ್ಲ. ಹಾಗೆಯೇ ಬಿಜಾಪೂರದ ಮತ್ತು ಬಸವನ ಬಾಗೇವಾಡಿ ತಾಲ್ಲೂಕುಗಳ ಮಹಿಳೆಯರು ಗೋವಾ ರಾಜ್ಯದ ರೆಡ್‌ಲೈಟ್ ಏರಿಯಾಗಳಿಗೆ ಸಾಗಾಣಿಕೆ ಯಾಗಿರಬಹುದು ಎನ್ನುವುದು ನಮ್ಮ ಅಭಿಪ್ರಾಯ. ಇದು ಸಾಗಾಣಿಕೆಯಾಗಲು ಇರುವ ಸರಳ ತಾಂತ್ರಿಕ ದಾರಿಗಳಾಗಿಯೂ ಕಾಣುತ್ತವೆ. ಅಲ್ಲದೇ ಬಿಜಾಪೂರದಲ್ಲಿ ಬಹಳ ದಿನಗಳಿಂದ ಲೈಂಗಿಕ ದಂಧೆಯ ಮನೆಗಳು ಇದ್ದು, ಅವು ಅಲ್ಲಿಯ ಮಹಿಳೆಯರು ಹೊರಗೆ ಹೋಗದಂತೆ ತಡೆಹಿಡಿದಿರಬಹುದು.

**ಕೋಷ್ಟಕ ೩.೨: ವಕ್ತೃಗಳ ಪ್ರಸ್ತುತ ವಯಸ್ಸು**

| ಅ.ಸಂ. | ವಯೋಮಾನ | ಸಂಖ್ಯೆ | ಶೇಕಡಾ |
|---|---|---|---|
| ೧ | ೧೫ರ ಒಳಗೆ | – | – |
| ೨ | ೧೫–೨೦ | – | – |
| ೩ | ೨೧–೨೫ | ೦೪ | ೧೩.೩೩ |
| ೪ | ೨೬–೩೦ | ೧೦ | ೩೩.೩೩ |
| ೫ | ೩೧–೩೫ | ೦೪ | ೧೩.೩೩ |
| ೬ | ೩೬–೪೦ | ೦೮ | ೨೭.೫೯ |
| ೭ | ೪೧–೪೫ | ೦೪ | ೧೩.೩೩ |
| | **ಒಟ್ಟು** | **೩೦** | **೧೦೦** |

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ವಕ್ತೃಗಳು ಪ್ರಸ್ತುತ ಯಾವ ವಯಸ್ಸಿನವರಾಗಿದ್ದಾರೆಂಬುದನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದು. ಇಲ್ಲಿ ನೀಡಿರುವ ಅಂಕಿ ಸಂಖ್ಯೆಗಳ ಪ್ರಕಾರ ಒಟ್ಟು ಮಹಿಳೆಯರಲ್ಲಿ ಪ್ರತಿಶತ ೩೩.೩೩ರಷ್ಟು ಮಹಿಳೆಯರು ೩೦–೩೨ ವಯಸ್ಸಿನವರಾಗಿದ್ದು ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದು ತಿಳಿದು ಬರುತ್ತಿದೆ. ಪ್ರತಿಶತ ೨೭.೫೯ರಷ್ಟು ಮಹಿಳೆಯರು ೩೬ ರಿಂದ ೪೦ ವಯಸ್ಸಿನವರಾಗಿದ್ದಾರೆ. ಇನ್ನುಳಿದಂತೆ ಪ್ರತಿಶತ ೧೩.೩೩ರಷ್ಟು ೨೧ ರಿಂದ ೨೫ ವಯಸ್ಸಿನವರು, ಪ್ರತಿಶತ ೧೩.೩೩ರಷ್ಟು ೩೧ ರಿಂದ ೩೫ ವಯಸ್ಸಿನವರು ಮತ್ತು ಪ್ರತಿಶತ ೧೩.೩೩ರಷ್ಟು ೪೧–೪೫ ವಯಸ್ಸಿನ ಮಹಿಳೆಯರು ಇರುವುದು ಕಂಡುಬರುತ್ತದೆ.

ಇಲ್ಲಿ ೨೦ ವಯಸ್ಸಿಗಿಂತ ಚಿಕ್ಕ ಹುಡುಗಿಯರು ಯಾರೂ ಲಭ್ಯವಾಗದೇ ಇರುವುದು ಒಂದು ಕಡೆ, ಮಕ್ಕಳ ಲೈಂಗಿಕ ಜೀತದ ಪ್ರಮಾಣವು ಕಡಿಮೆಯಾಗಿರಬಹುದೆಂಬ ಸುಳಿವನ್ನು ನೀಡುತ್ತದೆ. ಇನ್ನೊಂದು ಕಡೆಗೆ ಕಡಿಮೆ ವಯಸ್ಸಿನ ಬಾಲೆಯರನ್ನು ಹೊರಗೆ ಬಿಡದಂತೆ ಬಂಧಿಸಿಟ್ಟಿರಬಹುದು ಅಥವಾ ಹೊರಗಿನವರ ಕಣ್ಣಿಗೆ ಕಾಣದಂತೆ ಎಚ್ಚರ ವಹಿಸಿರುವ ಸಾಧ್ಯತೆಗಳಿವೆ. ಇದನ್ನು ಬೇಧಿಸುವುದು ಸವಾಲಿನ ಕೆಲಸ. ನಮ್ಮ ಅಧ್ಯಯನ ಗುರುತಿಸಿದ ಅತೀ ಹೆಚ್ಚಿನ ಪ್ರಮಾಣದ, ಅಂದರೆ ಪ್ರತಿಶತ ೩೩.೩೩ರಷ್ಟು ಮಹಿಳೆಯರು ಈಗ ೧೬ರಿಂದ ೨೦ ವರ್ಷಗಳ ಹಿಂದೆ ಮುಂಬಯಿಗೆ ಹೋದವರಾಗಿದ್ದಾರೆ.

**ಕೋಷ್ಟಕ ೩.೩: ಮುಂಬಯಿಗೆ ಸಾಗಾಣಿಕೆಯಾದ ಸಮಯದ ವಯಸ್ಸು**

| ಅ.ಸಂ. | ವಯೋಮಾನ | ಸಂಖ್ಯೆ | ಶೇಕಡಾ |
|---|---|---|---|
| ೧ | ೧೦ರ ಒಳಗೆ | ೦೩ | ೧೦.೦೦ |
| ೨ | ೧೦-೧೧ | ೦೨ | ೦೬.೬೬ |
| ೩ | ೧೧-೧೨ | ೦೫ | ೧೬.೬೭ |
| ೪ | ೧೨-೧೩ | ೦೨ | ೦೬.೬೬ |
| ೫ | ೧೩-೧೪ | ೦೩ | ೧೦.೦೦ |
| ೬ | ೧೪-೧೫ | ೦೭ | ೨೩.೩೩ |
| ೭ | ೧೫-೧೬ | ೦೪ | ೧೩.೩೩ |
| ೮ | ೧೬-೧೭ | ೦೧ | ೦೩.೩೩ |
| ೯ | ೧೭-೧೮ | ೦೩ | ೧೦.೦೦ |
| ೧೦ | ೧೮ಕ್ಕಿಂತ ಹೆಚ್ಚು | - | - |
| ಒಟ್ಟು | | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಅಧ್ಯಯನಕ್ಕೊಳಪಡಿಸಿದ ಎಲ್ಲ ಮಹಿಳೆಯರೂ ತಮ್ಮ ಅಪ್ರಾಪ್ತ ವಯಸ್ಸಿನಲ್ಲಿಯೇ ವೇಶ್ಯಾಗೃಹಕ್ಕೆ ಸಾಗಿಸಲ್ಪಟ್ಟವರಾಗಿದ್ದಾರೆ ಎನ್ನುವ ವಿಷಯವನ್ನು ಮೇಲಿನ ಕೋಷ್ಟಕದಿಂದ ತಿಳಿಯಬಹುದು. ಹೀಗೆ ಸಾಗಾಣಿಕೆಯಾದವರಲ್ಲಿ ೧೪ರಿಂದ ೧೫ನೇ ವಯಸ್ಸಿನಲ್ಲಿ ಅತೀ ಹೆಚ್ಚು ಮಹಿಳೆಯರು(ಶೇಕಡಾ ೨೩.೩೩ರಷ್ಟು ಮಹಿಳೆಯರು) ಇರುವುದು ಕಂಡುಬರುತ್ತದೆ. ನಮ್ಮ ಅಧ್ಯಯನದ ಪ್ರಕಾರ, ಶೇಕಡಾ ೧೬.೬೭ರಷ್ಟು ಮಹಿಳೆಯರು ೧೧-೧೨ರ ವಯಸ್ಸಿನಲ್ಲಿ, ಶೇಕಡಾ ೧೩.೩೩ರಷ್ಟು ಮಹಿಳೆಯರು ೧೫-೧೬ರ ವಯಸ್ಸಿನಲ್ಲಿ, ಶೇಕಡಾ ೧೦ರಷ್ಟು ಮಹಿಳೆಯರು ೧೩ರಿಂದ ೧೪ರ ವಯಸ್ಸಿನಲ್ಲಿ, ಶೇಕಡಾ ೧೦ರಷ್ಟು

ಮಹಿಳೆಯರು ೧೭ ರಿಂದ ೧೮ರ ವಯಸ್ಸಿನಲ್ಲಿ, ಶೇಕಡಾ ೧೦ರಷ್ಟು ಮಹಿಳೆಯರು ೧೧ನೇ ವರ್ಷ ಪೂರ್ಣವಾಗುವ ಮೊದಲೇ, ಶೇಕಡಾ ೬.೬೬ ಮಹಿಳೆಯರು ೧೦ ರಿಂದ ೧೨ರ ವಯಸ್ಸಿನಲ್ಲಿ, ಶೇಕಡಾ ೬.೬೬ರಷ್ಟು ಮಹಿಳೆಯರು ೧೨ ರಿಂದ ೧೩ರ ವಯಸ್ಸಿನಲ್ಲಿ ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರು ೧೬ ರಿಂದ ೧೭ರ ವಯಸ್ಸಿನಲ್ಲಿ ಸಾಗಾಣಿಕೆಗೊಳಪಟ್ಟಿದ್ದು ಕಂಡುಬರುತ್ತಿದೆ.

ಅಧ್ಯಯನಕ್ಕೆ ಒಳಪಡಿಸಿದ ೩೦ ಮಹಿಳೆಯರ ಸಾಗಾಣಿಕೆಯು ೧೧ನೇ ವಯಸ್ಸಿಗಿಂತ ಮೊದಲು ಪ್ರಾರಂಭಗೊಂಡು ೧೭ ಮತ್ತು ೧೮ನೇ ವಯಸ್ಸಿನವರೆಗೆ ನಿರಂತರವಾಗಿ ನಡೆದಿದೆ. ೧೮ನೇ ವಯಸ್ಸಿನ ನಂತರ ಸಾಗಾಣಿಕೆಯಾದವರು ಯಾರೂ ಇಲ್ಲ. ಆದವರೆಲ್ಲ ಎಳೆಯ ವಯಸ್ಸಿನ ಬಾಲೆಯರು ಮಾತ್ರ, ಇದು ರೆಡ್‌ಲೈಟ್ ಏರಿಯಾದ ಬೇಡಿಕೆಯ ವಯೋಮಾನವಾಗಿರಬಹುದು. ಹೆಚ್ಚುತ್ತಿರುವ ಪೊಲೀಸ್ ರೇಡ್‌ಗಳನ್ನು ಗಮನಿಸಿದರೆ ಇಂದಿಗೂ ಕೂಡ ೧೮ನೇ ವಯಸ್ಸಿಗೆ ಮೊದಲೇ ಬಾಲೆಯರು ಸಾಗಾಣಿಕೆಯಾಗುತ್ತಿರಬಹುದಾದ ಸಂಶಯ ಹೆಚ್ಚುತ್ತದೆ.

ಅಧ್ಯಯನಕ್ಕೊಳಪಟ್ಟ ಎಲ್ಲ ಮಹಿಳೆಯರು ಧರ್ಮದಿಂದ ಹಿಂದೂಗಳಾಗಿದ್ದು, ಜಾತಿಯಿಂದ ಪರಿಶಿಷ್ಟರಾಗಿದ್ದಾರೆ. ಅದರಲ್ಲಿ ಶೇಕಡಾ ೮೦ರಷ್ಟು ಮಹಿಳೆಯರು ಹೊಲೆಯ ಸಮುದಾಯಕ್ಕೆ ಮತ್ತು ಶೇಕಡಾ ೨೦ರಷ್ಟು ಮಹಿಳೆಯರು ಮಾತ್ರ ಮಾದಿಗ ಸಮುದಾಯಕ್ಕೆ ಸೇರಿದವರಾಗಿದ್ದಾರೆ.

"ಸಾಮಾಜಿಕ ಏಣಿ ಶ್ರೇಣಿಗಳಲ್ಲಿ ಅತ್ಯಂತ ಅಂಚಿಗೆ ದೂಡಲ್ಪಟ್ಟವರು ಹಾಗೂ ವಂಚಿತರು ಅಂದರೆ ಪರಿಶಿಷ್ಟ ಮಹಿಳೆಯರು. ಅಸ್ಪೃಶ್ಯತೆಯು ಪರಿಶಿಷ್ಟ ಮಹಿಳೆಯರ ಅಭಿವೃದ್ಧಿಗೆ ಮಾರಕವಾಗಿದೆ. ದುಡಿಮೆಯ ಒತ್ತಡವು ಇವರಿಗೆ ಅಧಿಕವಾಗಿದೆ. ಆದರೆ ದುಡಿಮೆಯ ವ್ಯಾಪ್ತಿ ಮತ್ತು ಅವಕಾಶಗಳು ತುಂಬಾ ಸೀಮಿತವಾಗಿವೆ"[೧] ಎಂದು ಟಿ ಆರ್ ಚಂದ್ರಶೇಖರ ತಮ್ಮ ಪುಸ್ತಕ 'ಹಕ್ಕು ಹಂಗು' ಇದರಲ್ಲಿ ಬರೆಯುವುದು ಅತ್ಯಂತ ಪೂರಕ ಅಂಶವಾಗಿ ಇಲ್ಲಿ ಕಂಡುಬರುತ್ತದೆ. ಏಕೆಂದರೆ ಕೂಲಿ ಕಾರ್ಮಿಕರಾಗಿ ಜಾತಿಯಿಂದ ಕೆಳಗೆ ಇರಿಸಲ್ಪಟ್ಟು, ದುಡಿಯುವ ಅವಕಾಶಗಳೇ ಇಲ್ಲದೇ ಹೊದ ಸಂದರ್ಭದಲ್ಲಿ ದುಡಿಮೆಯನ್ನು ಅರಸಿಕೊಂಡು ರೆಡ್‌ಲೈಟ್ ಏರಿಯಾಗಳಿಗೆ ಹೋಗಿರುವ ಸಾಧ್ಯತೆಗಳು ಹೆಚ್ಚು.

**ಕೋಷ್ಟಕ ೩.೪: ವಕ್ತೃಗಳ ಶೈಕ್ಷಣಿಕ ಸ್ಥಿತಿಗತಿ**

| ಅ.ಸಂ. | ಶಿಕ್ಷಣ | ಸಂಖ್ಯೆ | ಶೇಕಡಾ |
|---|---|---|---|
| ೧ | ಪ್ರಾಥಮಿಕ | ೧೦ | ೩೩.೩೩ |
| ೨ | ಪದವಿ ಪೂರ್ವ | ೦೨ | ೬.೬೬ |
| ೩ | ಅನಕ್ಷರಸ್ಥ | ೧೮ | ೬೦ |
| ಒಟ್ಟು | | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಮಹಿಳೆಯರು ಎದುರಿಸುತ್ತಿರುವ ಎಲ್ಲಾ ರೀತಿಯ ಸಾಮಾಜಿಕ ಸಮಸ್ಯೆಗಳಲ್ಲಿ ಅನಕ್ಷರತೆ ತನ್ನ ಪಾತ್ರವಹಿಸಿದ್ದು ಕಂಡುಬರುತ್ತದೆ. ಅಧ್ಯಯನಕ್ಕೆ ಒಳಪಡಿಸಿದ ಶೇಕಡಾ ೬೦ ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ, ಶೇಕಡಾ ೩೩.೩೩ರಷ್ಟು ಮಹಿಳೆಯರು ಹೆಸರಿಗೆ ಮಾತ್ರ ಪ್ರಾಥಮಿಕ ಶಾಲೆಯ ಮೆಟ್ಟಿಲನ್ನು ಹತ್ತಿದ್ದಾರೆ. ಶಾಲೆಗೆ ಹೋಗಿದ್ದೇವೆ ಅಂದರೂ ಸಹ "ನಮಗೆ ಓದಲು ಬರೆಯಲು ಬರುವುದಿಲ್ಲ. ಶಾಲೆಯಲ್ಲಿ ಪುಸ್ತಕ, ಬಟ್ಟೆ ಕೊಡುವ ದಿನ ಮಾತ್ರ ಶಾಲೆಗೆ ಹೋಗುತ್ತಿದ್ದೆ. ಉಳಿದ ದಿನ ನಮ್ಮ ತಾಯಿಯ ಜೊತೆ ಕೂಲಿಗೆ ಹೋಗುವುದು, ಕುಳ್ಳು, ಕಾಳು ತರುವುದನ್ನು ಮಾಡುತ್ತಿದ್ದೆ" ಎಂದು ಬೀವಂಡಿಯ ದಂಧೆಯ ಗಲ್ಲಿಯಲ್ಲಿರುವ ಯುವತಿಯೊಬ್ಬಳು ಹೇಳುತ್ತಾಳೆ. ಶೇಕಡಾ ೬.೬೬ರಷ್ಟು ಯುವತಿಯರು ಪಿ.ಯು.ಸಿ ಓದಿದ್ದಾರೆ ಎಂಬುದು ಕಂಡು ಬರುತ್ತದೆ.

ಶಾಲೆಗೆ ದಾಖಲು ಮಾಡಿಕೊಂಡಿದ್ದ ಶೇಕಡಾ ೪೦ರಷ್ಟು ಮಹಿಳೆಯರು, ಶಿಕ್ಷಣವನ್ನು ಮುಂದುವರೆಸಲಾಗದೇ ಶಾಲೆಯನ್ನು ಮಧ್ಯಕ್ಕೆ ಬಿಟ್ಟವರೇ ಆಗಿದ್ದಾರೆ. ಶಾಲೆ ಕಲಿಯಲು ಆಸಕ್ತಿ ಇದ್ದು, ಶಾಲೆ ಕಲಿಯಲಾಗದೆ ಹೋದ ಯುವತಿಯೊಬ್ಬರು "ನನ್ನ ತಾಯಿ ಅಕ್ಕ ದೇವದಾಸಿಯಾಗಿದ್ದರೂ, ನನ್ನನ್ನು ಶಾಲೆಗೆ ಹೋಗಲಿ ಅಂತ ಊರಲ್ಲಿಯೇ ಬಿಟ್ಟಿದ್ದರು. ಚಿಕ್ಕಮ್ಮನ ಮನೆಯಲ್ಲಿ ಇರುತ್ತಿದ್ದೆ. ಆಟವಾಡುವುದು ಶಾಲೆಗೆ ಹೋಗುವುದನ್ನು ಬಿಟ್ಟರೆ ಬೇರೆನನ್ನೂ ಮಾಡುತ್ತಿರಲಿಲ್ಲ. ಆದರೆ ಶಾಲೆಯಲ್ಲಿ ಶಿಕ್ಷಕರೊಬ್ಬರು ನಮಗೆ ಕಲಿಯಲು ಬಿಡುತ್ತಲೇ ಇರಲಿಲ್ಲ. ಮೇಲಾಗಿ ಕೀಳು ಜಾತಿಯವರಾದ ನಮಗೆ ಏನಾದರೂ ಆದರೆ ಕೇಳುವವರು ಯಾರೂ ಇರಲಿಲ್ಲ. ಹಾಗಾಗಿ ಗಿಡಗಳಿಗೆ ನೀರು ಹಾಕುವುದು. ಕಸ ಗುಡಿಸುವುದು ನಮ್ಮ ಕೆಲಸವಾಗಿತ್ತು. ಹಾಗಾಗಿ 'ನನಗೆ ಶಾಲೆ ಎಂದರೆ ಕೆಲಸದ ಮನೆಯಂತಾಗಿತ್ತು'. ಅದರಲ್ಲೂ ಕೆಳಜಾತಿಗೆ ಸೇರಿದ, ನಾವು ಅಂದ್ರೆ ಕೀಳಾಗಿ ಕಾಣುವ ಹೆದರಿಕೆಯ ಜಾಗ ಶಾಲೆ ಆಗಿತ್ತು. ಆದ್ದರಿಂದ ನಾನು ಶಾಲೆಗೆ ಹೋಗಲೇ ಇಲ್ಲ. ಆಗ ನನಗೆ ೮–೯ ವರ್ಷ. ನನ್ನ ತಾಯಿ ನನ್ನನ್ನು ಮುಂಬಯಿಗೆ ಕರೆದುಕೊಂಡು ಹೋದಳು. ಅಲ್ಲಿಯ ಪರಿಸ್ಥಿತಿ ನನ್ನನ್ನು ದೇವದಾಸಿ ಮಾಡಿತು. ಇಂದು ಹೀಗೆ ಕುಳಿತುಕೊಳ್ಳಬೇಕಾಗಿದೆ." ಎಂದು ನೋವಿನಿಂದ ನುಡಿಯುತ್ತಾರೆ.

ಪಿ.ಯು.ಸಿ ಪ್ರಥಮ ವರ್ಷ ಕಾಲೇಜು ಶಿಕ್ಷಣಕ್ಕೆ ಹೋಗಬೇಕಾಗಿದ್ದ ಹೆಣ್ಣುಮಗಳೊಬ್ಬಳು ಹುಟ್ಟುತ್ತಲೇ ದೇವದಾಸಿ ಪದ್ಧತಿಗೆ ಒಳಗಾಗಿದ್ದಳು. ಇವಳ ತಾಯಿ ತನಗೆ ಮಕ್ಕಳಾಗದೇ ಹೋದಾಗ "ನನಗೆ ಮಕ್ಕಳು ಹುಟ್ಟಿದರೆ, ಅದು ಹೆಣ್ಣು ಮಗುವಾದರೆ ನಿನಗೆ ಜೋಗುತಿ ಬಿಡುತ್ತೇನೆ" ಎಂದು ಹರಸಿಕೊಂಡ ಬಲಿ ಇವಳಾಗಿದ್ದಳು. ಅನಿರೀಕ್ಷಿತವಾಗಿ ತಾಯಿ ಸತ್ತು ಹೋದಾಗ ಇವಳು ಮತ್ತು ಇವಳ ತಂಗಿ ಸೊದರಮಾವನ ಆಶ್ರಯಕ್ಕೆ ಬರುತ್ತಾರೆ. ಸೋದರಮಾವ ಈ ಮಕ್ಕಳ ಜವಾಬ್ದಾರಿ ಹೊರಲಾರದೇ ಮತ್ತು ಹಣದ ಆಸೆಗಾಗಿ ಮುಂಬಯಿಯ ಕಾಮಾಟಿಪುರದಲ್ಲಿ ೫೦೦೦ ರೂಪಾಯಿಗೆ ಇವಳನ್ನು ಮಾರಿ ಹೋಗುತ್ತಾನೆ.

ಇವರಲ್ಲಿ ಕೆಲವಷ್ಟು ಮಹಿಳೆಯರು ಕಷ್ಟವಾದರೂ ಕೂಡ ಶಾಲೆಯ ಮೆಟ್ಟಿಲು ಹತ್ತಿದ್ದಾರೆ. ಅಲ್ಲಿ ಕಲಿತ ವಿದ್ಯೆಯ ಆಧಾರದಿಂದಲೆ ಕೆಲವು ಸಂಖ್ಯೆಗಳನ್ನು ಗುರುತಿಸುತ್ತಾರೆ. ಚಿಕ್ಕೋಡಿಯ ಮಹಿಳೆಯೊಬ್ಬರು

೭ನೇ ತರಗತಿ ಪಾಸು ಮಾಡಿಕೊಂಡಿದ್ದಾರೆ. ಓಂದಿ ಇಂಗ್ಲೀಷು ಅರ್ಥ ಮಾಡಿಕೊಳ್ಳುತ್ತಾರೆ. ಹಾಗಾಗಿಯೇ ರೆಡ್‌ಲೈಟ್ ಏರಿಯಾದಲ್ಲಿ ಇದ್ದರೂ ಸಹ ಇಂದು ಕೆಲವು ಸಂಸ್ಥೆಗಳೊಂದಿಗೆ ಕೆಲಸ ಮಾಡುತ್ತಿದ್ದಾರೆ. ಒಬ್ಬ ಮಹಿಳೆ 'ಆಶಾ ದರ್ಪಣ' ಸಂಸ್ಥೆಯ ಮುಖ್ಯಸ್ಥಳಾಗಿ ಸಂಸ್ಥೆಯನ್ನು ನಡೆಸುತ್ತಿದ್ದಾಳೆ.

**ಕೋಷ್ಟಕ ೩.೫: ಅನಕ್ಷರತೆ ಕಾರಣಗಳು**

| ಅ.ಸ. | ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧ | ಬಡತನ | ೧೪ | ೪೬.೬೭ |
| ೨ | ನನಗೆ ಆಸಕ್ತಿ ಇರಲಿಲ್ಲ | ೦೨ | ೬.೬೬ |
| ೩ | ಮದುವೆಯಾಗಿತ್ತು | ೦೨ | ೬.೬೬ |
| ೪ | ಅನ್ವಯಿಸುವುದಿಲ್ಲ | ೧೨ | ೪೦ |
| | **ಒಟ್ಟು** | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಆದರೆ ಇದರ ಜೊತೆ ಶೇಕಡಾ ೬೦ರಷ್ಟು ಮಹಿಳೆಯರು ಅನಕ್ಷರಸ್ಥರಾಗಿರುವುದು ಕಂಡುಬರುತ್ತದೆ. ಇದರಲ್ಲಿ ಶೇಕಡಾ ೪೬.೬೭ರಷ್ಟು ಮಹಿಳೆಯರು ಬಡತನದ ಕಾರಣದಿಂದಾಗಿ ಶಿಕ್ಷಣವನ್ನು ಪಡೆಯದಿರುವುದು, ಶೇಕಡಾ ೬.೬೬ರಷ್ಟು ಮಹಿಳೆಯರ ಮದುವೆಯಾಗಿದ್ದ ಕಾರಣಕ್ಕಾಗಿ ಮತ್ತು ಶೇಕಡಾ ೬.೬೬ರಷ್ಟು ಮಹಿಳೆಯರಿಗೆ ಶಿಕ್ಷಣದಲ್ಲಿ ಆಸಕ್ತಿ ಇರದೇ ಇದ್ದುದಕ್ಕಾಗಿ ಶಾಲೆಗೆ ಹೋಗಲಿಲ್ಲ ವೆಂಬುದು ಕಂಡುಬರುತ್ತದೆ. ದಲಿತ ಮಕ್ಕಳ ಶೈಕ್ಷಣಿಕ ಸ್ಥಿತಿಯ ಕುರಿತು ಅಧ್ಯಯನ ಮಾಡಿದ ಎಚ್.ಡಿ.ಪ್ರಶಾಂತ್ ಇವರು ಈ ರೀತಿ ಅಭಿಪ್ರಾಯಪಡುತ್ತಾರೆ. "ದಲಿತ ಮಕ್ಕಳು ಶಾಲೆಗೆ ಹೋಗುವುದು (೦೬-೧೪) ಸಾಮಾನ್ಯ ಜಾತಿಗಳ ಮಕ್ಕಳಿಗೆ ಹೋಲಿಸಿದರೆ ಕಡಿಮೆ. ಇವರ ಶಾಲಾ ಹಾಜರಾತಿಯನ್ನು ನೋಡಿದರೆ ಪಟ್ಟಣ ಪ್ರದೇಶಗಳಿಗಿಂತಲೂ ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಿದೆ. ದಲಿತರ ಮಕ್ಕಳಲ್ಲಿ ಶಾಲಾ ಹಾಜರಾತಿ, ದಾಖಲಾತಿಯ ಪ್ರಮಾಣವು ಕಡಿಮೆ ಇರುವುದು, ಇತರ ಜಾತಿಗಳಿಗಿಂತಲೂ ಹೆಚ್ಚು ಅಶಿಕ್ಷಿತರನ್ನು ಹೊಂದುವಂತೆ ಮಾಡಿದೆ"[೨](ಎಚ್.ಡಿ.ಪ್ರಶಾಂತ್ ಅವರು ತಮ್ಮ ಪುಸ್ತಕ ಶಾಲಾ ಶಿಕ್ಷಣದ ಸಾರ್ವತ್ರೀಕರಣ: ದಲಿತ ಮಕ್ಕಳ ಸ್ಥಿತಿ). ಮೇಲ್ನೋಟಕ್ಕೆ ಇವರ ಅನಕ್ಷರತೆ ನಮಗೆ ಕಂಡು ಬಂದರೂ, ಇದರ ಹಿಂದೆ ಪಾಲಕರ, ಪೋಷಕರ, ಸಮುದಾಯದ ಅನಕ್ಷರತೆ ಈ ಮಕ್ಕಳನ್ನು ಅನಕ್ಷರರನ್ನಾಗಿಸುವಲ್ಲಿ ಮತ್ತು ಇಂತ ಶೋಷಣೆಯ ಜಾಗಕ್ಕೆ ತಂದು ನಿಲ್ಲಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದು ಕಂಡುಬರುತ್ತದೆ. ಹೀಗೆ ಶಿಕ್ಷಣದಿಂದ ವಂಚಿತರಾದ ಎಷ್ಟೋ ಮಕ್ಕಳು ಲೈಂಗಿಕ ಜೀತಕ್ಕೆ ಬಲಿಯಾದದ್ದು ಅಧ್ಯಯನದಲ್ಲಿ ಕಂಡುಬರುತ್ತದೆ.

**ಕೋಷ್ಟಕ ೩.೬: ವಕ್ತೃವಿನ ಉದ್ಯೋಗ**

| ಅ.ಸ. | ಉದ್ಯೋಗಗಳು | ಸಂಖ್ಯೆ | ಶೇಕಡ |
|---|---|---|---|
| ೧ | ದಂದೆಯ ಮನೆಗಳಲ್ಲಿ ಕಸ ಮುಸುರೆ ಮತ್ತು ಬಟ್ಟೆ ತೊಳೆಯುವುದು | ೨ | ೬.೬೬ |
| ೨ | ಲೈಂಗಿಕ ದಂಧೆ | ೧೫ | ೫೦ |
| ೩ | ಘರವಾಲಿ | ೫ | ೧೬.೬೭ |
| ೪ | ಇತರೆ(ಹೆಸರಿಸಿರಿ) | ೬ | ೨೦ |
| ೫ | ಏನೂ ಇಲ್ಲ | ೨ | ೬.೬೬ |
| | **ಒಟ್ಟು** | ೩೦ | ೧೦೦ |

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ಜಾತಿಯಿಂದ ಸಾಮಾಜಿಕವಾಗಿ ಅಂಚಿನಲ್ಲಿ ಇಟ್ಟಿದ್ದ, ಅನಕ್ಷರಸ್ಥರಾಗಿದ್ದ, ಜಗತ್ತು ಅಂದರೆ ಏನು ಎಂಬುದೇ ಅರಿಯದ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕೆ ಬಂದ, ಅಧ್ಯಯನಕ್ಕೊಳಪಡಿಸಿದ ಈ ಮೂವತ್ತು ಮಹಿಳೆಯರು, ಇಂದು ರೆಡ್‌ಲೈಟ್ ಏರಿಯಾದಲ್ಲಿ, ಏನು ಮಾಡುತ್ತಿದ್ದಾರೆ ಎಂಬುದನ್ನು ತಿಳಿಯಲು ಪ್ರಯತ್ನಿಸಿದಾಗ, ಅತೀ ಹೆಚ್ಚು ಸಂಖ್ಯೆಯ ಮಹಿಳೆಯರು ಅಂದರೆ ಪ್ರತಿಶತ ೫೦ರಷ್ಟು ಮಹಿಳೆಯರು ಲೈಂಗಿಕ ದಂಧೆ ಮಾಡುತ್ತಿರುವುದು ತಿಳಿದುಬಂದಿತು. ಲೈಂಗಿಕ ದಂಧೆಯಲ್ಲಿರುವ ಈ ಮಹಿಳೆಯರು ಲೈಂಗಿಕ ಜೀತದಿಂದ ಮುಕ್ತಗೊಂಡವರಾಗಿದ್ದಾರೆ. ಲೈಂಗಿಕ ಜೀತದಲ್ಲಿರುವಾಗ ಘರವಾಲಿಗಳು ಹುಡುಗಿಯರನ್ನು ಯಾವ ಕಾರಣಕ್ಕೂ ಹೊರಗೆ ಬಿಡುವುದಿಲ್ಲ. ಅವರು ಘರವಾಲಿಯ ಬಿಗಿಯಾದ ಕಾವಲಿನಲ್ಲಿ ಇರುತ್ತಾರೆ. ಏನಾದರೂ ಅನಾರೋಗ್ಯ ಉಂಟಾದರೆ, ವೈದ್ಯರು ಅಲ್ಲಿಯೇ ಬರುತ್ತಾರೆ. ಅಥವಾ ಘರವಾಲಿಯ ಕಡೆಯವರು ಕರೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸಿಕೊಂಡು ಬರುತ್ತಾರೆ. ಹೀಗೆ ಜೀತಕ್ಕೆ ಇರುವ ಹುಡುಗಿಯರಲ್ಲಿ ಬಹುತೇಕರು ಅಪ್ರಾಪ್ತ ವಯಸ್ಸಿನವರಾಗಿರುತ್ತಾರೆ. ಹುಡುಗಿಯರನ್ನು ಅವಳ ತಂದೆ ಅಥವಾ ತಾಯಿ ಜೀತಕ್ಕಿಟ್ಟು ಲಕ್ಷಗಟ್ಟಲೇ ಅಡ್ವಾನ್ಸ್ ಹಣ ತೆಗೆದುಕೊಂಡು ಹೋಗಿರುತ್ತಾರೆ. ಅದು ತೀರುವವರೆಗೂ ಅವಳು ಹೊರ ಬರುವಂತಿಲ್ಲ. ಅಲ್ಲದೇ ವಯಸ್ಸು ಚಿಕ್ಕದಿರುವುದರಿಂದ ಪೊಲೀಸ್ ಅವರಿಂದಲೂ ಅವಳನ್ನು ಮುಚ್ಚಿಡುವುದು ಘರವಾಲಿಗೆ ಅವಶ್ಯವಾಗಿರುತ್ತದೆ. ಆ ಬಾಲೆಯರು ಹೊರಗೆ ಬರುವ ಹೊತ್ತಿಗೆ, ಅವಳ ದೇಹದಲ್ಲಿ ಏನೇನೂ ಉಳಿದಿರುವುದಿಲ್ಲ. ಕುಡಿತ ಕಲಿತಿರುತ್ತಾರೆ. ಘರವಾಲಿಯಿಂದ ಹೊಡೆಸಿಕೊಂಡು ಮೈಮೇಲೆ ಗಾಯದ ಕಲೆಗಳು ಆಗಿರುತ್ತವೆ. ಮೇಲಿಂದ ಮೇಲೆ ನಿಲ್ಲುವ ಗರ್ಭಗಳನ್ನು ಅಸುರಕ್ಷಿತ ವಿಧಾನದಿಂದ ಗರ್ಭಪಾತ ಮಾಡಿಸುತ್ತಾರೆ. ಇದರಿಂದಾಗಿ ಹೊಟ್ಟೆ ನೋವು, ಕಿಬ್ಬೊಟ್ಟೆ ನೋವು, ಗುಪ್ತಾಂಗಗಳಲ್ಲಿ

ನೋವು, ಹೀಗೆ ಅಮಾನುಷವಾದ ಹಿಂಸೆಯನ್ನು ಅವಳು ಅನುಭವಿಸುತ್ತಿರುತ್ತಾಳೆ. ಇದರಲ್ಲಿ ದೇವದಾಸಿ ಸಮುದಾಯದಿಂದ ಬರುವ ಹುಡುಗಿಯರು ಸ್ವಲ್ಪ ಸುರಕ್ಷಿತ. ಅವರ ಮೇಲೆ ಈ ರೀತಿಯ ಹಲ್ಲೆಗಳಾಗುವುದು ಬಹಳ ಕಡಿಮೆ. ಏಕೆಂದರೆ, ಅವಳಿಗೆ ಗಲ್ಲಿಯಲ್ಲಿ ಅವಳದೇ ಊರಿನ ಸಂಬಂಧಿಕರು ಇರುತ್ತಾರೆ ಮತ್ತು ಘರವಾಲಿಯು ಇವರಿಗೆ ಪರಿಚಯದವಳೂ/ಸಂಬಂಧಿಕಳೂ ಆಗಿರುತ್ತಾಳೆ. ಮೇಲಾಗಿ ಅವಳು ತಪ್ಪಿಸಿಕೊಂಡು ಹೋಗುವ ವಿಚಾರ ಎಂದೂ ಮಾಡುವುದಿಲ್ಲ. ಆದರೆ ಘರವಾಲಿಗಳೇ ಕದ್ದು ತಂದ, ಬೇರೆಯವರು ಕದ್ದು ಅಥವಾ ಘುಸಲಾಯಿಸಿ ಅಥವಾ ಮೋಸ ಮಾಡಿ ತಂದು ವೇಶ್ಯಾಗೃಹಗಳಿಗೆ ಮಾರಿ ಹೋದ ಹುಡುಗಿಯರನ್ನು ಮಾತ್ರ ಸಾಯುವ ಹಂತಕ್ಕೆ ಪೀಡಿಸುತ್ತಾರೆ, ಎಂದು ಲೈಂಗಿಕ ಜೀತದಿಂದ ಹೊರಗಿರುವ ಹುಡುಗಿಯರು ವಿವರಿಸುತ್ತಾರೆ. ರೆಡ್‌ಲೈಟ್ ಏರಿಯಾದಲ್ಲಿ ನಮ್ಮ ಅಧ್ಯಯನಕ್ಕೆ ಅಂತ ಹುಡುಗಿಯರು ಮಾತನಾಡುವುದಂತೂ ದೂರ ಉಳಿಯಿತು, ನೋಡಲೂ ಸಿಗುವುದಿಲ್ಲ. ಅವರನ್ನೆಲ್ಲ ತುಂಬಾ ಗುಪ್ತವಾಗಿ ಇರಿಸಲಾಗಿರುತ್ತದೆ.

ಲೈಂಗಿಕ ಜೀತಕ್ಕೆ ಇದ್ದ ಬಾಲೆಯರು ಒಂದು ಸಾರಿ ತಮ್ಮ ಮೇಲಿದ್ದ ಸಾಲವನ್ನು ತೀರಿಸಿ ಹೊರಗೆ ಬಂದಾಗ ಅವರ ವಯಸ್ಸು ೧೮ರ ಮೇಲೇಯೇ ಇರುತ್ತದೆ. ನಂತರ ಯುವತಿಯರು ಅದೇ ಮನೆಯಲ್ಲಿ ಮುಂದುವರೆಯಬಹುದು. ಅಥವಾ ತಮಗಿಷ್ಟ ಬಂದ ಮನೆಯಲ್ಲಿ ಇರಬಹುದು. ಗೆಳತಿಯರ ಜೊತೆ ಇರಬಹುದು. ಬೇಡವೆನಿಸಿದರೆ ಮರಳಿ ತನ್ನ ಊರಿಗೂ ಹೋಗಬಹದು. ಆದರೆ ಬಹಳಷ್ಟು ಹುಡುಗಿಯರು ದಂಧೆಯ ಮನೆಯನ್ನು ಬದಲಿಸಿ, ಮತ್ತೊಬ್ಬ ಘರವಾಲಿಯ ಹತ್ತಿರ ಇರಲು ಪ್ರಾರಂಭಿಸುತ್ತಾರೆ. ಆಗ ಪ್ರಾರಂಭವಾಗುವುದೇ ಲೈಂಗಿಕ ದಂಧೆ. ಇಲ್ಲಿ ದಂಧೆಯ ಮನೆಗೆ ಬರುವ ಗಿರಾಕಿಗಳಿಂದ ಯುವತಿಯು ತಾನೇ ಹಣವನ್ನು ಪಡೆದುಕೊಂಡು, ಅದರಲ್ಲಿ ಅರ್ಧ ಘರವಾಲಿಗೆ ಕೊಟ್ಟು ಅರ್ಧ ತಾನಿಟ್ಟುಕೊಳ್ಳುತ್ತಾಳೆ. ಅವಳ ಗಳಿಕೆಯ ಮೇಲೆ ಅವಳಿಗೆ ಹಿಡಿತ ಇರುತ್ತದೆ.

ಕೆಲವು ಹುಡುಗಿಯರು ತಾವೇ ಸ್ವಂತ ಬಾಡಿಗೆ ರೂಮು ಹಿಡಿದು ದಂಧೆ ಮಾಡುತ್ತಾರೆ. ಒಂದು ಸಿಂಗಲ್ ಕಾಟ್ ಅಳತೆಯ ಈ ರೂಮುಗಳಿಗೆ ೩೫೦೦ ರಿಂದ ೫೦೦೦ದವರೆಗೆ ಬಾಡಿಗೆ ಇರುತ್ತದೆ. ಆ ಕಾಟ್ ಕೆಳಗೆ ಒಂದು ಚಿಕ್ಕ ಸೀಮೆ ಎಣ್ಣೆಯ ಸ್ಟವ್ ಇರುತ್ತದೆ. ಅದೇ ಅವರ ಅಡುಗೆ ಮನೆ. ಆ ರೂಮುಗಳಿಗೆ ಬಾತ್‌ರೂಮ್ ಎಲ್ಲೋ ಟಾಯ್ಲೆಟ್ ಎಲ್ಲೋ ದೇವರಿಗೇ ಗೊತ್ತು. ಈ ಕುರಿತು ಚಿಕ್ಕೋಡಿಯ ಮಹಿಳೆಯೊಬ್ಬಳನ್ನು ಕೇಳಿದರೆ, "ಕಾಟನಿಂದ ಇಳಿದ ಕೂಡಲೇ ಕಾಲು ಇಡುವ ಜಾಗೆಯೇ ಸ್ನಾನ ಮಾಡುವುದು" ಅನ್ನುತ್ತಾಳೆ. ಕಿಟಕಿ ಇಲ್ಲ. ಗಾಳಿ ಇಲ್ಲ ಸತತವಾಗಿ ಫ್ಯಾನ್ ತಿರುಗಲೇಬೇಕು. ಅಲ್ಲಿರುವವರಿಗೆ ಫ್ಯಾನೇ ಸರ್ವಸ್ವ, ಅದಿರದಿದ್ದರೆ ಒಂದು ಕ್ಷಣವೂ ಅಲ್ಲಿ ಬದುಕಲು ಸಾಧ್ಯವೇ ಇಲ್ಲ. ಇಂತ ರೂಮುಗಳಿಗೆ ಅವಳು ತಿಂಗಳ ಬಾಡಿಗೆಯನ್ನು ಅಡ್ವಾನ್ಸ್ ಕಟ್ಟಿದರೆ ಆಯಿತು. ಅವಳ ಇಚ್ಚೆ ಬಂದ ಹಾಗೆ ವ್ಯವಹಾರ ಮಾಡಬಹುದು. ಇವರು ಹೆಚ್ಚಾಗಿ ಒಬ್ಬೊಬ್ಬ ಖಾಯಂ ಪಾರ್ಟನರ್‌ನನ್ನು ನೋಡಿಕೊಂಡಿರುತ್ತಾರೆ. ಆತ ಇವಳ ಮನೆಯ ಬಾಡಿಗೆ ಕಟ್ಟುವುದು, ರೇಶನ್

ತಂದು ಕೊಡುವುದು ಮಾಡುತ್ತಾನೆ. ಆತ ಕೆಲಸಕ್ಕೆ ಹೋದ ಹೊತ್ತಿನಲ್ಲಿ ಇವಳು ದಂಧೆ ಮಾಡುತ್ತಾಳೆ. ಅವಳು ತನ್ನನ್ನು ಇಟ್ಟುಕೊಂಡೂ ಬೇರೆ ದಂಧೆ ಮಾಡುವುದು ಗೊತ್ತಾಗಿ ಜಗಳ ಕೊಲೆಗಳೂ ಸಂಭವಿಸುತ್ತವೆ. ಮತ್ತೆ ಕೆಲವು ಪಾರ್ಟನರ್‌ಗಳು ಅವಳಿಂದಲೇ ಹಣ ಸುಲಿಯಲಾರಂಭಿಸುತ್ತಾರೆ.

ಕಾಮಾಟಪೂರದಲ್ಲಿರುವ ಇಂತ ಪುಟ್ಟ ಪುಟ್ಟ ರೂಮುಗಳನ್ನು ಹೊಂದಿರುವ, ದೊಡ್ಡ ಮನೆಗಳನ್ನು ಹೊಂದಿರುವ ಐದು ಆರು ಏಳು ಅಂತಸ್ತಿನ ಬ್ರಿಟಿಷ ಕಾಲದ ಕಟ್ಟಿಗೆ, ಕಬ್ಬಿಣದಿಂದ ಕಟ್ಟಿದ ಬಿಲ್ಡಿಂಗ್‌ಗಳಿವೆ. ಶುಕ್ಲಾಜಿ ಸ್ಟ್ರೀಟ್ ಎಂದು ಕರೆಯುವ ಈ ಪ್ರದೇಶದಲ್ಲಿ ಇಂತ ೧೪ ಗಲ್ಲಿಗಳಿವೆ. ಇದರಲ್ಲಿರೋ ಮನೆಗಳಿಗೆ ಬೇರೆ ಬೇರೆ ಓನರ್‌ಗಳು ಇದ್ದಾರೆ. ಈ ಕಟ್ಟಡಗಳ ಮಾಲೀಕರೇ ಘರವಾಲಿಗಳು. ತೇರದಾಳದ ವ್ಯಕ್ತಿಯೊಬ್ಬರು ಹೇಳುವಂತೆ, "ಈಗ ೫೦ ವರ್ಷಗಳ ಹಿಂದೆ ಐದಾರು ಅಂತಸ್ತಿನ ಒಂದು ಕಟ್ಟಡವೇ ನಮ್ಮ ಅಜ್ಜಿಯದಾಗಿತ್ತು. ಮುದುಕಿ ಕುಡುಕಿ ಇದ್ಲು. ಎಲ್ಲಾ ಹಾಳ ಮಾಡಕೊಂತ ಬಂದು ಈಗ ತಳದಾಗ ಎರಡು ಮನಿ ಬಿಟ್ಟ ಹೋಗೇತಿ" ಅನ್ನುತ್ತಾರೆ. ಇಂತ ಕಟ್ಟಡಗಳಲ್ಲಿ ಲೈಂಗಿಕ ದಂಧೆ ಮಾಡುವ ಹುಡುಗಿಯರಿಗೆ 'ಪಿಂಜರಾ' ಹುಡುಗಿಯರು ಎಂದು ಕರೆಯತ್ತಾರೆ. ಪಿಂಜರಾ ಇದು ಹಿಂದಿ ಪದವಾಗಿದ್ದು, ಕನ್ನಡದಲ್ಲಿ 'ಜಾಳಿಗೆ' ಅನ್ನುವ ಅರ್ಥ ಕೊಡುತ್ತದೆ. ಅಂದರೆ ಕಾಮಾಟಿಪುರದ ಹುಡುಗಿಯರು ಜಾಳಿಗೆಯಿಂದ ಮುಚ್ಚಲಾದ ಕಟ್ಟಡಗಳ ಕಿಡಕಿ ಮತ್ತು ಮುಂಭಾಗಗಳಿಂದ ಒಳಗೆ ನಿಂತು, ಕುಳಿತು ಗಿರಾಕಿಗಳನ್ನು ಆಕರ್ಷಿಸುತ್ತಿರುತ್ತಾರೆ. ಹೊರಗಿನವರಿಗೆ ಹೆಚ್ಚು ಕಡಿಮೆ ಹುಡುಗಿಯರು ಕಾಣಿಸುತ್ತಿರುತ್ತಾರೆ. ಇಲ್ಲಿ ಇರುವ ಹುಡುಗಿಯರ ಬೆಲೆ ಇಡೀ ರೆಡ್‌ಲೈಟ್ ಏರಿಯಾದಲ್ಲಯೇ ಕಡಿಮೆ ಇರುತ್ತದೆ. ಈ ಕಟ್ಟಡಗಳಲ್ಲಿ ಪೊಲೀಸ್ ರೇಡ್ ಆದರೆ ತಪ್ಪಿಸಿಕೊಳ್ಳಲು ಜಾಗವೇ ಇಲ್ಲ. ಹಾಗಾಗಿ ಚಿಕ್ಕ ಹುಡುಗಿಯರನ್ನು ಪೊಲೀಸರಿಂದ ತಪ್ಪಿಸಲು, ನೀರಿನ ಡ್ರಮ್‌ಗಳಲ್ಲಿ, ಗೋಡೆಯ ಒಳಗೆ ಮಾಡಿದ ಕತ್ತಲು ಕೋಣೆಯಲ್ಲಿ, ನಾಗಂದಿ ಹಿಂದೆ ಮಾಡಿದ ಉದ್ದನೆಯ ಡಬ್ಬಿಯಂತಹ ಚೌಕದಲ್ಲಿ, ಮಾಳಿಗೆಯ ಕೆಳಗೆ ಮಾಡಲಾದ ಕಟ್ಟಿಗೆಯ ಪೊಳ್ಳು ಜಾಗದಲ್ಲಿ ಇರಿಸಿರುತ್ತಾರೆ. ಒಂದೊಂದು ಸಾರೆ ಪೊಲೀಸ್ ಅವರು ಬೇಗ ಹೊರಗೆ ಹೋಗದೇ ಹೋದಾಗ ಚಿಕ್ಕ ಹುಡುಗಿಯರು ಉಸಿರುಗಟ್ಟಿ ಸತ್ತದ್ದೂ ಇದೆ ಎಂದು ಹುಡುಗಿಯರು ಹೇಳುತ್ತಾರೆ.

ಇನ್ನು ಕೆಲವರು ಬೀವಂಡಿಯ ದಂಧೆಯ ಮನೆಗಳಲ್ಲಿ ಇದ್ದಾರೆ. ಇದು ಮುಂಬಯಿಯ ಕಾಮಾಟಿಪೂರದಂತೆ ಅಲ್ಲ. ಬೀವಂಡಿ ಒಂದು ತಾಲೂಕು ಆಗಿದೆ. ಅದರಲ್ಲಿ ಹನುಮಾನ್ ಟೇಕಡಿ ಹತ್ತಿರ ಒಂದು ಓಣಿಯಲ್ಲಿ ದಂಧೆ ನಡೆಯುತ್ತದೆ. ಅಲ್ಲಿರುವ ದೊಡ್ಡ ಓಣಿಯಲ್ಲಿ, ಚಿಕ್ಕ ಚಿಕ್ಕ ಮನೆಗಳಿವೆ. ಅವೇ ದಂಧೆಯ ಮನೆಗಳು. ಬಹಳಷ್ಟು ಮನೆಗಳು ಕಾಮಾಟಿಪೂರದಲ್ಲಿ ದಂಧೆ ಮಾಡಿದ ಹಳೆಯ ಹುಡುಗಿಯರವೇ ಆಗಿವೆ. ಅವರೇ ಇಂದು ಘರವಾಲಿಗಳಾಗಿದ್ದಾರೆ. ತಮ್ಮ ಹಳ್ಳಿಗಳಿಂದ ಕರೆದು ತಂದ ಹುಡುಗಿಯರಿಂದ ಇಲ್ಲಿ ದಂಧೆ ನಡೆಸುತ್ತಾರೆ. ಈಗೀಗ ನೇಪಾಳಿ, ಬಾಂಗ್ಲಾ, ಕೋಲ್ಕತ್ತಾ ಹುಡುಗಿಯರೂ ಸೇರಿಕೊಂಡಿದ್ದಾರೆ. ಕನ್ನಡದ ಜಮಖಂಡಿ, ಮುಧೋಳದ ಘರವಾಲಿಗಳು ಮತ್ತು ಹುಡುಗಿಯರು ಇಲ್ಲಿ ಹೆಚ್ಚು ಸಿಗುತ್ತಾರೆ. ಕಾಮಾಟಿಪೂರಕ್ಕೆ ಹೋಲಿಸಿದರೆ

ಇವರ ಬೆಲೆ ಒಂದೇ ರೀತಿ ಅನ್ನಿಸುತ್ತದೆ. ಬೀವಂಡಿಯ ದಂಧೆಯ ಏರಿಯಾದ ಸುತ್ತಲೂ ದೊಡ್ಡ ದೊಡ್ಡ ಬಟ್ಟೆ ಪಾವರ್‌ಮಿಲ್‌ಗಳಿವೆ. ಅವುಗಳನ್ನು ನಡೆಸಲು ಸಾವಿರಾರು ಕಾರ್ಮಿಕರು ಬೇಕಾಗುತ್ತಾರೆ. ಹಾಗಾಗಿ ಉತ್ತರ ಪ್ರದೇಶ, ಬಿಹಾರ ಜಾರ್ಖಂಡ್‌ಗಳಿಂದ ಕಾರ್ಮಿಕರು ವಲಸೆ ಬಂದಿರುತ್ತಾರೆ. ಅವರೇ ಈ ಮಹಿಳೆಯರ ಗಿರಾಕಿಗಳಾಗಿರುತ್ತಾರೆ. ಅದೇ ಏರಿಯಾದಲ್ಲಿ ಸ್ವಂತ ಮನೆ ಮಾಡಿಕೊಂಡ, ಅದೇ ಊರಿನ ಕುಟುಂಬಸ್ಥ ಮನೆಗಳಿವೆ. ಅಲ್ಲಿಂದಲೂ ಗಿರಾಕಿಗಳು ಬರುತ್ತಿರುತ್ತಾರೆ. ಆದರೆ ಜಮಖಂಡಿಯ ೭೦ ವರ್ಷದ ಘರವಾಲಿಯೊಬ್ಬರು ಹೇಳುವಂತೆ, "ಬೀವಂಡಿಯ ಖಾಯಂ ನಿವಾಸಿಗಳಿಗೆ ನಾವು ಹುಡುಗಿಯರನ್ನು ಕಳಿಸುವುದು ಬಹಳ ಕಡಿಮೆ. ಇಲ್ಲವೆಂದೂ ಅನ್ನಬಹುದು. ಏಕೆಂದರೆ, ಅವರ ಮನೆ ನಮ್ಮ ಏರಿಯಾಗಳಲ್ಲಿ, ಸುತ್ತ ಮುತ್ತ ಹತ್ತಿರವಿರುವುದರಿಂದ, ಅವರು ಹುಡುಗಿಯರನ್ನು ಖಾಯಂ ಆಗಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ. ಹಾಗೆ ಮಾಡುತ್ತಾ, ಇಲ್ಲಿಯೆ ಬಂದು ಕೂಡುವುದು, ಅವಳ ದಂಧೆಗೆ ಅಡ್ಡಿಮಾಡುವುದು ಮಾಡಲು ಪ್ರಾರಂಭಿಸುತ್ತಾರೆ. ಅವರು ಹಾಗೆ ಮಾಡುವುದು ಅವರ ಹೆಂಡತಿ ಮಕ್ಕಳಿಗೆ ಗೊತ್ತಾಗಿ, ನಮ್ಮ ಹುಡುಗಿಯರನ್ನು ಹೊಡೆಯಲು ಬರುವುದು, ರೋಡಲ್ಲಿ ನಿಂತು ಗಲಾಟೆ ಮಾಡುವುದನ್ನು ಮಾಡುತ್ತಾರೆ. ಇದರಿಂದ ನಮಗೆ ಬರುವ ಗಿರಾಕಿಗಳ ಮೇಲೆ  ಪರಿಣಾಮವಾಗಿ, ನಮ್ಮ ದಂಧೆಗೆ ಪೆಟ್ಟು ಬೀಳುತ್ತದೆ. ಹಾಗಾಗಿ ನಾವು ಹೆಚ್ಚಾಗಿ ಬೇರೆ ಊರಿನಿಂದ ಬಂದ ಗಿರಾಕಿಗಳನ್ನು ಹೆಚ್ಚು ಕರೆದುಕೊಳ್ಳುತ್ತೇವೆ" ಎಂದು ವಿವರಿಸುತ್ತಾರೆ.

ಲೈಂಗಿಕ ಜೀತ ಮತ್ತು ದಂಧೆಯನ್ನು ಅಲ್ಲದೇ, ರೆಡ್‌ಲೈಟ್ ಏರಿಯಾದಲ್ಲಿ ಇರುವ, ಅಧ್ಯಯನಕ್ಕೆ ಒಳಪಟ್ಟವರಲ್ಲಿ ಶೇಕಡಾ ೨೦ರಷ್ಟು ಮಹಿಳೆಯರು ಇತರೆ ಕೆಲಸಗಳನ್ನು ಮಾಡುತ್ತಿರುವುದನ್ನು ಅಧ್ಯಯನವು ಗುರುತಿಸಿದೆ. ಅದರಲ್ಲಿ ಆಶಾದರ್ಪಣ, ಆಶಾ ಮಹಿಳಾ, ಭಾರತೀಯ ಕುಟುಂಬ ಯೋಜನಾ ಸಂಘದಂತಹ ಸರ್ಕಾರೇತರ ಸಂಸ್ಥೆಗಳಲ್ಲಿ ಎಚ್.ಐ.ವಿ./ಏಡ್ಸ್ ಸಂಬಂಧಿಸಿದ ಪೀಯರ್ ವರ್ಕರ್, ಓ.ಆರ್.ಡಬ್ಲ್ಯೂ (ಔಟ್ ರೀಚ್ ವರ್ಕರ್) ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಊರಿನಿಂದ ಬರುವಾಗಲೇ ಅಲ್ಪ ಸ್ವಲ್ಪ ಓದಿಕೊಂಡವರು ಓ.ಆರ್.ಡಬ್ಲ್ಯೂಗಳಾಗಿ ಕೆಲಸ ಮಾಡುತ್ತಿದ್ದಾರೆ. ಓದದೇ ಇರುವಂತಹವರು ವ್ಯವಹಾರ ಜ್ಞಾನವಿದ್ದುದರಿಂದ ಪೀಯರ್ ವರ್ಕರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರೂ ಸಹ ಲೈಂಗಿಕ ಜೀತಕ್ಕೆ ಸಾಗಾಣಿಕೆಗೊಂಡು ಬಂದವರೇ ಆಗಿದ್ದು, ಈಗ ಕೆಲವರು ಎಚ್.ಆಯ್.ವಿ ಪೀಡಿತರಾಗಿದ್ದರೆ, ಕೆಲವರು ಪಾರ್ಟನರ್‌ಗಳನ್ನು ಪ್ರೀತಿಸಿ, ಲೈಂಗಿಕ ದಂಧೆ ಬಿಟ್ಟು ಬಂದವರಾಗಿದ್ದಾರೆ. ಅಲ್ಲದೇ ಕೆಲವರು ವಯಸ್ಸು ಆಗಿದ್ದು, ಲೈಂಗಿಕ ದಂಧೆ ಮಾಡಲು ಸಾಧ್ಯವಾಗದೇ ಈ ಕೆಲಸಗಳನ್ನು ಮಾಡುತ್ತಿದ್ದಾರೆ.

ಮಹಾರಾಷ್ಟ್ರದ ವೇಶ್ಯಾಗೃಹಗಳಲ್ಲಿ ಕನ್ನಡದ ಹುಡುಗಿಯರೂ ಈಗಲು ಇರುವುದಕ್ಕೆ ಕಾರಣ ಘರವಾಲಿಗಳು. ನಮ್ಮ ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಲ್ಲಿ ಶೇಕಡಾ ೧೬.೬೭ ಮಹಿಳೆಯರು ತಮ್ಮದೇ ಸ್ವಂತ ಮನೆ ಇಟ್ಟುಕೊಂಡ ಘರವಾಲಿಗಳಾಗಿದ್ದಾರೆ. ಘರವಾಲಿಗಳೂ ಸಹ ಮೊದಲು ಲೈಂಗಿಕ ಜೀತಕ್ಕೆ ಇದ್ದು, ಲೈಂಗಿಕ ದಂಧೆ ಮಾಡಿದವರೇ. ಕೆಲವರು ತಮ್ಮ ತಾಯಂದಿರು ಉಳಿಸಿ

ಗಳಿಸಿದ ಮನೆಗೆ ಘರವಾಲಿಗಳಾಗಿದ್ದಾರೆ. ಮತ್ತೆ ಕೆಲವರು ಮನೆಗಳನ್ನ ಬಾಡಿಗೆಗೆ ಹಿಡಿದುಕೊಂಡು, ಅದರಲ್ಲಿ ಹುಡುಗಿಯರನ್ನು ಇಟ್ಟು ದಂಧೆ ನಡೆಸುತ್ತಾರೆ. ಇವರಲ್ಲಿ ಲೈಂಗಿಕ ಜೀತಕ್ಕೆ ಇರುವ ಹುಡುಗಿಯರು ಮತ್ತು ಲೈಂಗಿಕ ದಂಧೆ ಮಾಡುವ ಹುಡುಗಿಯರು ಇರುತ್ತಾರೆ. ಲೈಂಗಿಕ ದಂಧೆ ಮಾಡುವ ಹುಡುಗಿಯರು ಇವರಿಗೆ ಪ್ರತಿದಿನ ತಾವು ಗಳಿಸಿದ್ದರಲ್ಲಿ ಅರ್ಧ ಘರವಾಲಿಗಳಿಗೆ ಕೊಡುತ್ತಾರೆ. ಘರವಾಲಿಗಳು ಹುಡುಗಿಯರಿಗೆ ಅಡುಗೆಯನ್ನೂ ಸಹ ಮಾಡಿ ಕೊಡುತ್ತಾರೆ. ಅದು ಹುಡುಗಿಯರು ಕೊಡುವ ಅರ್ಧ ಲೆಕ್ಕದಲ್ಲಿ ಬರುವುದಿಲ್ಲ. ಅದಕ್ಕೆ ಪ್ರತ್ಯೇಕ ಹಣ ಕೊಡಬೇಕಾಗುತ್ತದೆ. ಘರವಾಲಿಗಳು ತಲೆಹಿಡುಕ ಕೆಲಸವನ್ನೂ ಸಹ ಮಾಡುತ್ತಾರೆ. ತಮ್ಮ ಊರಿನಲ್ಲಿರುವ ಬಡವರನ್ನು ಮರಳು ಮಾಡಿ, ಅವರ ಕಷ್ಟಕ್ಕೆ ಹಣ ನೀಡಿ, ಅವರ ಮಕ್ಕಳನ್ನು ಕರೆದುಕೊಂಡು ಬಂದು ದಂಧೆಗೆ ನಿಲ್ಲಿಸುತ್ತಾರೆ. ತಮಗೇನಾದರು ಸುಂದರ ಮಕ್ಕಳಿದ್ದರೆ ಅವರನ್ನು ಹೆಚ್ಚು ಗಳಿಸಲು ಸಾಧ್ಯವಿರುವ ಗ್ರ್ಯಾಂಟ್ ರೋಡಿನ ಬಂಗಲೆಗಳಲ್ಲಿ ದಂಧೆಗೆ ಇಡುತ್ತಾರೆ. ಕಾಮಾಟಿಪುರದಲ್ಲಿ ಒಂದು ಹುಡುಗಿಗೆ ೧೦೦ ರಿಂದ ೩೦೦ರೂ (ಒಂದು ಟೈಮ್–೧೦ ನಿಮಿಷ) ಇದ್ದರೆ ಗ್ರ್ಯಾಂಟ್ ರೋಡಿನ ಬಂಗಲೆಗಳಲ್ಲಿ ೩೦೦ ರಿಂದ ೫೦೦ ರೂಪಾಯಿ ಒಂದೊಂದು ಸಾರಿ ಅದಕ್ಕಿಂತಲೂ ಹೆಚ್ಚು ಸಿಗುತ್ತದೆ.

ಅಧ್ಯಯನವು ಹೀಗೆ ರೆಡ್‌ಲೈಟ್ ಏರಿಯಾದ ಮಹಿಳೆಯರ ಕೆಲಸದ ಕುರಿತು ಹುಡುಕುತ್ತಾ ಹೊರಟಾಗ, ಮೇಲೆ ತಿಳಿಸಿರುವ ಕೆಲಸಗಳನ್ನು ಹೊರತು ಪಡಿಸಿ, ಶೇಕಡಾ ೭.೬೬ರಷ್ಟು ಮಹಿಳೆಯರು ದಂಧೆಯ ಮನೆಗಳಲ್ಲಿ ಕಸ ಮುಸುರೆ, ಬಟ್ಟೆ ತೊಳೆಯುವುದು ಮತ್ತು ನೀರು ತುಂಬುವ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಈ ಕೆಲಸಕ್ಕೆ ಒಂದು ಹುಡುಗಿಯಿಂದ ಇಂತಿಷ್ಟು, ಅಂದರೆ, ಹುಡುಗಿಯರು ಅಂದು ಗಳಿಸಿದ ಆದಾಯದ ಮೇಲೆ ಇವರಿಗೆ ಹಣ ಸಿಗುತ್ತದೆ. ಅದು ಒಂದು ದಿನ ಹೆಚ್ಚೂ ಆಗಬಹುದು, ಕಡಿಮೇನೂ ಆಗಬಹುದು. ಹಾಗೆಯೇ ಕೆಲವರು ರೊಟ್ಟಿ ಮತ್ತು ಪಲ್ಲೆ ಮಾಡಿ ಮಾರಾಟ ಮಾಡುತ್ತಾರೆ. ದಂಧೆಯ ಹುಡುಗಿಯರಿಗೆ ಅಡುಗೆ ಮಾಡಿಕೊಳ್ಳಲು ಸಮಯ ಇರುವುದಿಲ್ಲ ಮತ್ತು ಹೊಟೇಲ್‌ನಲ್ಲಿ ತಿನ್ನುವುದು ಬಹಳ ವೆಚ್ಚದಾಯಕವಾಗಿರುತ್ತದೆ. ಹಾಗಾಗಿ ತಮ್ಮ ಊರಿನ ಕಡೆಗೆ ಮಾಡಿದಂತಹ ರೊಟ್ಟಿ ಪಲ್ಲೆ ತಿನ್ನುವುದು ಕೆಲವು ಹುಡುಗಿಯರಿಗೆ ಇಷ್ಟವಿರುವುದರಿಂದ, ಇಂತಹ ರೊಟ್ಟಿ ಪಲ್ಲೆ ಕೊಂಡುಕೊಂಡು ತಿನ್ನುತ್ತಾರೆ. ಒಂದು ರೊಟ್ಟಿ ಮತ್ತು ಒಂದು ಪಲ್ಲೆಗೆ ೧೫ ರೂಪಾಯಿ ಸಿಗುತ್ತದೆ. ದಿನವೂ ಸಾಯಂಕಾಲ ೭ರಿಂದ ೧೦ರವರೆಗೆ ಕೆಲವರು ಈ ಕೆಲಸ ಮಾಡುತ್ತಾರೆ. ದಿನವೂ ೩೦ರಿಂದ ೫೦ ರೊಟ್ಟಿಗಳು ಮಾರಾಟವಾಗುತ್ತವೆ ಎಂದು ಕೆಲವು ಮಹಿಳೆಯರು ತಿಳಿಸಿದರು. ಇಂತವರೂ ಸಹ ಹಳ್ಳಿಗಳಿಂದ ಹುಡುಗಿಯರನ್ನು ಸಾಗಿಸಿಕೊಂಡು ಬರುವ ಕೆಲಸದಲ್ಲಿ ಸಿದ್ಧ ಹಸ್ತರಿರುತ್ತಾರೆ. ಅವರನ್ನು ತಮ್ಮ ಹಾಗೆ ಕಸ, ಮುಸುರೆ, ಅಡುಗೆ ಕೆಲಸಕ್ಕೆ ಹಚ್ಚುತ್ತೇವೆಂದು ಕರೆದು ತಂದು ಘರವಾಲಿಗಳಿಗೆ ಮಾರಿದ ಪ್ರಸಂಗಗಳು ಇವೆ. ಹೀಗೆ ಇರುವ ಎಷ್ಟೋ ಮಹಿಳೆಯರಿಗೆ ಹಳ್ಳಿಗಳಲ್ಲಿ ಯಾರೂ ಇರುವುದಿಲ್ಲ. ಇದ್ದರೂ ಇವರನ್ನು ಇಟ್ಟುಕೊಳ್ಳುವುದಿಲ್ಲ. ಅಥವಾ ಇವರಿಗೆ ಇರುವ ಮದ್ಯಪಾನ, ಗುಟಕಾ, ಮಟಕಾ, ಚಟಗಳು ಊರಲ್ಲಿ ನಡೆಯುವುದಿಲ್ಲ. ಹಾಗಾಗಿ ಕಷ್ಟವೋ

ಸುಖವೋ ಮುಂಬಯಿಯಲ್ಲಿಯೇ ಇರಲು ಇಷ್ಟಪಡುತ್ತಾರೆ. ಇಂತವರು ಯಾರದೋ ಮನೆಯ ಮುಂದೆ ಮಲಗಿ ಸಮಯ ಕಳೆಯುತ್ತಾರೆ. ಇನ್ನುಳಿದ ಪ್ರತಿಶತ ೬.೬೬ರಷ್ಟು ಮಹಿಳೆಯರು ಎಚ್ ಆಯ್ ವಿ/ಏಡ್ಸ್ ಸೋಂಕಿನಿಂದ ಬಳಲುತ್ತಿದ್ದಾರೆ. ಇವರಿಗೆ ಏನೂ ಕೆಲಸವೇ ಇಲ್ಲ. ಹಸಿವು ನೀಗಿಸಿಕೊಳ್ಳಲು ಏನು ಕೆಲಸ ಸಿಕ್ಕರೂ ಮಾಡುತ್ತಾರೆ. ಉದಾಹರಣೆ ನೀಡುವುದಾದರೆ, ರಾಮದುರ್ಗದ ೨೮ ವರ್ಷದ ಯುವತಿಯೊಬ್ಬಳು, ಈ ರೋಗಗ್ರಸ್ಥ ಸ್ಥಿತಿಯಲ್ಲಿ ಗಿರಾಕಿಗಳಿಗಾಗಿ ರೋಡಿನಿಂದ ರೋಡಿಗೆ ಅಲೆಯುತ್ತಾಳೆ. ಒಂದು ಗಂಡು ಮಗುವಿದೆ. ಅದನ್ನು ಸರಕಾರಿ ವಸತಿ ನಿಲಯದಲ್ಲಿ ಇಟ್ಟಿದ್ದೇನೆ ಅನ್ನುತ್ತಾಳೆ. ಆದರೆ ಅದೂ ಸಹ ಅಲ್ಲಿಯೇ ಗಲ್ಲಿಯಲ್ಲಿಯೇ ಓಡಾಡುತ್ತಿತ್ತು. ತಾಯಿಯ ಹತ್ತಿರ ಬಂದು ದುಡ್ಡಿಗಾಗಿ ಪೀಡಿಸತೊಡಗಿತ್ತು. ಇವಳ ತಾಯಿ ಗಂಡನನ್ನು ಬಿಟ್ಟು ಬಂದು ತವರು ಮನೆಯಲ್ಲಿ ಇದ್ದರು. ಜೀವನೊಪಾಯಕ್ಕಾಗಿ ಸಿನೆಮಾ ಟಾಕೀಸಿನ ಕಸ ಬಳಿಯುತ್ತಿದ್ದರು. ಇವಳನ್ನು ಶಾಲೆಗೆ ಕಳಿಸುತ್ತಿದ್ದರು. ಆದರೆ ಇವಳು ತನ್ನ ಹದಿಹರೆಯದ ಚಂಚಲತೆಗೆ ಒಳಗಾಗಿ ಒಬ್ಬ ಮನುಷ್ಯನ ಬೆನ್ನು ಹತ್ತಿ ಮುಂಬಯಿಗೆ ಬಂದಿದ್ದಳು. ಆಗ ಇವಳಿಗೆ ೧೪ ವರ್ಷ. ಆತ ಇವಳ ಜೊತೆ ಇರುವಷ್ಟು ದಿನ ಇದ್ದು, ಇವಳನ್ನು ಯಾರಿಗೋ ಮಾರಿ ಪರಾರಿಯಾಗಿದ್ದಾನೆ. ಪಾಪದ ಹುಡುಗಿ ಹೊರಗಿನ ಜಗತ್ತು ಅಂದರೆ ಏನು ಅನ್ನುವುದೇ ಮರೆತು ಹೋಗಿತ್ತು. ಹೊರಗೆ ಬಂದಾಗ ಅವಳು ಮದ್ಯಪಾನಿ ಮತ್ತು ಏಡ್ಸ್ ಪೀಡಿತ ರೋಗಿಯಾಗಿದ್ದಳು. ಜೊತೆಗೆ ಒಂದು ಮಗ ಇತ್ತು. ಅವಳ ಊರ ಕುರಿತು ಕೇಳಿದರೆ, ಹಂಗಂದ್ರೆ ಏನ? ನನಗ ಊರ ಅಂತ ಇಲ್ಲ. ಇಲ್ಲೇ ಇರ್ತನಿ". ಅಂತ ನಿರ್ಲಿಪ್ತಳಾಗಿ ನುಡಿಯುತ್ತಾಳೆ. ಇಂತಾ ರೋಗ ಇಟಗೊಂಡ ದಂಧೆ ಮಾಡ್ತನಿ ಅಂತೀಯಲ್ಲ, ತಪ್ಪ ಹೌದಲ್ಲೋ, ಈ ರೋಗ ಬ್ಯಾರೇದವ್ರಿಗೆ ಹಚ್ಚತಿದಿ ಅನಸಂಗಿಲ್ಲ? ಅಂತ ಕೇಳಿದ ಕೂಡಲೆ, ಅವಳ ಸಿಟ್ಟು ಎಲ್ಲಿತ್ತೋ ಏನೊ.. "ಏ ತಗಿ ಅತ್ಲಾಗ ಎಲ್ಲಿಂದ ಬಂದಿದಿ ನೀನು? ಏನಂತ ಮಾತಾಡಾಕತ್ತಿ. ನನ್ನ ಈ ಊರಾಗ ಮಾರಿ ಹೋಗಬೇಕಾದರ ನಾನೇನ ಎಡ್ಸ್ ರೋಗ ಹೊತ್ತಕೊಂಡ ಬಂದಿದ್ನೆನ. ಎಲ್ಲಾ, ಇಲ್ಲಿ ಸೂಳೇ ಮಕ್ಕಳ ನನಗ ಇದನ ಹಚ್ಚ್ಯಾರ. ಅವರ ರೋಗ ಅವರಿಗೆ ಹೊಕ್ಕತಿ ಬಿಡ. ಆ ಬಂದಿದ್ವೇನು ಚುಲೋ ಇರ್ತಾವೇನ ಅವೂ ಸುದ ಅದ ಇರ್ತಾವು. ಅವಕ್ಕಿಲ್ಲದ ಹೆದರಿಕಿ ನನಗ್ಯಾಕ. ಯಾರ್ಯಾರೋ ಸಂಸ್ಥಾದವರಂತ, ಬಂದು ಕಾಂಡೋಮ್ ವಾಪರ್ಸರಿ(ಉಪಯೋಗಿಸು) ಅಂತಾರ. ಆದ್ರ ನನಗ ರೋಗ ಐತಿ. ನಾ ಯಾಕ ಅದನ್ನ ವಾಪರ್ಸ ಅಂತ ಅವಕ್ಕ ಹೇಳಲಿ. ಬೇಕಾದ್ರ ತಾವ ಹಕ್ಕೊಂಡ ಬರ್ತಾವು. ನನಗೀಗ ತಂಬಾಕ ಬೇಕಾಗೇತಿ. ಅಲ್ಲಿ ಯಾಂವರ ಗಿರಾಕಿ ಸಿಗ್ತಾನಸ ನೋಡ್ತನಿ, ನಿನ್ನ ಜೊತಿ ಮಾತಾಡ್ಕೊಂತ ಕುಂತರ ಗಲ್ಲ್ಯಾಗಿನ ನಾಯಿ ಕುನ್ನೀನು ನನ್ನ ಕಡೀಗೆ ನೋಡಂಗಿಲ್ಲ". ಅಂತ ಎದ್ದು ಓಡಿಯೇ ಬಿಟ್ಟಳು. ಇದು ಲೈಂಗಿಕ ದಂಧೆಯ ಅಮಾನವೀಯತೆಗಳ ಮೂಲ ಹೇಗೆ ನಡೆಯುತ್ತದೆ ಎನ್ನುವುದಕ್ಕೆ ಇದು ಒಂದು ಉದಾಹರಣೆಯಾಗಿದೆ.

ಮೇಲೆ ವಿವರಿಸಿದ ಬಹುತೇಕರು ಹಿಂದುಳಿದ ಜಿಲ್ಲೆಗಳಿಗೆ ಸೇರಿದ ಪರಿಶಿಷ್ಟ ಜಾತಿಯವರಾಗಿದ್ದಾರೆ. ಇವರಲ್ಲಿ ಶೇಕಡಾ ೬೦ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದು, ಎಲ್ಲರೂ ತಮಗೆ ತಿಳಿಯದ ವಯಸ್ಸಿನಲ್ಲಿ

ಮುಂಬಯಿಯ ಕಾಮಾಟಪುರ, ಥಾಣೆಯ ಜೀವಂಡಿ ರೆಡ್‌ಲೈಟ್ ಏರಿಯಾಗಳಿಗೆ ಲೈಂಗಿಕ ಜೀತಕ್ಕಾಗಿ ತಮ್ಮ ಅಪ್ರಾಪ್ತ ವಯಸ್ಸಿನಲ್ಲಿಯೇ ಸಾಗಿಸಲ್ಪಟ್ಟಿದ್ದರು. ಈಗ ಸ್ವಲ್ಪ ನಿರಾಳರಾಗಿದ್ದಾರೆ. ಅವರಲ್ಲಿ ಅತೀ ಹೆಚ್ಚು ಮಹಿಳೆಯರು ಲೈಂಗಿಕ ದಂಧೆಯಲ್ಲಿ ಮುಂದುವರೆದಿದ್ದಾರೆ. ಅವರು ಲೈಂಗಿಕ ಜೀತಕ್ಕೆ ಬರುವ ಮೊದಲು ಇವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿ ಹೇಗಿತ್ತು? ಅದು ಇವರನ್ನು ಲೈಂಗಿಕ ಜೀತಕ್ಕೆ ತಂದು ನಿಲ್ಲಿಸುವಲ್ಲಿ ಹೇಗೆ ಕಾರಣವಾಯಿತು? ಎಂಬುದನ್ನು ಮುಂದೆ ವಿಶ್ಲೇಷಿಸಲಾಗಿದೆ.

### ೩.೩. **ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರ**

ಒಬ್ಬ ವ್ಯಕ್ತಿಯ ಅಸ್ತಿತ್ವವನ್ನು ಗುರುತಿಸುವಲ್ಲಿ ಅವನನ್ನು ಪ್ರಭಾವಿಸುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಹೆಚ್ಚು ಪ್ರಸ್ತುತವಾಗುತ್ತವೆ. ಹಾಗಾಗಿ ಇಲ್ಲಿ ಲೈಂಗಿಕ ಜೀತಕ್ಕೆ ಒಳಗಾದ ಬಾಲೆಯರ ಸಾಮಾಜಿಕ ಸ್ಥಿತಿಯನ್ನು ಅವರ ವೈವಾಹಿಕ ಸ್ಥಿತಿಗತಿ, ಧಾರ್ಮಿಕ ನಂಬಿಕೆಗಳು, ಕೌಟುಂಬಿಕ ಪರಿಸರ, ಸಮುದಾಯದೊಂದಿಗೆ ಅವರ ಸಂಬಂಧ, ಅವರ ಮಕ್ಕಳು ಮತ್ತು ಅವರ ಪರಿಸ್ಥಿತಿಗಳನ್ನು ಅಧ್ಯಯನ ಮಾಡಲಾಗಿದೆ.

ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ಮಹಿಳೆಯರಲ್ಲಿ ಶೇಕಡಾ ೭೩.೩೩ರಷ್ಟು ಮಹಿಳೆಯರು ಅವಿವಾಹಿತರಾಗಿದ್ದಾರೆ. ಶೇಕಡಾ ೨೩.೩೩ರಷ್ಟು ಮಹಿಳೆಯರು ವಿವಾಹಿತರಾಗಿದ್ದಾರೆ ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರು ವಿವಾಹಿತರಾಗಿದ್ದು, ವಿಧವೆಯರಾಗಿರುವುದು ಕಂಡುಬರುತ್ತದೆ.

ಬಹುತೇಕ ಮಹಿಳೆಯರು ವಿವಾಹವಾಗದೇ ಉಳಿದಿರುವುದಕ್ಕೆ ಮುಖ್ಯ ಕಾರಣ ದೇವದಾಸಿ ಪದ್ಧತಿ. ಅವರನ್ನು ಅವರಿಗೇ ತಿಳಿಯದ ವಯಸ್ಸಿನಲ್ಲಿ ದೇವದಾಸಿ ಮಾಡಲಾಗಿದೆ. ದೇವದಾಸಿ ಪದ್ಧತಿ ಅಂದರೆ ಇದೊಂದು ಧಾರ್ಮಿಕವಾದ ಅನಿಷ್ಟ ಆಚರಣೆಯಾಗಿದೆ. ಭಾರತದ ಅತ್ಯಂತ ಪುರಾತನ ಇತಿಹಾಸಗಳಲ್ಲಿ ವೇಶ್ಯಾಗಾರಿಕೆ ಕುರಿತು ಉಲ್ಲೇಖಗಳಿವೆ. ಕ್ರಿ.ಪೂ ೩೦೦ರಲ್ಲಿ ಚಾಣಕ್ಯನಿಂದ ರಚಿಸಲ್ಪಟ್ಟ "ಅರ್ಥಶಾಸ್ತ್ರ'ವು ಮೌರ್ಯರ ಕಾಲದ ಒಂದು ಕೃತಿ. ಇದು ಆ ಕಾಲದ ಸಾಮಾಜಿಕ, ಆರ್ಥಿಕ, ಆಡಳಿತಾತ್ಮಕ ಮತ್ತು ಭೂವ್ಯವಸ್ಥೆ ಕುರಿತು ಮಾಹಿತಿ ನೀಡುತ್ತದೆ. ಪುಸ್ತಕದ ಎರಡನೇಯ ಭಾಗದ ೨೮ನೇಯ ಅಧ್ಯಾಯದಲ್ಲಿ 'ಗಣಿಕೆ'ಯರು ಎಂಬ ಹೆಸರಿನ ವೇಶ್ಯೆಯರಿದ್ದರು. ಅವರನ್ನು ನೋಡಿಕೊಳ್ಳಲು ಉನ್ನತ ಸಂಬಳದ ಒಬ್ಬ 'ಗಣಿಕಾಧ್ಯಕ್ಷ'ನೆಂಬ ಅಧಿಕಾರಿ ಇರುವ ಉಲ್ಲೇಖವಿದೆ. ಆದರೆ ದೇವದಾಸಿಯರ ಕುರಿತು ಎಲ್ಲಿಯೂ ಉಲ್ಲೇಖ ಸಿಗುವುದಿಲ್ಲ. ೬ನೇ ಶತಮಾನದಲ್ಲಿ ಮಾತ್ರ ದೇವಾಲಯಕ್ಕೆ ಹುಡುಗಿಯರನ್ನು ಸಮರ್ಪಿಸುತ್ತಿದ್ದ ಕುರಿತು ಉಲ್ಲೇಖಗಳಿವೆ. ಮುಂದೆ ೧೨ನೇ ಶತಮಾನದಲ್ಲಿ ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ಪವಿತ್ರ ವೇಶ್ಯಾಗಾರಿಕೆಯ ಕುರಿತು ಸಾಹಿತ್ಯದ ಆಧಾರಗಳು ದೊರೆಯುತ್ತವೆ. ಇವುಗಳಲ್ಲಿ ಉತ್ತರ ಪ್ರದೇಶದ ತವಾಯಫ್, ಬಂಗಾಳದ ಚೇಡಿಯಾ, ಗುಜರಾತಿ ಅನಾನ್, ಮಹಾರಾಷ್ಟ್ರದ ಭಾವಿನ್‌ಗಳು ಮತ್ತು ಮುರುಳಿಗಳು, ಓರಿಸ್ಸಾದ ಕಸ್ಬಿಗಳು, ಆಂದ್ರ ಪ್ರದೇಶದ ಸಾನಿ ಎಂಬ ಹಿಂದೂ ಬೋಗಮ್‌ಗಳು ಮತ್ತು ಜಾನ ಎಂಬ ಮುಸ್ಲಿಂ ಬೋಗಮ್‌ಗಳು, ಗೋವಾದ ಭವಿನ್ ಮತ್ತು ನಾಯಿಕಿನ್ ಅಥವಾ ನಾಚ್‌ಗಳು, ಕರ್ನಾಟಕದ ಬಸವಿ ಮತ್ತು ಜೋಗತಿಯರು ಎಂಬ ಹೆಸರಿನಲ್ಲಿ ದೇಶದ ವಿವಿಧ ಭಾಗದಲ್ಲಿ ಇರುವುದು ಕಂಡುಬರುತ್ತವೆ"(ಜೋಗನ್ ಶಂಕರ್, ೧೯೯೦). ಧರ್ಮದ

ಹೆಸರಿನಲ್ಲಿ ದೇವರೊಂದಿಗೆ ಮದುವೆ ಮಾಡಿಕೊಂಡು ದೇವರ ಸೇವೆಗೆ ನಿಲ್ಲುವ ಇವರೆಲ್ಲರನ್ನೂ ಒಟ್ಟಾಗಿ 'ದೇವದಾಸಿ' ಎಂದು ಕರೆಯಲಾಗಿದೆ. "ದೇವರಿಗೆ ಕಾಣಿಕೆಯಾಗಿ, ಮುಡಿಪಾಗಿ, ಸೇವೆಗಾಗಿ, ನೀಡಲಾದ ಹೆಂಗಸರೇ ದೇವದಾಸಿಯರು. ದೇವರಿಂದ ರಕ್ಷೆ, ಅನುಕಂಪ, ಲಾಭ, ಬೆಂಬಲ, ಹೀಗೆ ಅನೇಕ ರೀತಿಯ ನೆರವು ಬೇಡಿದ ಭಕ್ತರು ತಮ್ಮ ತಂಗಿ, ಮಗಳು ಅಥವಾ ಹುಡುಗಿಯನ್ನು ಹಣ ಕೊಟ್ಟು ತಂದಾದರೂ ದೇವರಿಗೆ ಕಾಣಿಕೆ ನೀಡಿದ ಉದಾಹರಣೆಗಳಿವೆ"(ಕೆ.ಜಿ. ಗುರುಮೂರ್ತಿ: ಧರ್ಮ ಮತ್ತು ರಾಜಕೀಯ).

ದೇವದಾಸಿ ಎಂಬ ಪದದ ಅರ್ಥವನ್ನು ಮಾಸ್ ಸಂಸ್ಥೆಯ ಸದಸ್ಯರು ಬೆಳಗಾವಿ ಜಿಲ್ಲೆಯ ಅನುಭವದೊಂದಿಗೆ ಹೀಗೆ ಹೇಳುತ್ತಾರೆ. "ಹರಿಜನ ಮತ್ತು ಮಾದಿಗ ಜನಾಂಗದ ಕುಟುಂಬಗಳಲ್ಲಿ ಹೆಣ್ಣು ಮಗುವನ್ನು ಎಲ್ಲಮ್ಮ ದೇವಿಗೆ ಹರಕೆ ಬಿಡುತ್ತಾರೆ. ಹರಕೆಯನ್ನು ಕೆಲವೊಮ್ಮೆ ಮಗು ಹುಟ್ಟುವ ಮೊದಲೇ ಅಥವಾ ಹುಟ್ಟಿದ ನಂತರವೂ ಬಿಡಬಹುದು. ಒಟ್ಟಾರೆ ಮಗುವಿಗೆ ಪ್ರಾಪಂಚಿಕ ತಿಳುವಳಿಕೆ ಬರುವ ಮೊದಲು ಅಂದರೆ ಸುಮಾರು ೧೧ ವರ್ಷದೊಳಗಾಗಿ ಅವಳನ್ನು ದೇವಿಗೆ ಅರ್ಪಣೆ ಮಾಡುತ್ತಾರೆ. ಹೀಗೆ ಅರ್ಪಣೆಯಾದ ಮೇಲೆ ಅವಳು ಯಾರನ್ನೂ ಮದುವೆಯಾಗುವ ಹಾಗಿಲ್ಲ. ಅರ್ಪಣೆಯಾದವಳನ್ನು ಸ್ಥಳೀಯರು ಜೋಗತಿ ಎಂದು ಗುರುತಿಸಿದರೆ, ಸರಕಾರವು ದೇವದಾಸಿ ಎಂದು ಗುರುತಿಸಿದೆ. ದೇವರಿಗೆ ಅರ್ಪಣೆಯಾಗುವಾಗ ಹಸಿನೂಲಿನಲ್ಲಿ ಪೋಣಿಸಿರುವ ಮೂರು ಬಿಳಿ ಹಾಗೂ ಎರಡು ಕೆಂಪು ಗಾಜಿನ ಮಣಿಗಳ(ಮುತ್ತು) ಸರವನ್ನು ದೇವಿಯ ಹೆಸರಿನಲ್ಲಿ ಹಿರಿಯ ಜೋಗತಿಯರು ಅರ್ಪಣೆ ಮಾಡುವ ಹುಡುಗಿಯ ಕೊರಳಿಗೆ ಕಟ್ಟುತ್ತಾರೆ"(ಹೀಗೊಂದು ಪಯಣ: ಮಾಸ್ ಸಂಸ್ಥೆ, ಘಟಪ್ರಭಾ).

ಹೀಗೆ ಕಟ್ಟುವ ಮುತ್ತುಗಳಲ್ಲಿ ಸೂಳೆಮುತ್ತು ಮತ್ತು ಗರತಿಮುತ್ತು ಎಂದು ಎರಡು ಪ್ರಕಾರಗಳಿದ್ದು, ಇಬ್ಬರಿಗೂ ಇದೇ ಬಣ್ಣದ ಮುತ್ತುಗಳನ್ನೇ ಕಟ್ಟಿರುತ್ತಾರೆ. ಸೂಳೆಮುತ್ತು ಕಟ್ಟುವ ಹುಡುಗಿಯು ಅವಿವಾಹಿತ ಳಾಗಿದ್ದು ದೇವರಿಗೆ ಸಮರ್ಪಣೆಗೊಳ್ಳುತ್ತಾಳೆ. ಇವಳು ದೇವದಾಸಿಯಾಗಿ, ದೇವರ ಸೇವೆ ಮತ್ತು ಲೈಂಗಿಕ ಸೇವೆ ಎರಡನ್ನೂ ಮಾಡುತ್ತಾ ಜೀವನ ಕಳೆಯುತ್ತಾಳೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ಹಾಗೂ ಹುಣ್ಣಿಮೆಯ ದಿನಗಳಲ್ಲಿ ಅರ್ಪಣೆಯ ಸಂದರ್ಭದಲ್ಲಿ ಇವರಿಗೆ ಕೊಟ್ಟ ಹಡಲಿಗೆಯನ್ನು ಹಿಡಿದುಕೊಂಡು ಜೋಗ ಬೇಡುವುದು ಇವಳ ಕಾಯಕವಾಗಿರುತ್ತದೆ. ದೇವರೊಂದಿಗೆ ಅರ್ಪಣೆಗೊಂಡ ಮೇಲೆ ಇವರು ಬೇರೆ ಸಾಮಾನ್ಯರೊಂದಿಗೆ ಮದುವೆ ಮಾಡಿಕೊಳ್ಳುವ ಹಾಗಿಲ್ಲ. ಆದರೆ ದೇವಸ್ಥಾನದ ಪೂಜಾರಿಯಿಂದ ಹಿಡಿದು ಜನ ಸಾಮಾನ್ಯರಿಗೂ ಸಹ ಲೈಂಗಿಕ ಸೇವೆಯನ್ನು ಒದಗಿಸಬೇಕಾದದ್ದೂ ಸಹ ಇವಳ ಒಂದು ಕರ್ತವ್ಯವಾಗಿತ್ತು. ಆದರೆ ಗರತಿಮುತ್ತು ಕಟ್ಟಿಕೊಳ್ಳುವವರು ವಿವಾಹಿತರಾಗಿರುತ್ತಾರೆ. ಇವರಿಗೆ ಯಾರೂ ಮುತ್ತು ಕಟ್ಟಿರುವುದಿಲ್ಲ. ಎಲ್ಲಮ್ಮನ ಗುಡ್ಡದಿಂದ ತಾವೇ ಮುತ್ತಿನ ಸರ ತಂದು ಪೂಜೆ ಮಾಡಿ ಕೊರಳಿಗೆ ಹಾಕಿಕೊಂಡಿರುತ್ತಾರೆ. ಇದು ದೇವರಿಗೆ ಬೇಡಿಕೊಂಡ ಹರಕೆಯಾಗಿರಬಹುದು. ಇಲ್ಲಿಯೂ ಸಹ ತಲೆ ತಲಾಂತರವಾಗಿ ಈ ಮುತ್ತು ನಡೆದುಕೊಂಡು ಹೋಗುತ್ತದೆ. ಇದನ್ನು ಕಟ್ಟಿಕೊಂಡವರೂ ಸಹ ಮಂಗಳವಾರ ಮತ್ತು ಶುಕ್ರವಾರ ಜೋಗ ಬೇಡಲು ಹೋಗುತ್ತಾರೆ. ಎಲ್ಲಮ್ಮನ

ಸೇವೆಯನ್ನೂ ಮಾಡುತ್ತಾರೆ. ಅವರ್ಯಾಕೆ ಮುತ್ತು ಕಟ್ಟಿಕೊಳ್ಳುತ್ತಾರೆ ಎಂಬುದಕ್ಕೆ "ಬರೀ ತಾಳಿ ಕಟಕೊಂಡ ಜೋಗ ಬೇಡಾಕ ಹೋದ್ರ, ಯಾರೂ ಜೋಗ ಹಾಕಂಗಿಲ್ಲ. ಅದ್ಕ ಗಂಡನ ಇಟಗೊಂಡ, ಗರತಿ ಮುತ್ತು ಕಟಗೊಂಡ ಜೋಗ ಬೇಡ್ತಾರ". ಅಂತ ಗ್ರಾಮೀಣ ಭಾಗದ ಸೂಳೆಮುತ್ತು ಕಟ್ಟಿಕೊಂಡ ದೇವದಾಸಿ ಮಹಿಳೆಯೊಬ್ಬರು ಮಾಹಿತಿ ನೀಡುತ್ತಾರೆ.

ಉತ್ತರ ಕರ್ನಾಟಕದಲ್ಲಿ ಕೆಲವು ಭಾಗಗಳಲ್ಲಿ ಹೆಣ್ಣುಮಕ್ಕಳನ್ನು ದೇವದಾಸಿಯಾಗಿ ಸಮರ್ಪಿಸುವುದು ಅತೀ ಹೆಚ್ಚು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಅಧ್ಯಯನ ಕ್ಷೇತ್ರ ಜಿಲ್ಲೆಗಳಾದ ಬೆಳಗಾವಿ ಜಿಲ್ಲೆಯ ಸವದತ್ತಿ ಎಲ್ಲಮ್ಮನ ದೇವಸ್ಥಾನ, ರಾಯಭಾಗ ತಾಲೂಕಿನ ಚಿಂಚಲಿ ಮಾಯವ್ವಾ ದೇವಸ್ಥಾನ, ಅಥಣಿ ತಾಲೂಕಿನ ಕೊಕಟನೂರ(ಯಲ್ಲಮ್ಮವಾಡಿ) ಎಲ್ಲಮ್ಮ, ಮಂಗಸೂಳಿ ಮಲ್ಲಯ್ಯ, ತೆಲಸಂಗದ ಎಲ್ಲಮ್ಮ, ಸಜ್ಜಿ ಎಲ್ಲಮ್ಮ ದೇವಸ್ಥಾನಗಳು ಮತ್ತು ಬಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಬೂದ್ಯಾಳ ಎಲ್ಲಮ್ಮ, ಹಲಗಣಿ ಹನಮಪ್ಪ, ಬಸವನ ಬಾಗೇವಾಡಿ ತಾಲೂಕಿನ ಗಣಿ ಎಲ್ಲಮ್ಮ, ಬಿಜಾಪೂರ ತಾಲೂಕಿನ ಯಲಗೂರು ಹನಮಪ್ಪ ದೇವಸ್ಥಾನಗಳಿಗೆ ಹೆಣ್ಣುಮಕ್ಕಳನ್ನು ದೇವದಾಸಿಯಾಗಿ ಸಮರ್ಪಿಸುತ್ತಾರೆ. ಇದರಲ್ಲಿ ಅಥಣಿ ತಾಲೂಕಿನ ಮಂಗಸೂಳಿ ಮಲ್ಲಯ್ಯ ಮತ್ತು ಮುದ್ದೇಬಿಹಾಳ ತಾಲೂಕಿನ ಯಲಗೂರ ಹನಮಪ್ಪ ಮತ್ತು ಬಿಜಾಪೂರ ತಾಲೂಕಿನ ಹಲಗಣಿ ಹನಮಪ್ಪ ದೇವರುಗಳಿಗೆ ಸಮರ್ಪಿಸುವ ಹೆಣ್ಣುಮಕ್ಕಳನ್ನು ಮುರಳಿಯರು ಎಂದು ಕರೆಯಲಾಗುತ್ತದೆ. ಬಾಗಲಕೋಟೆ ಜಿಲ್ಲೆಯಲ್ಲಿ ಈ ರೀತಿಯ ಯಾವ ದೇವರೂ ಕಂಡು ಬರುವುದಿಲ್ಲ. ಅವರು ಹಿರೇಗುಡ್ಡ ಎಂದೇ ಹೆಸರುವಾಸಿಯಾದ ಸವದತ್ತಿ ಎಲ್ಲಮ್ಮನ ಗುಡ್ಡದಲ್ಲಿಯೇ ದೇವದಾಸಿ ಸಮರ್ಪಣೆ ಮಾಡುತ್ತಾರೆ. ಆದರೆ ಬಾಗಲಕೋಟೆಯ ತುಳಸಿಗೇರಿ ಎಂಬಲ್ಲಿ ಹನಮಂತ ದೇವಸ್ಥಾನಕ್ಕೂ ಹುಡುಗಿಯರನ್ನು ದೇವದಾಸಿಯಾಗಿ ಅರ್ಪಿಸುತ್ತಾರೆ. ಆದರೆ ಇವರು ಮಾದಿಗ ಮತ್ತು ಹೊಲೆಯ ಜಾತಿಗೆ ಸೇರಿದವರಲ್ಲ. ಇವರು 'ದಾಸರು' ಎಂಬ ಸಮುದಾಯದ ಮಹಿಳೆಯರಾಗಿರುತ್ತಾರೆ ಎಂದು ಸ್ಥಳೀಯ ಮಹಿಳೆಯರಿಂದ ಮಾಹಿತಿ ದೊರೆಯಿತು.

**ಕೋಷ್ಟಕ ೩.೭: ವಕ್ತೃವಿನ ವೈವಾಹಿಕ ಸ್ಥಿತಿ**

| ಅ.ಸಂ. | ವೈವಾಹಿಕ ಸ್ಥಿತಿ | ಸಂಖ್ಯೆ | ಶೇಕಡ |
|---|---|---|---|
| ೧ | ವಿವಾಹಿತೆ | ೦೭ | ೨೩.೩೩ |
| ೨ | ಅವಿವಾಹಿತೆ | ೨೨ | ೭೩.೩೩ |
| ೩ | ವಿಧವೆ | ೦೧ | ೩.೩೩ |
| | ಒಟ್ಟು | ೩೦ | ೧೦೦ |

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನವು ಪರಿಶೀಲನೆಗೆ ಒಳಪಡಿಸಿದ ಲೈಂಗಿಕ ಜೀತಕ್ಕೆ ಒಳಗಾದ ಮಹಿಳೆಯರಲ್ಲಿ ಶೇಕಡಾ ೨೩.೩೩ರಷ್ಟು ಮಹಿಳೆಯರು ವಿವಾಹಿತರಾಗಿದ್ದಾರೆ. ಅವರು ತಮ್ಮ ಯಾವ ವಯಸ್ಸಿನಲ್ಲಿ

ವೈವಾಹಿಕ ವ್ಯವಸ್ಥೆಗೆ ಒಳಪಟ್ಟಿದ್ದಾರೆ ಎಂದು ಕಂಡುಕೊಳ್ಳಲು ಪ್ರಯತ್ನಿಸಿದಾಗ, ವಿವಾಹಿತರಾದವರೆಲ್ಲರೂ ಬಾಲ್ಯವಿವಾಹಕ್ಕೆ ಒಳಪಟ್ಟವರೆ ಆಗಿದ್ದರು. ಅದರಲ್ಲಿ ಶೇಕಡಾ ೧೦ರಷ್ಟು ಮಹಿಳೆಯರು ೩ ರಿಂದ ೯ನೇ ವಯಸ್ಸಿನಲ್ಲಿ ಮತ್ತು ಶೇಕಡಾ ೧೬.೬೭ರಷ್ಟು ಮಹಿಳೆಯರು ತಮ್ಮ ೯ ರಿಂದ ೧೫ ವಯಸ್ಸಿನ ಒಳಗೆ ವಿವಾಹಕ್ಕೆ ಒಳಗಾದವರು ಇರುವುದು ಕಂಡು ಬರುತ್ತದೆ.

ಪರಿಶಿಷ್ಟ ಜಾತಿಯ ಕುಟುಂಬಗಳಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬಹು ನಾಜೂಕಾದ ಪರಿಸ್ಥಿತಿಗಳು ಇದ್ದದರಿಂದ ಯಾರಾದರೂ ಸಂಬಂಧಿಕರಲ್ಲಿ ಹುಡುಗ ಸಿಕ್ಕರೆ ಅಥವಾ ಒಳ್ಳೆಯ ಸಂಬಂಧಗಳು ಕೂಡಿ ಬಂದರೆ ಬೇಗ ಮದುವೆ ಮಾಡಿ ಜವಾಬ್ದಾರಿ ಮುಗಿಸಿಕೊಳ್ಳುವ ಅವಸರಕ್ಕೆ ಬಾಲ್ಯವಿವಾಹ ಮಾಡುತ್ತಾರೆ. ಹಾಗೆಯೇ ತಾವು ಇರುವ ಪರಿಸರ ಒಳ್ಳೆಯದಿಲ್ಲ, ಹೆಣ್ಣುಮಕ್ಕಳು ಹೆಚ್ಚು ಕಡಿಮೆ ಮಾಡಿಕೊಂಡರೆ ಏನು ಮಾಡುವುದು ಎಂದು ವಿಚಾರಿಸಿ, ಮದುವೆ ಅಂತ ಮಾಡಿದರೆ ಮಗಳು ತನ್ನ ಮನೆಯಲ್ಲಿ ತಾನು ಸುಖವಾಗಿ ಇರುತ್ತಾಳೆಂಬ ಧೋರಣೆಯಿಂದ ಬಾಲೆಯರ ಮದುವೆಯನ್ನು ತುಂಬಾ ಚಿಕ್ಕ ವಯಸ್ಸಿನಲ್ಲಿಯೇ ಮಾಡುವುದನ್ನು ರೂಢಿಸಿಕೊಂಡಿದ್ದಾರೆ.

ಈ ವಿವಾಹಗಳಿಂದಾಗಿ ಪ್ರಕರಣಗಳು ವಿವರಿಸುವಂತೆ, ಮದುವೆಯಾದ ಗಂಡಿಗೂ ಇವಳಿಗೂ ನಡುವೆ ವಯಸ್ಸಿನಲ್ಲಿ ತುಂಬಾ ಅಂತರವಿದ್ದು, ಆತನ ಭಾವನೆಗಳಿಗೂ ಹುಡುಗಿಯ ಭಾವನೆಗಳಿಗೂ ಹೊಂದಿಕೆಯಾಗದೇ ಭಿನ್ನಾಭಿಪ್ರಾಯಗಳು ಹುಟ್ಟಿಕೊಳ್ಳುತ್ತವೆ. ಅವನು ಮದುವೆ ವಯಸ್ಸಿಗೆ ಬಂದ ಯುವಕನಾಗಿದ್ದರೆ, ಇವಳು ಬಣ್ಣ, ಬುಗುರಿ ಹಿಡಿದುಕೊಂಡು ಆಡುವ ವಯಸ್ಸಿನವಳು. ಗಂಡನ ಲೈಂಗಿಕ ಭಾವನೆಗಳಿಗೆ ಪ್ರತಿಸ್ಪಂದಿಸದ ಇವಳ ಕುರಿತು ಆತನ ಮನಸ್ಸಿನಲ್ಲಿ ಅನಾದರ ಬೆಳೆಯುತ್ತದೆ. ಆತ ಮತ್ತೆ ತನ್ನ ವಯಸ್ಸಿಗೆ ಹೊಂದುವಂತಹ ಮತ್ತೊಂದು ಮದುವೆ ಮಾಡಿಕೊಳ್ಳುತ್ತಾನೆ. ಇಲ್ಲವೇ ವಿವಾಹಬಾಹಿರ ಸಂಬಂಧ ಬೆಳೆಸಿಕೊಳ್ಳುತ್ತಾನೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಬಾಲೆಗೆ ಗಂಡನ ಮನೆಯ ಆ ದೊಡ್ಡ ಜವಾಬ್ದಾರಿಗಳು, ಕೆಲಸಗಳು ಹಿಂಸೆ ಅನ್ನಿಸತೊಡಗುತ್ತವೆ. ಮತ್ತೆ ಕೆಲವು ಪ್ರಸಂಗಗಳಲ್ಲಿ ಅವಳ ಗಂಡ ಯಾವುದೋ ಕಾರಣಕ್ಕೆ ಸತ್ತು ಹೋದ ಸಂದರ್ಭಗಳು, ಮಾಡಿಕೊಂಡ ಗಂಡ ಗಂಡಸೇ ಅಲ್ಲದಿದ್ದ ಸಂದರ್ಭಗಳು ಎದುರಾದಾಗ, ಮಗು ಸಮಸ್ಯೆಗಳನ್ನು ಎದುರಿಸಲಾಗದೇ ತವರು ಮನೆಯನ್ನು ಸೇರುತ್ತದೆ ಅಥವಾ ಅನಾಥವಾಗುತ್ತದೆ. ಇಂತ ಮಕ್ಕಳು ತವರಿಗೂ ಭಾರವೆನಿಸುತ್ತಾರೆ. ಇಂತ ಸೂಕ್ಷ್ಮ ಪರಿಸ್ಥಿತಿಯ ಮನೆಗಳನ್ನು, ಮಕ್ಕಳನ್ನು ಗಮನಿಸುತ್ತಲೇ ಇರುವ ಘರವಾಲಿಗಳು, ಲೈಂಗಿಕ ದಂಧೆಯವರ ಮನೆಗಳು ಇವರ ಸುತ್ತ ಮುತ್ತಲೇ ಇರುತ್ತವೆ. ಅವಕಾಶ ಸಿಗುತ್ತಲೇ ಅವರನ್ನು ಟ್ರ್ಯಾಪ್ ಮಾಡಿ ಸಾಗಾಟ ಮಾಡುವಲ್ಲಿ ಯಶಸ್ವಿಯಾಗುತ್ತಾರೆ. ಹೀಗಾಗಿ ಬಾಲ್ಯ ವಿವಾಹಗಳೂ ಕೂಡ ಮಕ್ಕಳನ್ನು ಲೈಂಗಿಕ ಜೀತಕ್ಕೆ ಎಳೆಯುವ ಹಿಡುಗಾಗಿ ಪರಿಣಮಿಸಿವೆ.

**ಕೋಷ್ಟಕ ೩.೮: ವಕ್ತೃ ಲೈಂಗಿಕ ದಂಧೆಗೆ ಬರಲು ಕಾರಣ**

| ಅ.ಸಂ. | ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧ | ದೇವದಾಸಿ | ೨೨ | ೭೩.೩೩ |
| ೨ | ಬಾಲ್ಯವಿವಾಹ | ೦೫ | ೧೬.೬೭ |
| ೩ | ಸಾಗಾಣಿಕೆ | ೦೧ | ೩.೩೩ |
| ೪ | ಬಡತನ | ೦೧ | ೩.೩೩ |
| ೫ | ವರದಕ್ಷಿಣೆ | ೦೧ | ೩.೩೩ |
| | ಒಟ್ಟು | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ನಾವು ಕ್ಷೇತ್ರಕಾರ್ಯದಲ್ಲಿ ಸಂವಾದ ನಡೆಸಿದ ಲೈಂಗಿಕ ದಂಧೆಯಲ್ಲಿರುವ ಮಹಿಳೆಯರು ಯಾವ ಕಾರಣದಿಂದ ಲೈಂಗಿಕ ಜೀತಕ್ಕೆ ಒಳಗಾದಿರಿ ಎನ್ನುವ ಪ್ರಶ್ನೆಯನ್ನು ಅವರ ಮುಂದೆ ಇಟ್ಟಾಗ, ನಮಗೆ ತಿಳಿದು ಬಂದ ವಿಷಯವೆಂದರೆ, ನಮ್ಮ ಜೊತೆ ಸಂವಾದ ನಡೆಸಿದ ಹೆಚ್ಚಿನ ಸಂಖ್ಯೆಯ ಮಹಿಳೆಯರು ಅಂದರೆ, ಶೇಕಡಾ ೭೩.೩೩ರಷ್ಟು ಮಹಿಳೆಯರು ದೇವದಾಸಿ ಪದ್ಧತಿಗೆ ಒಳಪಟ್ಟಿರು ವುದರಿಂದಲೇ ಲೈಂಗಿಕ ದಂಧೆಗೆ ಒಳಪಡಬೇಕಾಯಿತು ಎಂದು ಅಭಿಪ್ರಾಯ ಪಡುತ್ತಾರೆ. ಬಾಲ್ಯ ವಿವಾಹವಾದ ಶೇಕಡಾ ೨೩.೩೩ರಷ್ಟು ಮಹಿಳೆಯರಲ್ಲಿ, ಶೇಕಡಾ ೧೬.೬೭ರಷ್ಟು ಮಹಿಳೆಯರು ಬಾಲ್ಯವಿವಾಹದಿಂದಾಗಿಯೇ ತಾವು ಈ ದಂಧೆಗೆ ಬಂದಿದ್ದೇವೆಂದು, ಶೇಕಡಾ ೩.೩೩ರಷ್ಟು ಮಹಿಳೆಯರು ಸಾಗಾಣಿಕೆಯಿಂದಾಗಿ, ಶೇಕಡಾ ೩.೩೩ರಷ್ಟು ಬಡತನದಿಂದಾಗಿ, ಶೇಕಡಾ ೩.೩೩ರಷ್ಟು ಮಹಿಳೆಯರು ವರದಕ್ಷಿಣೆಯ ಕಿರುಕುಳದಿಂದಾಗಿ ಲೈಂಗಿಕ ದಂಧೆಗೆ ಬಂದಿದ್ದೇವೆ ಎಂದು ಮಹಿಳೆಯರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಬಾಲ್ಯವಿವಾಹಕ್ಕೆ ಒಳಗಾಗಿದ್ದ ೪೨ ವಯಸ್ಸಿನ ಮಹಿಳೆಯೊಬ್ಬರು "೮ ವರ್ಷದ ನನಗೆ ೩೫ ವರ್ಷದ ವ್ಯಕ್ತಿಯೊಂದಿಗೆ ಮದುವೆ ಮಾಡಿದ್ದರು. ಋತುಮತಿಯೇ ಆಗಿರದ ನನ್ನ ಜೊತೆ ಒಬ್ಬ ಹರೆಯದ ಯುವಕ ಹೇಗೆ ಸಂಸಾರ ಮಾಡಿಯಾನು? ಆತ ಸಹಜವಾಗಿ ತನ್ನ ವಯಸ್ಸಿಗೆ ತಕ್ಕವಳ ಜೊತೆ ಮದುವೆಯಾದ. ಮನೆಯವರು ನನ್ನನ್ನು ಮುಂಬಯಿ ದಾರಿಗೆ ಹಚ್ಚಿದರು. ಗಂಡ ಅಂದರೆ ಏನು? ಸಂಸಾರ ಅಂದರೆ ಏನು? ಎಂಬುದನ್ನೇ ಅರಿಯದ ದಿನಗಳಲ್ಲಿ ದಿನಕ್ಕೆ ೧೦-೧೨ ಗಂಡಸರ ಜೊತೆ ಮಲಗುವ ಹೊಣೆ ನನ್ನದಾಗಿತ್ತು. ಮೊದಮೊದಲು ದೇಹಕ್ಕೆ ಬೆಂಕಿ ಇಟ್ಟಂತಾಗುತ್ತಿತ್ತು. ಕ್ರಮೇಣ ಒಗ್ಗಿ ಹೋಯಿತು" ಎಂದು ಹೇಳುತ್ತಾರೆ.

ಬಹುತೇಕ ದೇವದಾಸಿ ಮಹಿಳೆಯರಲ್ಲಿ ಅವರ ತಾಯಿಯೋ, ಅಜ್ಜಿಯೋ, ಅತ್ತೆಯೋ(ಅಪ್ಪನ ಸಹೋದರಿ) ಅಕ್ಕನೋ, ಒಂದೊಂದು ಪ್ರಕರಣಗಳಲ್ಲಿ ಇಡೀ ಕುಟುಂಬವೇ ಮುಂಬಯಿಯಲ್ಲಿ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಜಮಖಂಡಿ ಮೂಲದ ಹೆಣ್ಣು ಮಗಳು ಪಿ.ಯು.ಸಿ ದ್ವಿತೀಯ ವರ್ಗದಲ್ಲಿ ಓದುತ್ತಿದ್ದಳು. ಅವಳ ತಾಯಿ ಮತ್ತು ಇಬ್ಬರು ಅಕ್ಕಂದಿರು ದೇವದಾಸಿಯರೇ ಆಗಿದ್ದರು. ಅಕ್ಕಂದಿರಿಬ್ಬರನ್ನು ಚಿಕ್ಕವರಿರುವಾಗಲೇ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿಸಲಾಗಿತ್ತು. ಇವಳನ್ನು ದೇವದಾಸಿ ಮಾಡಿದ್ದರು. ಆದರೆ ಅಕ್ಕಂದಿರ ಮಕ್ಕಳನ್ನು ನೋಡಿಕೊಳ್ಳಲು ಇವಳನ್ನು ಊರಲ್ಲಿ ಬಿಟ್ಟಿದ್ದರು. ಇವರದೇ ಸ್ವಂತ ಗಳಿಸುವ ಮನೆಗಳು ಕಾಮಾಟಿಪುರದಲ್ಲಿ ಇದ್ದವು. ಅಕ್ಕಂದಿರಿಬ್ಬರು ಮದ್ಯವ್ಯಸನಿಗಳಾಗಿ, ಏಡ್ಸ್ ರೋಗಕ್ಕೆ ಬಲಿಯಾಗಿ ಸಾಯುವ ಹಂತಕ್ಕೆ ಬಂದಾಗ, ಇವಳ ತಾಯಿ ಪಿ.ಯು.ಸಿ ಓದುತ್ತಿದ್ದ ಇವಳನ್ನೆ ಎಳೆದು ತಂದು ಲೈಂಗಿಕ ದಂಧೆಗೆ ಹಚ್ಚಿದಳು. ಈಗ ಇವಳ ತಾಯಿಯೂ ಸತ್ತು ಹೋಗಿದ್ದಾರೆ. ೨೩ ವಯಸ್ಸಿನ ಈ ಹುಡುಗಿಗೆ ೨ ಮಕ್ಕಳಾಗಿವೆ. ಈಗ ತನ್ನ ಎರಡು ಮಕ್ಕಳನ್ನು ಮತ್ತು ಅಕ್ಕಂದಿರ ೪ ಮಕ್ಕಳನ್ನು ಕಟ್ಟಿಕೊಂಡು ಬದುಕು ನಡೆಸುತ್ತಿದ್ದಾಳೆ. ಅವಳ ಸೌಂದರ್ಯಕ್ಕೆ, ಆಸ್ತಿಗೆ ಮರುಳಾದವನೊಬ್ಬ ಜೊತೆಗಿದ್ದಾನೆ. ಮನೆಯಲ್ಲಿ ದಂಧೆ ಮಾಡುವ ಹುಡುಗಿಯರಿದ್ದಾರೆ. ಅವರು ಇವಳಿಗೆ ಅರ್ಧ ಲೆಕ್ಕ (ಒಬ್ಬ ಗಿರಾಕಿ ನೂರು ರೂಪಾಯಿ ಕೊಟ್ಟರೆ ಅದರಲ್ಲಿ ೫೦ ರೂಪಾಯಿ ಇವಳಿಗೆ ಕೊಡಬೇಕು)ದ ಆಧಾರದ ಮೇಲೆ ಬಾಡಿಗೆ ಕೊಡುತ್ತಾರೆ. ಮಕ್ಕಳು ಜಮಖಂಡಿಯಲ್ಲಿ ಶಾಲೆಗೆ ಹೋಗುತ್ತಿದ್ದಾರೆ. ನಾಲ್ಕು ವರ್ಷದ ಒಬ್ಬ ಮಗನನ್ನು ತನ್ನ ಹತ್ತಿರ ಇಟ್ಟುಕೊಂಡಿದ್ದಾಳೆ. "ನನ್ನ ಬದುಕು ಹೇಗೋ ಏನೋ ನಡೆಯುತ್ತದೆ, ಆದರೆ ಈ ಮಕ್ಕಳನ್ನು ಹೇಗೆ ನಿಭಾಯಿಸಲಿ" ಎಂದು ತಲೆ ಮೇಲೆ ಕೈ ಹೊತ್ತು ಕುಳಿತಿದ್ದಾಳೆ. ಆ ಮಕ್ಕಳಲ್ಲಿ ಮೂವರು ಹುಡುಗಿಯರಿದ್ದಾರೆ. ಇಡೀ ಪ್ರಕರಣವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಮುಂಬಯಿಯ ದಂಧೆಯ ಮನೆ ಅವರನ್ನೂ ಜಗ್ಗದೇ ಬಿಡದು ಎಂಬುದು ಢಾಳಾಗಿ ಕಂಡುಬರುತ್ತದೆ.

**ಕೋಷ್ಟಕ ೩.೯: ದೇವದಾಸಿಯಾಗಲು ಕಾರಣ**

| ಅ.ಸಂ. | ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧ | ಸಂಪ್ರದಾಯ | ೫ | ೧೬.೬೭ |
| ೨ | ಗಂಡು ಸಂತಾನಕ್ಕಾಗಿ | ೨ | ೬.೬೬ |
| ೩ | ಬಡತನ | ೫ | ೧೬.೬೭ |
| ೪ | ತಂದೆಯ ಅನಾರೋಗ್ಯ | ೨ | ೬.೬೬ |
| ೫ | ಅನಾರೋಗ್ಯ | ೧ | ೩.೩೩ |
| ೬ | ಹಿರಿಯರ ಹರಕೆ | ೩ | ೧೦ |

| | | | |
|---|---|---|---|
| ೭ | ಆಸ್ತಿಗಾಗಿ | ೩ | ೧೦ |
| ೮ | ಹೆತ್ತವರು ದತ್ತು ಕೊಟ್ಟಿದ್ದಕ್ಕಾಗಿ | ೧ | ೩.೩೩ |
| ೯ | ಅನ್ವಯಿಸುವುದಿಲ್ಲ | ೮ | ೨೬.೬೭ |
| | **ಒಟ್ಟು** | ೩೦ | ೧೦೦ |

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ನಾವು ಅಧ್ಯಯನ ಕ್ಷೇತ್ರದಲ್ಲಿ ಲೈಂಗಿಕ ದಂಧೆಯಲ್ಲಿ ತೊಡಗಿರುವ ಕರ್ನಾಟಕದ ಮಹಿಳೆಯರನ್ನು, ಈ ದಂಧೆಗೆ ಬರಲು ಪರೋಕ್ಷವಾಗಿ ಕಾರಣವಾಗಿರುವ ದೇವದಾಸಿ ಪದ್ಧತಿಯನ್ನು ಇವರು ಹೇಗೆ ಪ್ರವೇಶಿಸಿದರು ಎಂಬ ಕುರಿತು ಒಂದಿಷ್ಟು ವಿವರಗಳನ್ನು ಇಲ್ಲಿ ನೀಡಲು ಪ್ರಯತ್ನಿಸಲಾಗಿದೆ. ಈ ವಿವರಗಳು ಅಧ್ಯಯನ ಕ್ಷೇತ್ರದ ಮಹಿಳೆಯರೇ ನೀಡಿದ ವಿವರಗಳಾಗಿವೆ. ಆ ಪ್ರಕಾರ ಪ್ರಕರಣ ಅಧ್ಯಯನಗಳು ತಿಳಿಸುವಂತೆ, ಹೆಚ್ಚಿನ ಸಂಖ್ಯೆಯ ಮಹಿಳೆಯರು ದೇವದಾಸಿಯಾಗಲು ಅವರ ಕುಟುಂಬದ ಮತ್ತು ಜಾತಿಯ ಸಂಪ್ರದಾಯಗಳೇ ಕಾರಣ ಎಂಬುದು ಕಂಡುಬರುತ್ತದೆ. ಶೇಕಡಾ ೧೬.೬೭ರಷ್ಟು ಮಹಿಳೆಯರು ಕುಟುಂಬದ ಬಡತನಕ್ಕಾಗಿ, ಶೇಕಡಾ ೧೦ರಷ್ಟು ಮಹಿಳೆಯರು ಹಿರಿಯರು ಹರಸಿಕೊಂಡ ಹರಕೆಗಾಗಿ, ಶೇಕಡಾ ೧೦ರಷ್ಟು ಮಹಿಳೆಯರು ಕುಟುಂಬದ ಆಸ್ತಿಗಾಗಿ, ಶೇಕಡಾ ೬.೬೭ರಷ್ಟು ಗಂಡು ಸಂತಾನಕ್ಕಾಗಿ, ಶೇಕಡಾ ೬.೬೭ರಷ್ಟು ತಂದೆಯ ಅನಾರೋಗ್ಯಕ್ಕಾಗಿ, ಶೇಕಡಾ ೩.೩೩ ಸ್ವತಃ ಮಹಿಳೆಯ ಅನಾರೋಗ್ಯಕ್ಕಾಗಿ ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರು ಅವರನ್ನು ಹೆತ್ತವರು ದತ್ತು ಕೊಟ್ಟಿದ್ದಕ್ಕಾಗಿ, ದೇವದಾಸಿಯನ್ನಾಗಿ ಮಾಡಲಾಗಿದೆ ಎಂಬುದು ಕಂಡುಬರುತ್ತದೆ. ಈ ರೀತಿಯಾಗಿ ಬೇರೆ ಬೇರೆ ಕಾರಣಗಳು ಕಂಡು ಬಂದರೂ ಸಹ "ಸಾಮಾಜಿಕವಾಗಿ ಕೆಳಜಾತಿಯನ್ನು ನಿಯಂತ್ರಣದಲ್ಲಿಟ್ಟುಕೊಳ್ಳಲು ರೂಪಿತವಾದ ಹಿಂದೂ ಸಮಾಜದ ಸಂಪ್ರದಾಯಗಳು ಮತ್ತು ನಂಬಿಕೆಗಳ ಜೊತೆಗೆ ನಿರಂತರವಾಗಿ ಕಾಡುತ್ತಿದ್ದ ಬರಗಾಲಗಳು, ಭೂಮಿ ಇಲ್ಲದಿರುವುದು, ಹೊಟ್ಟೆ ಬಟ್ಟೆಗೆ ಆಗದಿರುವ ಆದಾಯ ಹೆಣ್ಣುಮಕ್ಕಳನ್ನು ದೇವದಾಸಿ ಮಾಡಿ ಮುಂಬಯಿಗೆ ಕಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು" ಎಂದು ವಿಜಯಪೂರ ತಾಲೂಕಿನ ತಾಜಪೂರದ ಹಿರಿಯರೊಬ್ಬರು ಹೇಳುತ್ತಾರೆ.

ಹೊನವಾಡ ಗ್ರಾಮದ ೭೫ ವರ್ಷದ ವಿಧವೆ ಮಹಿಳೆಯೊಬ್ಬರು "ಹುಟ್ಟುತ್ತಲೇ ನನ್ನನ್ನು ನನಗಿಂತ ೧೦-೧೨ ವರ್ಷ ದೊಡ್ಡವನಾಗಿದ್ದ ವ್ಯಕ್ತಿಯೊಂದಿಗೆ ಮದುವೆ ಮಾಡಿದ್ದರು. ಮುಂದೆ ದೊಡ್ಡವಳಾಗಿ ಗಂಡನ ಮನೆಗೆ ಕಳಿಸುವ ದಿನ ಬಂದಾಗ ನಾನು ಅತ್ಯಂತ ಸುಂದರವಾದ ಕನ್ಯೆ ಯಾಗಿದ್ದೆ. ನನ್ನ ಗಂಡ ಕರೆಯಲು ಬಂದಾಗ ನನ್ನ ತಂದೆ ತಾಯಿ ಕಳಿಸಲಿಲ್ಲ. ಅವರಿಗೆ ಅವನ ಜೊತೆ ಕಳಿಸುವುದು ಇಷ್ಟವಿರಲಿಲ್ಲ. ಅವರಿಗೆ ನಾನು ಮುಂಬಯಿಗೆ ಹೋಗಿ ಗಳಿಸುವುದು ಬೇಕಾಗಿತ್ತು. ಅದಕ್ಕೆ ನಾನು ಒಪ್ಪದಿದ್ದಾಗ ಹೊಡೆದು ಬಡಿದು ತೊಂದರೆ ಕೊಡತೊಡಗಿದರು. ನಾನು ಅದಕ್ಕೂ ಬಗ್ಗದೇ ಹೋದಾಗ, "ನೀನು ಗಂಡನ ಮನೆಗೇ ಹೋಗಬೇಕೆಂದಿದ್ದರೆ ನಮ್ಮ ಮನೆಯ ಒಂದು

ಚೂರೂ ಬಟ್ಟೆಯನ್ನು ನೀನು ಹಾಕಿಕೊಂಡು ಹೊಗಬೇಡ" ಎಂದು ಎಚ್ಚರಿಕೆ ನೀಡಿದ್ದರು. ಕೊನೆಗೆ ಒಂದು ದಿನ ರಾತ್ರಿ ಯಾರಿಗೂ ಗೊತ್ತಾಗದಂತೆ ಅಪ್ಪನ ಅಂಗಿ-ಧೋತರವನ್ನು ಉಟ್ಟುಕೊಂಡು ೯ ಕಿ ಮೀ ದೂರವಿರುವ ಗಂಡನ ಮನೆ ಸೇರಿಕೊಂಡಿದ್ದೆ. ಇಲ್ಲದಿದ್ದರೆ ಅವರು ನನ್ನನ್ನು ಸೂಳೆ ಮಾಡುತ್ತಿದ್ದರು". ಎಂದು ಹಳೆಯ ನೆನಪನ್ನು ಮೆಲಕು ಹಾಕುತ್ತಾರೆ.

"ಸುಡುವ ಬಿಸಿಲಲ್ಲಿ ಎಷ್ಟು ದೂರ ನಡೆದು ಹೋದರೂ, ಒಂದು ರೂಪಾಯಿ ಆದಾಯ ಹುಟ್ಟುತ್ತಿರಲಿಲ್ಲ. ರೈತರ ಹೊಲದಲ್ಲಿ ಬೆಳೆದ ಹಾಳು ಹತ್ತಿ (ರೈತರು ಬಿಡಿಸಿಕೊಂಡು ಬಿಟ್ಟ ಮೇಲೆ ಅಳಿದುಳಿದ ಮತ್ತು ಗಿಡದ ಕೆಳಗೆ ಬಿದ್ದ ಹತ್ತಿ) ತಂದು ಮಾರಿ ಬಟ್ಟೆ ಬರೆ ಮಾಡಿಕೊಳ್ಳುತ್ತಿದ್ದೆವು. ರಾತ್ರಿ ಕತ್ತಲಾದಾಗ ರೈತರ ಹೊಲಗಳಿಗೆ ಹೊಕ್ಕು ಹಸಿ ತೆನೆ ಕದ್ದು ತಂದು ತಿನ್ನುತ್ತಿದ್ದೆವು. ಮಣಕಾಳು (ರಾಶಿಯಾದ ನಂತರ ಕಣದ ದಂಡೆಯ ಮಣ್ಣಿನಲ್ಲಿ ಕೂಡಿಕೊಂಡಿದ್ದ ಕಾಳುಗಳು), ಎತ್ತುಗಳ ಸೆಗಣಿಯಲ್ಲಿ ಬಿದ್ದ ಜೋಳದ ಕಾಳುಗಳನ್ನು ತೊಳೆದು ಆರಿಸಿ ಹಿಟ್ಟು ಮಾಡಿ ರೊಟ್ಟಿ ಮಾಡಿ ತಿಂದ ದಿನಗಳಿವೆ. ಆಗೆಲ್ಲ ಹೊಟ್ಟೆ ಪಾಡಿಗಾಗಿ ಇಟ್ಟಂಗಿ ಬಟ್ಟಿ, ರೋಡ್ ಕೆಲಸ, ಬಿಲ್ಡಿಂಗ್ ಕಟ್ಟುವ ಕೆಲಸಗಳನ್ನು ಹುಡುಕಿಕೊಂಡು ಮಹಾರಾಷ್ಟ್ರದ ಸೊಲ್ಲಾಪುರ, ಕೊಲ್ಲಾಪೂರ, ಕರಾಡ, ಇಟಾನಗರ, ನಾಗಪೂರ, ಪುಣೆ, ಮುಂಬಯಿಗೆ ಗುಳೆ ಹೋಗುತ್ತಿದ್ದೆವು. ಹೆಣ್ಣುಮಕ್ಕಳನ್ನು ಜೊತೆಗಿಟ್ಟುಕೊಳ್ಳಲಾರದೇ ಈಗಾಗಲೇ ಮುಂಬಯಿಯ, ಪುಣೆಯ ಬೀವಂಡಿಯ ವೇಶ್ಯಾಗೃಹ ಸೇರಿದ್ದ ಅಜ್ಜಿಯೋ, ಅತ್ತೆಯೋ, ನೆರೆಮನೆಯ, ಪಕ್ಕದೂರಿನ ದೇವದಾಸಿಯೋ, ಸಂಬಂಧಿ ಹೆಣ್ಣುಮಗಳೋ ಹೀಗೆ ಯಾರೋ ಸಿಕ್ಕವರೊಡನೆ ಗಳಿಸಲು ಕಳಿಸಿಬಿಡುತ್ತಿದ್ದೆವು. ಅದಕ್ಕಾಗಿಯೇ ಅವರನ್ನು ದೇವದಾಸಿ ಮಾಡುತ್ತಿದ್ದೆವು" ಅನ್ನುತ್ತಾರೆ ವಿಜಯಪೂರ ಜಿಲ್ಲೆಯ ಕಣ್ಣು ಕಾಣದ ೯೦ರ ವೃದ್ಧ ಮಹಿಳೆಯೊಬ್ಬರು.

ವಿಜಯಪೂರ ಜಿಲ್ಲೆಯ ಬಸವನ ಬಾಗೇವಾಡಿ, ಮುದ್ದೇಬಿಹಾಳ ಮತ್ತು ವಿಜಯಪೂರ ತಾಲೂಕಿನ ಹಲವಾರು ಹಳ್ಳಿಗಳಿಂದ, ಬೆಳಗಾವಿ ಜಿಲ್ಲೆಯ ಅಥಣಿ, ರಾಯಭಾಗ ತಾಲೂಕುಗಳಿಂದ, ಬಾಗಲಕೋಟೆ ಜಿಲ್ಲೆಯ ಜಮಖಂಡಿ, ಮುಧೋಳದ ಜನರು ಈಗಲೂ ಮಹಾರಾಷ್ಟ್ರಕ್ಕೆ ಗುಳೆ ಹೋಗುತ್ತಾರೆ. "ಈ ಊರಲ್ಲಿ ಸಂಜೀತನಕ ದುಡಿದರೂ ೧೦೦ ರೂಪಾಯಿ ಹುಟ್ಟಂಗಿಲ್ಲ. ಅಲ್ಲಿ ೪೦೦ ರೂಪಾಯಿ ನಮಗ, ೨೦೦ ರೂಪಾಯಿ ಗಂಡಾಳಿಗೆ ಸಿಗತೈತಿ. ಇದ ಟೇಮದಾಗ ಯಾಡ ದುಡ್ಡು ಆಗ್ತಾವು". ಅಂತ ಮುದ್ದೇಬಿಹಾಳ ತಾಲೂಕಿನಿಂದ ಸಾಂಗ್ಲಿಗೆ ಗುಳೆ ಹೋಗಿದ್ದ ಹೆಣ್ಣುಮಗಳು ನಿಟ್ಟುಸಿರಿಡುತ್ತಾ ಹೇಳುತ್ತಾಳೆ.

"ಊರಲ್ಲಿ ಕೆಲಸವಿದ್ದರೂ, ಭೂಮಿ ಇಲ್ಲದ ನಾವು ಎಷ್ಟು ದಿನ ಅಂತ ಉಳ್ಳವರ ಕೆಳಗೆ ದುಡಿಯಬೇಕು. ಅವರೆಷ್ಟು ಕೊಡುತ್ತಾರೆ. ಹೊಟ್ಟೆಗೆ ಆದರೆ, ಎಣ್ಣೆಗೆ ಇಲ್ಲ. ಎಣ್ಣೆಗೆ ಆದರೆ, ಬಟ್ಟೆಗೆ ಇಲ್ಲ. ಅವರು ಉಂಡು ಬಿಟ್ಟ ಮುಸುರೆ, ಉಟ್ಟು ಬಿಟ್ಟ ಹರಕು ಸೀರೆ ಇವೇ ನಮ್ಮ ಆಸ್ತಿಗಳು. ನಮಗೂ ಅವರಂತೆ ಬಂಗಾರ ಹಾಕ್ಕೋಬೇಕು, ಚಂದ ಚಂದ ಸೀರೆ ಉಡಬೇಕು ಅಂತ ಆಸೆ ಇರುತ್ತದೆ. ಅದಕ್ಕೇ ಈ ಊರಲ್ಲಿ ಇದ್ದು ಏನು ಮಾಡುವುದು ನಾಲ್ಕು ದುಡ್ಡು ಸಿಗುತ್ತದೆ ಅಂದ್ರು,

ಊರು ಬಿಟ್ಟು ಮಿರ್ಜಿಗೆ(ಮಿರಜ್) ಹೋಗಿಬಿಟ್ಟೆ" ಎಂದು ಅಥಣಿ ತಾಲೂಕಿನ ಅಜ್ಜಿಯೊಬ್ಬರು ನಗುತ್ತಾ ಹೇಳುತ್ತಾರೆ..

ಹಿಂದೂ ಸಮಾಜದ ಕರಿಛಾಯೆ ಸಾಂಪ್ರದಾಯಿಕವಾಗಿ ಕಟ್ಟಿಹಾಕಿದ್ದರೆ, ಊರ ಯಜಮಾನಿಕೆ ಜೀತಕ್ಕೆ ನಿಲ್ಲುವಂತೆ ಮಾಡಿದ್ದವು. ಆರ್ಥಿಕವಾಗಿ ಭೂರಹಿತರಾಗಿ, ಸಾಮಾಜಿಕವಾಗಿ ಕೆಳವರ್ಗರಾದವರಿಗೆ, ಒಂದು ಕಡೆ ಹಣ ಗಳಿಸುವ ಅವಕಾಶ ಒದಗಿಸಿದ ಮುಂಬಯಿ ನಗರ ಅವರಿಗರಿವಿಲ್ಲದಂತೆಯೇ ಒಂದು ಕುಲದ ಮಕ್ಕಳು ಮತ್ತು ಮಹಿಳೆಯರನ್ನು ಇಲ್ಲವಾಗಿಸತೊಡಗಿದ್ದು ಇಂದಿಗೂ ಅವರಿಗೇ ಅರ್ಥವಾಗದ ಸಂಗತಿಯಾಗಿದೆ.

**ಕೋಷ್ಟಕ ೩.೧೦: ದೇವದಾಸಿಯಾದಾಗ ನಿಮ್ಮ ವಯಸ್ಸು ಎಷ್ಟು?**

| ಅ.ಸ. | ವಯೋಮಾನ | ಸಂಖ್ಯೆ | ಶೇಕಡ |
|---|---|---|---|
| ೧ | ೭ ಕ್ಕಿಂತ ಮೊದಲು | ೬ | ೨೦ |
| ೨ | ೭ ರಿಂದ ೯ | ೭ | ೨೩.೩೩ |
| ೩ | ೧೦ ರಿಂದ ೧೨ | ೬ | ೨೦ |
| ೪ | ೧೩ ರಿಂದ ೧೫ | ೩ | ೧೦ |
| ೭ | ಅನ್ವಯಿಸುವುದಿಲ್ಲ | ೮ | ೨೬.೬೭ |
| | **ಒಟ್ಟು** | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನದ ಒಟ್ಟು ಮಹಿಳೆಯರಲ್ಲಿ ದೇವದಾಸಿ ಪದ್ಧತಿಗೆ ಒಳಗಾದ ಮಹಿಳೆಯರ ವಯಸ್ಸನ್ನು ಗಮನಿಸಿದಾಗ ಮೇಲಿನ ಕೋಷ್ಟಕದ ಪ್ರಕಾರ ಶೆಕಡಾ ೨೩.೩೩ರಷ್ಟು ಮಹಿಳೆಯರು ೭ ರಿಂದ ೯ ವಯೋಮಾನದವರು, ಶೇಕಡಾ ೨೦ರಷ್ಟು ಮಹಿಳೆಯರು ತಮ್ಮ ೭ನೇ ವಯಸ್ಸಿಗಿಂತ ಮೊದಲು, ಶೇಕಡಾ ೨೦ರಷ್ಟು ಮಹಿಳೆಯರು ೧೦ ರಿಂದ ೧೨ ವಯಸ್ಸಿನವರು ಮತ್ತು ಶೇಕಡಾ ೧೦ರಷ್ಟು ಮಹಿಳೆಯರು ೧೩ ರಿಂದ ೧೫ ವಯೋಮಾನದವರಾಗಿದ್ದಾರೆ.

ಇದನ್ನು ಅವಲೋಕಿಸಿದಾಗ ದೇವದಾಸಿ ಸಂಪ್ರದಾಯಕ್ಕೆ ಬಲಿಯಾದವರು ಮಹಿಳೆಯರೇ ಆಗಿರಲಿಲ್ಲ ಅವರೆಲ್ಲ ಅಪ್ರಾಪ್ತ ವಯಸ್ಸಿನ ಮಕ್ಕಳೇ ಆಗಿದ್ದರು. ಆ ಪದ್ಧತಿ ಏನೆಂದು ತಿಳಿಯಲು ಅಸಮರ್ಥರಾದ, ಧಿಕ್ಕರಿಸಲು ಅಶಕ್ತರಾದ ಅಮಾಯಕ ಮಕ್ಕಳು ತಮಗೇ ಗೊತ್ತಿಲ್ಲದಂತೆ ವೇಶ್ಯಾಗೃಹಗಳಿಗೆ ಬುಕ್ ಆಗಿರುತ್ತಿದ್ದವು. "ಮುತ್ತು ಕಟ್ಟಬೇಕಾದ್ರ ಹೋಳಿಗಿ ಮಾಡ್ತಿದ್ರು. ಹೊಸ ಬಳಿ ಹೊಸ ಸೀರಿ. ಹೂವು ಮುಡಿಸುತ್ತಿದ್ದರು. ಆ ಹೋಳಿಗಿ ಆಸಿಗಿ ನಾನು ಮುತ್ತು ಕಟ್ಟಿಸಿಕೊಳ್ಳಾಕ ಕುತ್ಕಂಡಿದ್ಯಾ. ನನಗೇನು ಗೊತ್ತಿತ್ತು ಮುಂದ ಹಿಂಗಾಕ್ಕೈತೆಂತ" ಅಂತ ಬಸವನ ಬಾಗೇವಾಡಿ ತಾಲೂಕಿನ ದೇವದಾಸಿ

ಮಹಿಳೆಯೊಬ್ಬರು ನಗುನಗುತ್ತಾ ನುಡಿಯುತ್ತಾರೆ. ಪುನೇಕರ್ ಮತ್ತು ರಾವ್ ಅವರ "ಪ್ರಾಸ್ಟಿಟ್ಯೂಟ್ಸ್ ಇನ್ ಬೆಂಗಳೂರು ಸಿಟಿ(೧೯೬೨)ಯ ಅಧ್ಯಯನವು ಅಧ್ಯಯನಕ್ಕೆ ಒಳಪಡಿಸಿದ ೩೫೦ ವೇಶ್ಯೆಯರಲ್ಲಿ ೧೯೬ ಮಹಿಳೆಯರು ಕರ್ನಾಟಕದವರು ಮತ್ತು ೩೫೦ ಮಹಿಳೆಯರಲ್ಲಿ ೧೩೦ ಮಹಿಳೆಯರು ದೇವದಾಸಿ ಪದ್ಧತಿಗೆ ಒಳಗಾದವರಾಗಿದ್ದರು. ಇವರು ಬೆಳಗಾವಿ, ಬಿಜಾಪೂರ, ಗುಲ್ಬರ್ಗಾ ಮತ್ತು ಧಾರವಾಡ ನಗರಗಳಿಂದ ಮುಂಬೈಗೆ ವಲಸೆ ಬಂದವರಾಗಿದ್ದರು" ಎಂದು ತಿಳಿಸುತ್ತದೆ(ಜೋಗನ್ ಶಂಕರ್ ಮತ್ತು ಎ. ಎಸ್. ಮನವಾಡೆ).

### ೩.೪. ಕೌಟುಂಬಿಕ ಮತ್ತು ಸಾಮುದಾಯಿಕ ಪರಿಸರ

ಕುಟುಂಬವು ಸಮಾಜದ ಒಂದು ಬಹುಮುಖ್ಯ ಸಾಮಾಜಿಕ ಸಂಸ್ಥೆ. ಒಬ್ಬ ವ್ಯಕ್ತಿಯ ಬೆಳವಣಿಗೆಯಲ್ಲಿ ಅವರ ಕುಟುಂಬದ ಸ್ಥಿತಿಗತಿಗಳ ಪ್ರಭಾವ, ಸದಸ್ಯರ ಪಾತ್ರ ಅಪಾರ ಪರಿಣಾಮವನ್ನು ಬೀರುತ್ತವೆ. ಹಾಗೆಯೆ ಅವರು ವಾಸಿಸುವ ಪರಿಸರವೂ ಸಹ ಗಮನೀಯವಾದಂತಹ ಪರಿಣಾಮವನ್ನು ಬೀರುತ್ತದೆ. ಹಾಗಾಗಿ ಲೈಂಗಿಕ ಜೀತಕ್ಕೆ ಒಳಪಟ್ಟ ಬಾಲೆಯರ ಸ್ಥಿತಿಗೆ ಕೌಟುಂಬಿಕ ಮತ್ತು ಪರಿಸರದ ಪಾತ್ರವನ್ನು ಈ ಕೆಳಗಿನ ಕೋಷ್ಟಕಗಳು ಮತ್ತು ಪ್ರಕರಣ ಅಧ್ಯಯನಗಳ ಮೂಲಕ ತಿಳಿದುಕೊಳ್ಳಲು ಪ್ರಯತ್ನ ಮಾಡಲಾಗಿದೆ.

ನಮ್ಮ ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ಮಹಿಳೆಯರಲ್ಲಿ ಶೇಕಡಾ ೭೩.೩೩ರಷ್ಟು ಮಹಿಳೆಯರು ದೇವದಾಸಿ ಪದ್ಧತಿಗೆ ಒಳಪಟ್ಟಿರುವ ಕುರಿತು ನಾವು ಈ ಹಿಂದೆ ಕಂಡುಕೊಂಡಿದ್ದೇವೆ. ಅದರಲ್ಲಿ ಶೇಕಡಾ ೭೦ರಷ್ಟು ಮಹಿಳೆಯರ ಮನೆಗಳಲ್ಲಿ ಇವಳಿಗಿಂತ ಮೊದಲೇ ದೇವದಾಸಿ ಇದ್ದರು ಎಂಬುದು ಮತ್ತು ಅದರಲ್ಲಿ ಶೇಕಡಾ ೩.೩೩ರಷ್ಟು ಕುಟುಂಬಗಳಲ್ಲಿ ಮಾತ್ರ ದೇವದಾಸಿ ಇರಲಿಲ್ಲವೆಂಬುದು ತಿಳಿದು ಬರುತ್ತದೆ. ಹೀಗಾಗಿ ಕುಟುಂಬದ ಸದಸ್ಯರಿಗೆ ದೇವದಾಸಿ ಪದ್ಧತಿಯು ಹೊಸದು ಅನ್ನಿಸುವುದಿಲ್ಲ. ಈಗಾಗಲೇ ಒಬ್ಬರು ಇರುವುದರಿಂದ ಅವರಿಂದ ಬಂದ ಆರ್ಥಿಕ ಅನುಕೂಲತೆಗಳನ್ನು ಕುಟುಂಬದ ಸದಸ್ಯರು ಅನುಭವಿಸಿರುತ್ತಾರೆ. ಹಾಗಾಗಿ ಅವಳ ನಂತರ ಮತ್ತೊಬ್ಬಳು ಆ ಸ್ಥಾನವನ್ನು ತುಂಬಬೇಕು ಎಂಬುದು ಕುಟುಂಬದ ಸದಸ್ಯರ ಆಸೆಯಾಗಿರುತ್ತದೆ. ಅಲ್ಲದೇ ಸ್ವತಃ ದೇವದಾಸಿಯಾದ ಮಹಿಳೆಗೆ ತನ್ನ ಜೊತೆಗೆ ಒಬ್ಬಳು ಇರಬೇಕು, ತಾನು ಸತ್ತ ನಂತರ ಈ ಪದ್ಧತಿ ಮುಗಿದು ಹೋಗಬಾರದು ಎಂಬ ಸಾಂಪ್ರದಾಯಿಕ ಮತ್ತು ಧಾರ್ಮಿಕ ನಂಜಿಕೆಗಳು ಭಾವನೆಗಳು ಹಿರಿಯ ದೇವದಾಸಿಯರ ಮನದಲ್ಲಿ ಇರುವುದು ಕಂಡುಬರುತ್ತದೆ. ಅದರ ಫಲವಾಗಿ ತಮ್ಮ ಮಕ್ಕಳನ್ನೋ, ಮೊಮ್ಮಕ್ಕಳನ್ನೋ ದೇವದಾಸಿ ಮಾಡುವುದನ್ನು ನಾವು ಕಾಣುತ್ತೇವೆ.

**ಕೋಷ್ಟಕ ೩.೧೧: ವಕ್ತೃಗಳಿಗಿಂತ ಮೊದಲು ಅವರ ಮನೆಗಳಲ್ಲಿ ದೇವದಾಸಿ ಇದ್ದವರು**

| ಅ.ಸ. | ಸಂಬಂಧಗಳು | ಸಂಖ್ಯೆ | ಶೇಕಡ |
|---|---|---|---|
| ೧ | ತಾಯಿ | ೦೪ | ೧೩.೩೩ |
| ೨ | ಅಜ್ಜಿ | ೦೭ | ೨೩.೩೩ |
| ೩ | ಅತ್ತೆ | ೦೩ | ೧೦ |
| ೪ | ಚಿಕ್ಕಮ್ಮ | ೦೪ | ೧೩.೩೩ |
| ೫ | ಅಕ್ಕ | ೦೩ | ೧೦ |
| ೬ | ಇತರೆ( ಹೆಸರಿಸಿರಿ) | ೦೦ | ೦೦ |
| ೭ | ಅನ್ವಯಿಸುವುದಿಲ್ಲ | ೦೯ | ೩೦ |
| | **ಒಟ್ಟು** | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ದೇವದಾಸಿಯರಲ್ಲಿ ಮೇಲಿನ ಕೋಷ್ಟಕದಲ್ಲಿ ವಿವರಿಸಿರುವಂತೆ, ಮಹಿಳೆಯ ಅಜ್ಜಿಯಂದಿರು (ತಾಯಿಯ ತಾಯಿ ಮತ್ತು ತಂದೆಯ ತಾಯಿ) ಅತೀ ಹೆಚ್ಚು ಅಂದರೆ ಶೇಕಡಾ ೨೩.೩೩ರಷ್ಟು ದೇವದಾಸಿಯರಾಗಿದ್ದರು. ಅದರ ನಂತರ ಶೇಕಡಾ ೧೩.೩೩ರಷ್ಟು ಮಹಿಳೆಯರು ಅವರ ತಾಯಂದಿರು, ೧೩.೩೩ರಷ್ಟು ಮಹಿಳೆಯರು ಚಿಕ್ಕಮ್ಮಂದಿರು, ಶೇಕಡಾ ೧೦ರಷ್ಟು ಮಹಿಳೆಯ ಅಕ್ಕ ಮತ್ತು ಶೇಕಡಾ ೧೦ ಮಹಿಳೆಯರ ಅತ್ತೆಯಂದಿರು (ತಂದೆಯ ಸಹೋದರಿ) ದೇವದಾಸಿಯರಿದ್ದರು ಎಂಬುದು

**ಲಂಬಚಿತ್ರ ೩.೧: ವಕ್ತೃಗಳಿಗಿಂತ ಮೊದಲು ಅವರ ಮನೆಗಳಲ್ಲಿ ದೇವದಾಸಿ ಇದ್ದವರು**



ಕಂಡುಬಂದಿದೆ. ಇಲ್ಲಿ ನಾವು, ದೇವದಾಸಿ ಸಮರ್ಪಣೆಯ ಪ್ರಮಾಣ ತಲೆಮಾರುಗಳಿಂದ ತಲೆಮಾರುಗಳಿಗೆ ಕಡಿಮೆಯಾಗುತ್ತಾ ಬಂದಿದೆ ಎಂಬುದನ್ನು ಗಮನಿಸಬಹುದು. ಹಾಗಾಗಿ ಬಾಲೆಯರ ಲೈಂಗಿಕ ಜೀತಕ್ಕೆ ಕಾರಣವಾಗಿರುವ ಬಹುಮುಖ್ಯ ಸಮಸ್ಯೆಯಲ್ಲಿ ಇಳಿಮುಖ ಕಂಡುಬರುತ್ತಿದೆ ಎನ್ನಬಹುದು. ಅದನ್ನು ಲಂಬಚಿತ್ರದ ಮೂಲಕ ಗಮನಿಸಬಹುದು.

ನಮ್ಮ ಅಧ್ಯಯನದ ಮೂಲಕ ತಿಳಿದು ಬಂದ ಬಹು ಮುಖ್ಯ ಅಂಶವೆಂದರೆ, ಹೀಗೆ ದೇವದಾಸಿಯರಿದ್ದಂತಹವರಲ್ಲಿ ಅವರೂ ಸಹ ಇವರಿಗಿಂತ ಮೊದಲೇ ಕಾಮಾಟಿಪೂರ, ಬೀವಂಡಿ, ಪುಣೆ, ಸಾಂಗ್ಲಿಗಳ ವೇಶ್ಯಾಗೃಹಗಳಲ್ಲಿ ಲೈಂಗಿಕ ಜೀತಕ್ಕಿದ್ದರು ಎಂಬುದಾಗಿದೆ. ಇಂತವರು ತಮ್ಮ ಕುಟುಂಬದ ಮಕ್ಕಳನ್ನು, ತಮ್ಮ ಮಕ್ಕಳನ್ನು ದೇವಾದಸಿ ಮಾಡಿ, ಕರೆದು ತಂದು ಜೀತಕ್ಕೆ ಇಟ್ಟುಕೊಂಡಿದ್ದಾರೆ. ತಮ್ಮ ಮನೆಯ ಸುತ್ತಮುತ್ತಲಿನ ಹುಡುಗಿಯರನ್ನು ತಮ್ಮ ಹಿಂದೆ ಬರಲು ಪ್ರೇರೇಪಿಸಿದ್ದಾರೆ ಎಂಬುದು ಕಂಡುಬರುತ್ತದೆ. ಹಾಗೆಯೇ ಅಧ್ಯಯನಕ್ಕೊಳಪಟ್ಟ ಮಹಿಳೆಯರಲ್ಲಿ ಶೇಕಡಾ ೨೦ರಷ್ಟು ಮಹಿಳೆಯರು ಲೈಂಗಿಕ ಜೀತಕ್ಕೆ ಬರುವುದಕ್ಕಿಂತ ಮೊದಲೇ ಇಂತವರೊಂದಿಗೆ ರೆಡ್‌ಲೈಟ್ ಏರಿಯಾಗಳಿಗೆ ಬಂದು ಹೋದ ಮತ್ತು ಅಲ್ಲಿಯೇ ಇದ್ದು ರೂಡಿ ಇರುವ ಕುರಿತು ಅಧ್ಯಯನ ಕಂಡು ಕೊಳ್ಳುತ್ತದೆ. ಹೀಗೆ ಕರೆದುಕೊಂಡು ಬರುವುದರ ಹಿಂದೆ, ಆ ಮಕ್ಕಳಿಗೆ ಬಾಲ್ಯದಿಂದಲೆ ಆ ಏರಿಯಾದ ಪರಿಚಯ ಮಾಡಿಸುವುದು ಆಗಿರಬಹುದು. ಅಥವಾ ಮಕ್ಕಳನ್ನು ಬಿಡಲು ಬೇರೆ ಎಲ್ಲಿಯೂ ವ್ಯವಸ್ಥೆ ಇರದೇ ಹೋದಾಗ ತಮ್ಮ ಜೊತೆ ಇಟ್ಟುಕೊಂಡಿರಬಹುದು. ಹಾಗೆ ಇಟ್ಟುಕೊಂಡಂತಹ ಸಂದರ್ಭಗಳಲ್ಲಿ ಮಕ್ಕಳ ಮನಸ್ಸಿನ ಮೇಲೆ ಅಲ್ಲಿಯ ಪರಿಸರ ದುಷ್ಪರಿಣಾಮವನ್ನು ಬೀರಿರುವ ಸಾಧ್ಯತೆಗಳು ದಟ್ಟವಾಗಿವೆ.

ಅಲ್ಲದೇ ಕೆಲವು ಘರವಾಲಿಗಳು ತಮ್ಮ ಸುತ್ತಮುತ್ತಲಿನ ಗ್ರಾಮಗಳಲ್ಲಿ ಆರ್ಥಿಕ ಸಮಸ್ಯೆ ಇರುವ ಕುಟುಂಬಗಳಿಗೆ ಹಣ ನೀಡಿ, ಅವರ ಮನೆಯ ಹೆಣ್ಣುಮಕ್ಕಳನ್ನು ಅತೀ ಚಿಕ್ಕ ವಯಸ್ಸಿನಲ್ಲಿಯೇ (ಋತುಮತಿಯಾಗುವುದಕ್ಕಿಂತ ಮೊದಲೇ) ತಮ್ಮ ದಂಧೆಯ ಮನೆಗಳಿಗೆ ಸಾಗಿಸಿಕೊಂಡು ಬಂದು ಸಾಕಿಕೊಂಡಿದ್ದಿದೆ. ಉದಾಹರಣೆಗಾಗಿ ಅಂತಹ ಎರಡು ಪ್ರಕರಣಗಳನ್ನು ನಾವು ಇಲ್ಲಿ ನೋಡಬಹುದು.

ಒಬ್ಬಳು ಯುವತಿಗೆ, ತಾನು ಅವಳ ಅತ್ತೆಯಾಗಬೇಕೆಂದು ಹೇಳಿಕೊಳ್ಳುವ ಘರವಾಲಿಯು. ಆ ಯುವತಿಯ ಪಕ್ಕದ ಊರಿನ ಘರವಾಲಿಯಾಗಿದ್ದಾಳೆ. ಘರವಾಲಿಯು ಋತುಮತಿಯಾಗುವ ಮೊದಲೇ ಇವಳನ್ನು ಇಲ್ಲಿ ಕರೆದುಕೊಂಡು ಬಂದು ಇಟ್ಟುಕೊಂಡಿದ್ದಾಳೆ. ಘರವಾಲಿ ಹೇಳಿದಂತೆ. ಅವಳಿಗೆ ಅಡುಗೆ ಮಾಡುವುದು. ಅಂಗಡಿಗೆ ಹೋಗಿ ರೇಶನ್ನ ತರುವುದು. ತರಕಾರಿ ತರುವುದನ್ನು ಈ ಯುವತಿ ಮಾಡುತ್ತಿದ್ದಳು. ಋತುಮತಿಯಾದ ನಂತರ ಹುಡುಗಿಯನ್ನು ಲೈಂಗಿಕ ಚಟುವಟಿಕೆಗೆ ಹಚ್ಚಿದ್ದಾಳೆ. ಯುವತಿಯು ಹೇಳುವ ಹಾಗೆ "ನನ್ನಪ್ಪ ಡ್ರೈವರ್ ಆಗಿದ್ದರು, ಒಂದು ಸಾರಿ ಅಪಘಾತದಲ್ಲಿ ಅವರು ತಮ್ಮ ಕಾಲನ್ನು ಕಳೆದುಕೊಂಡರು. ಹೀಗಾಗಿ ದುಡಿಯುವ ಕೈ ಕಳೆದುಕೊಂಡು ನನ್ನ ತಾಯಿ ಮತ್ತು ನಾನು ಕೂಲಿಗೆ ಹೋಗುತ್ತಿದ್ದೆವು. ಇವಳು ನನ್ನ ಅತ್ತೆ ಏನಲ್ಲ. ನಮ್ಮ ಪಕ್ಕದ ಊರಿನವಳು. ಇವಳಿಗೆ ಇಬ್ಬರು ತಮ್ಮಂದಿರಿದ್ದಾರೆ. ಅವರು ಊರೂರು ಅಲೆಯುತ್ತಾ ನಮ್ಮಂತ ಪರಿಸ್ಥಿತಿ ಇರುವವರನ್ನು

ಹುಡುಕುತ್ತಿರುತ್ತಾರೆ. ಅಂತ ಒಂದು ಸಂದರ್ಭದಲ್ಲಿ ನಾನು ಅವರ ಕಣ್ಣಿಗೆ ಬಿದ್ದೆ. ನನ್ನ ತಂದೆಯ ಕೈಗೆ ೧೫೦೦೦ ರೂಪಾಯಿ ಇಟ್ಟು ನನ್ನನ್ನು ಇಲ್ಲಿಗೆ ಕರೆದು ತಂದಿದ್ದಾರೆ. ಅದೆಲ್ಲ ಸಾಲ ತೀರಿದೆ. ಈಗ ತಮ್ಮನ ಮದುವೆಗಾಗಿ ೧,೦೦,೦೦೦ ಸಾಲ ಮಾಡಿದ್ದೇನೆ. ಅದನ್ನು ತೀರಿಸುವುದಕ್ಕಾಗಿ ಮತ್ತೆ ಬಂದಿದ್ದೇನೆ". ಎಂದು ಹೇಳುತ್ತಾಳೆ. ಪೊಲೀಸರಿಂದ ಚಿಕ್ಕ ಹುಡುಗಿಯರನ್ನು ಮುಚ್ಚಿಟ್ಟುಕೊಳ್ಳಲು ಈ ರೀತಿ, "ನನ್ನ ಮಗಳು, ನನ್ನ ತಮ್ಮನ ಮಗಳು, ಊರಿನಿಂದ ಬಂದಿದ್ದಾಳೆ, ಮತ್ತೆ ಹೋಗುತ್ತಾಳೆ" ಎಂದೇ ಘರವಾಲಿಗಳು ಸುಳ್ಳು ಹೇಳುತ್ತಾರೆ ಎಂದು ಯುವತಿಯು ಹೇಳುತ್ತಾಳೆ.

ಇನ್ನೊಂದು ಪ್ರಕರಣದಲ್ಲಿ ಮಲತಾಯಿಯ ಮಗಳು, ತನಗೆ ಮಕ್ಕಳಾಗದೇ ಹೋದಾಗ ತನ್ನ ತಂಗಿಯನ್ನೇ(ತನ್ನ ಎರಡನೇ ತಾಯಿಯ ಮಗಳು) ದತ್ತು ತೆಗೆದುಕೊಂಡಿರುತ್ತಾಳೆ. ಅವಳು ಸಾಂಗ್ಲಿಯಲ್ಲಿ ಲೈಂಗಿಕ ಚಟುವಟಿಕೆ ಮಾಡುತ್ತಿದ್ದು, ಈ ಹುಡುಗಿಯನ್ನು ಮೇಲಿಂದ ಮೇಲೆ ರೆಡ್‌ಲೈಟ್ ಏರಿಯಾಗೆ ಕರೆದೊಯ್ಯುವುದು, ಬಟ್ಟೆ ಕೊಡಿಸುವುದು, ಊರು ಜಾತ್ರೆ ಸುತ್ತಿಸುವುದು ಮಾಡುತ್ತಿರುತ್ತಾಳೆ. ನಂತರ ದೇವದಾಸಿ ಮಾಡಿ ತನ್ನೊಡನೆ ಕರೆದುಕೊಂಡೇ ಹೋಗುತ್ತಾಳೆ. ಚಿಕ್ಕ ವಯಸ್ಸಿನ ಇವಳನ್ನು ಲೈಂಗಿಕ ಚಟುವಟಿಕೆಗೆ ಬಳಸಿ ಬಹಳ ಹಣ, ಸ್ವಂತ ಮನೆ ಮಾಡಿಕೊಳ್ಳುತ್ತಾಳೆ. ಈಗ ಈ ಹುಡುಗಿಗೆ ೩೦ ವರ್ಷ. ಮೂರು ಮಕ್ಕಳಿದ್ದಾರೆ. ಅವಳು ಹೇಳುವಂತೆ, "ನಾನು ಗರ್ಭಿಣಿಯಾದಾಗಲೆಲ್ಲ, ನಮ್ಮ ಅಕ್ಕ ನನ್ನ ಜೊತೆ ಜಗಳ ಮಾಡುತ್ತಿದ್ದಳು. ವಯಸ್ಸು ಇರುವಾಗಲೆ ದುಡಿದು ಹಣ ಮಾಡಬೇಕು. ಅದನ್ನು ಬಿಟ್ಟು ಮಕ್ಕಳನ್ನು ಹಡೆದು ದೇಹದ ಸೌಂದರ್ಯವನ್ನು ಹಾಳು ಮಾಡಿಕೊಳ್ಳುವುದು ಮೂರ್ಖತನ ಎಂದು ನನ್ನನ್ನು ಬೈಯುತ್ತಿದ್ದಳು. ಆದರೂ ನಾನು ಅವಳ ಮಾತನ್ನು ಕೇಳದೇ ನನಗೆ ಮುಂದೆ ಆಸರೆ ಬೇಕು ಎಂದುಕೊಂಡು ಮೂರು ಮಕ್ಕಳನ್ನು ಹೆತ್ತಿದ್ದೇನೆ. ಇದರಿಂದ ಕೋಪಗೊಂಡ ನಮ್ಮ ಅಕ್ಕ ನನ್ನನ್ನು ಹೊರ ಹಾಕಿದ್ದಾಳೆ. ಈಗ ತನ್ನ ಮಕ್ಕಳನ್ನು ಸಾಕುವ ಸಲುವಾಗಿ ಇಲ್ಲಿಗೆ ಬಂದು (ಮುಂಬಯಿಯ ಕಾಮಾಟಿಪುರದಲ್ಲಿ) ಬಂದು ಜೀವನ ನಡೆಸುತ್ತಿದ್ದೇನೆ. ನನ್ನ ಎರಡು ಮಕ್ಕಳು ಹಳ್ಳಿಯಲ್ಲಿ ನಮ್ಮ ತಾಯಿಯ ಹತ್ತಿರ ಇವೆ, ಒಂದು ಮಗು ನನ್ನ ಹತ್ತಿರ ಇದೆ. ಉತ್ತರ ಪ್ರದೇಶದ ಒಬ್ಬ ವ್ಯಕ್ತಿ ಖಾಯಂ ಕಸ್ಟಮರ್ ಆಗಿದ್ದಾನೆ. ಅವನೇ ನಮ್ಮ ಎಲ್ಲ ಖರ್ಚುಗಳನ್ನು ನೋಡಿಕೊಳ್ಳುತ್ತಾನೆ. ಆತನು ಬ್ಯಾಗ್ ತಯಾರಿಸುವ ಕಂಪನಿಯೊಂದರಲ್ಲಿ ಕಾರ್ಮಿಕನಾಗಿ ಕೆಲಸ ಮಾಡುತ್ತಿದ್ದಾನೆ. ಆತನು ಊರಲ್ಲಿರುವ ತನ್ನ ಕುಟುಂಬವನ್ನು ಇಲ್ಲಿಗೆ ತರಲು ಸಾಧ್ಯವಿಲ್ಲ. ವರ್ಷಕ್ಕೆ ಒಮ್ಮೆ ಎರಡು ಸಾರಿ ಊರಿಗೆ ಹೋಗಿ ಅವರಿಗೆ ಹಣ ಕೊಟ್ಟು ಬರುತ್ತಾನೆ. ನನಗೆ ಆತನ ಮೇಲೆ ವಿಶ್ವಾಸವಿಲ್ಲ. ಅವರು ತಮಗೆ ಇರಲು ಜಾಗವಿಲ್ಲ ಎಂಬ ಕಾರಣಕ್ಕೆ ನಮ್ಮಂಥವರನ್ನು ಹುಡುಕಿಕೊಂಡಿರುತ್ತಾರೆ. ಇರಲು ಕಡಿಮೆ ಬಾಡಿಗೆಯ ಮನೆಯೂ ಆಯಿತು. ಸುಖ ನೀಡಲು ಹೆಂಡತಿಯೂ ಆಯಿತು. ಮತ್ತೆ ಬೇರೆ ಯಾವಳಾದರೂ ಸಿಕ್ಕರೆ ನನ್ನದು ಮುಗಿಯಿತು. ಹಾಗಾಗಿ ನಾನು ನನ್ನ ದಂಧೆಯನ್ನು ಬಿಡುವುದಿಲ್ಲ. ಅವನು ಇಲ್ಲದ ಸಮಯದಲ್ಲಿ ದಂಧೆ ಸಿಕ್ಕರೆ ಮಾಡುತ್ತೇನೆ" ಅನ್ನುತ್ತಾಳೆ.

**ಕೋಷ್ಟಕ ೩.೧೨: ನಿಮ್ಮನ್ನು ಮುಂಬಯಿಗೆ ಯಾರು ಕರೆದುಕೊಂಡು ಬಂದರು?**

| ಅ.ಸ. | ಮುಂಬಯಿಗೆ ಕರೆದುಕೊಂಡು ಹೋದವರು | ಸಂಖ್ಯೆ | ಶೇಕಡಾ |
|---|---|---|---|
| ೧ | ತಾಯಿ | ೦೭ | ೨೩.೩೩ |
| ೨ | ಸಹೋದರಿ | ೦೩ | ೧೦ |
| ೩ | ಅತ್ತೆ | ೦೩ | ೧೦ |
| ೪ | ನೆರೆಮನೆಯ ದೇವದಾಸಿ | ೦೬ | ೨೦ |
| ೫ | ಪಕ್ಕದ ಊರಿನ ಘರವಾಲಿ | ೦೪ | ೧೩.೩೩ |
| ೬ | ಗೆಳತಿ | ೦೨ | ೬.೬೬ |
| ೭ | ಯಾರೋ ಗೊತ್ತಿಲ್ಲ | ೦೫ | ೧೬.೬೬ |
| | **ಒಟ್ಟು** | **೩೦** | **೧೦೦** |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನದ ಮೂಲಕ ಕಂಡು ಬರುತ್ತಿರುವ ಇನ್ನೊಂದು ಆತಂಕಕಾರಿ ವಿಷಯವೆಂದರೆ, ಅಧ್ಯಯನಕ್ಕೆ ಒಳಪಡಿಸಿದ ಬಹಳಷ್ಟು ಅಂದರೆ ಶೇಕಡಾ ೮೬.೬೬ರಷ್ಟು ಮಹಿಳೆಯರ ಸಾಗಾಣಿಕೆಯು ಗೊತ್ತಿರುವ, ಸಂಬಂಧದ, ತಾಯಿ, ಅಕ್ಕ ಅತ್ತೆ ಅತೀ ಹತ್ತಿರದ ಸಂಬಂಧಗಳೇ ಕಾರಣವಾಗಿವೆ. ಇನ್ನು ಶೇಕಡಾ ೧೬.೬೬ರಷ್ಟು ಯಾರೋ ಗೊತ್ತಿಲ್ಲದವರಿಂದ ನಡೆದಿವೆ. ಅದರಲ್ಲಿ ಅತೀ ಹೆಚ್ಚು ಸಂಖ್ಯೆಯ, ಅಂದರೆ ಶೇಕಡಾ ೨೩.೩೩ರಷ್ಟು ಮಹಿಳೆಯರನ್ನು ಅವರ ತಾಯಿಯೇ ರೆಡ್‌ಲೈಟ್ ಏರಿಯಾಕ್ಕೆ ಕರೆದುಕೊಂಡು ಬಂದಿರುವುದು ಕಂಡುಬರುತ್ತದೆ. ಇನ್ನುಳಿದಂತೆ ಶೇಕಡಾ ೨೦ರಷ್ಟು ಮಹಿಳೆಯರನ್ನು ನೆರೆಮನೆಯ ದೇವದಾಸಿ, ಶೇಕಡಾ ೧೩.೩೩ರಷ್ಟು ಮಹಿಳೆಯರನ್ನು ಪಕ್ಕದ ಊರಿನ ಘರವಾಲಿ ಮಹಿಳೆ, ಶೇಕಡಾ ೧೦ರಷ್ಟು ಮಹಿಳೆಯರು ಅವರ ಅತ್ತೆಯಿಂದ, ಶೇಕಡಾ ೧೦ರಷ್ಟು ಮಹಿಳೆಯರು ಅವರ ಸಹೋದರಿಯರಿಂದ ಮತ್ತು ಶೇಕಡಾ ೬.೬೬ರಷ್ಟು ಮಹಿಳೆಯರು ಗೆಳತಿಯರ ಮೂಲಕ ಲೈಂಗಿಕ ದಂಧೆಗೆ ಬಂದಿರುವುದು ಕಂಡುಬರುತ್ತದೆ.

ಜೀವ ಜಗತ್ತಿನಲ್ಲಿ ಮಗುವಿನ ಸಂಪೂರ್ಣ ರಕ್ಷಣೆಯ ಜವಾಬ್ದಾರಿ ತಾಯಿಯದಾಗಿರುತ್ತದೆ. ಆನಂತರ ತಂದೆ, ಕುಟುಂಬದ ಸದಸ್ಯರು, ಸರಕಾರ, ಕಾನೂನು ಮತ್ತೊಂದು, ಮತ್ತೊಂದು. ಆದರೆ ಗುರುತರ ಜವಾಬ್ದಾರಿಯಲ್ಲಿರುವ ತಾಯಿಯೇ ಇಲ್ಲಿ ಲೈಂಗಿಕ ಜೀತಕ್ಕೆ ಎಳೆಯ ಮಗಳನ್ನು ಸಾಗಿಸುವುದಷ್ಟೆ ಅಲ್ಲ, ತಾನೇ ವೇಶ್ಯಾಗೃಹಗಳವರೆಗೂ ಕರೆದುಕೊಂಡು ಹೋಗಿದ್ದಾಳೆ ಎಂಬುದು ಕಂಡುಬರುತ್ತದೆ. ನಂತರ ಹೆಚ್ಚಿನ ಪ್ರಮಾಣದಲ್ಲಿ ಮಗುವಿನ ಅತೀ ಹತ್ತಿರದ ಸಂಬಂಧಗಳೆ ಈ ಕೃತ್ಯ ಎಸಗಿರುವುದು ಕಂಡುಬರುತ್ತಿದೆ. ಇದರಿಂದ ಇಂದು ಹೆಣ್ಣುಮಕ್ಕಳು ಮನೆಯ ಒಳಗೂ ಮತ್ತು ಹೊರಗೂ ಸುರಕ್ಷಿತರಾಗಿಲ್ಲ ಎಂಬುದು ಕಂಡುಬರುತ್ತದೆ.

**ಕೋಷ್ಟಕ ೩.೧೩: ವಕ್ತೃಗಳ ಊರಿನಿಂದ ಲೈಂಗಿಕ ದಂಧೆಗೆ ಬಂದ ಮಹಿಳೆಯರ ಸಂಖ್ಯೆ**

| ಅ.ಸ. | ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧ | ಯಾರೂ ಇಲ್ಲ | ೩ | ೧೦ |
| ೨ | ಎರಡು | ೪ | ೧೩.೩೩ |
| ೩ | ಐದು | ೫ | ೧೬.೬೭ |
| ೪ | ಏಳು | ೨ | ೬.೬೬ |
| ೫ | ಹತ್ತು | ೫ | ೧೬.೬೭ |
| ೬ | ಹತ್ತಕ್ಕಿಂತ ಹೆಚ್ಚು | ೧೧ | ೩೬.೬೭ |
| ಒಟ್ಟು | | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನವು ಗ್ರಾಮಗಳಿಂದ ಬಾಲೆಯರು ಬರುವ ವ್ಯಾಪಕತೆಯನ್ನು ಅರ್ಥಮಾಡಿಕೊಳ್ಳಲು ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಿಂದ ಮಾಹಿತಿಯನ್ನು ಕಲೆ ಹಾಕಲು ಪ್ರಯತ್ನಿಸಿದಾಗ ಮೇಲಿನ ಕೋಷ್ಟಕದಲ್ಲಿ ತೋರಿಸಿದಂತೆ, ಶೇಕಡಾ ೯೦ರಷ್ಟು ಮಹಿಳೆಯರು ತಮ್ಮ ಗ್ರಾಮಗಳಿಂದ ಹುಡುಗಿಯರು ಬಂದಿದ್ದಾರೆ ಎಂದು ಹೇಳಿದರೆ, ಪ್ರತಿಶತ ೧೦ರಷ್ಟು ಮಹಿಳೆಯರು ತಮ್ಮ ಗ್ರಾಮದವರು ಯಾರೂ ಬಂದಿರುವುದಿಲ್ಲ ಎಂದು ಹೇಳಿದರು. ಬಂದವರಲ್ಲಿ ಶೇಕಡಾ ೩೬.೬೭ರಷ್ಟು ಗ್ರಾಮಗಳಿಂದ ಹತ್ತಕ್ಕಿಂತ ಹೆಚ್ಚು ಹುಡುಗಿಯರು, ಶೇಕಡಾ ೧೬.೬೭ರಷ್ಟು ಗ್ರಾಮಗಳಿಂದ ೫ ಮತ್ತು ೧೦ ಹುಡುಗಿಯರು, ಶೇಕಡಾ ೧೩.೩೩ರಷ್ಟು ಗ್ರಾಮಗಳಿಂದ ೪ ಹುಡುಗಿಯರು ಮತ್ತು ಶೇಕಡಾ ೬.೬ರಷ್ಟು ಗ್ರಾಮಗಳಿಂದ ೭ ಹುಡುಗಿಯರು ಬಂದಿರುವದು ಕಂಡುಬರುತ್ತದೆ.

ಈ ಮಾಹಿತಿಯನ್ನು ಗಮನಿಸಿದಾಗ ಲೈಂಗಿಕ ಜೀತಕ್ಕೆ ಬಾಲೆಯರ ಸಾಗಾಣಿಕೆಯು ಅವ್ಯಾಹತವಾಗಿ ಸಾಗುತ್ತಲೇ ಇರುವುದು ಸ್ಪಷ್ಟವಾಗುತ್ತದೆ. ಅದಕ್ಕೆ ಪೂರಕವಾಗಿ ೫-೬ ತಲೆಮಾರುಗಳಿಂದ ಮುಂಬಯಿಯಲ್ಲಿಯೇ ವಾಸವಾಗಿರುವ ಮುಧೋಳ ಮೂಲದ ೪೦ ವಯಸ್ಸಿನ ದೇವದಾಸಿ ಮಹಿಳೆಯೊಬ್ಬರು "ಈ ಸಮಸ್ಯೆ ಬಗೆಹರಿಯಲು ಸಾಧ್ಯವಿಲ್ಲ. ನಾಯಿ ಕೊಡೆಯಂತೆ ಒಂದು ಕಡೆ ಇಲ್ಲ ಅಂದರೆ ಮತ್ತೆನ್ನಿಲ್ಲಿಯೋ ತಲೆ ಎತ್ತಿರುತ್ತವೆ. ಈಗ ಇಲ್ಲಿ ಪೋಲೀಸ್ ಕಾರವಾಹಿ ಬಹಳ ಇರುವುದರಿಂದ, ನಮ್ಮ ಕರ್ನಾಟಕದ ಜನ ಕಡಿಮೆ ಇದ್ದಾರೆ ಅಂತೆಲ್ಲ ನಿಮಗೆ ಅನ್ನಿಸಬಹುದು. ಇದರಿಂದ ಸಂತೋಷ ಪಡುವ ಕಾರಣವೇ ಇಲ್ಲ. ನನಗೆ ತಿಳಿದಂತೆ ಮಹಾರಾಷ್ಟ್ರದ ಮೂಲೆ ಮೂಲೆಯಲ್ಲೂ ಲೈಂಗಿಕ ದಂಧೆ ನಡೆಯುತ್ತಿದೆ. ಮಿರಜ್, ಕರಾಡ ಇಸ್ಲಾಂಪುರ, ಕೊಲ್ಹಾಪುರದಂತಹ ಸಣ್ಣ ಪಟ್ಟಣಗಳಲ್ಲಿಯೂ ಲೈಂಗಿಕ ದಂಧೆಯ ಗಲ್ಲಿಗಳಿವೆ. ಇಲ್ಲೇನಾದರೂ ಅವಘಡಗಳಾದರೆ ಸ್ವಲ್ಪ ದಿನಗಳವರೆಗೆ ಆ

ಊರುಗಳಿಗೆ ಸ್ಥಳಾಂತರಗೊಳ್ಳುತ್ತಾರೆ. ಅಲ್ಲಿ ಜಗಿಯಾದಾಗ ಅಥವಾ ಇಲ್ಲಿ ಸಂದರ್ಭ ತೀರಿಯಾದಾಗ ಇತ್ತ ಬರುತ್ತಾರೆ. ಅವರು ಸತತವಾಗಿ ಓಡಾಡುತ್ತಲೇ ಇರುತ್ತಾರೆ. ಅವರಿಗೆ ಆಶ್ರಯ ನೀಡುವ ಮನೆಗಳು, ವ್ಯವಸ್ಥೆಗಳು, ಪ್ರತಿಯೊಂದು ಊರಲ್ಲಿಯೂ ಇವೆ. ಇದು ನಾನು ಕಂಡಿರುವ ಮತ್ತು ಕಾಣುತ್ತಿರುವ ಸಂಗತಿ. ದೇವದಾಸಿ ಬಿಡುವುದು ಕಡಿಮೆಯಾಗಿದೆ. ಆದರೆ ಸಂಪೂರ್ಣವಾಗಿ ನಿಂತಿಲ್ಲ. ಈಗಲೂ ಸಹ ನಮ್ಮ ಹಳ್ಳಿಗಳಲ್ಲಿ (ಮುಧೋಳ, ಬಿದರಿ, ಬರಗಿ, ಮುಗಳಕೋಡ, ಮೆಳ್ಳಿಗೇರಿ, ಮಳಲಿ ಮುಂದಾದವು) ಹುಡುಗಿಯರನ್ನು ದೇವದಾಸಿ ಬಿಡುತ್ತಾರೆ. ಈ ವ್ಯವಹಾರ ಕದ್ದು ಮುಚ್ಚಿ ನಡೆಯುತ್ತಿದ್ದರೂ ಸಹ ಓಣಿಯ ಎಲ್ಲರಿಗೂ ಗೊತ್ತಿರುತ್ತದೆ. ಈಗಲೂ ಆ ಹಳ್ಳಿಗಳಿಂದ ೧೫ ವರ್ಷದ ಒಳಗಿನ ಹುಡುಗಿಯರು ಬಂದೇ ಬರುತ್ತಾರೆ. ನಾವೇ ಎಷ್ಟೊಂದು ಹುಡುಗಿಯರನ್ನು ತಂದಿದ್ದೇವೆ. ಹಾಗಂತ ನಾವೆಲ್ಲ ಅವರಿಗೆ ಒತ್ತಾಯ ಮಾಡುವುದಿಲ್ಲ. ಬಡತನವಿರುವ ತಂದೆ ತಾಯಿಗಳು, ನಾವು ಊರಿಗೆ ಹೋದಾಗ ನಮ್ಮನ್ನೆ ಹುಡುಕಿಕೊಂಡು ಬರುತ್ತಾರೆ. 'ನಮ್ಮಾಕಿನ ಒಬ್ಬಕಿನ ಕರ್‍ಕೊಂಡು ಹೋಗಿ, ಪುಣ್ಯ ಕಟ್ಟಕೋರಿ', ಅಂತಾರ. ಮುತ್ತು ಕಟ್ಟಿಸಿಕೊಂಡ ಮಕ್ಕಳು ದಂಧೆ ಮಾಡಲು ಒಪ್ಪದಿದ್ದರೂ, ತಂದೆ-ತಾಯಿ ಅವರನ್ನು ಎಳೆದು ತಂದು ದಂಧೆ ಹಚ್ಚುತ್ತಾರೆ. "ಮುತ್ತ ಕಟಗೊಂಡು ಇಲ್ಲದ್ದೇನ ಮಾಡ್ತೀರಿ, ಗಳಸ್ಕೊಂಡ ಬಂದ್ರ ಸಮಸ್ಯೆಯರ ಬಗಿ ಹರೀತಾವು" ಅಂತ ಅವರನ್ನು ಮೀರಜ್, ಸಾಂಗ್ಲಿ, ಪೂಣಾ, ಮುಂಬಯಿ ಎಲ್ಲಿ ಬೇಕೋ ಅಲ್ಲಿಗೆ ಕಳಿಸ್ತಾರ. ಇದನ್ನೆಲ್ಲ ಸರಕಾರಕ್ಕೆ ತಿಳಿಸಬೇಕಾದ ಸಮುದಾಯದ ಕಾರ್ಯಕರ್ತರು ನಮ್ಮ ಕೇರಿಯವರೇ ಆಗಿರ್ತಾರ. ಅವರ ಮನೆಯಲ್ಲೂ, ಅವರ ಸಂಬಂಧಿಕರ ಮನೆಯಲ್ಲೂ ದೇವದಾಸಿಯರಾಗಿ ಮುಂಬಯಿಗೆ ಹೋದವರು, ಹೋಗುತ್ತಿರುವವರು ಬಹಳ ಜನ ಇದ್ದಾರೆ. ಹಾಗಾಗಿ ಅವರು ಇನ್ನೊಬ್ಬರ ತಪ್ಪನ್ನ ವರದಿ ಮಾಡುವುದಿಲ್ಲ. ಅದನ್ನು ಮುಚ್ಚಿಡುವುದರಿಂದ ಅವರಿಗೆ ಪಗಾರ ಬರುತ್ತದೆ. ಆದ್ದರಿಂದ "ಎಲ್ಲವೂ ಸರಿಯಾಗಿದೆ. ದೇವದಾಸಿ ಬಿಡುವುದು ನಿಂತಿದೆ". ಎಂದು ಹೇಳುತ್ತಾರೆ. ಅದನ್ನೇ ಸರಕಾರ ನಂಬುತ್ತದೆ. ತಳದ ಸಮಸ್ಯೆ ಸಮಸ್ಯೆ ಯಾಗಿಯೇ ಉಳಿಯುತ್ತದೆ" ಎಂದು ಹೇಳುತ್ತಾರೆ. ಈ ವಿವರಣೆಯು ನಮಗೆ ಯಾವ ರೀತಿಯಲ್ಲಿ ಸಮಾಜ ನಡೆಯುತ್ತಿದೆ ಎನ್ನುವುದರ ಸೂಚನೆಗಳನ್ನು ನೀಡುತ್ತದೆ.

ಲೈಂಗಿಕ ದಂಧೆಯಲ್ಲಿರುವ ಮಹಿಳೆಯರು ಅವರ ಊರುಗಳ ಜೊತೆಗೆ ಇಟ್ಟುಕೊಂಡ ಸಂಬಂಧಗಳು ಹೇಗಿವೆ, ಅವರು ಯಾವಾಗ ತಮ್ಮ ಊರಿಗೆ ಹೋಗುತ್ತಾರೆ? ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಿದಾಗ, ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಲ್ಲಿ ಶೇಕಡಾ ೯೬.೬೭ರಷ್ಟು ಮಹಿಳೆಯರು ಹಬ್ಬ/ಜಾತ್ರೆಗೆ, ಸಮಾರಂಭಗಳಿಗೆ, ಮನೆಯಲ್ಲಿ ಏನಾದರೂ ಸಮಸ್ಯೆಗಳಿದ್ದರೆ ಊರಿಗೆ ಹೋಗುವ ರೂಢಿ ಇಟ್ಟುಕೊಂಡಿದ್ದಾರೆ. ಕೇವಲ ಶೇಕಡಾ ೩.೩೩ರಷ್ಟು ಮಹಿಳೆಯರು ಮಾತ್ರ ಊರಿಗೆ ಹೋಗುವುದೇ ಇಲ್ಲವೆಂದು ತಿಳಿಸುತ್ತಾರೆ. ಹೀಗೆ ಹಬ್ಬ ಜಾತ್ರೆಗೆ ಹೋದವರು ಹಾಗೇ ಬರುವುದೇ ಇಲ್ಲ. ಜೊತೆಗೆ ಒಬ್ಬರು ಇಬ್ಬರು ಹುಡುಗಿಯರನ್ನು ಕರೆದು ತಂದೇ ಇರುತ್ತಾರೆ.

ಈಗ ಒಂದೆರಡು ತಿಂಗಳ (ನವೆಂಬರ್, ೨೦೧೫) ಹಿಂದೆ ದೇವದಾಸಿ ಮಹಿಳೆಯರೊಬ್ಬರನ್ನು ಭೇಟಿ ಮಾಡಿದ್ದಾಗ ಅವರು ಮಾಜಿ ದೇವದಾಸಿಯೊಬ್ಬರ ಮನೆಯಲ್ಲಿ, ಉತ್ತರ ಪ್ರದೇಶದ ಅಲಾಹಾಬಾದ್‌ನಲ್ಲಿರುವ ಅಥಣಿಯ ಹೆಣ್ಣುಮಗಳೊಬ್ಬಳು ಊರ ಜಾತ್ರೆಗೆ ಬಂದವಳು ಒಬ್ಬ ಹುಡುಗಿಯನ್ನು ಕರೆದೊಯ್ಯುವ ವ್ಯವಹಾರ ಕುದುರಿಸಿಕೊಳ್ಳುತ್ತಿದ್ದ ಕುರಿತು ಹೇಳುತ್ತಿದ್ದಳು. ಅದು ಹೇಗೆಂದರೆ, ಹುಡುಗಿಯ ತಾಯಿಗೆ ಪ್ರಾರಂಭದಲ್ಲಿ ೨೫ ಸಾವಿರ ರೂಪಾಯಿ ಕೊಡುವುದು. ಮತ್ತು ಹುಡುಗಿಯನ್ನು ದಂಧೆಯ ಮನೆಯ ಒಳಗಡೆ ಕರೆದುಕೊಂಡು ಹೋಗಲು ಮತ್ತು ರೇಡ್ ಮಾಡದಂತಿರಲು ಪೊಲೀಸರಿಗೆ ೨೫ ಸಾವಿರ ಕೊಡಬೇಕು. ಹಾಗಾಗಿ ಹುಡುಗಿಯ ಹೆಸರಲ್ಲಿ ೫೦ ಸಾವಿರ ರೂಪಾಯಿಯ ಸಾಲವಾಗುವುದು. ಆ ಎಳೆಯ ಕಂದವ್ವ ಲೈಂಗಿಕ ಜೀತಕ್ಕೆ ನಿಂತು ೫೦ ಸಾವಿರ ಮತ್ತು ಅದಕ್ಕೆ ತಗಲುವ ಬಡ್ಡಿಯನ್ನು ತೀರಿಸಬೇಕು. ಅದು ತೀರುವವರೆಗೆ ಅವಳು ಲೈಂಗಿಕ ಜೀತಕ್ಕೆ ನಿಲ್ಲಲೇಬೇಕು. ಎಲ್ಲೋ ನಡೆಯುವ ವೇಶ್ಯಾವಟಿಕೆಗೆ, ಇನ್ನೆಲ್ಲೋ ವ್ಯವಹಾರ ನಡೆದಿರುತ್ತದೆ.

ಅಥಣಿ ತಾಲೂಕಿನ ಯುವತಿಯೊಬ್ಬಳು "ಮೊದಲು ಗಲ್ಲಿಯೊಳಗ ಇರಬಿ(ಇರುವೆ) ಹೋಗಾಕ ಸುದ ಜಾಗ ಇರ್ತಿದ್ದಿಲ್ಲ. ಅಷ್ಟ ಗಂಡಸರು ಗಿಜಿ ಗಿಜಿ ತುಂಬಿರುತ್ತಿದ್ದರು. ರೊಕ್ಕವೇ ರೊಕ್ಕ. ಈಗ ಏನೂ ಇಲ್ಲ. ನೀವ ನೋಡ್ರಿ ಅಲ್ಲೊಂದು ಇಲ್ಲೊಂದು ಗಂಡಸರು ನಿಂತಿರ್ತಾವು. ಆ ಗಂಡಸರಿಗಿಂತ ಹೆಂಗಸರ ಜಾಸ್ತಿ ಅದಾರ ಅನಸ್ತೈತಿ. ಊರಿಗಿ ಹೋಗಬೇಕಂದ್ರ ಕೊಳ್ಳಾಗ ಒಂದ ಸರ ಇಲ್ಲ. ಹೋದ ಕೂಡಲೆ ಮಂದಿ ಮಕ್ಕಳು ಮುಕರಿಬಿಡ್ತಾರ. ಬರಿ ಕೈಯಾಗ ಹೋಗಂಗಿಲ್ಲ. ಅದಕ ಒಂದ ಸಾವಿರ ಖರ್ಚ ಮಾಡಿ ನಕಲಿ ಆಭರಣ ತಂದೇನಿ. ಊರಾನವರಿಗೇನು ಗೊತ್ತಾಗತೈತಿ ನಕಲಿ ಅದಾವಂತ". ಅಂತ ಹೇಳುತ್ತಿದ್ದಳು. ಅಂದರೆ ಇವರು ಊರಿಗೆ ಹೋದಾಗ ಆಕರ್ಷಣೆ ಇರಲೇಬೇಕು. ಇವರ ಇರುವಿಕೆ ನೋಡಿ ಮತ್ತೆ ಬೇರೆ ಹುಡುಗಿಯರು ತಯಾರಾಗಿ ಬರಬೇಕು. ಇದೇ ಇವರ ಉದ್ದೇಶವಾಗಿರುತ್ತದೆ.

ಬಿಜಾಪೂರ ತಾಲೂಕಿನ ಹಳ್ಳಿಯೊಂದರಲ್ಲಿ ಘರವಾಲಿಗಳು ಕಟ್ಟಿಸಿದ ಮನೆ ಯಾವ ಎಂ.ಎಲ್.ಎ ಮನೆಗೂ ಕಡಿಮೆ ಇಲ್ಲ. ಇದು ಬರೀ ಲೈಂಗಿಕ ದಂಧೆಯ ಮೇಲೇಯೇ ಮಾಡಿದ್ದು. ಅವರು ಹಳ್ಳಿಯಿಂದ ದಂಧೆಗೆ ಹೋಗುವಾಗ ಉಡಲು ಒಂದು ಒಳ್ಳೆಯ ಬಟ್ಟೆಯೂ  ಇಲ್ಲದ ಹೆಣ್ಣುಮಗಳೆಂದು ಓಣಿಯ ಜನಕ್ಕೆ ಗೊತ್ತಿರುತ್ತದೆ. ಅಂತವರು ಇಂದು ಮನೆ. ಕಾರು. ಹೊಲ. ಗಾಡಿ. ಬಂಗಾರ ಮಾಡಿಕೊಂಡು ನಡೆಸುವ ಐಶಾರಾಮಿ ಜೀವನವು. ಒಂದು ಹೊತ್ತಿನ ಊಟವೂ ಇರದ ಬಡವನಿಗೆ. ತನ್ನ ಪುಟ್ಟ ಮಗಳೊಬ್ಬಳ ಬಲಿ ಕೊಡುವುದು ತಪ್ಪು ಅನ್ನಿಸುವುದೇ ಇಲ್ಲ. ಇದನ್ನೇ ಜೋಗನ್ ಶಂಕರ್ ಅವರು ತಮ್ಮ 'ದೇವದಾಸಿ ಸಂಪ್ರದಾಯ' ಪುಸ್ತಕದಲ್ಲಿ ಹೀಗೆ ಉಲ್ಲೇಖಿಸುತ್ತಾರೆ. "ಸಾಂಗ್ಲಿ ಮೀರಜ್ ಕೊಲ್ಹಾಪೂರ ಮತ್ತು ಬೊಂಬಾಯಿಗಳಿಗೆ ಹೋಗಿರುವ ದೇವದಾಸಿ ಹಿನ್ನೆಲೆಯ ವೇಶ್ಯೆಯರು ಅವರ ಸ್ವಂತ ಊರಿಗೆ ಆಗಿಂದಾಗ್ಗೆ ಬರುವರು. ಊರಿನಲ್ಲಿದ್ದ ಸಮಯದಲ್ಲಿ ಹೆಮ್ಮೆಯ ಸಂಗತಿಯಾಗಿ ತಮ್ಮ ಚಿನ್ನವಾಭರಣಗಳು. ಬೆಲೆಬಾಳುವ ಬಟ್ಟೆಗಳು. ಸುಗಂಧ ದ್ರವ್ಯ ಪದಾರ್ಥಗಳು. ಟೇಪ್

ರೆಕಾರ್ಡರ್‌ಗಳು ಇತ್ಯಾದಿಗಳನ್ನು ಪ್ರದರ್ಶಿಸುವರು. ಯಲ್ಲಮ್ಮ ದೇವಿಯ ಹಬ್ಬಗಳಲ್ಲಿ ವಿಶೇಷ ಭೋಜನಕ್ಕೆ ವ್ಯವಸ್ಥೆ ಮಾಡುವರು ಮತ್ತು ಜನರಿಗೆ ಕುಡಿಯುವುದಕ್ಕೆ ಹಾಗೂ ಪೂಜಾರಿಗಳಿಗೆ, ನೆಂಟರುಗಳಿಗೆ ಹಣದ ಕಾಣಿಕೆಗಳನ್ನು ನೀಡುವರು. ಈ ಎಲ್ಲವೂ ಅವಳ ಸಮುದಾಯದ ಮುಗ್ಧ ಜನರನ್ನು ತನ್ನತ್ತ ಸೆಳೆಯುವುದೇ ಆಗಿದೆ. ಸುಲಭವಾಗಿ ಹಣ ಸಂಪಾದಿಸ ಬಯಸುವ ಬಡ ಹುಡುಗಿಯರ ತಂದೆ ತಾಯಿಗಳಿಗೆ ಈ ವೇಶ್ಯೆಯರು ಶ್ರೀಮಂತರಾಗುವ ಆಸೆ ಹುಟ್ಟಿಸಿ, ಅವರು ತಮ್ಮ ಹೆಣ್ಣುಮಕ್ಕಳನ್ನು ದೇವಿಗೆ ಅರ್ಪಿಸಲು ಉತ್ಸುಕರಾಗುವಂತೆ ಮಾಡುತ್ತಾರೆ". ಸ್ವಲ್ಪ ಹೆಚ್ಚೂ ಕಡಿಮೆ ಇದೇ ರೀತಿಯಲ್ಲಿ, ಬಾಲೆಯರನ್ನು ಲೈಂಗಿಕ ಜೀತಕ್ಕೆ ಸೆಳೆಯುವ ಮತ್ತು ತಳ್ಳುವ ವ್ಯವಹಾರಗಳು ನಮ್ಮ ಅಧ್ಯಯನದಲ್ಲಿಯೂ ಕಂಡು ಬಂದಿವೆ. ಹಾಗಾದರೆ ಬಾಲನ್ಯಾಯ ಕಾಯಿದೆಯಂತಹ ಯಾವುದೇ ಕಾಯಿದೆ, ಕಾನೂನುಗಳು ಏನು ಮಾಡಿವೆ ಎನ್ನುವ ಪ್ರಶ್ನೆಯನ್ನು ನಾವು ಕೇಳುವುದರ ಜೊತೆಗೆ, ಸಮಾಜದಲ್ಲಿ ಇಂತಹ ಬೆಳವಣಿಗೆಗಳು ಮತ್ತೆ ಮತ್ತೆ ಯಾಕೆ ನಡೆಯುತ್ತಿವೆ ಅನ್ನುವುದರ ಕುರಿತೂ ಸಹ ಎಲ್ಲರೂ ಚಿಂತಿಸಬೇಕಿದೆ.

**ಕೋಷ್ಟಕ ೩.೧೪: ವಕ್ತೃಗಳ ಮಕ್ಕಳ ಸಂಖ್ಯೆ**

| ಅ.ಸ. | ಕಾರಣಗಳು | ಸಂಖ್ಯೆ | ಶೇಕಡ |
|---|---|---|---|
| ೧ | ಒಂದು | ೧೦ | ೩೩.೩೩ |
| ೨ | ಎರಡು | ೬ | ೨೦ |
| ೩ | ಮೂರು | ೬ | ೨೦ |
| ೪ | ಮಕ್ಕಳಿಲ್ಲ | ೮ | ೨೬.೬೭ |
| | ಒಟ್ಟು | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಜೀವ ಜಗತ್ತಿನಲ್ಲಿ ಕುಲ ಮುಂದುವರಿಕೆ ಎಂಬುದು ಚಲನಾತ್ಮಕವಾದುದು. ಮಾನವ ಸಮಾಜ ಉಳಿಯಲು ಅದು ಅನಿವಾರ್ಯವೂ ಹೌದು. ಅದಕ್ಕೆ ಹೆಣ್ಣು ಗಂಡುಗಳ ನಡುವೆ ನಡೆಯುವ ಲೈಂಗಿಕ ಪ್ರಕ್ರಿಯೆ ಅವಶ್ಯ. ಅಂತ ಒಂದು ಜೈವಿಕ ಪ್ರಕ್ರಿಯೆಯನ್ನು ಬಂಡವಾಳವಾಗಿಸಿಕೊಂಡು ವ್ಯವಹಾರ ಮಾಡುವ, ಅದರಲ್ಲೂ ಅರಿಯದ ಬಾಲೆಯರ ದೇಹವನ್ನು ಬಂಡವಾಳ ಮಾಡಿಕೊಂಡು ಜೀವನ ನಡೆಸುತ್ತಿರುವ ಅದೆಷ್ಟೋ ಗುಂಪುಗಳು ನಮ್ಮ ಮಧ್ಯೆ ಇವೆ. ಇಂತ ಸಂದಿಗ್ಧತೆಯಲ್ಲಿ ನವಸಮಾಜ ನಿರ್ಮಾಣ ಮಾಡಬೇಕಾದ ಬಾಲೆಯರು ತಮ್ಮ ದೇಹವನ್ನು ಜೀತಕ್ಕಿಟ್ಟು, ಅದರಿಂದ ಹೊರಗೆ ಬಂದ ಸಂದರ್ಭದಲ್ಲಿ, ತಾವೂ ಮಕ್ಕಳನ್ನು ಹೆರಬೇಕು, ತಮಗೂ ಮಕ್ಕಳು ಬೇಕು ಅಂತ ಅವರಿಗೆ ಅನ್ನಿಸುತ್ತದೆಯೇ, ಅನ್ನಿಸಿದ್ದರೆ ಅವರಿಗೆ ಮಕ್ಕಳೆಷ್ಟು, ಅವರು ಈಗ ಏನು ಮಾಡುತ್ತಿದ್ದಾರೆ ಅನ್ನುವ ವಿಚಾರವನ್ನು ಅರಿಯಲು ಪ್ರಯತ್ನಿಸಿದಾಗ, ಅಧ್ಯಯನಕ್ಕೆ ಒಳಪಡಿಸಿದ ಮೂವತ್ತು ಮಹಿಳೆಯರಲ್ಲಿ

ಶೇಕಡಾ ೨೬.೬೭ರಷ್ಟು ಮಹಿಳೆಯರಿಗೆ ಮಕ್ಕಳಿರದೆ ಇರುವುದು ಕಂಡು ಬಂದಿತು. ಶೇಕಡಾ ೩೩.೩೩ರಷ್ಟು ಮಹಿಳೆಯರಿಗೆ ಒಂದೇ ಮಗುವಿರುವುದು, ಶೇಕಡಾ ೨೦ರಷ್ಟು ಮಹಿಳೆಯರಿಗೆ ಎರಡು ಮತ್ತು ಶೇಕಡಾ ೨೦ರಷ್ಟು ಮಹಿಳೆಯರಿಗೆ ಮೂರು ಮಕ್ಕಳಿರುವುದು ಕಂಡುಬಂದಿತು.

ಅವರು ಈ ಕುರಿತು ಮಾತನಾಡುತ್ತಾ, "ನಮ್ಮನ್ಯಾಗ ಬಾಳ ಮಕ್ಕಳ್ನ ಹಡದು ಸಾಕಲಾಗದ. ಉಳಿದೋರ್ನೆಲ್ಲ ಸಾಕಾಕ ನಮ್ಮನ್ನ ಬಲಿ ಕೊಟ್ಟಾರ. ಅದನ್ನ ಕಂಡೂ ನಾವ ಹತ್ತತ್ತ ಮಕ್ಕಳ್ನ ಹಡದ್ರ ಅವು ನಮ್ಮಂಗ ಇಂತಾ ದಂಧಾನ ಮಾಡಬೇಕಾಕ್ಕೈತಿ. ನಾಳೆ ನೆಲಕ್ಕ ಬಿದ್ದರ ನೋಡಾಕ ಒಬ್ಬರರ ಬೇಕಾಕ್ಕೈತಿ ಅಂತ ಒಂದೊಂದು ಹಡಕೊಂಡ ಕುಂತೇವಿ". ಆದರೂ ಒಳಗೊಂದಿಷ್ಟು ಹುಚ್ಚ ಹೆಂಗಸ್ರು ಗಂಡ ಮಗಾ ಬೇಕಂತ ಮೂರ್ರೂರ ಮಕ್ಕಳ್ನ ಹಡದಾರ. ನಾಳೆ ಅವ್ರುಕರ ಪರಿಸ್ಥಿತಿ ಹೆಂಗ ಏನ.." ಅಂತ ಕೆಲವರು ತಮ್ಮ ಅನುಭವ ವ್ಯಕ್ತಪಡಿಸುತ್ತಾರೆ.

ಪಿ.ಯು.ಸಿ.ವರೆಗೆ ಓದಿ, ಸೋದರ ಮಾವನಿಂದ ಮಾರಲ್ಪಟ್ಟ ೨೩ ವರ್ಷದ ಯುವತಿಯನ್ನು ಈ ಕುರಿತು ಮಾತನಾಡಿಸಿದಾಗ, "ನಮಗೇ ಒಂದು ನೆಲೆ ಇಲ್ಲ. ಈ ಗಲ್ಲಿಯೊಳಗ, ವಯಸ್ಸು ಇರುವವರೆಗೆ ಮಾತ್ರ ನಮಗೊಂದು ಬೆಲೆ. ಆ ನಂತರ ಈ ಗಲ್ಲಿಯಲ್ಲಿ ನಮಗೆ ಜಾಗ ಇಲ್ಲ. ಇದ್ದರೂ ಹುಡುಗಿಯರ ಬಟ್ಟೆ ತೊಳೆಯುವುದು, ನೀರು ತುಂಬುವುದು ಎಲ್ಲೋ ಸಿಕ್ಕ ಜಾಗದಲ್ಲಿ ಮಲಗುವುದು, ಯಾರಾದರೂ ಒಂದು ತುತ್ತು ಊಟ ಕೊಟ್ಟರೆ ತಿನ್ನುವುದು. ಇದು ನಮ್ಮ ೩೫ ವರ್ಷದ ನಂತರದ ಬದುಕು. ಅಷ್ಟು ತಾಕತ್ತಿದ್ದರೆ ಘರವಾಲಿಯಾಗಬೇಕು. ಅದು ಎಲ್ಲರಿಗೂ ಸಾಧ್ಯವಾಗದ ಮಾತು. ಊರಿಗೆ ಹೋಗಬೇಕೆಂದರೆ ಅಲ್ಲಿಯೂ ನೆಲೆ ಇಲ್ಲ, ಊರವರು ಎಷ್ಟೇ ನಮ್ಮನ್ನೀಗ ಪ್ರೀತಿ ಗೌರವಗಳಿಂದ ನೋಡಿಕೊಳ್ಳುತ್ತಿರಬಹುದು. ಆದರೆ ನಮಗೆ ಹಣ ಬರುವುದು ನಿಂತಾಗ ಅವರಿಗೆ ನಾವು ನಿಷ್ಪ್ರಯೋಜಕರು. ಖಂಡಿತ ಅವರು ನಮ್ಮನ್ನು ಇಷ್ಟಪಡುವುದಿಲ್ಲ. ಅಲ್ಲದೇ ನಮ್ಮಿಂದಾಗಿ ಅವರ ಸಾಮಾಜಿಕ ಬದುಕಿಗೆ ಕಳಂಕ ಹತ್ತುತ್ತದೆ ಎಂಬುದು ಅವರ ಚಿಂತೆಯಾಗಿರುತ್ತದೆ. ಇಂತ ಪರಿಸ್ಥಿತಿಯಲ್ಲಿ ನಮ್ಮ ಮಕ್ಕಳ ಸ್ಥಿತಿ ಏನಾಗಬಹುದು. ಸಮಾಜ ಅವರನ್ನು ಹೇಗೆ ನೋಡಬಹುದು. ಒಂದು ವೇಳೆ ನಮಗೇನಾದರೂ ಆಗಿ ಸತ್ತು ಹೋದರೆ, ಅವರಿಗೂ ಇದೇ ದಂಧೆಯ ಗಲ್ಲಿಯು ದಿಕ್ಕಾಗಬಹುದು. ಅದಕ್ಕಾಗಿ ನಾನು ಮಕ್ಕಳೇ ಬೇಡವೆಂದು ನಿರ್ಧರಿಸಿದ್ದೇನೆ. ನನ್ನ ತಂಗಿಯ ಮಕ್ಕಳಿವೆ ಅವುಗಳನ್ನೇ ನನ್ನ ಮಕ್ಕಳೆಂದು ತಿಳಿದುಕೊಂಡು ಅವರ ಶಿಕ್ಷಣಕ್ಕೆ ಬೇಕಾದ ಸಹಾಯ ಮಾಡುತ್ತಿದ್ದೇನೆ" ಎಂದು ಹೇಳುತ್ತಾಳೆ.

ಬಹುತೇಕ ಮಹಿಳೆಯರಿಗೆ ಘರವಾಲಿ ಮಕ್ಕಳು ಹೆರುವುದನ್ನು ನಿಷೇಧಿಸಿರುತ್ತಾಳೆ. ಅವರ ಮೇಲಿನ ಸಾಲ ಮುಗಿಯುವವರೆಗೂ ಅವಳು ಅದಕ್ಕೆ ಆಸ್ಪದ ಕೊಡುವುದಿಲ್ಲ. ಮಕ್ಕಳನ್ನು ಹೆತ್ತರೆ ಅವರ ದೇಹದ ಅಂದ ಕೆಡುತ್ತದೆ. ಮಾರುಕಟ್ಟೆಯಲ್ಲಿ ಬೇಡಿಕೆ ಕಡಿಮೆಯಾಗುತ್ತದೆ. ಅಲ್ಲದೇ ದಂಧೆಯ ಮೇಲಿನ ನಿಷ್ಠೆ ಶ್ರದ್ಧೆ ಕಡಿಮೆಯಾಗುತ್ತದೆ ಎಂಬುದು ಘರವಾಲಿಯ ವಾದವಾಗಿದೆ. ಹಾಗಾಗಿ ಒಂದು ವಯಸ್ಸು ಮೀರುವವರೆಗೂ ಅವರು ನಿರಂತರ ಗರ್ಭಪಾತಕ್ಕೆ ಗುರಿಯಾಗುತ್ತಾರೆ. ಈ ಸಂದರ್ಭಗಳಲ್ಲಿ

ಅಸುರಕ್ಷಿತ ವಿಧಾನಗಳನ್ನು ಅನುಸರಿಸುವುದರಿಂದ ಉಂಟಾಗುವ ಸೋಂಕಿನಿಂದ ಮುಂದೆ ಬೇಕಾದಾಗ ಮಕ್ಕಳಾಗುವ ಸಾಧ್ಯತೆಗಳು ತುಂಬಾ ಕಡಿಮೆ. ಬಹಳ ದಿನಗಳವರೆಗೆ ಒಬ್ಬನೇ ಪಾರ್ಟನರ್ ಜೊತೆ ಇದ್ದ ಶೇಕಡಾ ೪೦ರಷ್ಟು ಮಹಿಳೆಯರಿಗೆ ೨-೩ ಮಕ್ಕಳಿರುವುದು ಕಂಡುಬರುತ್ತಿದ್ದು, ಅವರಿಗೆ ಮನಸ್ಸಿರದಿದ್ದರೂ ಸಹ ಪಾರ್ಟನರ್‌ಗಾಗಿ ಮಕ್ಕಳನ್ನು ಹೆರುತ್ತಾರೆ. ಆದರೆ ಆತ ಒಂದು ದಿನ ಹೇಳದೇ ಕೇಳದೆ ಬಿಟ್ಟೆದ್ದು ಹೋದಾಗ, ಅದೇ ಮಕ್ಕಳು ಹೊರೆಯಾಗಿ, ಅವುಗಳನ್ನೂ ದಂಧೆಗೆ ನಿಲ್ಲಿಸಿರುವ ಪ್ರಕರಣಗಳೂ ಇವೆ ಎಂದು ಮಹಿಳೆಯರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಹೀಗೆ ಅವರಿಗೆ ಹುಟ್ಟಿದ ಮಕ್ಕಳು ಈಗ ಏನು ಮಾಡುತ್ತಿದ್ದಾರೆ, ಎಲ್ಲಿದ್ದಾರೆ, ಹೇಗಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಮಾಡಿದ ಪ್ರಯತ್ನದಿಂದ ದೊರೆತ ಮಾಹಿತಿಗಳು ಹೀಗಿವೆ. ಶೇಕಡಾ ೪೦ರಷ್ಟು ಮಹಿಳೆಯರು ತಮ್ಮ ಮಕ್ಕಳನ್ನು ಹಳ್ಳಿಯಲ್ಲಿ ತಾಯಂದಿರ ಜೊತೆ ಬಿಟ್ಟಿದ್ದಾರೆ. ಆ ಮಕ್ಕಳು ಅಲ್ಲಿಯೇ ಶಾಲೆಗೆ ಹೋಗುತ್ತವೆ. ಶೇಕಡಾ ೧೬.೬೭ರಷ್ಟು ಮಹಿಳೆಯರು ತಮ್ಮ ಮಕ್ಕಳನ್ನು ಬೇರೆ ಎಲ್ಲಿಯೂ ಇಡಲು ಸಾಧ್ಯವಾಗದೇ ಋತುಮತಿಯರಾದ ಕೂಡಲೇ ಮದುವೆ ಮಾಡಿಕೊಟ್ಟಿದ್ದಾರೆ. ಕೆಲವು ಮದುವೆಗಳು ಮುರಿದು ಬಿದ್ದು, ಅವರೂ ಇದೇ ದಂಧೆಯಲ್ಲಿ ಮುಂದುವರೆದಿದ್ದಾರೆ. ಮುಂಬಯಲ್ಲಿ ಬೆಳೆದ ಮಕ್ಕಳನ್ನು, ಹಳ್ಳಿಗೆ ಮದುವೆ ಮಾಡಿಕೊಟ್ಟರೆ ಅಲ್ಲಿ ಹೊಂದಿಕೊಳ್ಳಲಾಗದೇ ತಿರುಗಿ ಬಂದಿದ್ದಾರೆ. ಕೆಲವರು ತಮ್ಮ ಗಂಡಂದಿರನ್ನು ಕರೆದುಕೊಂಡು ಬಂದು ಇಲ್ಲಿಯೇ ಉದ್ಯೋಗಕ್ಕೆ ಹಚ್ಚಿದ್ದಾರೆ. ಶೇಕಡಾ ೩.೩೩ರಷ್ಟು ಮಹಿಳೆಯರು ಮಕ್ಕಳನ್ನು ಮುಂಬಯಿಯ ಸರಕಾರಿ ವಸತಿ ನಿಲಯದಲ್ಲಿ, ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರು ಸ್ವಯಂ ಸೇವಾ ಸಂಸ್ಥೆಯ ವಸತಿ ನಿಲಯದಲ್ಲಿ ಇಟ್ಟಿರುವುದು ಕಂಡು ಬರುತ್ತದೆ. ಕೆಲವರು ತಮ್ಮ ಮಕ್ಕಳನ್ನು ತಮ್ಮ ಜೊತೆಯಲ್ಲಿಯೇ ಇಟ್ಟುಕೊಂಡಿದ್ದಾರೆ.

ಹಳ್ಳಿಯಲ್ಲಿ ಅಜ್ಜಿಯ ಜೊತೆ, ಸಂಬಂಧಿಕರ ಜೊತೆ ಇದ್ದ ಮಕ್ಕಳು ಸುರಕ್ಷಿತರಾಗಿರುತ್ತಾರೆಂಬುದು ಭರವಸೆಯ ಮಾತಲ್ಲ. ಏಕೆಂದರೆ, ವಯಸ್ಸಾದ ಅಜ್ಜಿ ಹೇಗೆ ನೋಡಿಕೊಳ್ಳುತ್ತಾಳೋ. ಅಲ್ಲದೇ ಬಹಳಷ್ಟು ಪ್ರಕರಣಗಳಲ್ಲಿ ತಾಯಂದಿರು ದಂಧೆಯ ಮನೆಯಲ್ಲಿದ್ದಾಗ, ಊರಲ್ಲಿ ಅವರನ್ನು ನೋಡಿಕೊಳ್ಳುತ್ತಿದ್ದ ಅಜ್ಜಿ, ಅವರ ತಾಯಿಗೆ ಗೊತ್ತಿಲ್ಲದೇ ದೇವದಾಸಿ ಮಾಡಿರುವ ಉದಾಹಣೆಗಳಿವೆ. ಹಾಗೆಯೇ ಕಾಮಾಟಿಪುರದಲ್ಲಿ ತಾಯಿಯ ಜೊತೆಗೆ ಇದ್ದ ಮಕ್ಕಳು ಸುರಕ್ಷಿತರಾಗಿಲ್ಲ. ಇವರ ಜೊತೆ ಇರುವ ಮಕ್ಕಳು, ಅದೇ ರೋಗಗ್ರಸ್ತ ವಾತಾವರಣದಲ್ಲಿ ಬೆಳೆಯುವುದರಿಂದ ಅವರ ನಾಳೆಯ ಕುರಿತು ಏನನ್ನೂ ಮಾತನಾಡಲು ಸಾಧ್ಯವಿಲ್ಲ.

ತುಂಬಾ ಬೆರಳೆಣಿಕೆಯಷ್ಟು ಮಹಿಳೆಯರು ಸರಕಾರಿ ವಸತಿ ನಿಲಯದಲ್ಲಿ, ಸ್ವಯಂ ಸೇವಾ ಸಂಸ್ಥೆಯ ಪುನರ್ವಸತಿ ಕೇಂದ್ರದಲ್ಲಿ ಮಕ್ಕಳನ್ನು ಇಟ್ಟಿದ್ದಾರೆ. ಮುಂಬಯಿ ಟಿ ಚಾನೆಲ್ ಎಂಬುದೊಂದು ಕ್ರಿಶ್ಚಿಯನ್ ಮೂಲದ ಸಂಸ್ಥೆ. ಅಮೇರಿಕಾದ ಚರ್ಚ ಒಂದರಿಂದ ಧನಸಹಾಯ ಒದಗಿಸಿಕೊಳ್ಳುತ್ತಿದೆ. ಅವರು ಇಂತ ಸಂಕಷ್ಟದಲ್ಲಿರುವ ಮಕ್ಕಳನ್ನು ತಮ್ಮ ಸಂಸ್ಥೆಯಲ್ಲಿ ಇಟ್ಟುಕೊಂಡು ವಿದ್ಯಾಭ್ಯಾಸ

ನೀಡುತ್ತಾರೆ. ತುಂಬಾ ಉನ್ನತ ಮಟ್ಟದ ಶೈಲಿಯ ಜೀವನ, ವಿದ್ಯಾಭ್ಯಾಸ ನೀಡುವ ವ್ಯವಸ್ಥೆ ಇದೆ. ಆದರೆ ಅವರ ಒಂದು ಕರಾರು ಅಂದರೆ, ಒಂದು ಸಾರಿ ಮಗುವನ್ನು ಕೊಟ್ಟರೆ, ಅದಕ್ಕೆ ೧೮ ವರ್ಷ ಆಗುವವರೆಗೆ ಇವರ ಹತ್ತಿರ ಕಳಿಸುವುದಿಲ್ಲ. ಇವರು ಪ್ರತಿ ಬುಧವಾರ ಮತ್ತು ರವಿವಾರ ಸಂಸ್ಥೆಯ ಚರ್ಚಿಗೆ ಹೋಗಬಹುದು. ಅದೇ ಸಂದರ್ಭದಲ್ಲಿ ಮಗಳನ್ನು ನೋಡಿ ಮಾತನಾಡಿಸಿ ಬರಬಹುದು. ಆದರೆ ಮಗುವನ್ನು ತಮ್ಮ ಗಲ್ಲಿಗೆ ಮನೆಗೆ ಕರೆದುಕೊಂಡು ಬರುವ ಹಾಗಿಲ್ಲ. ಹೀಗೆ ಸಂಸ್ಥೆಯಲ್ಲಿ ಇಟ್ಟ ಎಷ್ಟೋ ಮಕ್ಕಳಿಂದು ಇಂಜನೀಯರ್, ಡಾಕ್ಟರ್ ಆಗಿದ್ದಾರೆ. ವಿದೇಶಗಳಲ್ಲಿಯೂ ವ್ಯಾಸಂಗ ಮಾಡುತ್ತಿದ್ದಾರೆ. ಒಂದು ಸಾರಿ ಅವರು ವಿದ್ಯಾಭ್ಯಾಸ ಮುಗಿಸಿ, ಅವರಿಗೆ ಉದ್ಯೋಗ ದೊರಕಿಸಿಕೊಟ್ಟರೆ, ಇವರು ತಮ್ಮ ಹತ್ತಿರ ಅವರನ್ನು ಇಟ್ಟುಕೊಳ್ಳುವುದಿಲ್ಲ. ಇದೊಂದು ಉತ್ತಮ ವ್ಯವಸ್ಥೆ ಆಗಿದ್ದರೂ ಸಹ ಬಹಳಷ್ಟು ಮಹಿಳೆಯರು ತಮ್ಮ ಮಕ್ಕಳನ್ನು ಅಲ್ಲಿಗೆ ಕಳಿಸಲು ಇಷ್ಟಪಡುವುದಿಲ್ಲ. ಯಾಕೆ ಅಲ್ಲಿಗೆ ನೀವು ಮಕ್ಕಳನ್ನು ಕಳಿಸುವುದಿಲ್ಲ ಎಂದು ಕೇಳಿದ್ದಕ್ಕೆ "ಒಂದು ಸಾರಿ ಮಕ್ಕಳು ಅಲ್ಲಿಗೆ ಹೋದರೆ, ನಮ್ಮನ್ನು ನಂಬುವುದಿಲ್ಲ. ಹಾಗಾಗಿ ನಮಗೆ ಇಲ್ಲಿ ಎಷ್ಟೇ ಕಷ್ಟವಿದ್ದರೂ, ಅವರ ಜೊತೆ ಕಳಿಸುವುದಿಲ್ಲ. ಅವರು ನಮ್ಮ ಧರ್ಮವನ್ನೇ ಮರೆಸುತ್ತಾರೆ". ಎಂದು ಹೇಳುತ್ತಾರೆ.

ಒಂದೊಂದು ಸಾರಿ ಗಿರಾಕಿಗಳು ಬಂದಾಗ ಮಕ್ಕಳನ್ನು ಎಲ್ಲಿ ಇಡುವುದು, ತಲೆಹಿಡುಕರ ಕೈಯಲ್ಲಿ, ರಸ್ತೆಯಲ್ಲಿ ಇಸ್ಪಿಟ್ ಆಡ್ತಾ ಕುಳಿತ ಹೆಂಗಸರ ಕೈಯಲ್ಲಿ ಅಥವಾ ತಾನು ಲೈಂಗಿಕ ಚಟುವಟಿಕೆ ನಡೆಸುವ ಮಂಚದ ಅಡಿಯಲ್ಲಿ ಮಲಗಿಸಿ ಬಿಡುತ್ತಾರೆ. ಇದೊಂದು ನರಕ ಯಾತನೆ. ಇಂತವರ ಮಕ್ಕಳನ್ನು ನೋಡಿಕೊಳ್ಳಲು ವಯಸ್ಸಾದ ಮಹಿಳೆಯರು ಇದ್ದಾರೆ. ಹಾಗೆಯೇ ಒಳ್ಳೆಯ ಪರಮನೆಂಟ್ ಪಾರ್ಟನರ್ ಇರುವ ಯುವತಿಯರೂ ಸಹ ಇಂತ ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಅವರಿಗೆ ಒಂದು ಮಗುವಿಗೆ ಒಂದು ದಿನಕ್ಕೆ ೨೦೦ ರೂಪಾಯಿ ಕೊಡಬೇಕಾಗುತ್ತದೆ.

ಸೋಲ್ಲಾಪುರ ಮೂಲದ ೨೨ ವರ್ಷದ ಯುವತಿಯೊಬ್ಬಳು ಎರಡು ಮಕ್ಕಳ ತಾಯಿ. ಅವಳಿಗೆ ೩ ವರ್ಷದ ಹೆಣ್ಣು ಮಗು ಮತ್ತು ೭ ವರ್ಷದ ಗಂಡು ಮಗು. ಗಂಡು ಮಗುವನ್ನು ಘರವಾಲಿಯೊಬ್ಬಳಿಗೆ ಕೊಟ್ಟಿದ್ದಾಳೆ. ತನ್ನ ಹತ್ತಿರ ೩ ವರ್ಷದ ಹೆಣ್ಣುಮಗುವನ್ನು ಇಟ್ಟುಕೊಂಡಿದ್ದಾಳೆ. ಅವಳಿಗೆ ಅತ್ಯಂತ ಭಯಂಕರವಾದ ಚರಸ್ ಸೇವಿಸುವ ಅಭ್ಯಾಸ ಇದೆ. ಊಟ ನೀರಿಗಿಂತ ಹೆಚ್ಚು ಚರಸ್ ಮೇಲೇನೇ ಅವಳು ಅವಲಂಬಿತಳಾಗಿದ್ದಾಳೆ. ಸದಾ ಅದರ ಅಮಲಿನಲ್ಲಿಯೆ ಇರುತ್ತಾಳೆ. ಮನೆ ಎಂಬುದು ಇಲ್ಲವೇ ಇಲ್ಲ. ಸಂಬಂಧಿಕರೂ ಇಲ್ಲ. ೪-೫ ವರ್ಷದ ಹಿಂದೆ ಅವಳೊಂದು ಸುಂದರ ಭೋಗದ ವಸ್ತುವಾಗಿದ್ದಳು. ಅವಳೆಂದರೆ ದುಡ್ಡು ಸುರಿದು ಬರುವವರು ಲೈನ್ ಹಚ್ಚುತ್ತಿದ್ದರಂತೆ. ಆದರೆ ಈಗ ಅವಳಿಗೆ ಅನ್ನವಂತೂ ದೂರ. ನೀರೂ ಸಹ ಸಿಗುತ್ತಿಲ್ಲ. ಅಂತವಳಿಗೆ ಚರಸ್ ಚಟ. ಎಲ್ಲಿಯೋ ಬೀಳುತ್ತಾಳೆ ಎಲ್ಲಿಯೋ ಏಳುತ್ತಾಳೆ. ಮಗಳಿಗೆ ಏನು ತಿನ್ನಿಸುತ್ತಾಳೋ? ಇದು ಒಂದೆರಡು ಮಕ್ಕಳ ಗೋಳಲ್ಲ. ಕಾಮಾಟಿಪುರದಲ್ಲಿ, ಬೀವಂಡಿಯಲ್ಲಿ, ಗ್ರ್ಯಾಂಟ್ ರೋಡಲ್ಲಿ ಕೂಗಳತೆಯ ದೂರಿಗೊಬ್ಬರು ಇಂತವರು ಸಿಕ್ಕೇ ಸಿಗುತ್ತಾರೆ. ಬೀವಂಡಿಯಲ್ಲಿ ಇಂತ ಮಕ್ಕಳ ಗುಂಪೆ ಇದೆ. ಹೆಣ್ಣು ಹುಡುಗಿ ಇದ್ದರೆ

ಯಾರೂ ಸಾಕಿಕೊಳ್ಳುತ್ತಾರೆ. ಆದರೆ ಗಂಡು ಹುಡುಗರು ೮-೧೦ ವರ್ಷಕ್ಕೆಲ್ಲ ದೊಡ್ಡ ಕಳ್ಳರಾಗಿ ಬಿಟ್ಟಿರುತ್ತಾರೆ. ಇಂತ ಮಕ್ಕಳಿಗಾಗಿ ಪ್ರೇರಣಾ ಸಂಸ್ಥೆ ಕೆಲಸ ಮಾಡುತ್ತಿದ್ದು, ನೂರಾರು ಮಕ್ಕಳಿಗೆ ದಾರಿ ದೀಪವಾಗಿದೆ. ಆದರೆ ಇಲ್ಲಿ ಇರಲು ಇಷ್ಟ ಪಡದ ಎಷ್ಟೋ ಮಕ್ಕಳು ಗಲ್ಲಿಗಳಲ್ಲಿ ಇದ್ದಾರೆ. ಇವರು ಒಂದು ವಯಸ್ಸಿಗೆ ಬರುವ ಹೊತ್ತಿಗೆ ಬದುಕಿನಲ್ಲಿ ಯಾರ ಕೈಯಿಂದಲೂ ಸರಿ ಮಾಡದಷ್ಟು ವ್ಯಕ್ತಿತ್ವ ಹೀನರಾಗಿ ಬಿಟ್ಟಿರುತ್ತಾರೆ.

ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯವೆನ್ನುವುದೇ ಬಲು ವಿಚಿತ್ರವಾದುದು ಒಬ್ಬ ವ್ಯಕ್ತಿಗೆ ಅದು ಬೇಕೋ ಬೇಡವೋ, ಜೊತೆಗಿರಲಿ ಬಿಡಲಿ ಆವರಿಸಿಕೊಂಡು ಬಿಡುತ್ತದೆ. ಅದರಲ್ಲೂ ಭಾರತೀಯ ಸಾಮಾಜಿಕ ಪರಿಸ್ಥಿತಿಗಳು ಧರ್ಮ ಜಾತಿಗಳ ಮೇಲೆ ನಿಂತಿದೆ. ಒಬ್ಬ ವ್ಯಕ್ತಿಯ ಹುಟ್ಟುವ, ಮೊದಲಿನಿಂದ ಹಿಡಿದು ಸಾಯುವ ಮತ್ತು ಸತ್ತ ಮೇಲೂ ಅದರ ಪ್ರಭಾವವನ್ನು ಬಿಡದೇ ಪ್ರಭಾವಿಸುವುದು ಜಾತಿ. ಇಂತಹ ಜಾತಿ ಹಿನ್ನೆಲೆಯನ್ನು ಹೊಂದಿ ಕೆಂಪುದೀಪಕ್ಕೆ ಸಾಗಿಸಲ್ಪಟ್ಟ ಬಾಲೆಯರ ಸಾಮಾಜಿಕ ಸ್ಥಿತಿಯು ತುಂಬಾ ಗಂಭೀರವಾದುದು ಎಂಬ ಅಂಶಗಳನ್ನು ಮೇಲಿನ ಅಂಶಗಳಿಂದ ಕಂಡುಕೊಂಡಿದ್ದೇವೆ. ಆಡುವ ವಯಸ್ಸಿನ ಶಾಲೆಯಲ್ಲಿ ಇರಬೇಕಾದ ಮಕ್ಕಳನ್ನು ಧಾರ್ಮಿಕ ಕಂದಾಚಾರಗಳಿಗೆ ಜೋತು ಬಿದ್ದು ಹೆತ್ತ ಕಂದಮ್ಮಗಳನ್ನು ತಾಯಿಯೇ ಮುಂದೆ ನಿಂತು ಬಾಲ್ಯದಲ್ಲೇ ಮದುವೆ ಮಾಡಿ, ದೇವದಾಸಿ ಮಾಡಿ, ಶೋಷಣೆಗೆ ಈಡು ಮಾಡುತ್ತಿರುವುದು ಬಹು ದೊಡ್ಡ ಆತಂಕ. ಇವರಿಗರ ಒಳ್ಳೆಯ ಪರಿಸರ ಇಲ್ಲ. ಇವರು ಇರುವ ಕೇರಿಯ ಸುತ್ತ ಮುತ್ತೆಲ್ಲ ತಲೆಹಿಡುಕರು, ಘರವಾಲಿಗಳ ಸೂಕ್ಷ್ಮ ಕಾವಲು. ಅವಕಾಶ ಸಿಕ್ಕರೆ ಬಲೆ ಹಾಕಿಯೇ ಬಿಡುತ್ತಾರೆ. ಇಂತದ್ದರಲ್ಲೇ ಬದುಕು ಕಳೆದ ಹೆಣ್ಣುಮಕ್ಕಳು ತಮಗೆ ಮಕ್ಕಳು ಬೇಕೋ ಬೇಡವೋ ಎಂಬ ವಿಚಾರಕ್ಕೆ ಬಂದಾಗ ತೆಗೆದುಕೊಳ್ಳುವ ನಿರ್ಣಯ ತುಂಬಾ ಸಂವೇದನಾತ್ಮಕವಾದುದು. ನಮ್ಮ ಸ್ಥಿತಿ ನಾವು ಹೆತ್ತ ಮಕ್ಕಳಿಗೆ ಬರುವುದು ಬೇಡ ಎಂದು ತೀರ್ಮಾನಿಸಿ, ತಾವು ಮಕ್ಕಳನ್ನು ಹೆರುವುದೇ ಬೇಡ ಎಂದು ಮಾಡಿದ ನಿರ್ಧಾರದ ಹಿಂದೆ ಸಾಮಾಜಿಕ ಕಳಕಳಿ ಇರದಿದ್ದರೂ, ಆ ಸಮಸ್ಯೆ ಯಾರಿಗೂ ಬರುವುದೇ ಬೇಡ ಎಂಬ ಸೂಕ್ಷ್ಮತೆ ಒಂದು ಆರೋಗ್ಯಯುತ ಸಮಾಜದ ನಿರ್ಮಾಣಕ್ಕೆ ಬುನಾದಿ ಅನ್ನಿಸುತ್ತದೆ. ಮಕ್ಕಳ ಇಂತ ದುಸ್ಥಿತಿಗೆ, ಸಂಕೀರ್ಣವಾದ ಸಾಮಾಜಿಕ ಹಿನ್ನೆಲೆ ಒಂದೇ ಕಾರಣ ಆಗಿರಲಾರದು. ಅದಕ್ಕಾಗಿ ಅವರ ಆರ್ಥಿಕ ಸ್ಥಿತಿ ಹೇಗಿರಬಹುದು ಎಂಬ ಕೌತುಕಗಳಿಗೆ ಅನುವು ಮಾಡಿ ಕೊಟ್ಟಿದೆ. ಶೋಷಿತ ಬಾಲೆಯರ ಕುಟುಂಬದ ಆರ್ಥಿಕ ಸ್ಥಿತಿ ಪೂರ್ವದಲ್ಲಿ ಹೇಗಿತ್ತು ಮತ್ತು ಪ್ರಸ್ತುತ ರೆಡ್‌ಲೈಟ್ ಏರಿಯಾಗಳಲ್ಲಿರುವಾಗ ಅವರ ಆರ್ಥಿಕ ಸ್ಥಿತಿ ಹೇಗಿದೆ ಎಂಬುದನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನ ಮಾಡಲಾಗಿದೆ.

### ೩.೫. ಆರ್ಥಿಕ ಜೀವನ

**ಕೋಷ್ಟಕ ೩.೧೫: ನಿಮ್ಮ ಮನೆಯಲ್ಲಿ ಏನು ಕೆಲಸ ಮಾಡುತ್ತಿದ್ದರು?**

| ಅ.ಸ. | ಕುಟುಂಬದ ವೃತ್ತಿ | ಸಂಖ್ಯೆ | ಶೇಕಡ |
|---|---|---|---|
| ೧ | ಕೂಲಿ | ೨೧ | ೭೦ |
| ೨ | ಚಾಕರಿ(ಜೀತ) | ೧ | ೩.೩೩ |
| ೩ | ಚಿಕ್ಕ ಪುಟ್ಟ ವ್ಯಾಪಾರ | ೨ | ೬.೬೬ |
| ೪ | ದೇವಸ್ಥಾನದ ಸೇವೆ | ೧ | ೩.೩೩ |
| ೫ | ಸರಕಾರಿ ನೌಕರಿ | ೨ | ೬.೬೬ |
| ೬ | ಖಾಸಗಿ ನೌಕರಿ | ೧ | ೩.೩೩ |
| ೭ | ಇತರೆ( ಹೆಸರಿಸಿ) | ೨ | ೬.೬೬ |
| | **ಒಟ್ಟು** | **೩೦** | **೧೦೦** |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನಕ್ಕೆ ಒಳಪಡಿಸಿದ ಬಹುತೇಕ ಮಹಿಳೆಯರು ಬಡತನ ಹಿನ್ನೆಲೆಯುಳ್ಳವರು ಎಂಬುದು ಈ ಹಿಂದೆ ನಾವು ಕಂಡುಕೊಂಡಿದ್ದೇವೆ. ಅದರೆ ಅವರ ಕುಟುಂಬಗಳಲ್ಲಿ ಏನು ಕೆಲಸ ಮಾಡುತ್ತಿದ್ದರು, ಅವರ ಉದ್ಯೋಗ ಯಾವುದಾಗಿತ್ತು ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಿದಾಗ, ಎಲ್ಲ ಮಹಿಳೆಯರ ಕುಟುಂಬಗಳೂ ಭೂರಹಿತ ಕುಟುಂಬಗಳಾಗಿದ್ದವು. ಅವರಲ್ಲಿ ಯಾರೊಬ್ಬರಿಗೂ ಭೂಮಿ ಇರಲಿಲ್ಲವೆಂಬುದು ಕಂಡು ಬಂದಿತು. ಅವರಲ್ಲಿ ಮೇಲಿನ ಕೋಷ್ಟಕದ ಪ್ರಕಾರ, ಶೇಕಡಾ ೭೦ರಷ್ಟು ಮಹಿಳೆಯರ ಮನೆಗಳಲ್ಲಿ ಕೂಲಿಯನ್ನೇ ಮಾಡುತ್ತಿದ್ದರು ಎಂಬುದು ಕಂಡುಬರುತ್ತದೆ. ಶೇಕಡಾ ೬.೬೬ರಷ್ಟು ಮನೆಗಳಲ್ಲಿ ಚಿಕ್ಕ ಪುಟ್ಟ ವ್ಯಾಪಾರ, ಶೇಕಡಾ ೬.೬೬ರಷ್ಟು ಮನೆಗಳಲ್ಲಿ ಸರಕಾರಿ ನೌಕರಿ, ಶೇಕಡಾ ೩.೩೩ರಷ್ಟು ಮನೆಗಳಲ್ಲಿ ಖಾಸಗಿ ನೌಕರಿ, ಶೇಕಡಾ ೩.೩೩ರಷ್ಟು ಮನೆಗಳಲ್ಲಿ ಚಾಕರಿ ಮತ್ತು ಶೇಕಡಾ ೩.೩೩ರಷ್ಟು ಮನೆಗಳಲ್ಲಿ ದೇವಸ್ಥಾನದಲ್ಲಿ ಸೇವೆ ಮಾಡುತ್ತಿದ್ದುದು ಕಂಡು ಬಂದಿದೆ. ಶೇಕಡಾ ೬.೬೬ರಷ್ಟು ಕುಟುಂಬಗಳು ೨-೩ ತಲೆಮಾರಿನಿಂದ ಮುಂಬಯಿಯಲ್ಲಿ ವಾಸವಾಗಿದ್ದು ಸ್ವಂತ ವೇಶ್ಯಾಗೃಹಗಳನ್ನು ಹೊಂದಿರುವುದು ಕಂಡುಬರುತ್ತವೆ.

ಆಧುನಿಕ ತಂತ್ರಜ್ಞಾನದಿಂದಾಗಿ ಈಗ ಜಾತಿಗಳಿಗೂ ಮತ್ತು ಕಸುಬುಗಳಿಗೂ ನಡವೆ ಸಂಬಂಧ ಇಲ್ಲದಾಗಿದೆ. ಇದು ಸ್ಥಿತ್ಯಂತರಗಳಿಗೆ ಒಳಗಾಗುವಾಗಲೇ, ಕೃಷಿ ದುಡಿಮೆಯಲ್ಲಿ ಕೃಷಿ ಮಾಡುವವರಿಲ್ಲ. ಸಂಖ್ಯಾತ್ಮಕವಾಗಿ ಹಲವು ಬದಲಾವಣೆಗಳಾಗಿವೆ ಗುತ್ತಿವೆ. ಏಕೆಂದರೆ ಕೃಷಿ ಸಾಗುವಳಿ ಮಾಡುವವರಿಗೂ,

ಕೃಷಿ ಕೂಲಿ ಮಾಡುವವರ ನಡುವೆ ಒಂದು ದೊಡ್ಡ ವ್ಯತ್ಯಾಸವಿದ್ದು, ಕೃಷಿ ಕೂಲಿ ಮಾಡುವ ಬಹುಸಂಖ್ಯಾತರು ಭೂ ರಹಿತರಾಗಿದ್ದಾರೆ. ಅವರಿಗೆ ಕೊಡುವ ಕೂಲಿಯು ಅತ್ಯಂತ ಕಡಿಮೆ ಇರುವುದರಿಂದ ಕೃಷಿ ಕೂಲಿಯನ್ನು ಅವಲಂಬಿಸಿದ ಬಹುಸಂಖ್ಯಾತರು ಬಡತನದಲ್ಲಿಯೇ ಇರುವಂತಾಗಿದೆ. ೨೦೧೧ರ ಸಾಮಾಜಿಕ–ಆರ್ಥಿಕ ಜಾತಿ ಗಣತಿ(ಎಸ್.ಐ.ಸಿ.ಸಿ)ಯು ಗ್ರಾಮೀಣ ಪ್ರದೇಶದಲ್ಲಿ ಇರುವ ಶೇಕಡಾ ೪೯ರಷ್ಟು ಕುಟುಂಬಗಳು ಬಡತನದಲ್ಲಿವೆ. ಶೇಕಡಾ ೫೧ರಷ್ಟು ಕುಟುಂಬಗಳು ಬದುಕಿಗೆ ಪ್ರತಿದಿನವೂ ಕೂಲಿ ಕೆಲಸವನ್ನು ಅವಲಂಬಿಸಿವೆ. ಶೇಕಡಾ ೩೦ರಷ್ಟು ಭೂಮಾಲೀಕತ್ವವನ್ನು ಹೊಂದಿಲ್ಲ. ಹಳ್ಳಿಗಳಲ್ಲಿ ಇರುವ ಶೇಕಡ ೭೭ರಷ್ಟು ಕುಟುಂಬಗಳು ಪ್ರತಿದಿನ ದುಡಿಮೆಗಾಗಿ ೫ ಕಿ, ಮೀ. ಪ್ರಯಾಣ ಮಾಡಬೇಕಿದೆ'(ಎಚ್.ಡಿ. ಪ್ರಶಾಂತ್, ೨೦೧೬). ಹಲವಾರು ವರದಿಗಳು ತಿಳಿಸುವಂತೆ ಸಾಮಾಜಿಕವಾಗಿ ಕೆಳಸ್ತರದಲ್ಲಿರುವ ಪರಿಶಿಷ್ಟರೇ ಭೂರಹಿತರಾಗಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರಾಗಿದ್ದಾರೆ. ಹಾಗೂ ಅವರಲ್ಲಿ ಬೇರೆ ವೃತ್ತಿಗಳ ಕೌಶಲ್ಯಗಳ ಕೊರತೆಯ ಕಾರಣದಿಂದಾಗಿ ಅವರು ಕೃಷಿ ಕಾರ್ಮಿಕರಾಗಿಯೇ ಬದುಕು ನಡೆಸುತ್ತಿದ್ದಾರೆಂಬುದು ಕಂಡುಬರುತ್ತದೆ.

ಬಿಜಾಪೂರ ಜಿಲ್ಲೆಯ ಬಹತೇಕ ಭಾಗ ಮತ್ತು ಬೆಳಗಾವಿ ಜಿಲ್ಲೆಯ ಮಹಾರಾಷ್ಟ್ರ ಗಡಿಗೆ ಹೊಂದಿಕೊಂಡಂತ ಅಥಣಿ ಮತ್ತು ರಾಯಭಾಗ ತಾಲೂಕಿನ ಹಲವು ಹಳ್ಳಿಗಳಲ್ಲಿ ಮಳೆ ಬೀಳುವುದು ಸ್ವಲ್ಪ ತಡವಾದರೂ ಮತ್ತು ಕಡಿಮೆಯಾದರೂ ನಿರೀಕ್ಷಿಸಿದ ಬೆಳೆ ಬರುವುದೇ ಇಲ್ಲ. ಹಾಗಾಗಿ ಅಲ್ಲಿ ಬರಗಾಲ ಕಟ್ಟಿಟ್ಟ ಬುತ್ತಿ. ಅಥಣಿ ತಾಲೂಕಿನ ೨೨ ಹಳ್ಳಿಗಳಲ್ಲಿ ಕುಡಿಯಲೂ ನೀರಿರುವುದಿಲ್ಲ. ಹೀಗಾಗಿ ಜನವರಿ ಕೊನೆಯ ವಾರದಿಂದ ಕೂಲಿ ಕಾರ್ಮಿಕರು, ಭೂ ರಹಿತರು ಮುಂದಿನ ವರ್ಷದ ಕಾಳಿಗಾಗಿ ಗುಳೆ ಹೋಗಲೇಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಇದೇ ಕ್ಷೇತ್ರಕಾರ್ಯದಲ್ಲಿ ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ತಳೇವಾಡ, ಕಲಗುರ್ಕಿ, ನಂದ್ಯಾಳ ಪಿ.ಯು. ಮೊದಲಾದ ಹಳ್ಳಿಗಳಿಗೆ ಭೇಟಿ ನೀಡಿದಾಗ ಹಳ್ಳಿಗಳ ಪರಿಶಿಷ್ಟ ಜಾತಿಯ ಕೇರಿಯ ಮನೆಗಳಲ್ಲಿ ವಯಸ್ಸಾದ ವೃದ್ಧರು ಚಿಕ್ಕ ಚಿಕ್ಕ ಮಕ್ಕಳು ಅವರನ್ನು ನೋಡಿಕೊಳ್ಳಲು ಒಬ್ಬ ಹೆಣ್ಣು ಮಗಳನ್ನು ಬಿಟ್ಟರೆ, ದುಡಿಯುವ ವಯಸ್ಸಿನವರು ಯಾರೂ ಇರಲಿಲ್ಲ. ಊರೇ ಬಿಕೋ ಅನ್ನುತ್ತಿತ್ತು. ದುಡಿಯಲು ಶಕ್ತರಿರುವ, ಶಾಲೆಗೆ ಹೋಗುವ ಮಕ್ಕಳನ್ನೂ ಸೇರಿಸಿ ಎಲ್ಲರೂ ಗುಳೆ ಹೋಗಿದ್ದರು.

ಕೂಲಿಯನ್ನು ಹೊರತುಪಡಿಸಿ ಶೇಕಡಾ ೬.೬೬ರಷ್ಟು ಮಹಿಳೆಯರ ಕುಟುಂಬಗಳಲ್ಲಿ ಸರಕಾರಿ ನೌಕರಿ ಮಾಡುತ್ತಿದ್ದರು. ಇವರು ಭಾರತೀಯ ಭೂಸೇನೆಯಲ್ಲಿ ಸೈನಿಕರಾಗಿ ಸೇರಿಕೊಂಡಿದ್ದರು. ಆದರೆ ಯಾವುದೋ ಸಮಸ್ಯೆಯಲ್ಲಿ ಸಿಲುಕಿಕೊಂಡು ಅವಧಿ ಪೂರ್ಣಗೊಳಿಸದೆ ಬಂದಿದ್ದರಿಂದ ಅವರಿಗೆ ಯಾವುದೇ ಸೌಲಭ್ಯಗಳೂ ದೊರೆತಿರುವುದಿಲ್ಲ. ಅಲ್ಲದೇ ಉಳಿದಂತೆ ಅತೀ ಕಡಿಮೆ ಪ್ರಮಾಣದ ಕುಟುಂಬಗಳು ಕಟ್ಟಿಗೆ ಒಡೆಯುವುದು, ಮಾರುವುದು ಇಂತಹ ಚಿಕ್ಕ ಪುಟ್ಟ ವ್ಯಾಪಾರಗಳನ್ನು ಮಾಡುತ್ತಿದ್ದರು. ಕೆಲವರು ಮಕ್ಕಳನ್ನು ಜೀತಕ್ಕಿಟ್ಟಿದ್ದರು. ಮತ್ತೆ ಕೆಲವರು ದೇವಸ್ಥಾನಗಳ ಸೇವೆ ಮಾಡುತ್ತಿದ್ದರು.

**ಕೋಷ್ಟಕ ೩.೧೬: ಆಗ ನಿಮ್ಮ ಹಳ್ಳಿಯಲ್ಲಿ ಒಂದು ದಿನಕ್ಕೆ ಎಷ್ಟು ಸಿಗುತ್ತಿತ್ತು?**

| ಅ.ಸಂ | ವಯೋಮಾನ | ಕಾಲಘಟ್ಟ ವರ್ಷಗಳಲ್ಲಿ | ಊರಲ್ಲಿ ಒಂದು ದಿನಕ್ಕೆ ಇದ್ದ ಕೂಲಿ ರೂ.ಗಳಲ್ಲಿ | ಮುಂಬಯಲಿ ಒಬ್ಬ ಗಿರಾಕಿಗೆ ರೂ.ಗಳಲ್ಲಿ | ಸಂಖ್ಯೆ | ಶೇಕಡ |
|---|---|---|---|---|---|---|
| ೧ | ೧೫ರ ಒಳಗೆ | – | – | – | – | – |
| ೨ | ೧೫–೨೦ | – | – | – | – | – |
| ೩ | ೨೧–೨೫ | ೮–೧೨ | ೪೫–೬೦ | ೨೦೦–೩೦೦ | ೦೪ | ೧೩.೩೩ |
| ೪ | ೨೬–೩೦ | ೧೫–೧೮ | ೩೫–೪೫ | ೧೦೦–೨೦೦ | ೧೦ | ೩೩.೩೩ |
| ೫ | ೩೧–೩೫ | ೧೮–೨೨ | ೨೫–೩೫ | ೫೦–೧೦೦ | ೦೪ | ೧೩.೩೩ |
| ೬ | ೩೬–೪೦ | ೨೨–೨೫ | ೧೫–೨೫ | ೨೫–೫೦ | ೦೮ | ೨೬.೬೬ |
| ೭ | ೪೧–೪೫ | ೨೫–೩೨ | ೫–೧೫ | ೫–೨೫ | ೦೪ | ೧೩.೩೩ |
| **ಒಟ್ಟು** | | | – | – | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಅಧ್ಯಯನಕ್ಕೆ ಒಳಪಡಿಸಿದ ಬಹುತೇಕ ಮಹಿಳೆಯರ ಕುಟುಂಬಗಳ ಆರ್ಥಿಕ ಸ್ಥಿತಿಯು ಗಂಭೀರವಾಗಿತ್ತು. ಹಾಗಾಗಿಯೆ ಬಹಳಷ್ಟು ಪೋಷಕರು ತಮ್ಮ ಹೆಣ್ಣುಮಕ್ಕಳನ್ನು ದೇವದಾಸಿ ಮಾಡುವ, ಲೈಂಗಿಕ ಜೀತಕ್ಕೆ ತಳ್ಳುವ ಒತ್ತಡಕ್ಕೆ ಒಳಗಾಗಿದ್ದರು. ಮೇಲಿನ ಕೋಷ್ಟಕದ ಪ್ರಕಾರ ಶೇಕಡಾ ೧೩.೩೩ರಷ್ಟು ೪೧ ರಿಂದ ೪೫ ವಯಸ್ಸಿನ ಮಹಿಳೆಯರಿಗೆ ೨೫ ರಿಂದ ೩೨ ವರ್ಷಗಳ ಹಿಂದೆ ಊರು ಬಿಟ್ಟು ಬರುವಾಗ ಹಳ್ಳಿಯಲ್ಲಿ ಒಬ್ಬ ಮನುಷ್ಯನಿಗೆ ಒಂದು ದಿನಕ್ಕೆ ೫ ರೂಪಾಯಿಯಿಂದ ೧೫ ರೂಪಾಯಿವರೆಗೆ ಕೂಲಿ ಇರುತ್ತಿತ್ತು. ಅದೇ ಸಮಯದಲ್ಲಿ ಮುಂಬಯಲಿ ಒಂದು ಗಿರಾಕಿಯಿಂದ ಒಂದು ಟೈಮಿಗೆ (೧೦ ನಿಮಿಷ) ೫ ರೂಪಾಯಿಯಿಂದ ೨೫ ರೂಪಾಯಿಯವರೆಗೆ ಸಿಗುತ್ತಿತ್ತು. ಅಂದರೆ ಒಬ್ಬ ಮಹಿಳೆ ಒಂದು ದಿನಕ್ಕೆ ಕನಿಷ್ಠ ೧೦ ಗಿರಾಕಿಗಳನ್ನು ಕರೆದುಕೊಂಡರೆ ಅಂದಿನ ಅವಳ ಒಟ್ಟು ಆದಾಯ ೫೦ ರೂಪಾಯಿಗಳಿಂದ ೨೫೦ ರೂಪಾಯಿ ಆಗಿರುತ್ತಿತ್ತು. ಇದರಲ್ಲಿ ಘರವಾಲಿಗೆ ಅರ್ಧ ಕೊಟ್ಟರೆ, ಇನ್ನುಳಿದದ್ದು ಇವಳ ಆದಾಯವಾಗಿರುತ್ತಿತ್ತು. ಇದು ಏರಿಯಾದಿಂದ ಏರಿಯಾಕ್ಕೆ ವಯಸ್ಸಿನಿಂದ ವಯಸ್ಸಿಗೆ, ಅವರ ರೂಪದ ಮೇಲೆ ನಿರ್ಧರಿತವಾಗುತ್ತಿತ್ತು. ಅದನ್ನು ಮೇಲಿನ ಕೋಷ್ಟಕದಲ್ಲಿ ಗಮನಿಸಬಹುದು. ಆಗ ಭೂಮಿ ಇರುವ ರೈತರಿಗೇ ಕೆಲಸವಿರಲಿಲ್ಲ. ಹೊಟ್ಟೆಯ

ಹಸಿವು ನೀಗಿಸಿಕೊಳ್ಳಲು ಕೊಟ್ಟಂತ ಕೆಲಸವನ್ನು, ಹೇಳಿದಷ್ಟೊತ್ತು ಮಾಡಿ, ಕೊಟ್ಟಷ್ಟು ಕೂಲಿಯನ್ನು ತೆಗೆದುಕೊಳ್ಳುತ್ತಿದ್ದರು. ಹಾಗಾಗಿ ಕೂಲಿ ಆಶ್ರಯಿಸಿದ ಜನ, ಜೀತಕ್ಕೆ ಇದ್ದ ಜನ, ತಮಗಿರುವ ಹೆಣ್ಣು ಮಕ್ಕಳನ್ನು ದೇವದಾಸಿ ಮಾಡಿ, ಕಾಮಾಟಿಪುರಕ್ಕೆ ಕಳಿಸುವುದು ಬಡತನಕ್ಕೆ ಪರಿಹಾರ ಎಂದುಕೊಳ್ಳುತ್ತಿದ್ದರು.

ಇದಲ್ಲದೇ ಕುಟುಂಬದ ಸಂತಾನೋತ್ಪತ್ತಿಯ ಮೇಲೆ ಯಾವುದೇ ನಿಯಂತ್ರಣವಿರಲಿಲ್ಲ. ಇದರಲ್ಲಿ ಶೇಕಡಾ ೬೬.೬೭ರಷ್ಟು ಕುಟುಂಬಗಳಲ್ಲಿ ೬ಕ್ಕಿಂತ ಹೆಚ್ಚು ಸದಸ್ಯರು ಇದ್ದದ್ದು ಕಂಡುಬರುತ್ತದೆ. ಹಾಗೂ ಶೇಕಡಾ ೭೦ ರಷ್ಟು ಕುಟುಂಬಗಳಲ್ಲಿ ದುಡಿಯುವ ವ್ಯಕ್ತಿ ಒಬ್ಬರೆ ಆಗಿದ್ದು ಕಂಡುಬರುತ್ತದೆ. ಇದು ಜೀವನ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಕುಟುಂಬಗಳಲ್ಲಿ ದುಡಿಯುವವರ ಸಂಖ್ಯೆಗೂ ಮತ್ತು ಕುಟುಂಬದಲ್ಲಿ ಇರುವ ಸದಸ್ಯರಿಗೂ ಅಂದರೆ ಆದಾಯಕ್ಕೂ ಅನುಭೋಗಕ್ಕೂ ತುಂಬಾ ಅಂತರವಿರುತ್ತಿತ್ತು. (ಕೋಷ್ಟಕ ೨೪ ಮತ್ತು ೨೫ನ್ನು ಗಮನಿಸಿ) ಅಲ್ಲದೇ ಕೆಲವೊಂದು ಕುಟುಂಬಗಳಲ್ಲಿ ತಂದೆಯ ಅನಾರೋಗ್ಯದಿಂದಾಗಿ, ಅತಿಯಾದ ಮದ್ಯಪಾನದಿಂದಾಗಿ ತಾಯಿಯೊಬ್ಬಳೇ ದುಡಿದು ಮಕ್ಕಳನ್ನು ಸಲಹುವ ಅನಿವಾರ್ಯತೆ ಇತ್ತು ಮತ್ತು ಸಾಕಷ್ಟು ಕುಟುಂಬಗಳು ದೇವದಾಸಿ ಕುಟುಂಬಗಳಾಗಿರುವುದರಿಂದ ಅಲ್ಲಿ ತಾಯಿಯೊಬ್ಬಳೇ ಮಕ್ಕಳನ್ನು ಪೋಷಿಸುವ ಹೊಣೆ ಇರುತ್ತಿತ್ತು. ಇದರಿಂದಾಗಿ ಜೀವನ ನಿರ್ವಹಣೆ ಕಷ್ಟವಾಗುತ್ತಿತ್ತು.

ಕೆಲವು ಮಹಿಳೆಯರ ಕುಟುಂಬದಲ್ಲಿ ಜೀವನ ನಿರ್ವಹಣೆಯು ಸಾಧ್ಯವಾದರೂ ಕೂಡ ಲೈಂಗಿಕ ದಂಧೆಗೆ ಮುಂಬಯಿಗೆ ಬಂದಿದ್ದರು. ಅದರಲ್ಲಿ ಇಬ್ಬರು ಬಾಲ್ಯವಿವಾಹಕ್ಕೆ ಒಳಗಾಗಿ ಗಂಡನನ್ನು ಬಿಟ್ಟ ಮೇಲೆ ಅಸಹಾಯಕರಾಗಿ, ತವರಿನಲ್ಲಿ ಇರುವ ಇತರೆ ಎಲ್ಲ ಸದಸ್ಯರಿಗೂ ತನ್ನಿಂದಾಗಿ ಮುಜುಗರ ತೊಂದರೆ ಎಂದೆನಿಸಿ, ನೆರೆಮನೆಯ ದೇವದಾಸಿ ಮಹಿಳೆಯರೊಂದಿಗೆ ಮುಂಬಯಿಗೆ ಬಂದಿಳಿದಿದ್ದರು. ಅದರಲ್ಲೊಬ್ಬಳಿಗೆ ಮುಂಬಯಿಯಲ್ಲಿ ತಾನು ಇದೇ ಕೆಲಸ ಮಾಡಬೇಕೆಂಬುದೇ ಗೊತ್ತಿರಲಿಲ್ಲ. ೫ನೇ ಇಯತ್ತೆ ಪಾಸ್ ಮಾಡಿಕೊಂಡಿದ್ದೇನೆ. ಯಾವುದಾದದರೂ ಕಂಪನಿಯಲ್ಲಿ ಕೆಲಸ ಸಿಗಬಹುದು. ಆ ಹಣದಿಂದ ತನ್ನ ವರದಕ್ಷಿಣೆ ಹಣವನ್ನು ಗಂಡನಿಗೆ ಕೊಟ್ಟು ಮತ್ತೆ ತನ್ನ ಸಂಸಾರದ ಜೊತೆಗಿರುವ ಆಸೆಯಿಂದ ಮುಂಬಯಿಗೆ ಬಂದಿಳಿದಿದ್ದಳು. ಇನ್ನೊಬ್ಬರು, ಮಾಡಿಕೊಂಡ ಗಂಡನು ನಪುಂಸಕ ನಾಗಿದ್ದರಿಂದ, ಅವನಿಂದ ಬಿಡುಗಡೆ ಮಾಡಿಕೊಂಡು ಬಂದು ತವರಲ್ಲಿ ಉಳಿದಳು. ದೇವದಾಸಿಯರಾಗಿದ್ದ ಅಕ್ಕಂದಿರ ಜೊತೆಯ ಒಡನಾಟದಿಂದ ಗಂಡನನ್ನು ಬಿಟ್ಟ ಇವಳೂ ಅದೇ ಲೈಂಗಿಕ ಚಟುವಟಿಕೆಯಲ್ಲಿ ತೊಡಗಿದಳು. ಊರಲ್ಲಿ ದೇವದಾಸಿಯಾಗದ ತಾನು ಈ ರೀತಿ ಮಾಡುವುದು ಅವಮಾನ. ಅಲ್ಲದೇ ಊರಲ್ಲಿ ಅಣ್ಣ ತಮ್ಮಂದಿರು, ಚಿಕ್ಕಪ್ಪ, ದೊಡ್ಡಪ್ಪಂದಿರು ಇವರ ಮಧ್ಯ ಈ ದಂಧೆ ಮಾಡುವುದು ಅಸಹ್ಯವೆನಿಸಿ ಮುಂಬಯಿಯ ಬೀವಂಡಿಗೆ ಬಂದಿದ್ದಳು.

ಇನ್ನೂ ಮೂರು ಪ್ರಕರಣಗಳಲ್ಲಿ ಅವರು ೪-೫ ತಲೆಮಾರುಗಳಿಂದ ಮುಂಬಯಿಯಲ್ಲಿಯೆ ಇರುತ್ತಿದ್ದರು. ಮತ್ತೊಂದು ಪ್ರಕರಣದಲ್ಲಿ ತಾಯಿ ಸ್ಥಾನ ತುಂಬಬೇಕಾಗಿದ್ದ ಸೋದರಮಾವನೇ ದಂಧೆಗೆ ಹಚ್ಚಿ ಹೋಗಿರುವುದು ಕಂಡುಬರುತ್ತದೆ.

**ಕೋಷ್ಟಕ ೩.೧೭: ಜೀವನ ನಿರ್ವಹಣೆ ಅಸಾಧ್ಯವಾದರೆ ಏನು ಮಾಡುತ್ತಿದ್ದರು?**

| ಅ.ಸ. | ಜೀವನ ನಿರ್ವಹಣೆಯ ಯೋಜನೆಗಳು | ಸಂಖ್ಯೆ | ಶೇಕಡ |
|---|---|---|---|
| ೧ | ಹೆಣ್ಣುಮಕ್ಕಳನ್ನು ದೇವದಾಸಿ ಮಾಡುತ್ತಿದ್ದರು | ೧೫ | ೫೦ |
| ೨ | ಗಂಡುಮಕ್ಕಳನ್ನು ಜೀತಕ್ಕೆ ಇಡುತ್ತಿದ್ದರು. | ೩ | ೧೦ |
| ೩ | ವಲಸೆ ಹೋಗುತ್ತಿದ್ದರು | ೧೦ | ೩೩.೩೩ |
| ೪ | ವೇಶ್ಯಾವಾಟಿಕೆಗೆ ಹಚ್ಚತ್ತಿದ್ರು | ೨ | ೬.೬೬ |
| ೫ | ಸಾಲ ಮಾಡುತ್ತಿದ್ದರು | – | – |
| | **ಒಟ್ಟು** | ೩೦ | ೧೦೦ |

ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ

ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರ ಕುಟುಂಬಗಳಲ್ಲಿ ಜೀವನ ನಿರ್ವಹಣೆ ಕಷ್ಟವಾದಾಗ ಮೇಲಿನ ಕೋಷ್ಟಕದ ಪ್ರಕಾರ ಶೇಕಡಾ ೫೦ರಷ್ಟು ಕುಟುಂಬಗಳು ಹೆಣ್ಣುಮಕ್ಕಳನ್ನು ದೇವದಾಸಿ ಮಾಡುತ್ತಿದ್ದರು. ಶೇಕಡಾ ೧೦ರಷ್ಟು ಜನರು ತಮ್ಮ ಗಂಡುಮಕ್ಕಳನ್ನು ಜೀತಕ್ಕೆ ಇಡುವುದು, ಶೇಕಡಾ ೩೩.೩೩ರಷ್ಟು ಜನ ದುಡಿಮೆ ಹುಡುಕಿಕೊಂಡು ವಲಸೆ ಹೋಗುವುದು ಮಾಡುತ್ತಿದ್ದುದು ಕಂಡುಬರುತ್ತದೆ. ಅದರಲ್ಲಿ ಶೇಕಡಾ ೬.೬೬ರಷ್ಟು ಜನರು ತಮ್ಮ ಮಕ್ಕಳನ್ನು ದೇವದಾಸಿ ಮಾಡಿರದಿದ್ದರೂ ವೇಶ್ಯಾವಾಟಿಕೆಗೆ ಹಚ್ಚುವುದು ಕಂಡುಬರುತ್ತಿತ್ತು. ಮಕ್ಕಳನ್ನು ಜೀತಕ್ಕಿಟ್ಟ ಸಂದರ್ಭಗಳಲ್ಲಿ, ಜೀತಕ್ಕಿದ್ದ ವ್ಯಕ್ತಿಯ ಹೊಟ್ಟೆಯಾದರೂ ತುಂಬಲಿ ಎಂದು ಜೀತಕ್ಕಿಡುತ್ತಿದ್ದರು.

ಬಿಜಾಪೂರದ ಹಿರಿಯರೊಬ್ಬರು ಅನೇಕ ಬರಗಾಲಗಳನ್ನು ಕಂಡಿದ್ದಾರೆ. ಅವರು "ಬರಗಾಲ ಉಂಟಾದಾಗ ಸಜ್ಜೆ ಅಂಬಲಿ ಮಾಡಿ ಚಾವಡಿಯ ಕಟ್ಟೆಯಲ್ಲಿಟ್ಟು, ಗಂಟೆ ಹೊಡೆಯುತ್ತಿದ್ದರು. ಅದನ್ನೇ ಕಾಯುತ್ತಿದ್ದ ನಾವುಗಳು ಓಡಿ ಹೋಗುತ್ತಿದ್ದೆವು. ಒಂದು ಬೊಗಸೆಯಷ್ಟು ಅಂಬಲಿಯನ್ನು ತಟ್ಟೆಗೆ ಸುರಿಯುತ್ತಿದ್ದರು. ಅಂದಿಗೆ ಅದೇ ಊಟ" ಎಂದು ಹೇಳುತ್ತಾರೆ. ಅಜ್ಜಿಯೊಬ್ಬರು ಹೇಳುವಂತೆ ಸೆಗ್ಗಿನ ಮುಳ್ಳಿನ ಅಂಬಲಿ ಮಾಡಿ ಕುಡಿದಿದ್ದಾರೆ. ಕಣ್ಣಿಗೆ ಕಂಡ ಹಸಿರು ತೊಪ್ಪಲನ್ನು ಕಸವೂ ರಸವೂ ಏನೂ ನೋಡದೆ ಕುದಿಸಿ ತಿಂದಿದ್ದಾರೆ. "೧೯೪೨ರ ಈ ಬರಗಾಲವನ್ನು ಇಡೀ ಬಿಜಾಪೂರ ಜಿಲ್ಲೆಯು 'ಸಜ್ಜಿ ಬರಗಾಲ' ಎಂದು ನೆನಪಿಸಿಕೊಳ್ಳುತ್ತದೆ. ಈ ದಿನಗಳಲ್ಲಿ ಜನರು ನೆನೆಪಿಸಿಕೊಳ್ಳುವ ಪ್ರಕಾರ ಬೇಸಗೆ ಬಿತ್ತನೆ ಮಳೆ ಅನಿಯಮಿತವಾಗಿತ್ತು ಮತ್ತು ಅಲ್ಲಲ್ಲಿ ಚದುರಿದಂತೆ ಬಿದ್ದಿತ್ತು. ಕೆಲವೇ ಕೆಲವು ಮಂದಿ ಮಾತ್ರ ಜಮೀನಿನಲ್ಲಿ ಬಿಜ ಬಿತ್ತಿದ್ದರು. ಬಿತ್ತನೆಯ ನಂತರದ ಮಳೆ ಕೈಕೊಟ್ಟಿದ್ದರಿಂದ ಅದೂ ನಾಶವಾಗಿ ಹೋಯಿತು. ಚಳಿಗಾಲದ ಮಳೆಯೂ ಸಂಪೂರ್ಣವಾಗಿ ವಿಫಲವಾಯಿತು. ಸಮೊಬರಿಗಾಗುವ ಬೆಳೆಯ ನಷ್ಟ, ಮಾನವರ ಮತ್ತು ಜಾನುವಾರುಗಳ ಅಲೆದಾಟದಂತಹ ವಿಪತ್ತಿನ ಚಿಹ್ನೆಗಳು ಜಿಲ್ಲೆಯಲ್ಲಿ ಕಾಣಿಸಿಕೊಂಡವು"(ಎಚ್.ಡಿ. ಪ್ರಶಾಂತ್: ಸಾಮಾಜಿಕ ಆಕಾರರೇಖೆ).

ಇಂತಹ ಪರಿಸ್ಥಿತಿ ಎದುರಿಸಲಾರದೆ ಹೆಚ್ಚಿನ ಜನರು ಹೆಣ್ಣುಮಕ್ಕಳನ್ನು ದೇವದಾಸಿ ಮಾಡುವುದು, ಗಂಡುಮಕ್ಕಳನ್ನು ಆತನೊಬ್ಬನ ಊಟಕ್ಕಾಗಿ ಜೀತಕ್ಕೆ ಇಡುವುದು, ವಲಸೆ ಹೋಗುವುದು, ಸಾಲ ಮಾಡುವುದನ್ನು ಮಾಡುತ್ತಿದ್ದರೆಂಬುದು ಕಂಡುಬರುತ್ತದೆ. ಇಂತ ಸಂದರ್ಭಗಳಲ್ಲಿ ಸರ್ಕಾರದಿಂದ ಯಾವ ಸೌಲಭ್ಯಗಳು ಇದ್ದವು ಎಂಬುದರ ಅರಿವು ಸಹ ಈ ಕುಟುಂಬಗಳ ಸದಸ್ಯರಿಗೆ ಇರಲಿಲ್ಲ. ಅದರಲ್ಲಿ ಕೆಲವರಿಗೆ ಇದ್ದರೂ ಸಹ ಅವುಗಳ ಉಪಯೋಗ ಪಡೆಯಲು ಅವರಿಂದ ಸಾಧ್ಯವಾಗಲಿಲ್ಲ ಎಂದು ತಿಳಿಸುತ್ತಾರೆ.

ಈ ರೀತಿಯ ದುಸ್ಥಿತಿಯಲ್ಲಿ ಎಷ್ಟೋ ಜನರು ತಮ್ಮ ಹೆಣ್ಣುಮಕ್ಕಳನ್ನು ಮುಂಬಯಿಯ ಕಾಮಾಟಪೂರದಲ್ಲಿ, ಬೀವಂಡಿಯಲ್ಲಿ ಲೈಂಗಿಕ ಜೀತಕ್ಕೆ ಇಟ್ಟಿದ್ದರು. ಆ ಮಹಿಳೆಯರಿಗೆ ಬರುತ್ತಿರುವ ಪ್ರಸ್ತುತ ಆದಾಯ ಎಷ್ಟು ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಿಂದ ಕಂಡುಕೊಳ್ಳಲು ಪ್ರಯತ್ನಿಸಿದಾಗ ದೊರೆತ ಮಾಹಿತಿಗಳು ಈ ರೀತಿಯಾಗಿವೆ.

**ಕೋಷ್ಟಕ ೩.೧೮: ವಕ್ತ್ಯಗಳ ಪ್ರಸ್ತುತ ಆದಾಯ**

| ಅ.ಸಂ. | ವಿವರ | ಸಂಖ್ಯೆ | ಶೇಕಡ |
|---|---|---|---|
| ೧ | ೫೦ಕ್ಕಿಂತ ಕಡಿಮೆ | ೨ | ೬.೬೬೭ |
| ೨ | ೫೦೦ ರಿಂದ ೧೦೦೦ | ೩ | ೧೦ |
| ೩ | ೧೦೦೦ ರಿಂದ ೨೦೦೦ | ೧೫ | ೫೦ |
| ೪ | ೨೦೦೦ ದಿಂದ ೪೦೦೦ | ೫ | ೧೬.೬೭ |
| ೫ | ಇತರೆ | ೬ | ೨೦ |
| | **ಒಟ್ಟು** | **೩೦** | **೧೦೦** |

ಕ್ಷೇತ್ರ ಕಾರ್ಯದ ಮಾಹಿತಿ

ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ಮೂವತ್ತು ಮಹಿಳೆಯರ ಕೋಷ್ಟಕ ೩.೧ರ ಪ್ರಕಾರ ಶೇಕಡಾ ೫೦ ಮಹಿಳೆಯರು ದಿನಕ್ಕೆ ೧೦೦೦ ರಿಂದ ೨೦೦೦ ರೂಪಾಯಿ ಆದಾಯ ಪಡೆಯುತ್ತಾರೆ. ಇದು ಸಾಮಾನ್ಯವಾಗಿ ಲೈಂಗಿಕ ದಂಧೆಯಲ್ಲಿ ಇರುವ ಹುಡುಗಿಯರಿಗೆ ಬರುವ ಆದಾಯವಾಗಿದೆ. ಒಂದೊಂದು ದಿನ ಗಿರಾಕಿಗಳು ಬರದೆ ಹೋದಾಗ ಚಹಾ ಕುಡಿಯಲೂ ಸಹಿತ ಇವರ ಬಳಿ ಹಣ ಇರುವುದಿಲ್ಲವೆಂದು ಇದೇ ಮಹಿಳೆಯರಲ್ಲಿ ಕೆಲವರು ಹೇಳುತ್ತಾರೆ. ವಾರದ ಕೊನೆಯ ದಿನಗಳಾದ ಶನಿವಾರ, ರವಿವಾರಗಳಂದು ಮತ್ತು ಕಂಪನಿಗಳಿಗೆ ರಜೆ ಇದ್ದ ದಿನಗಳಂದು ಇವರಿಗೆ ಹೆಚ್ಚು ಆದಾಯವಾಗುತ್ತದೆ ಎಂದು ವಿವರಿಸುತ್ತಾರೆ. ಮಳೆಗಾಲದ ದಿನಗಳಲ್ಲಿ ಆದಾಯದ ಪ್ರಮಾಣ ಕಡಿಮೆ ಇರುತ್ತದೆಂದು ಹೇಳುತ್ತಾರೆ. ಕೆಲವು ಗಿರಾಕಿಗಳು ಲೈಂಗಿಕ ದಂಧೆಯ ಹುಡುಗಿಯರನ್ನು ಕರೆದುಕೊಂಡು ಹೋಗಿ, ಅವಳೊಂದಿಗೆ

ಸುತ್ತಾಡಿ, ಲಾಡ್ಜಗೂ ಕರೆದುಕೊಂಡು ಹೋಗಿ ರಾತ್ರಿ ಪೂರ್ಣ ಅವಳೊಂದಿಗೆ ಇದ್ದಾಗ ಕಡಿಮೆ ಅಂದರೂ ಎಲ್ಲ ಖರ್ಚುಗಳನ್ನು ಬಿಟ್ಟು ಗಿರಾಕಿ ೧೦೦೦ ರೂಪಾಯಿಗಳನ್ನು ಕೊಡಬೇಕಾಗುತ್ತದೆ.

ಎಚ್.ಐ.ವಿ/ಏಡ್ಸ್ ನಿಂದ ಬಳಲುತ್ತಿರುವಂತಹವರು, ಯಾರನ್ನಾದರೂ ಪ್ರೀತಿಸಿ ಅವರನ್ನೇ ಪಾರ್ಟನರ್‌ಗಳನ್ನಾಗಿ ಮಾಡಿಕೊಂಡು, ಆತ ಕೈಕೊಟ್ಟು ಹೋದಾಗ ಮರಳಿ ದಂಧೆ ಮಾಡಲು ಮನಸ್ಸಿರದೇ ಇರುವ ಮಹಿಳೆಯರು, ಖಾಯಂ ಪಾರ್ಟನರ್‌ಗಳನ್ನು ಇಟ್ಟುಕೊಂಡವರು, ಸ್ವಂತ ದಂಧೆಯ ಮನೆ ಇಟ್ಟುಕೊಂಡು, ಅದನ್ನ ಬಾಡಿಗೆ ಕೊಟ್ಟವರು ಇಂತಹ ಶೇಕಡಾ ೨೦ರಷ್ಟು ಹುಡುಗಿಯರು ಸಮುದಾಯದ ಸಂಸ್ಥೆಗಳೊಂದಿಗೆ (ಸಿಬಿಓ) ಕೆಲಸ ಮಾಡುತ್ತಿದ್ದಾರೆ. ಅವರಿಗೆ ಪ್ರತಿ ತಿಂಗಳಿಗೆ ೩೫೦೦ ರಿಂದ ೮೫೦೦ ರೂಪಾಯಿ ಆದಾಯ ಇರುತ್ತದೆ. ಕೆಲವರು ದಂಧೆ ಮಾಡುತ್ತಲೇ ಇದನ್ನೂ ಮಾಡುತ್ತಿರುತ್ತಾರೆ. ಶೇಕಡಾ ೧೦ರಷ್ಟು ಮಹಿಳೆಯರ ಆದಾಯ ೫೦೦ ರೂಪಾಯಿಗಳಿಂದ ೧೦೦೦ ರೂಗಳವರೆಗೆ ಇರುತ್ತದೆ. ಶೇಕಡಾ ೬.೬೬ರಷ್ಟು ಮಹಿಳೆಯರಿಗೆ ೫೦ಕ್ಕಿಂತ ಕಡಿಮೆ ಆದಾಯವಿದ್ದು, ಅದು ಅವರ ಊಟಕ್ಕೂ ಅದು ಸಾಕಾಗುವುದಿಲ್ಲ. ಇವರಿಗೆ ಎಚ್.ಆಯ್.ವಿ/ಏಡ್ಸ್ ತಗುಲಿರುವುದರಿಂದ ಬೇರೆ ಏನೂ ಕೆಲಸ ಮಾಡಲು ಅಸಮರ್ಥರಾಗಿದ್ದಾರೆ. ಒಬ್ಬಳನ್ನು ಅವಳ ತಂಗಿಯೇ ನೋಡಿಕೊಳ್ಳುತ್ತಾಳೆ. ಮತ್ತೊಬ್ಬಳು ಗಿರಾಕಿ ಐದು ರೂಪಾಯಿ ಕೊಟ್ಟರೂ ಅದಕ್ಕೂ ಸೈ ಅನ್ನುತ್ತಾಳೆ. ಅವಳಿಗೆ ಅಷ್ಟು ಕೊಡುವವರೂ ಇರುವುದಿಲ್ಲ.

ಘರವಾಲಿಗಳಾದ ಶೇಕಡಾ ೧೩.೬೭ರಷ್ಟು ಮಹಿಳೆಯರ ಆದಾಯ ೨೦೦೦ ರೂ.ಗಳಿಂದ ೪೦೦೦ ರೂಪಾಯಿಗಳವರೆಗೆ ಇರುತ್ತದೆ. ಇದು ಮನೆಯಲ್ಲಿರುವ ಹುಡುಗಿಯರ ವಯಸ್ಸು, ರೂಪ ಇವುಗಳ ಮೇಲೆ ಅವಲಂಬಿತವಾಗಿರುತ್ತದೆ. ಈ ಆದಾಯದಲ್ಲಿ ಘರವಾಲಿಯು ಪೊಲೀಸರಿಗೆ, ಗುಂಡಾಗಳಿಗೆ ತಪ್ಪದೇ ಹಫ್ತಾ ಕೊಡಬೇಕಾಗುತ್ತದೆ. ಇಲ್ಲದಿದ್ದರೆ ಅವರು ಕೊಡುವ ತೊಂದರೆಗಳಿಗೆ ಇವಳು ಒಂದು ರೂಪಾಯಿಯನ್ನೂ ಗಳಿಸಲು ಸಾಧ್ಯವಾಗುವುದಿಲ್ಲ.

೨೩ ರಿಂದ ೨೮ ವಯೋಮಾನದ ಒಳಗಿನ ಯುವತಿಯರ ದಿನದ ವರಮಾನವನ್ನು ಗಮನಿಸಿದಾಗ ದಿನಕ್ಕೆ ೧೦೦೦ ದಿಂದ ೨೦೦೦ ರೂಪಾಯಿಗಳ ಆದಾಯ ಪಡೆಯುತ್ತಾರೆ. ಆದರೆ ಅದೇ ೨೮ರಿಂದ ೩೦ ವಯಸ್ಸಿನ ಒಂದಿಬ್ಬರು ಯುವತಿಯರು ದಿನಕ್ಕೆ ೫೦ ರೂಪಾಯಿಗಳನ್ನೂ ಸಹ ಗಳಿಸುವುದು ದುಸ್ತರವಾಗಿದೆ. ಅದರಲ್ಲಿ ಒಬ್ಬಳು ೫ ರೂಪಾಯಿ ಕೊಟ್ಟರೂ ಗಿರಾಕಿಗಳಿಗೆ ದೇಹ ಕೊಡಲು ತಯಾರಿದ್ದಾಳೆ. ಆದರೆ ಅವಳ ಸೇವೆಯನ್ನು ಕೊಳ್ಳುವವರು ಯಾರೂ ಇಲ್ಲ. ಹಾಗಾಗಿ ಅವರ ಆದಾಯ ಏನೇ ಇದ್ದರೂ ದೇಹ, ಆರೋಗ್ಯ ಚೆನ್ನಾಗಿರುವವರೆಗೆ ಮಾತ್ರ, ಅದಿಲ್ಲದ ಮರುದಿನವೆ ನೇರವಾಗಿ ಬೀದಿಗೆ ಬೀಳುವ ಇವರನ್ನು ಯಾರೂ ಮಾತನಾಡಿಸುವುದಿಲ್ಲ. ತೇರವಾಳದ ೬೦ ವರ್ಷದ ಘರವಾಲಿ ಮನೆಯಲ್ಲಿ ಒಬ್ಬಳು ಇಂತವಳೇ ಹುಡುಗಿ ಎಷ್ಟು ಗಳಿಸಿದ್ದರೂ ಉಳಿಯಲಿಲ್ಲ. ಅವಳನ್ನು ಊರವರು ಕರೆಯುವುದಿಲ್ಲ. ಇಲ್ಲಿ ದಂಧೆ ಮಾಡಲು ವಯಸ್ಸೂ ಇಲ್ಲ. ದೈಹಿಕ ಆಕರ್ಷಣೆಯೂ ಉಳಿದಿಲ್ಲ. ಯಾರಾದರೂ ಒಂದು ಹೊತ್ತು ಊಟ ಕೊಟ್ಟರೆ ಸಾಕು ಅನ್ನುವ ಪರಿಸ್ಥಿತಿಯಲ್ಲಿ ಇದ್ದಾಳೆ.

ಇವರ ಗಳಿಕೆಯ ವಿವರ ಪೊಲೀಸ್‌ನವರಿಗೆ ಗೊತ್ತಿರುತ್ತದೆ. ಹಾಗಾಗಿ ಅವಕಾಶ ಸಿಗುವುದನ್ನಷ್ಟೇ ನೋಡುತ್ತಿರುತ್ತಾರೆ. ಬಂಧಿಸಿ ಹಿಡಿದೊಯ್ಯದರೆ ೧೨೦೦ ರೂ ದಂಡ ಕಟ್ಟಿಸಿಕೊಳ್ಳುತ್ತಾರೆ. ಅಥಣಿ ತಾಲೂಕು ತೆಲಸಂಗದ ೨೩ ವರ್ಷದ ಯುವತಿ "ನೋಡ್ರಿ ನಾವೇನೋ ಹತ್ತಲ್ಲ ಇಪ್ಪತ್ತು ಗಿರಾಕಿ ಬಂದ್ರೂ ಕರಕೊಳ್ಳಾಕ ತಯಾರದೇವಿ. ಆದ್ರ ಇತ್ತಿತ್ತಲಾಗಿ ಬಾಂಗ್ಲಾ, ನೇಪಾಳಿ ಹುಡುಗೇರ ಬರಾಕತ್ತಾಗಿಂದ ನಮ್ಮ ಡಿಮ್ಯಾಂಡ ಕಮ್ಮ ಆಗೇತಿ. ಮೇಕಪ್ಪ ಮಾಡಿಕೊಂಡ ಹೊರಗ ನಿಂತ್ರ ಗಿರಾಕಿ ಹಿಡಿಯೋದು. ಆದ್ರ, ಪೊಲೀಸರು ಬಿಡಂಗಿಲ್ಲ. ಏನ ಮಾಡದಿದ್ರೂ ಒಳಗನ. ಹೊರಗ ಬಂದ ನಿಲ್ಲಂಗಿಲ್ಲ. ಅಂತ ಪೊಲೀಸಿನವರು ತಾಕಿತು ಮಾಡತಾರ. ಒಳಗ ಕುಂತ್ರ ಗಿರಾಕಿ ಹೆಂಗ ಬರ್ತಾವು ನೀವ ಹೇಳ್ರಿ, ಹಂಗಂತ ಒಂಚೂರು ಹೊರಗ ಹಂಗ ಬಂದ ನಿಂತಿರ್ತೇವಿ. ಅದ್ಯಾರ ಸುದ್ದಿ ಮುಟ್ಟಿಸ್ತಾರೋ ಪೊಲೀಸ್ ಬಂದ ಬಿಡ್ತಾನ. ಝುಪ್ರಿ ಹಿಡಕೊಂಡ ಹೋದ್ರಂದ್ರ ೧೨೦೦ ರೂಪಾಯಿ ದಂಡ ಕಟ್ಟದಾಗನ ಬಿಡತಾನ. ಒಂದಂದ ಸರ್ತಿ ಅಂತೂ, ದಿನದಾಗ ಯಾಡ್ಯಾಡ ಸಾರಿ ಹಿಡಕೊಂಡ ಹೊಕ್ಕಾನ. ಎಲ್ಲಿಂದ ತರೂದ ರೊಕ್ಕಾನ. ಎಷ್ಟೋ ಸಾರಿ ದಂಡಾ ಕಟ್ಟಾಕ ಮಾರವಾಡಿಗಳ ಕಡೆ ಬಡ್ಡಿ ಸಾಲ ಮಾಡಿ ನನ್ನನ್ನ ನಾನ ಬಿಡಿಸಿಕೊಂಡು ಬಂದೇನಿ. ಮುಂದ ಆ ಸಾಲ ಹರ್‍ಯಾಕನ ದಂಧೆ ಮಾಡದು. ಹಂಗಾಗಿ ಏನೂ ಉಳೆಂಗಿಲ್ಲ". ಎಂದು ವಿವರಿಸುತ್ತಾಳೆ. ಅಲ್ಲದೇ ಬಹಳಷ್ಟು ಯುವತಿಯರಿಗೆ ಮದ್ಯಪಾನ ಮಾಡುವ, ಮಟಕಾ ಮತ್ತು ಇಸ್ಪೀಟ್ ಆಡುವ ಚಟಗಳಿರುವುದರಿಂದ ಗಳಿಸಿದ ದುಡ್ಡನ್ನ ಅಲ್ಲಿಯೇ ಕಳೆಯುತ್ತಾರೆ" ಎಂದು ಹೇಳುತ್ತಾಳೆ.

ಇದಲ್ಲದೇ ಹುಡುಗಿಯರು ಇವರನ್ನು ಪ್ರೀತಿಸುತ್ತೇನೆಂದು ನಾಟಕ ಮಾಡುತ್ತಾ ಬರುವ ಗಿರಾಕಿಗಳನ್ನು ನಂಬಿ ಬಹಳಷ್ಟು ಹುಡುಗಿಯರು ಮೋಸ ಹೋದಿದ್ದಿದೆ. ಅದನ್ನೇ ಮುಧೋಳ ಮೂಲದ ೬೩ ವರ್ಷದ ಘರವಾಲಿಯೊಬ್ಬರು "ನಮಗೇನು ಕಡಿಮೆ ಆಗಿದೆ. ಅಪ್ಪ ಅವ್ವ ನಮಗೆ ಇಂತ ದೇಶ ನೋಡೋ ಹಾಗೆ ಮಾಡಿದರು. ಅವರು ನಮ್ಮನ್ನ ಇಲ್ಲಿಗೆ ಕಳಿಸದೇ ಇದ್ದಿದ್ದರ ಅವರ ಜೊತೀಗಿ ನಾನೂ ಕುರಪಿ ಹಿಡಕೊಂಡು ಕೂಲಿ ಮಾಡತಿದ್ದೆ ಅನಿಸ್ತೈತಿ. ದೇವದಾಸಿ ಮಾಡಿರದಿದ್ದರ ಅಲ್ಲೆ ಸುತ್ತ ಮುತ್ತ ಹಳ್ಳ್ಯಾಗ ಕೂಲಿ ಮಾಡಿ ಕುಡುದು ತಿಂದು ತೇಲಾಡುವ ಗಂಡಸಿಗೆ ಕಟ್ಟಿರುತ್ತಿದ್ದರು. ನಾನೂ ಅವನ ಗೂಡ ಸೆರಗ ಹರದ ಸೀರಿ ಉಟಕೊಂಡ ೪ ಮಕ್ಕಳನ್ನ ಹಡದು, ಅವಕ್ಕೂ ಊಟ ಇಲ್ಲ. ನನಗೂ ಊಟ ಇಲ್ಲದಂಗ ಕುಂದರಬೇಕಾಗಿತ್ತು. ಈಗ ನನ್ನ ಮಸ್ಯಾಗ ಸರಕಾರಿ ನೌಕರಿ ಮಾಡ್ತಾರ, ರಾಜಕೀಯದಾಗ ಅದಾರ, ಹೊಲ ಮನಿ ಮಾಡಕೊಂಡವರ ಅದಾರ. ಹೋದಾಗ ನನ್ನ ಕೆಳಗ ಕುಂದರ್ಸಂಗಿಲ್ಲ. ಅಷ್ಟ ಪ್ರೀತಿ ಮಾಡ್ತಾರ. ಇದಕ್ಕಿಂತ ಇನ್ನೇನು ಬೇಕು. ಆದರ ಇಷ್ಟೆಲ್ಲ ಆಗಬೇಕಂದ್ರ ಎಲ್ಲವ್ವನ ಮುತ್ತ ಕಟಕೊಂಡ ಒಂದ ಸಾರಿ ಸೂಳಿ ಅನಿಸಿಕೊಂಡ ಮ್ಯಾಗ, ಸೂಳಿ, ಸೂಳಿ ಹಂಗ ಇರಬೇಕು. ಅದನ್ನ ಬಿಟ್ಟ ಯಾಂವ ಒಬ್ಬ ಚೆಲುವ ಚಂದ್ರಾಮ ಸಿಕ್ಕ ಅಂತ, ಪ್ರೀತಿ ಪ್ರೇಮ ಅಂತ ಹೋಗಿ, ಗರತ್ಯಾಗಿ ಬಾಳ್ತೀನಿ ಅಂದ್ರ, ಅದರಷ್ಟ ದುರಾದೃಷ್ಟ ಯಾವುದೂ ಇಲ್ಲ. ಅಂವಾ ಇಕೀಗಲ್ಲ ಇಕೀ ರೊಕ್ಕಕ್ಕ ಬೆನ್ನ ಹತ್ತಿರ್ತಾನ. ಇಕೀ ಅಂವಗ ಗಾಡಿ ಕೊಡಿಸಿದ್ಯಾ, ಮೋಬೈಲ್ ಕೊಡಿಸಿದ್ಯಾ ಅಂತ.

ಮೈ ಮಾರಿ ಗಳಿಸಿದ್ದನ್ನೆಲ್ಲ ಕರಗಿಸೋ ಹೊತ್ತೀಗಿ, ಅಂವಾ ಮತ್ತೊಬ್ಬಾಕಿ ಹಿಂದ ಹೋಗಿ ಬಾಳ ದಿನ ಆಗಿರತೈತಿ. ನಮಗ ನಮ್ಮಪ್ಪ ನಮ್ಮವ್ವ ಅಷ್ಟ ಖರೆ ಆಗಬೇಕ. ಅವರು ಈ ಊರು ತೊರಿಸಿದ್ದಕ್ಕ ಅವರನ್ನ ಆರಾಮ ಇಡಬೇಕ. ನಮ್ದು ಅದೊಂದ ಗುರಿ ಆಗಿರಬೇಕು. ಗಳಸಾಕ ಬಂದ್ಯತಿ ಅಂದ್ರ ಗಳಸಕ್ಯಾಗೇನ ಇರಬೇಕ." ಅಂತ ಹೇಳೋ ವಿಚಾರಗಳಲ್ಲಿ ತುಂಬಾ ಸೂಕ್ಷ್ಮತೆ ನೋವು ಅಡಗಿದೆ ಅನ್ನುವುದು ತಿಳಿಯುತ್ತದೆ. ಬಡತನಕ್ಕಾಗಿ ಊರು ಬಿಟ್ಟು ಬಂದ ಹುಡುಗಿಯರ ಮನಸ್ಥಿತಿ ಹೇಗಿರುತ್ತದೆ. ಮತ್ತು ಅವರನ್ನು ಮೋಸ ಮಾಡುವ ಜನ ಅವರನ್ನು ಹೇಗೆ ದುರುಪಯೋಗ ಮಾಡಿಕೊಳ್ಳುತ್ತಾರೆಂದು ಈ ಮೇಲಿನ ಪ್ರಕರಣ ಅಧ್ಯಯನ ತಿಳಿಸುತ್ತದೆ.

ಲೈಂಗಿಕತೆಯ ಅರ್ಥವೇ ತಿಳಿಯದ ವಯಸ್ಸಿನಲ್ಲಿ ತಮ್ಮ ದೇಹ ಅಡಿವಿಟ್ಟು, ಬೇರೆ ಯಾರಿಗೋ ಸುಖ ಕೊಟ್ಟು, ಅವರಿಂದ ಸಿಕ್ಕ ಹಣವನ್ನು ತನ್ನನ್ನು ಅವಲಂಬಿಸಿದ ಇನ್ಯಾರಿಗೋ ಕಳಿಸುವ ಈ ಪ್ರಕ್ರಿಯೆಯಲ್ಲಿ ಲೈಂಗಿಕ ಜೀತಕ್ಕೆ ಒಳಪಟ್ಟು, ಲೈಂಗಿಕ ದಂಧೆ ಮಾಡಿ, ಸಣ್ಣ ಪುಟ್ಟ ನೌಕರಿ ಮಾಡಿ, ಘರವಾಲಿಗಳಾಗಿ ಹೀಗೆ ಬೇರೆ ಬೇರೆ ಆಯಾಮಗಳಲ್ಲಿ ಹಣವನ್ನು ಗಳಿಸಲು ಹೋರಾಡುವ ಈ ಮಹಿಳೆಯರು ತಮಗೆ ಅಂತ ಬದುಕಿದ್ದು ಕಡಿಮೆಯೆ. ಅವರಲ್ಲಿ ಶೇಕಡಾ ೬೦ರಷ್ಟು ಮಹಿಳೆಯರು ತಮಗೆ ಅವಶ್ಯವೆನಿಸಿದಷ್ಟು ಇಟ್ಟುಕೊಂಡು ಉಳಿದದ್ದನ್ನು ಊರಿಗೆ ಕೊಟ್ಟು ಕಳಿಸುತ್ತಾರೆ. ಎಷ್ಟೋ ಸಾರಿ ಅವರು ತಮ್ಮ ಬಳಿ ಹಣವಿಲ್ಲದೇ ಇದ್ದಾಗ ಗೆಳತಿಯರ ಹತ್ತಿರ ಕಡ(ಬಡ್ಡಿ ಇಲ್ಲದ ಸಾಲ) ತೆಗೆದುಕೊಂಡು, ಎಷ್ಟೊಂದು ಸಾರೆ ಘರವಾಲಿ ಹತ್ತಿರ ಸಾಲ ತೆಗೆದುಕೊಂಡು, ಮತ್ತೆ ಕೆಲವು ಸಾರಿ ಮಾರವಾಡಿ ಹತ್ತಿರ ಸಾಲ ತೆಗೆದುಕೊಂಡು ಮನೆಗೆ ಕಳಿಸುತ್ತಾರೆ. ಅಂತ ಸಾಲಕ್ಕೆ ಅವರು ಮತ್ತೆ ಮತ್ತೆ ತಮ್ಮ ದೇಹವನ್ನು ಜೀತಕ್ಕೆ ಇಡಲೇಬೇಕಾಗುತ್ತದೆ. (ಈ ಶೇಕಡ ೬೦ ಮಹಿಳೆಯರಲ್ಲಿ, ಶೇಕಡಾ ೩೦ರಷ್ಟು ಮಹಿಳೆಯರು ತಮ್ಮ ಖರ್ಚಿಗೆ ಇಟ್ಟುಕೊಂಡು, ತಿಂಗಳಿಗೆ ೩೦೦೦ ರೂಪಾಯಿಗಳಿಗಿಂತ ಹೆಚ್ಚು ಹಣವನ್ನು, ಶೇಕಡಾ ೧೬.೬೭ರಷ್ಟು ಮಹಿಳೆಯರಯ ೧೦೦೦ ದಿಂದ ೩೦೦೦ ರೂಗಳವರೆಗೆ, ಶೇಕಡಾ ೧೩.೩೩ರಷ್ಟು ಮಹಿಳೆಯರು ೧೦೦೦ ರೂಪಾಯಿಗಳವರೆಗೆ ತಮ್ಮ ಮನೆಗಳಿಗೆ ಪ್ರತಿ ತಿಂಗಳೂ ಕಳಿಸುತ್ತಾರೆ). ಇನ್ನುಳಿದ ಶೇಕಡಾ ೪೦ರಷ್ಟು ಮಹಿಳೆಯರು ತಮ್ಮ ಮನೆಗೆ ಏನೂ ಕೊಡುವುದಿಲ್ಲ ಎಂಬುದು ಕಂಡುಬರುತ್ತದೆ.(ಅವರಲ್ಲಿ ೬.೬೭ರಷ್ಟು ಮಹಿಳೆಯರು ಹೇಳುವಂತೆ, ಅವರು ಗಳಿಸಿದ್ದು ಅವರಿಗೇ ಸಾಕಾಗುವುದಿಲ್ಲ. ೧೬.೬೭ರಷ್ಟು ಮಹಿಳೆಯರು ಹೇಳುವಂತೆ ಊರಿನಲ್ಲಿ ಉತ್ತಮ ಸ್ಥಿತಿ ಇರುವುದರಿಂದ ಅವರಿಗೆ ಇವರು ಕಳಿಸುವ ಹಣದ ಅವಶ್ಯಕತೆ ಇಲ್ಲ. ೧೩.೩೩ರಷ್ಟು ಮಹಿಳೆಯರಿಗೆ ಮಕ್ಕಳೂ ಇಲ್ಲ ಮತ್ತು ಊರಲ್ಲಿಯೂ ಯಾರೂ ಇಲ್ಲದೇ ಇರುವುದರಿಂದ ಗಳಿಸಿದ ಹಣವನ್ನು ಯಾರಿಗೂ ಕಳಿಸುವುದಿಲ್ಲ.)

೨೦೦೬ರಲ್ಲಿ ಜೆ ಜೆ ಕಾಯಿದೆಯಡಿ ರಕ್ಷಿತಗೊಂಡು ಪುನರ್ವಸತಿಗೆ ಬಂದಿದ್ದಂತಹ ಒಬ್ಬಳು ಯುವತಿಯರನ್ನು ಪೋಲೀಸ್ ಸ್ಟೇಷನ್ ಮೂಲಕ ಅವಳ ತಾಯಿಗೆ ಒಪ್ಪಿಸುವಾಗ, ಅವಳ ತಾಯಿ "ನಾವು ಅಕೀನ್ನ ನಮಗ ಕಷ್ಟ ಐತೆಂತ ಕಳಿಸಿದ್ದೆವು. ಅಕೀನ್ನೇನು ಯಾರೂ ಮೋಸ ಮಾಡಿ

ಓಡಿಸಿಕೊಂಡು ಹೋಗಿರಲಿಲ್ಲ. ಪ್ರತಿ ತಿಂಗಳೂ ನಮಗೆ ಅವಳು ೮೦೦ ರೂಪಾಯಿ ಕಳಸ್ತಿದ್ದಳು. ಆದ್ದರಿಂದ ನಮ್ಮ ಜೀವನ ನಡೀತಿತ್ತು. ಹೊಟ್ಟೆ ತುಂಬ ಅಲ್ಲದಿದ್ದರೂ ಹಸಿವಾದರೂ ನೀಗತಿತ್ತ. ಇನ್ನ ಅಕೀನ ಇಲ್ಲಿಗೆ ಬಂದ್ರ, ನಮ್ಮ ಜೀವನ ಏನು? ನಮ್ಮ ಜೊತಿ ಅಕೀನೂ ಉಪವಾಸ ಬೀಳಬೇಕಾಕ್ಕೈತಿ. ನೀವು ಅಕೀನ್ನ ನಿಮ್ಮ ಜೋಡಿ ಕರ್ರೊಂಡು ಹೋಗಿ, ಏನಾದರೂ ಕೆಲಸ ಇದ್ದರ ಕೊಡ್ರಿ, ನಮಗೆ ತಿಂಗಳಿಗೆ ೮೦೦ ರೂಪಾಯಿ ಕಳಸ್ರೀ" ಎಂದು ಸಮಾಜ ಕಾರ್ಯಕರ್ತರ ಮೇಲೆ ಕೂಗಾಡುತ್ತಿದ್ದ ಕುರಿತು ಪ್ರಕರಣ ಅಧ್ಯಯನಗಳಲ್ಲಿ ಸಮಾಜ ಕಾರ್ಯಕರ್ತರು ದಾಖಲಿಸುತ್ತಾರೆ. ಇದನ್ನು ಕಂಡರೆ ಅಮಾಯಕ ಮಕ್ಕಳು ಮತ್ತು ಮಹಿಳೆಯರ ಮೇಲೆ ಅದೆಂತ ನೀಗದ ಹೊಣೆ ಎಂದೆನ್ನಿಸುತ್ತದೆ.

ಲೈಂಗಿಕ ದಂಧೆಯ ಜಗತ್ತಿಗೆ ಬಂದು ಮೂರು ದಶಕಗಳನ್ನು ಕಳೆದವರು, ಈಗ ೮-೧೦ ವರ್ಷಗಳ ಹಿಂದೆ ಬಂದವರು ಈ ಮೂವತ್ತು ಮಹಿಳೆಯರಲ್ಲಿ ಇದ್ದಾರೆ. ಇವರಲ್ಲಿ ೫೦-೬೦ ವರ್ಷಗಳ ಹಿಂದೆ ಲೈಂಗಿಕ ಜೀತಕ್ಕಿದ್ದು, ದಂಧೆ ಮಾಡಿದ್ದ ಘರವಾಲಿಗಳ ಮಕ್ಕಳೂ ಇದ್ದಾರೆ. ಅಂತ ಕೆಲವರಿಗೆ (ಶೇಕಡಾ ೧೦) ಸ್ವಂತ ಮನೆ ಇರುವುದನ್ನು ಬಿಟ್ಟರೆ ಉಳಿದ( ಶೇಕಡಾ ೯೦) ಎಲ್ಲರೂ ತಮ್ಮದೇ ಬಾಡಿಗೆ ಮನೆಗಳಲ್ಲಿ, ಘರವಾಲಿಗಳ ಮನೆಯಲ್ಲಿ ಇರುವುದು ಕಂಡುಬರುತ್ತದೆ.

ಕರ್ನಾಟಕ ಮತ್ತು ಮಹಾರಾಷ್ಟ್ರ ಹೀಗೆ ಎರಡು ರಾಜ್ಯಗಳ ನಡುವೆ ಜೀವನ ನಡೆಸುತ್ತಿರುವ ಇವರಿಗೆ ಯಾವುದೇ ಒಂದು ನಿಶ್ಚಿತ ನೆಲೆ ಇಲ್ಲ. ಮಹಾರಾಷ್ಟ್ರ ರಾಜ್ಯಕ್ಕೆ ಇವರು ಸಂಬಂಧ ಬರುವುದಿಲ್ಲ. ಸಂಬಂಧ ಬರುವ ಕರ್ನಾಟಕ ರಾಜ್ಯದಲ್ಲಿ ಇವರು ಇರುವುದಿಲ್ಲ. ಹಾಗಾಗಿ ಅಧ್ಯಯನಕ್ಕೊಳಪಟ್ಟ ಮಹಿಳೆಯರಲ್ಲಿ ಶೇಕಡಾ ೩೨.೫೬ರಷ್ಟು ಮಹಿಳೆಯರಿಗೆ ಯಾವುದೇ ಮೂಲಭೂತ ಸೌಲಭ್ಯಗಳು ಹಕ್ಕುಗಳು ಸಿಕ್ಕಿರುವುದಿಲ್ಲ. ಶೇಕಡಾ ೨೭.೯೧ರಷ್ಟು ಮಹಿಳೆಯರಿಗೆ ವೋಟಿಂಗ್ ಕಾರ್ಡ್ ದೊರೆತಿದೆ. ಶೇಕಡಾ ೧೮.೬ರಷ್ಟು ಮಹಿಳೆಯರಿಗೆ ಊರಲ್ಲಿ ಅವರ ಮಕ್ಕಳು ತಾಯಂದಿರು ಇರುವುದರಿಂದ ರೇಶನ್ ಕಾರ್ಡ್ ಚಾಲ್ತಿಯಲ್ಲಿದೆ. ಶೇಕಡಾ ೬.೯೭ರಷ್ಟು ಮಹಿಳೆಯರಿಗೆ ಮನೆ ಮತ್ತು ಶೌಚಾಲಯ ದೊರೆತಿರುವುದು ತಿಳಿದು ಬರುತ್ತದೆ.

ಅಧ್ಯಯನಕ್ಕೆ ಒಳಪಟ್ಟ ಒಟ್ಟು ಮಹಿಳೆಯರಲ್ಲಿ ೨೨ ಮಹಿಳೆಯರು ದೇವದಾಸಿ ಇದ್ದಾರೆ. ಅವರಲ್ಲಿ ಕರ್ನಾಟಕ ಸರ್ಕಾರದಿಂದ ಇಬ್ಬರು ಮಹಿಳೆಯರಿಗೆ ಮಾತ್ರ ದೇವದಾಸಿ ಮಾಸಾಸನ ದೊರೆತಿದೆ. ೧೯೮೨ನೇ ಇಸ್ವಿಯಲ್ಲಿ ಕರ್ನಾಟಕ ದೇವದಾಸಿ ಸಮರ್ಪಣಾ ನಿಷೇಧ ಕಾಯಿದೆ ಅನುಷ್ಠಾನಗೊಂಡ ನಂತರವು ೧೪ ಮಹಿಳೆಯರು ದೇವದಾಸಿಯಾಗಿದ್ದಾರೆ. ೮ ಮಹಿಳೆಯರು ಅದಕ್ಕಿಂತಲೂ ಮೊದಲೇ ದೇವದಾಸಿಯಾಗಿದ್ದರು. ಅವರಲ್ಲಿ ಇಬ್ಬರಿಗೆ ಮಾತ್ರ ಮಾಸಾಸನ ದೊರೆಯುತ್ತದೆ. ಇದಕ್ಕೆ ಮುಖ್ಯ ಕಾರಣ ಈ ಮಹಿಳೆಯರು ಹೆಚ್ಚಾಗಿ ಮುಂಬಯಿಯಲ್ಲಿಯೇ ಇರುವುದು. ಕರ್ನಾಟಕದಲ್ಲಿ ಸಮೀಕ್ಷೆ ಮಾಡುವಾಗ, ಫಲಾನುಭವಿಗಳ ಆಯ್ಕೆ ಮಾಡುವಾಗ ಇವರ ಹೆಸರು ಫಲಾನುಭವಿಗಳ ಪಟ್ಟಿಯಲ್ಲಿ ದಾಖಲಾಗುವುದಿಲ್ಲ. ಅಲ್ಲದೇ ಹೆಚ್ಚಿನ ಮಹಿಳೆಯರಿಗೆ ಈ ಸೌಲಭ್ಯಗಳ ಕುರಿತು ಅರಿವಿರುವುದಿಲ್ಲ. ಕೆಲವು ಮಹಿಳೆಯರಲ್ಲಿ ಅರಿವಿದ್ದರೂ ಸಹ ಅದರ ಮಹತ್ವ ಗೊತ್ತಿರುವುದಿಲ್ಲ.

ಅಲ್ಲದೆ ಅವರು ಗಳಿಸುವ ಆದಾಯದ ಮುಂದೆ ಈ ಸೌಲಭ್ಯಗಳು ದೊಡ್ಡವು ಅನಿಸುವುದಿಲ್ಲ. ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಸಾವಳಗಿ ಗ್ರಾಮದಲ್ಲಿ ಸಮೀಕ್ಷೆಯಲ್ಲಿ ತೊಡಗಿಕೊಂಡಿದ್ದಾಗ, ಒಬ್ಬರು ಮಹಿಳೆ ಮುಂಬಯಿಯಿಂದ ಊರಿಗೆ ಬಂದಿದ್ದರು. ಅವರನ್ನೂ ಕರೆದು ನಿಮ್ಮ ಹೆಸರು ನೋಂದಾಯಿಸಿರಿ ಅಂದಾಗ "ಅದಕ್ಕೆ ನೀವೇನು ಕೊಡುತ್ತೀರಿ? ಅಂದಳು. ತಿಂಗಳಿಗೆ ನಿಮಗೆ ೪೦೦ ರೂಪಾಯಿ ಮಾಶಾಸನ ಬರುತ್ತದೆ. ಅದು ಮುಂದೆ ಜಾಸ್ತಿಯಾಗುವುದಿದೆ. ಅಂತ ಕಾರ್ಯಕರ್ತರು ಹೇಳಿದ್ದಕ್ಕೆ. ಅವಳು "ಆ ೪೦೦ ರೂಪಾಯಿ ನಾನು ೧೦ ನಿಮಿಷದಲ್ಲಿ ಗಳಿಸುತ್ತೇನೆ. ಅದಕ್ಕಾಗಿ ನಾನ್ಯಾಕೆ ಕಷ್ಟ ಪಟ್ಟು ನಿಮ್ಮ ಹಿಂದೆ ತಿರುಗಬೇಕು. ನನ್ನ ಹೆಸರು ನಿಮ್ಮ ಪುಸ್ತಕದಲ್ಲಿದ್ದರೆ ತೆಗೆದು ಹಾಕಿ" ಎಂದು ಹೇಳಿದರು. ವಯಸ್ಸಿರುವಾಗ ದಂಧೆಯಲ್ಲಿದ್ದ ಮಹಿಳೆಯರ ನಡುವಳಿಕೆ ಹೀಗೆನೇ. ಒಂದು ಹಂತ ಮುಗಿದು ಗಿರಾಕಿಗಳು ಕಡಿಮೆಯಾದಾಗ ಊರು, ಸರ್ಕಾರ, ಸೌಲಭ್ಯ ಎಲ್ಲವೂ ನೆನಪಿಗೆ ಬರತೊಡಗುತ್ತವೆ.

**೩.೬. ಪ್ರಕರಣಗಳ ವಿಶ್ಲೇಷಣೆ**

ಇಷ್ಟೆಲ್ಲ ಸಂಘರ್ಷಗಳ ಮಧ್ಯ ಹುಟ್ಟಿದೂರಲ್ಲಿ ಬದುಕು ಕಾಣದೇ, ಹೆತ್ತವರ, ಅವಲಂಬಿತರ, ಕಂಡವರ ಆಶೋತ್ತರಗಳನ್ನು ಈಡೇರಿಸಲು ಈ ದೂರದ ಮುಂಬಯಿಗೆ ಹೊರಟುಬಂದ, ತಳ್ಳಲ್ಪಟ್ಟ, ಎಳೆದು ತಂದ ಬಾಲೆಯರಿಂದು ಯುವತಿಯರಾಗದ್ದಾರೆ, ಮಕ್ಕಳು ಮೊಮ್ಮಕ್ಕಳನ್ನು ಕಂಡ ಮಧ್ಯವಯಸ್ಸಿನ ಮಹಿಳೆಯರು ಆಗಿದ್ದಾರೆ. ಪ್ರತಿ ಕ್ಷಣವೂ ಜೀವ ಹಿಂಡುವ ನೋವಿನಲ್ಲೇ ಬದುಕಿದವರು ತಮಗಾಗಿ ಒಂದಿಷ್ಟು ಆಸೆ ಕನಸುಗಳನ್ನು ಕಟ್ಟಿಕೊಂಡು ಹೊರಲಾರದ ಭಾರ ಹೊತ್ತು ನಡೆದು ಬಂದಿದ್ದಾರೆ. ಹಾಗೆ ನಡೆದ ಬದುಕಿನಲ್ಲಿ ಅವರ ಆಸೆ ಕನಸುಗಳು ನನಸಾಗಿವೆಯಾ? ಅರಿಬರಿಗೆ ತಾವು ಬಂದದ್ದು ಸಾರ್ಥಕವೆನಿಸಿದೆಯಾ ಎಂದು ಅರ್ಥಮಾಡಿಕೊಳ್ಳಲು, ಪ್ರಯತ್ನಿಸಿದಾಗ ದೊರಕಿದ ವಿಷಯಗಳನ್ನು ಈ ಕೆಳಗೆ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಅಧ್ಯಯನಕ್ಕೊಳಪಡಿಸಿದ ಶೇಕಡಾ ೩೩.೩೩ರಷ್ಟು ಮಹಿಳೆಯರು "ಹೌದು ನಮ್ಮ ಕನಸುಗಳು ಈಡೇರಿವೆ" ಎಂದು ಉತ್ತರಿಸಿದರು. ಹೀಗೆ ಉತ್ತರಿಸಿದವರಲ್ಲಿ ಐದು ಮಹಿಳೆಯರು ಬಾಲ್ಯ ವಿವಾಹಕ್ಕೆ ಒಳಗಾದವರು ಮತ್ತು ಐದು ಮಹಿಳೆಯರು ದೇವದಾಸಿ ಪದ್ಧತಿಗೆ ಒಳಗಾದವರು ಕಂಡುಬಂದರು. ಶೇಕಡಾ ೧೩.೬೭ರಷ್ಟು ಮಹಿಳೆಯರು "ತಮಗೆ ಯಾವುದೂ ಒಳ್ಳೆಯದಾಗಿಲ್ಲ" ಎಂದು ಉತ್ತರಿಸಿದ್ದಾರೆ, ಇದರಲ್ಲಿ ಒಂದು ಬಾಲ್ಯ ವಿವಾಹ ಮತ್ತು ೪ ದೇವದಾಸಿ ಪ್ರಕರಣಗಳು ಇವೆ. ಆದರೆ ಇವನ್ನು ಹೊರತುಪಡಿಸಿ, ಅತೀ ಹೆಚ್ಚಿನ ಅಂದರೆ ಪ್ರತಿಶತ ೫೦ರಷ್ಟು ಮಹಿಳೆಯರು ಒಳ್ಳೆಯದೋ ಕೆಟ್ಟದ್ದೋ ಒಂದೂ ಗೊತ್ತಿಲ್ಲ. ಅವರು ಮಾತನ್ನೇ ಕಳೆದುಕೊಂಡು ಬಿಟ್ಟಿದ್ದಾರೆ. ಅವರ ಪ್ರತಿಕ್ರಿಯೆ ಬರೀ ಕಣ್ಣೀರುಗಳೇ ಆಗಿದ್ದವು.

ಲೈಂಗಿಕ ದಂಧೆಗೆ ಸಾಗಾಣಿಕೆಯಾಗಿದ್ದು ತಮಗೆ ಒಳ್ಳೆಯದಾಯಿತು ಎಂದು ಅಭಿಪ್ರಾಯ ವ್ಯಕ್ತಪಡಿಸಿದ ಬಾಲ್ಯವಿವಾಹಕ್ಕೆ ಒಳಗಾದ ಮಹಿಳೆಯರ ನಾಲ್ಕು ಪ್ರಕರಣಗಳು ಹಾಗೂ ನನಗೆ

ಯಾವುದೂ ಒಳ್ಳೆಯದಾಗಲಿಲ್ಲ ಎಂದು ಹೇಳಿದ ಒಂದು ಬಾಲ್ಯವಿವಾಹದ ಪ್ರಕರಣವನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

**೩.೬/೧. ಬಾಲ್ಯವಿವಾಹ ಪ್ರಕರಣಗಳು**

**ಲೈಂಗಿಕ ದಂಧೆಗೆ ಸೇರಿದ್ದು ಒಳ್ಳೆಯದಾಯಿತು ಅಂದ ಬಾಲ್ಯ ವಿವಾಹದ ಪ್ರಕರಣಗಳು.**

**ಪ್ರಕರಣ–೧** : ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ೨೯ ವಯಸ್ಸಿನ ಮಹಿಳೆಯು ಬಾಲ್ಯ ವಿವಾಹಕ್ಕೆ ಒಳಗಾದವಳು. ತಾಯಿಗೆ ಒಬ್ಬಳೆ ಮಗಳು. ಮನೆಯಲ್ಲಿ ಪ್ರೀತಿಯಿಂದ ನೋಡಿಕೊಂಡಿದ್ದರು. ವಯಸ್ಸು ಚಿಕ್ಕದಿರುವುದರಿಂದ ಮನೆ ಕೆಲಸ ಮಾಡಿ ಗೊತ್ತಿರಲಿಲ್ಲ. ಆದರೆ ಗಂಡನ ಮನೆಯಲ್ಲಿ ಅವರು ಹಚ್ಚುವ ಕೆಲಸಗಳು ಇವಳಿಗೆ ನೀಗುತ್ತಿರಲಿಲ್ಲ. ಮಾಡದೇ ಇದ್ದರೆ ಮನೆ ಮಂದಿ ಎಲ್ಲ ಒಂದಾಗಿ ಹಿಂಸೆ ನೀಡುತ್ತಿದ್ದರು. ಗಂಡನ ಮನೆಯಲ್ಲಿ ಕ್ಯಾಸೆಟ್ ಅಂಗಡಿ ಇತ್ತು. ಆರ್ಥಿಕವಾಗಿ ಏನೂ ತೊಂದರೆ ಇರಲಿಲ್ಲ. ಆದರೆ ಅವರ ಕಿರುಕುಳ ಸಹಿಸಿಕೊಳ್ಳದೇ ದೇವದಾಸಿಯೊಬ್ಬರ ಜೊತೆಗೆ ಮಹಾರಾಷ್ಟ್ರದ ಬೀವಂಡಿಗೆ ಬಂದು ಸೇರಿಕೊಂಡಿದ್ದಳು. "ಹೊಸದಾಗಿ ಬಂದಾಗ ಘರವಾಲಿ ಕೆಳಗೆ ಇರ್ತಿದ್ಯಾ. ಬಾಳ ತ್ರಾಸ ಇತ್ತು. ಹಂಗ ಬಾಳ ದಿನ ಉಳಿಲಿಲ್ಲ. ಈಗ ನಂದ ಸ್ವಂತ ಬಾಡಿಗೆ ಮನಿ ಮಾಡಿಕೊಂಡೇನಿ. ಗಿರಾಕಿಗಳು ಸೀದಾ ನನ್ನ ಮನೀಗೆ ಬರ್ತಾರ. ಹಂಗಾಗಿ ರೊಕ್ಕ ಸಿಗತೈತಿ. ಕೈಯಾಗ ಸುದ ರೊಕ್ಕಾ ಉಳೀತಾವು. ಈಗ ಏನೂ ತ್ರಾಸ ಇಲ್ಲಾ. ಆರಾಮ ಅದೇನಿ". ಎಂದು ಹೇಳುತ್ತಾಳೆ.

**ಪ್ರಕರಣ–೨** : ಬೆಳಗಾವಿ ಜಿಲ್ಲೆಯ ರಾಯಭಾಗ್ ತಾಲೂಕಿನ ನಿಲಜಗಿ ಗ್ರಾಮದ ೪೫ ವಯಸ್ಸಿನ ಮಹಿಳೆಯೊಬ್ಬರು ಬಾಲ್ಯವಿವಾಹದ ಪಿಡುಗಿಗೆ ಬಲಿಯಾದವರು. ಋತುಮತಿಯಾಗುವ ಮೊದಲೇ ಅವರಿಗೆ ಮದುವೆ ಮಾಡಿದ್ದರು. ಆಗ ಇವಳ ಗಂಡ ಇವಳಿಗಿಂತ ಬಹಳೇ ದೊಡ್ಡವನಿದ್ದ. ಅವನ ಲೈಂಗಿಕ ಅವಶ್ಯಕತೆಗಳನ್ನ ಇವಳಿಂದ ತೀರಿಸಲು ಸಾಧ್ಯವಾಗುತ್ತಿರಲಿಲ್ಲ. ಹಾಗಾಗಿ ಆತ ತನ್ನ ವಯಸ್ಸಿಗೆ ಸರಿ ಹೊಂದುವಂತ ಮತ್ತೊಂದು ಹೆಣ್ಣಿನೊಡನೆ ಮದುವೆಯಾದ. ಅವಳು ಅಲ್ಲಿದ್ದು ಮಾಡುವುದಾದರೂ ಏನು ಎಂದು ತನ್ನ ತವರಿಗೆ ಹಿಂದಿರುಗುತ್ತಾಳೆ. ಊರಲ್ಲಿಯೇ ಕೆಲಸಕ್ಕೆ ಹೋಗಲು ಪ್ರಾರಂಭಿಸಿದಳು. ಆಗ ಇವಳಿಗೆ ೫೦ ಪೈಸೆ ಕೊಡುತ್ತಿದ್ದರು. ಅದೇ ಹಣದಲ್ಲಿ ೫–೬ ಜನ ಊಟ ಮಾಡಬೇಕಿತ್ತು. ಒಂದು ಹೊತ್ತು ಊಟ ಮತ್ತೊಂದು ಹೊತ್ತು ಉಪವಾಸ. ಬದುಕು ತುಂಬಾ ದುಸ್ತರವಾಗಿತ್ತು. ಅದೇ ದಿನದಲ್ಲಿ ಮುಂಬಯಿಯ ಕಾಮಾಟಿಪುರದಲ್ಲಿ ಒಬ್ಬ ಗಿರಾಕಿಯಿಂದ ೬–೭ ರೂಪಾಯಿ ಸಿಗುತ್ತಿತ್ತು. ದೇವದಾಸಿ ಮಹಿಳೆಯರು ಮುಂಬಯಿಂದ ಬರುವುದು ಹೋಗುವುದು ಮಾಡುತ್ತಿದ್ದರು. ಅವರ ಜೊತೆ ಇಲ್ಲಿಗೆ ಬಂದು ಸೇರಿದಳು. "ಬಂದು ೨೩–೨೪ ವರ್ಷಗಳಾಗ್ಯಾವು. ಎರಡು ಸೈಟ್ ಖರೀದಿ ಮಾಡೇನಿ. ರೊಕ್ಕ ಬಂಗಾರ ಮಾಡ್ಕೊಂಡೇನಿ. ನನಗೆ ಮಕ್ಕಳಿಲ್ಲ. ತಮ್ಮನ ಮಗಳು ಮತ್ತು ತಂಗಿಯ ಮಗನ್ನ ಜಾಪಾನ ಮಾಡೇನಿ. ತಂಗಿ ಮಗಳ ಮದುವಿ ನಾನ ನಿಂತು ಮಾಡಿ ಕೊಟ್ಟೇನಿ. ಗಂಡನ ಮನ್ಯಾಗ ಆರಾಮ ಅದಾಳ. ನಾನೂ ಆರಾಮ ಅದೆನಿ" ಅನ್ನುತ್ತಾರೆ. ಈ ನಡುವೆ ರಾಜಸ್ಥಾನ ಮೂಲದ ಒಬ್ಬ ವ್ಯಕ್ತಿ ಇವಳ ಪರಮನೆಂಟ್ ಪಾರ್ಟನರ್ ಆಗಿದ್ದಾನೆ. ಆತ ಇದನ್ನೆಲ್ಲ ಮಾಡುವುದು

ಬೇಡ ಎಂದು ತನ್ನ ಊರಿಗೆ ಕರೆದುಕೊಂಡು ಹೋಗಿ ತನ್ನ ಮನೆಯವರೊಂದಿಗೆ ಇರಿಸಿಕೊಂಡಿದ್ದ. ಗೌರವದ ಬದುಕು ಕೊಟ್ಟದ್ದ. "ಸ್ವತಂತ್ರವಾಗಿದ್ದು, ಮೋಜಿನ ಜೀವನ ಕಂಡಾಕಿಗೆ, ಆ ಜೀವನಕ್ಕ ಒಗ್ಗಿಕೊಳ್ಳಾಕ ಆಗಲಿಲ್ಲ. ನಾನು ಇಲ್ಲೇ ಸುಖದಿಂದ ಅದೇನಿ. ಮುಂದೆ ಆ ನನ್ನ ಗೆಣ್ಯಾಗೂ ನನ್ನನ್ನು ಬಿಟ್ಟರೋದು ಸಾಧ್ಯ ಆಗಲಿಲ್ಲ. ತನ್ನ ಎಲ್ಲ ಬಳಗಾನ ಬಿಟ್ಟಗೊಟ್ಟ ಬಂದುಬಿಟ್ಟ" ಎಂದು ವಿವರಿಸುತ್ತಾರೆ. ಈಗ ಆಶಾ ಮಹಿಳಾ ಸಂಸ್ಥೆಯಲ್ಲಿ ಪೀಯರ್ ಅಗಿ ಕೆಲಸ ಮಾಡುತ್ತಿದ್ದಾಳೆ.

**ಪ್ರಕರಣ–೩ :** ಬಾಗಲಕೋಟೆ ಜಿಲ್ಲೆಯ ಜಮಖಂಡಿಯ ೪೦ ವಯಸ್ಸಿನ ಮಹಿಳೆ. ಎರಡು ಜನ ಅಕ್ಕಂದಿರು. ತಾಯಿಯೂ ಸೇರಿದಂತೆ ಇಬ್ಬರೂ ಅಕ್ಕಂದಿರು ದೇವದಾಸಿಯರು. ಇವಳನ್ನೇನು ದೇವದಾಸಿ ಮಾಡಿರಲಿಲ್ಲ. ಋತುಮತಿಯಾದ ಕೂಡಲೇ (೧೨ ವರ್ಷ) ಪಕ್ಕದ ಗ್ರಾಮದ ಯುವಕನೊಡನೆ ಮದುವೆ ಮಾಡಿದ್ದರು. ಮದುವೆಯಾದ ನಂತರ ತಿಳಿದು ಬಂದದ್ದೆಂದರೆ, ಆತ ಲಿಂಗತ್ವ ಅಲ್ಪಸಂಖ್ಯಾತ, ತೃತೀಯ ಲಿಂಗೀಯನಾಗಿರುತ್ತಾನೆ. ಆ ವಿಷಯ ಗಂಡನ ಮನೆಯವರಿಗೆಲ್ಲ ಗೊತ್ತಿತ್ತು. ಅದು ಬಹಿರಂಗವಾದರೆ ಕುಟುಂಬದ ಮರ್ಯಾದೆ ಪ್ರಶ್ನೆಯಾಗುತ್ತದೆಂದು ಮದುವೆ ಮಾಡಿದ್ದರು. ಇವಳು ಅಲ್ಲಿರಲು ಒಪ್ಪದೇ ಹೋದಾಗ, ಗಂಡನ ಮನೆಯವರು, ಅವಳಿಗೆ ಯಾವುದೂ ಸಮಸ್ಯೆ ಬರದ ಹಾಗೆ ನೋಡಿಕೊಳ್ಳುತ್ತೇವೆ. ನಮ್ಮ ಮರ್ಯಾದೆಯ ಪ್ರಶ್ನೆ. ಇಲ್ಲಿಯೇ ಇರಲಿ. ಎಂದು ಒತ್ತಾಯಿಸುತ್ತಾರೆ. ಆದರೆ ಇವಳ ತಾಯಿ ಕೋರ್ಟ ಮುಖಾಂತರವೇ ವಿಚ್ಛೇದನ ಮಾಡಿಸಿಕೊಂಡು ಮಗಳನ್ನು ಮನೆಗೆ ಕರೆತರುತ್ತಾರೆ. ಗಂಡನನ್ನು ಬಿಟ್ಟು ಬಂದ ಕಾರಣ, ಮತ್ತೊಂದು ಮದುವೆಯಾಗುವುದು ಅಷ್ಟು ಸರಳವಿರಲಿಲ್ಲ. ಮನೆಯಲ್ಲಿ ಎಲ್ಲರೂ ದೇವದಾಸಿಯರಿದ್ದರು. ಊರಲ್ಲಿ ಜನರೂ ಸರಿ ಇರಲಿಲ್ಲ. ಹಾಗಾಗಿ ಊರಲ್ಲಿ ಹೆಸರು ಕೆಡೆಸಿಕೊಂಡು, ಅಣ್ಣ ತಮ್ಮಂದಿರ ಎದುರು ತಲೆ ತಗ್ಗಿಸಿ ಬದುಕುವುದಕ್ಕಿಂತ, ಮುಂಬಯಿಗೇ ಹೋಗುವುದು ಲೇಸೆಂದು ಗೆಳತಿಯೊಂದಿಗೆ ಮುಂಬಯಿಯ ಕಾಮಾಟಿಪುರ ಸೇರಿ ಕೊಳ್ಳುತ್ತಾಳೆ. ಹೋದ ಹೊಸದರಲ್ಲಿ ಘರವಾಲಿಯೊಬ್ಬಳ ಮನೆಯಲ್ಲಿದ್ದಳು. ಆಗೆಲ್ಲ ತುಂಬಾ ಹಿಂಸೆಯಾಗುತ್ತಿತ್ತು. ವಿದೇಶದ ಗಿರಾಕಿಗಳು ಬರುತ್ತಿದ್ದರು. ಹಡಗು ಪ್ರಯಾಣದಿಂದ ವ್ಯಾಪಾರಕ್ಕಾಗಿ ಅರಬ್ ಜನ ಬರುತ್ತಿದ್ದರು. ಅವರೆಲ್ಲ ತುಂಬಾ ಶ್ರೀಮಂತರು ಮತ್ತು ಕೈ ತುಂಬಾ ಹಣ ಕೊಡುತ್ತಿದ್ದರು. ದಂಧೆಯ ಗಲ್ಲಿ ರೂಢಿಯಾದನಂತರ ಇವಳೇ ಒಂದು ಬಾಡಿಗೆ ರೂಮನ್ನು ಹಿಡಿದುಕೊಂಡು ಸ್ವತಂತ್ರವಾಗಿ ವ್ಯವಹಾರ ಮಾಡಲು ಪ್ರಾರಂಭಿಸಿದಳು. "ಆಗ ರೊಕ್ಕಾ ಹೆಚ್ಚು ಉಳ್ಯಾಕತ್ತಿತು. ಬೀವಂಡ್ಯಾಗ (ಥಾಣೆ ಜಿಲ್ಲೆ, ಮಹಾರಾಷ್ಟ್ರ) ಜಾಗಗಳು ಕಡಿಮಿ ರೇಟನ್ಯಾಗ ಸಿಗತಿದ್ದವು. ಹಂಗಾಗಿ ಅಲ್ಲೇ ಜಾಗ ಖರೀದಿ ಮಾಡ್ಕೊಂಡು ಮನಿ ಕಟ್ಟಿಸಿಕೊಂಡೆ. ಕಾಮಾಟಿಪೂರದಾಗೂ ಸ್ವಂತ ಗಳಸೂ ಮನಿ ಖರೀದಿ ಮಾಡ್ಕೊಂಡೇನಿ. ಈಗ ನನ್ನ ದಂಧೆ ಮನ್ಯಾಗ ನಾಕ ಹುಡುಗ್ಯಾರದಾರ. ಅವರು ಗಳಿಕ್ಯಾಗ ನನಗೆ ಅರ್ಧ ಕೊಡ್ತಾರ. ಇಲ್ಲಿ ಬೀವಂಡಿ ಮನ್ಯಾಗನೂ ನಮ್ಮ ಊರಿನವ ನಾಕ ಹುಡಗೇರ ಅದಾರೆ. ಅದು ಲಾಭ ಬರ್‍ತೈತಿ. ಊರಾಗೂ ಒಂದು ಮನಿ ಕಟ್ಟೇನಿ. ನನಗ ಪಾರ್ಟನರ್ ಒಬ್ಬಾವ ಬಾಳ ಚುಲೋ ಸಿಕ್ಕಾನ. ಈಗಲೂ ನನ್ನ ಖರ್ಚು ವೆಚ್ಚ ಅವನ ನೋಡ್ಕೊಂತಾನ. ನನಗೆ ಮಕ್ಕಳಿಲ್ಲ. ಅಕ್ಕಂದಿರ ಮಕ್ಕಳನ್ನ ಓದಾಕ ತಂದು ಇಟಕೊಂಡೇನಿ. ಇಲ್ಲಿ ದೇವದಾಸ್ಯಾರ ಸಲುವಾಗಿ, ನಮ್ಮಂತವರ ಸಲುವಾಗಿ

ಕೆಲಸ ಮಾಡೋ ಸಂಸ್ಥಾಗಳು ಅದಾವ. ಅವರ್ನ ನನ್ನ ಮಕ್ಕಳಂತ ಹೇಳಿ ಇಲ್ಲೇ ಸಾಲೀಗಿ ಹಚ್ಚೀನಿ. ಬಾಳ ಚುಲೋ ಓದ್ತಾರ. ದೇವದಾಸಿಯರಾಗಿದ್ದ ನನ್ನ ತಾಯಿ, ಅಕ್ಕಂದಿರು ಇಲ್ಲಿಗೆ ಬರಲಿಲ್ಲ. ಆದ್ರ ನಾನೊಬ್ಬಳು ಬಂದಿದ್ದಕ್ಕ ಅವರನ್ನೂ ಸೇರಿಸಿ ಎಲ್ಲಾರಿಗೂ ಚುಲೋ ಆಗೇತಿ. ಇಲ್ಲೀಗಿ ಬರದೆ ಹೋಗಿದ್ರ, ಇಷ್ಟೆಲ್ಲ ಸಾಧ್ಯ ಆಕ್ಕಿದ್ದಿಲ್ಲ.." ಎಂದು ಜೀವಂಡಿಯಲ್ಲಿರುವ ಇವರು ಹೇಳುತ್ತಾರೆ.

**ಪ್ರಕರಣ–೪** : ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಸಂಕೋನಟ್ಟಿ ಗ್ರಾಮದ ನಲವತ್ತನಾಲ್ಕು ವಯಸ್ಸಿನ ಇವಳು ವಿಧವೆ. ಸಮಾಜದಲ್ಲಿ ರೂಡಿಯಲ್ಲಿದ್ದಂತೆ ಇವರನ್ನೂ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಲಾಗಿತ್ತು. ತನಗಿರುವ ಒಬ್ಬಳೇ ಮಗಳು ಮತ್ತು ಗಂಡನೊಂದಿಗೆ ಅನ್ಯೋನ್ಯವಾಗಿದ್ದರು. ಇವಳಿಗೆ ೧೫ ವಯಸ್ಸಿರುವಾಗ ಇವಳ ಗಂಡನಿಗೆ ಅಪಘಾತಕ್ಕೀಡಾಗಿ ಸತ್ತು ಹೋಗುತ್ತಾನೆ. ಇವಳ ತಂದೆ ಬರಗಾಲದಿಂದಾಗಿ ಬದುಕುಳಿಯಲು ಊರಿಂದ ಊರಿಗೆ ಅಲೆಯುತ್ತಿದ್ದರು. ಗಂಡನ ಮರಣದ ನಂತರ ಇವಳೂ ಸಹ ತನ್ನ ತಂದೆಯೊಡನೆ ಕೆಲಸಕ್ಕೆ ಹೋಗಲು ಪ್ರಾರಂಭಿಸಿದಳು. ಜಮಖಂಡಿಯ ಸಿದ್ದಾಪುರ ಖೆಮಲಾಪುರ ಗಳಲ್ಲಿ ತಮ್ಮ ಎತ್ತುಗಳೊಂದಿಗೆ ಕೆಲಸಕ್ಕೆ ಹೋಗಿದ್ದರು. ಅಲ್ಲಿ ಇವಳಿಗೆ ದೇವದಾಸಿಯೊಬ್ಬಳ ಪರಿಚಯ ವಾಗಿತ್ತು. ಅವಳು ಇವಳಿಗೆ ಮುಂಬಯಲಿ ದುಡಿಯಲು ಅವಕಾಶಗಳಿವೆ ಅಲ್ಲಿಗೆ ಬರಬಹುದು ಎಂದು ಹೇಳಿದಳು. ಅವಳ ಮಾತಿನಂತೆ ಇವಳು ಮುಂಬಯಿಗೆ ಸೇರಿಕೊಳ್ಳುತ್ತಾಳೆ. ಆದರೆ ಅಲ್ಲಿಯ ಲೈಂಗಿಕ ದಂಧೆ ಇವಳಿಗೆ ಒಗ್ಗಲೇ ಇಲ್ಲ. "ದಂಧೆ ಮಾಡೋ ಗಲ್ಲಿಯೊಳಗ ಇರ್ತಿದ್ದೆ. ಹಂಗಂತ ನಾನು ದಂಧೆ ಮಾಡಿಲ್ಲ. ಅಂಥಾ ಹುಡುಗ್ಯಾರಿರೊ ಮನೀಗೆ ನೀರು ತುಂಬೋದು, ಅಡಿಗೆ ಮಾಡೋದು, ಅವರ ಬಟ್ಟೆ ಒಗಿಯೋದು(ತೊಳಿಯುವುದು), ಮಾಡ್ಕೊಂತ ಜೀವನ ಮಾಡೇನಿ. ಅಂತ ಕೆಲಸಕ್ಕೇನು ಇಲ್ಲಿ ಬರ ಇಲ್ಲ. ನನ್ನಂತವರು ಇಲ್ಲಿ ಬಾಳ ಜನ ಅದೇವಿ. ಈಗ ಸಧ್ಯಕ್ಕೆ ೫ ರೂಮುಗಳಿರೋ ಮನೀನ ನೋಡ್ಕಳ್ಳೋ ಜವಾಬ್ದಾರಿ ಸಿಕ್ಕೈತಿ. ಇರುವ ಕೆಲಸದಗೂಡ ಈ ಕೆಲಸಕ್ಕೆ ಇಷ್ಟು ಅಂತ ತಿಂಗಳ ಪಗಾರ ಸಿಗ್ತೈತಿ. ಇಂತಾ ಕೆಲಸಗಳಿಂದ ಬಂದ ಆದಾಯದೊಳಗ ಊರಾಗ ಮನಿ ಕಟ್ಟಸೇನಿ. ಹೊಲ ಖರೀದಿ ಮಾಡೇನಿ". ಎಂದು ತನ್ನ ಸಂತೋಷವನ್ನು ಇವಳು ಹಂಚಿಕೊಳ್ಳುತ್ತಾಳೆ.

ಮೇಲಿನ ಪ್ರಕರಣಗಳನ್ನು ವಿಶ್ಲೇಷಣೆ ಮಾಡಿದಾಗ ನಾಲ್ಕೂ ಪ್ರಕರಣಗಳಲ್ಲಿ ಒಂದು ಸಾಮ್ಯತೆ ಕಂಡುಬರುತ್ತದೆ. ಅದೇನೆಂದರೆ, ಈ ಮಹಿಳೆಯರನ್ನು ಅವರ ಬಾಲ್ಯಾವಸ್ಥೆಯಲ್ಲಿ ಯಾರೂ ಸಾಗಾಣಿಕೆ ಮಾಡಿಲ್ಲ. ಲೈಂಗಿಕ ಜೀತಕ್ಕಾಗಿ ಅಥವಾ ದಂಧೆಗಾಗಿ ಇವರನ್ನು ಮನೆಯವರಾಗಲಿ, ಹೊರಗಿನವರಾಗಲಿ ಯಾರೂ ಸಾಗಾಣಿಕೆ ಮಾಡಿಲ್ಲ. ಆದರೆ ಬಾಲ್ಯ ವಿವಾಹ ಮಾಡಿದ್ದೇ ಇವರು ಲೈಂಗಿಕ ದಂಧೆಗೆ ಇಳಿಯಲು ಕಾರಣವಾಗಿರುವುದು ಕಂಡು ಬರುತ್ತದೆ. ಬಾಲ್ಯ ವಿವಾಹಕ್ಕೊಳಗಾದ ಇವರ ಜೀವನದಲ್ಲಿ ಬೇರೆ ಬೇರೆ ಸಂದರ್ಭಗಳು ಎದುರಾಗುತ್ತವೆ.

ಮೊದಲ ಪ್ರಕರಣದಲ್ಲಿ ಒಬ್ಬಳೇ ಮಗಳೆಂದು ಪ್ರೀತಿಯಿಂದ ಪಾಲನೆ ಮಾಡಿರುತ್ತಾರೆ. ಎಳೆಯ ಜೀವಕ್ಕೆ ಮನೆಗೆಲಸ ಮಾಡಿ ಗೊತ್ತಿರುವುದಿಲ್ಲ. ಇನ್ನೂ ಆಡುವ ವಯಸ್ಸು. ಅಂತ ಸ್ಥಿತಿಯಲ್ಲಿ ಮನೆಗೆಲಸ ಮಾಡಬೇಕಾದ ಹೊರೆ ಅವಳದಾಗಿರುತ್ತದೆ. ಮನೆಯವರ ಹಿಂಸೆಯನ್ನು ಅವಳಿಗೆ ತಡೆದು

ಕೊಳ್ಳಲು ಸಾಧ್ಯವಾಗದೇ ಹೇಗಾದರೂ ಮಾಡಿ ಅಲ್ಲಿಂದ ಪಾರಾಗಿ ಬಿಡಬೇಕು ಎಂದು ಚಿಂತಿಸಿದವಳಿಗೆ, ಮುಂಬಯಿಯಲಿ ಘರವಾಲಿಯಾಗಿರುವ ದೇವದಾಸಿ ಮಹಿಳೆಯೊಬ್ಬಳ ಪರಿಚಯ ಇವಳಿಗೆ ಆಗುತ್ತದೆ. ಇದೆಲ್ಲ ಆಗುವ ಹೊತ್ತಿಗೆ ಅವಳಿಗೆ ೧೪-೧೫ ವರ್ಷ. ಅವಳಿಗೆ ಸ್ವತಂತ್ರವಾದ, ಅವಳನ್ನು ಪ್ರೀತಿಸುವ ಜೀವನಕ್ಕಾಗಿ ಮನಸ್ಸು ಹಾತೊರೆಯುತ್ತಿರುತ್ತದೆ. ಹಾಗಾಗಿ ದೇವದಾಸಿ ಮಹಿಳೆಯೊಂದಿಗೆ ಮನೆ ಬಿಟ್ಟು ಬಂದು ವೇಶ್ಯಾಗೃಹ ಸೇರಿಕೊಳ್ಳುತ್ತಾಳೆ.

ಎರಡನೇಯ ಪ್ರಕರಣದಲ್ಲಿ, ಬಾಲಕಿ ಇನ್ನೂ ಋತುಮತಿಯಾಗಿರದೇ ಇರುವಷ್ಟು ಚಿಕ್ಕವಳಿರುವಾಗ, ಅವಳಿಗಿಂತ ದೊಡ್ಡವನಾದ ಅಂದರೆ, ಮದುವೆ ವಯಸ್ಸಿಗೆ ಬಂದ ವ್ಯಕ್ತಿಯೊಡನೆ ಮಾಡುತ್ತಾರೆ. ಮದುವೆ ಅನ್ನುವುದು ಸಾಮಾಜಿಕವಾದ ಸಂಸ್ಥೆಯಾಗಿದೆ. ಇಲ್ಲಿ ಮದುವೆಯ ಬಂಧನಕ್ಕೆ ಒಳಪಡುವ ಗಂಡು ಹೆಣ್ಣುಗಳ ಲೈಂಗಿಕ ಬಯಕೆಗಳನ್ನು ತೃಪ್ತಿಪಡಿಸಿಕೊಳ್ಳುವ ಕಾರ್ಯವೂ ಮುಖ್ಯವಾಗಿ ನಡೆಯುತ್ತದೆ. ಆದರೆ ಅದು ಗಂಡು ಹೆಣ್ಣಿನ ನಡುವೆ ಬೆಳೆಯುವ ಸುಮಧುರ ಸಂಬಂಧ, ಸಾಮರಸ್ಯಗಳ, ಪರಸ್ಪರ ಪ್ರೀತಿ ಗೌರವಗಳೊಂದಿಗೆ ನಡೆಯುವಂತದ್ದಾಗಿರುತ್ತದೆ. ಆದರೆ ಗಂಡನ ಭಾವನೆಗಳನ್ನು ಅರ್ಥಮಾಡಿ ಕೊಳ್ಳಲು ಅಸಾಧ್ಯವಾದ ವಯಸ್ಸಿನ ಮತ್ತು ಮನಸ್ಸಿನ ಒಂದು ಮಗುವನ್ನು ಹೆಂಡತಿ ಎಂದು ಜೊತೆ ಮಾಡಿದರೆ, ಆ ಸಂಬಂಧ ಮುಂದುವರೆಯಲು ಹೇಗೆ ಸಾಧ್ಯ ಒಂದು ಆ ವ್ಯಕ್ತಿ ಆ ಮಗುವಿನ ಮೇಲೆ ಅಸಹಜವಾದ ಹಿಂಸಾತ್ಮಕ ಸಂಬಂಧ ಹೊಂದಬೇಕು. ಅಥವಾ ತನ್ನ ಬಯಕೆಗಳಿಗೆ ಸ್ಪಂದಿಸುವ ತನ್ನ ವಯಸ್ಸಿಗನುಸುಣವಾದ ಮತ್ತೊಂದು ಹೆಣ್ಣನ್ನು ಮದುವೆಯಾಗಬೇಕು ಇಲ್ಲವೆ ವಿವಾಹೇತರ ಸಂಬಂಧ ಇಟ್ಟುಕೊಳ್ಳಬೇಕು. ಈ ಎಲ್ಲ ಬೆಳವಣಿಗೆಯ ವಿಚಿತ್ರವೆಂದರೆ, ಇದಕ್ಕೆ ಬಲಿಪಶುವಾಗುವವಳು ಏನೂ ಅರಿಯದ ಆ ಮುಗ್ಧ ಹೆಣ್ಣು ಮಗು. ಈ ಪ್ರಕರಣದಲ್ಲಿ ಆಗಿದ್ದೂ ಸಹ ಅದೇ. ವಯಸ್ಸಿಗೆ ಬಂದ ಗಂಡನ ಲೈಂಗಿಕ ಭಾವನೆಗಳಿಗೆ ಸ್ಪಂದಿಸದ ಇವಳನ್ನು ಇಟ್ಟುಕೊಂಡೇ, ಆತ ತನಗೆ ಸರಿ ಹೊಂದುವ ಮತ್ತೊಬ್ಬಳನ್ನು ಮದುವೆ ಆಗುತ್ತಾನೆ. ಆಗ ಅನಿವಾರ್ಯವಾಗಿ ದಾರಿ ಕಾಣದೇ ಇವಳು ತನ್ನ ತವರಿಗೆ ಹಿಂದಿರುಗುತ್ತಾಳೆ. ಆದರೆ ತವರು ಮನೆಯ ಬಡತನ, ಕಡಿಮೆ ಕೂಲಿಯ ಕೆಲಸಗಳು, ಸುತ್ತ ಮುತ್ತಲಿನ ಪರಿಸರ ಇವಳನ್ನು ಮತ್ತೊಂದು ದಿಕ್ಕಿನತ್ತ ಚಿಂತಿಸುವಂತೆ ಮಾಡುತ್ತದೆ. ಆಗ ಊರಲ್ಲಿ ಇವಳದೇ ವಯಸ್ಸಿನ ಹುಡುಗಿಯರು ದೇವದಾಸಿಯರಾಗಿ ಮುಂಬಯಿಯಲ್ಲಿ ದಂಧೆ ಮಾಡಿ ತಮ್ಮ ಮನೆಗೆ ಹಣ ಕಳಿಸುವುದನ್ನು, ಒಳ್ಳೊಳ್ಳೆ ಬಟ್ಟೆ ಬರೆ ಹಾಕಿಕೊಂಡು ಚೆನ್ನಾಗಿ ಇರುವುದನ್ನು ಇವಳು ನೋಡುತ್ತಿರುತ್ತಾಳೆ. ಮದುವೆಯಾದರೂ ಗಂಡನಿಲ್ಲದೇ ಬದುಕುವುದಕ್ಕಿಂತ ಮುಂಬಯಿಗೆ ಹೋಗುವುದೇ ಒಳ್ಳೆಯದು ಎಂದು ೧೩-೧೪ರ ಬಾಲೆ ಊರಿನಿಂದ ದೂರವಾಗುತ್ತಾಳೆ.

ಮೂರನೇಯ ಪ್ರಕರಣದಲ್ಲಿ, ಬಾಲೆಯ ಮನೆ ಮಂದಿಯೆಲ್ಲ ದೇವದಾಸಿಯರು. ೧೨ನೆ ವಯಸ್ಸಿಗೆ ಇವಳನ್ನು ಮದುವೆ ಮಾಡಿಕೊಟ್ಟಾಗ ಆತ ಲಿಂಗತ್ವ ಅಲ್ಪ ಸಂಖ್ಯಾತ. ಒಂದು ಹೆಣ್ಣಿನ ಜೊತೆ ಲೈಂಗಿಕವಾಗಿ ಬದುಕು ನಡೆಸಲು ಅಸಮರ್ಥನಾದವನು. ಅವನ ಮನೆಯವರಿಗೆ ಕುಟುಂಬದ ಮರ್ಯಾದೆಯ ಪ್ರಶ್ನೆ. ಇವಳಿಗೆ ಬದುಕಿನ ಪ್ರಶ್ನೆ. ಕೊನೆಗೆ ವಿಚ್ಛೇದನಗೊಂಡು ತವರಿಗೆ ಬರುವ ಇವಳ ಕೌಟುಂಬಿಕ ಪರಿಸರ, ಇವಳನ್ನು ಮನೆಯಲ್ಲಿ ನಿಲ್ಲದಂತೆ ಮಾಡುತ್ತದೆ. ಅವಳ ಜೀವನದ ಕುರಿತು

ಯಾವುದೇ ಗಂಭೀರತೆ ಇಲ್ಲದ ತಾಯಿ ಮತ್ತು ಅಕ್ಕಂದಿರು, ಇವಳನ್ನು ಇವಳ ತಾಯಿ ಮತ್ತು ಅಕ್ಕಂದಿರ ಸ್ಥಾನದಲ್ಲಿಯೇ ನೋಡಲಾರಂಭಿಸಿದ ಸಮಾಜ, ಜಿಡಿಸಲಾಗದ ಮಾನಸಿಕ ತುಮುಲಗಳನ್ನು ಹುಟ್ಟು ಹಾಕುತ್ತವೆ. ಕೊನೆಗೆ ಇದ್ದ ಊರಲ್ಲಿ, ಹೆಸರು ಕೆಡಿಸಿಕೊಂಡು, ಅಣ್ಣ ತಮ್ಮಂದಿರ ಮುಂದೆ ಮರ್ಯಾದೆ ಇರದ ಜೀವನ ಮಾಡುವುದಕ್ಕಿಂತ ತಾನು ಅಲ್ಲಿಂದ ಹೊರ ಹೋಗುವುದೇ ಒಳಿತು ಎಂಬ ತೀರ್ಮಾನಕ್ಕೆ ಬರುವ ಅವಳ ಸ್ಥಿತಿ ಮನೆಯವರಿಂದ ಯಾವುದೇ ಪ್ರತಿರೋಧಕ್ಕೂ ಗುರಿಯಾಗುವುದಿಲ್ಲ. ೧೫-೧೬ನೇ ವಯಸ್ಸಿನ ಬಾಲೆ ಗೆಳತಿಯೊಂದಿಗೆ ಮುಂಬಯಿಯ ಕಾಮಾಟಿಪುರ ಸೇರುತ್ತಾಳೆ.

ನಾಲ್ಕನೆಯ ಪ್ರಕರಣದಲ್ಲಿ, ತನ್ನ ೧೫-೧೬ನೇ ವಯಸ್ಸಿನಲ್ಲಿ ಒಂದು ಮಗುವನ್ನು ಹೆತ್ತಿದ್ದ ಇವಳ ಗಂಡ ಅಪಘಾತದಲ್ಲಿ ಸಾವನ್ನಪ್ಪುತ್ತಾನೆ. ತಂದೆಯೊಂದಿಗೆ ಊರಿಂದ ಊರಿಗೆ ವಲಸೆ ಹೋಗುತ್ತಾ ಕೆಲಸ ಮಾಡಿಕೊಂಡಿದ್ದವಳಿಗೆ, ದೇವದಾಸಿಯೊಬ್ಬಳ ಪರಿಚಯವಾಗುತ್ತದೆ. ಇವಳ ಸ್ಥಿತಿ ಅರಿತಿದ್ದ ಅವಳು, ಇವಳನ್ನು ಮುಂಬಯಲಿ ಇರುವ ಕೆಲಸದ ಅವಕಾಶಗಳ ಕುರಿತು ಮಾಹಿತಿ ನೀಡುತ್ತಾಳೆ. ಬಿಸಿಲಲ್ಲಿ ಸಾಯುವುದಕ್ಕಿಂತ, ಅಲ್ಲಿ ಆರಾಮಾಗಿದ್ದುಕೊಂಡು ಕೈ ತುಂಬಾ ಸಂಪಾದಿಸುವ ಭರವಸೆ ನೀಡುತ್ತಾಳೆ. ಅಲ್ಲದೇ ಇವಳೂ ಸಹ ಗಂಡನಿಲ್ಲದೇ ಬೇರೆ ಯಾರನ್ನೋ ಆಶ್ರಯಿಸುವುದಕ್ಕಿಂತ, ತನ್ನ ಮಗಳ ಭವಿಷ್ಯಕ್ಕಾಗಿ ಅವಳೊಂದಿಗೆ ಹೋಗುವುದು ಉತ್ತಮವೆಂದು, ರೆಡ್‌ಲೈಟ್ ಏರಿಯಾವನ್ನು ಪ್ರವೇಶಿಸುತ್ತಾಳೆ.

ಹೀಗೆ ತಮ್ಮ ತಮ್ಮ ನಿರ್ಧಾರದ ಮೇಲೆ ಲೈಂಗಿಕ ದಂಧೆಗೆ ಹೋದ ಇವರಿಗೆ ವೈಯಕ್ತಿಕವಾಗಿ ಸಹಿಸಿಕೊಳ್ಳಬಹುದಾದ ಮತ್ತು ಸಾಮಾಜಿಕವಾಗಿ ಮಾನ್ಯವಾದ ಬದುಕು ಊರಲ್ಲಿ ಇರುವುದಿಲ್ಲ. ಇಂತ ಸಂದರ್ಭಗಳಲ್ಲಿ ಸಮಾಜ ಅವರನ್ನು ತನ್ನ ವಿಕೃತ ದೃಷ್ಟಿಯಿಂದಲೇ ನೋಡಿರುತ್ತದೆ. ಅವಳು ತನಗೆ ಯೋಗ್ಯವಾದ ಬದುಕನ್ನು ನಿರ್ಮಿಸಿಕೊಳ್ಳುವಲ್ಲಿ ಅಕ್ಷರಜ್ಞಾನವೂ ಅವಳಿಗಿರುವುದಿಲ್ಲ. ಹಾಗಾಗಿ ಹಾಗೆ ಹೋದ ಇವರು ಎಷ್ಟೇ ಕಷ್ಟ ಬಂದರೂ ಅನುಭವಿಸಿ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಮಾನಸಿಕವಾಗಿ ತಮ್ಮನ್ನು ತಾವು ಸಿದ್ಧಪಡಿಸಿಕೊಂಡಿದ್ದಾರೆ. ಲೈಂಗಿಕ ದಂಧೆಯ ಜಗತ್ತು ಕಲಿಸುವ ಕೆಟ್ಟ ಚಟಗಳಿಗೆ ಬಲಿಯಾಗದೇ, ಗಳಿಸಿದ್ದನ್ನು ಉಳಿಸಿ ಹೊಲ, ಮನೆ, ಬಂಗಾರದಂತಹ ವಸ್ತುಗಳನ್ನು ಖರೀದಿಸಿಕೊಂಡಿದ್ದಾರೆ. ಕೆಲವರು ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸುತ್ತಿದ್ದಾರೆ. ಅಣ್ಣ ತಮ್ಮಂದಿರ ಭವಿಷ್ಯ ಕಟ್ಟಿ ಕೊಟ್ಟಿದ್ದಾರೆ. ವಿಧವೆಯಾಗಿ ಜೀವನ ರೂಪಿಸಿಕೊಳ್ಳಲು ಹೋದ ಒಬ್ಬ ಹೆಣ್ಣುಮಗಳು, ಲೈಂಗಿಕ ದಂಧೆ ಒಗ್ಗದೇ ಹೋದಾಗ, ಅಲ್ಲಿಯೇ ಲೈಂಗಿಕ ದಂಧೆಗೆ ಪೂರಕವಾದ, ದಂಧೆಯ ಮನೆಗಳಲ್ಲಿ ಕೆಲಸ ಮಾಡುತ್ತಾ ಬದುಕು ಕಟ್ಟಿಕೊಂಡಿದ್ದಾರೆ. ಒಬ್ಬರು ತಾವು ಗಳಿಸಿದ ಹಣದಲ್ಲಿ ಮತ್ತೆ ದಂಧೆಯ ಮನೆಗಳ ಮಾಲೀಕರಾಗಿದ್ದಾರೆ. ಹಾಗಾಗಿ ಇವರು ಲೈಂಗಿಕ ದಂಧೆಗೆ ಹೋಗಿದ್ದು ಒಳ್ಳೆಯದೇ ಆಯಿತೆಂದು ಅಭಿಪ್ರಾಯ ತಿಳಿಸುತ್ತಾರೆ.

**ಆದರೆ ಇದೇ ಬಾಲ್ಯ ವಿವಾಹಕ್ಕೆ ಒಳಗಾದ ಮಹಿಳೆಯೊಬ್ಬಳು ತಾನು ಲೈಂಗಿಕ ದಂಧೆಗೆ ಬಂದಿರುವುದೇ ಒಂದು ಮೋಸ. ನನ್ನ ಯಾವ ಕನಸುಗಳೂ ಇಲ್ಲಿ ಈಡೇರಿಲ್ಲ ಅನ್ನುತ್ತಾಳೆ. ಅವಳ ಪ್ರಕರಣ ಅಧ್ಯಯನವನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.**

**ಪ್ರಕರಣ ೧: ಬಾಲ್ಯವಿವಾಹ ಮತ್ತು ವರದಕ್ಷಿಣೆ**

ಬೆಳಗಾಪಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಮಲ್ಲಿಗವಾಡ ಗ್ರಾಮದ ಮಹಿಳೆ. ಈಗ ೪೪ ವರ್ಷದವಳಿದ್ದು, ೫ನೇ ಇಯತ್ತೆಯವರೆಗೆ ಶಾಲೆ ಓದಿದ್ದಾರೆ. ಅನಾರೋಗ್ಯದ ಕಾರಣ ಶಾಲೆಯನ್ನು ಮಧ್ಯದಲ್ಲಿ ಬಿಡಬೇಕಾಯಿತು. ೧೦-೧೧ ವರ್ಷಕ್ಕೆ ಮದುವೆಯಾಯಿತು. ತವರು ಮನೆಯವರು ಮಾತು ಮಾತನಾಡಿದಂತೆ ವರದಕ್ಷಿಣೆ ಹಣ ಕೊಡಲಿಲ್ಲ. ಅದಕ್ಕಾಗಿ ವರದಕ್ಷಿಣೆ ತೆಗೆದುಕೊಂಡು ಬರಬೇಕು ಎಂದು ತುಂಬಾ ಪೀಡಿಸತೊಡಗಿದರು. ಅವಾಗಾಗಲೇ ಇವಳಿಗೆ, ೧೫ ವರ್ಷಕ್ಕೆ ಒಬ್ಬ ಮಗ ಹುಟ್ಟಿದ್ದ. ಹಸುಗೂಸಿನೊಂದಿಗೆ ಗಂಡನ ಮನೆ ಬಿಟ್ಟು ತವರು ಸೇರಿದಳು. ಅಪ್ಪ ಅನಾರೋಗ್ಯದಿಂದಾಗಿ ದುಡಿಯುತ್ತಿರಲಿಲ್ಲ. ಮನೆಯ ಎಲ್ಲ ಜವಾಬ್ದಾರಿಯೂ ತಾಯಿಯ ಮೇಲೆ ಬಿದ್ದಿತ್ತು. ಮನೆಯ ಕಷ್ಟಕ್ಕೆ ಇವಳೂ ಕೂಲಿ ಮಾಡತೊಡಗಿದಳು. ಒಂದು ದಿನ ಹೊಲದಲ್ಲಿ ಕೆಲಸಕ್ಕೆ ತೊಡಗಿದಾಗ ಪಕ್ಕದ ಊರಿನ ಮಹಿಳೆಯೊಬ್ಬಳು ಕೆಲಸಕ್ಕೆ ಬರುತ್ತಿದ್ದಳು. ಅವಳ ಪರಿಚಯವಾಗಿ ತನ್ನ ನೋವನ್ನೆಲ್ಲ ಅವಳಿಗೆ ಮುಂದೆ ಹೇಳಿಕೊಳ್ಳುತ್ತಾಳೆ. ಅವಳು ಒಬ್ಬ ದೇವದಾಸಿಯಾಗಿದ್ದು ಇವಳಿಗೆ ಮುಂಬಯಿಯಲ್ಲಿ ಕೆಲಸದ ಅವಕಾಶಗಳಿರುವ ಕುರಿತು ಆಸೆ ಹುಟ್ಟಿಸಿದರು. ಇವಳು ಹೇಗಾದರೂ ಮಾಡಿ ಒಳ್ಳೆಯ ಕೆಲಸ ಸಿಕ್ಕರೆ ಹಣ ತೆಗೆದುಕೊಂಡು ಬಂದು ಗಂಡನ ಮನೆಯವರಿಗೆ ಕೊಟ್ಟು ಗಂಡನ ಜೊತೆ ಆರಾಮವಾಗಿ ಇರಬಹುದು ಎಂದುಕೊಂಡು, ಮೂರ್ನಾಲ್ಕು ತಿಂಗಳ ಮಗನನ್ನು ಮನೆಯಲ್ಲಿಯೇ ಬಿಟ್ಟು ಆ ವೃದ್ಧ ದೇವದಾಸಿಯ ಹಿಂದೆ ಹೊರಟು ಬರುತ್ತಾಳೆ. ಇವಳನ್ನು ಕರೆದುಕೊಂಡು ಬೆಳಗಿನ ಜಾವ ಮುಂಬೈ ತಲುಪಿದ ಆ ಹೆಣ್ಣುಮಗಳು, ತನಗೆ ಪರಿಚಯದವಳ ಮನೆ ಎಂದು ಪರಿಚಯಸುವ ಮೂಲಕ, ಒಬ್ಬರ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅಲ್ಲಿ ಪ್ರಯಾಣ ಮಾಡಿ ಆಯಾಸವಾಗಿರುತ್ತದೆ ಸ್ವಲ್ಪ ಹೊತ್ತು ನಿದ್ದೆ ಮಾಡು ಎಂದು ಇವಳಿಗೆ ಹೇಳಿ, ಇವಳನ್ನು ಮಲಗಿಸುತ್ತಾಳೆ. ೧೦ ನಿಮಿಷ ಮಲಗಿ ಏಳಬೇಕೆಂದವಳಿಗೆ ಎದ್ದಾಗ ಅಚ್ಚರಿ ಆಘಾತ ಕಾದಿರುತ್ತದೆ. ಕೆಲಸಕ್ಕೆ ಹಚ್ಚುತ್ತೇನೆಂದು ಕರೆದುಕೊಂಡು ಬಂದ ಹೆಣ್ಣುಮಗಳು, ಅದೇ ಮನೆಯ ಹೆಂಗಸಿಗೆ ಇವಳನ್ನು ಮಾರಿ ಹೊರಟು ಹೋಗಿರುತ್ತಾಳೆ ಇವಳು ಹಣ ಗಳಿಸಿಕೊಂಡು ಬಂದು, ಗಂಡನ ಮನೆ ಸೇರುವ ವಿಚಾರ ದೂರ ಉಳಿಯಿತು. ತನ್ನನ್ನು ತಾನು ಅಲ್ಲಿಂದ ಉಳಿಸಿ ಕೊಂಡು ಬರುವ ವಿಚಾರಕ್ಕೆ ಬಂದು ನಿಂತಾಗ, ಅವಳು ಇವಳ ಹೆಸರಲ್ಲಿ ತೆಗೆದುಕೊಂಡು ಹೋದ ಹಣ ಇವಳ ಮೇಲಿನ ಸಾಲವಾಗಿರುತ್ತದೆ. ಎಷ್ಟು ಪ್ರತಿಭಟಿಸಿದರೂ ಅಲ್ಲಿಂದ ಹೊರಗೆ ಬರಲು ಸಾಧ್ಯವಾಗುವುದೇ ಇಲ್ಲ. ಕೊನೆಗೆ ಅವರು ಹೇಳಿದಂತೆ ಕೇಳಲೇಬೇಕಾಗುತ್ತದೆ. ಅವಳು ತೆಗೆದುಕೊಂಡು ಹೋದ ಸಾಲಕ್ಕೆ ಎರಡು ವರ್ಷ ಲೈಂಗಿಕ ಜೀತಕ್ಕೊಳಪಟ್ಟ ಇವಳು, ಅದರ ನಂತರ ಸ್ವತಂತ್ರಳಾಗುತ್ತಾಳೆ. ಅದರ ನಂತರ ಸ್ವಲ್ಪ ದಿನ ಬಾರ್‌ನಲ್ಲಿ ಸಪ್ಲೈಯರ್ ಆಗಿಯೂ ಕೆಲಸ ಮಾಡಿದ ಇವಳಿಗೆ, ಆಗೆಲ್ಲ ಕೈ ತುಂಬಾ ಹಣ ಸಿಗುತ್ತಿತ್ತು.

ಇವಳು ಮನೆ ಬಿಟ್ಟು ಬಂದ ಮೇಲೆ ಸತ್ತೇ ಹೋಗಿರುವಳೆಂದು ತಿಳಿದುಕೊಂಡ ತಂದೆ ತಾಯಿಗೆ, ಇವಳೇ ಒಂದು ದಿನ ಪತ್ರ ಬರೆದು ತಿಳಿಸುತ್ತಾಳೆ. ಇವಳ ಪರಿಸ್ಥಿತಿಗೆ ಮರುಗಿದ ತಾಯಿ, ಹೇಗಾದರೂ

ಆಗಲಿ ತನ್ನ ಮಗಳು ಬದುಕಿರುವಳಲ್ಲಾ ಎಂಬ ಸತ್ಯ ಸಮಾಧಾನ ನೀಡುತ್ತದೆ. ಈಗಲೂ ಮನೆಯ ಜೊತೆ ಸಂಪರ್ಕ ಇರಿಸಿಕೊಂಡಿದ್ದಾಳೆ. ಈಗ ಅಪ್ಪ ಸತ್ತು ಹೋಗಿದ್ದಾನೆ. ಇವಳು ಬಿಟ್ಟು ಬಂದಿದ್ದ ೪ ತಿಂಗಳ ಈಕೆಯ ಮಗ ಈಗ ದೊಡ್ಡವನಾಗಿದ್ದಾನೆ. ಆತನಿಗೆ ಮದುವೆಯಾಗಿದೆ. ಇವಳ ತಾಯಿಯೊಬ್ಬಳನ್ನು ಹೊರತುಪಡಿಸಿ, ಉಳಿದವರಿಗೆಲ್ಲ ಇವಳು ಲೈಂಗಿಕ ದಂಧೆಯಲ್ಲಿ ಇದ್ದದ್ದು ಗೊತ್ತಿಲ್ಲ. ಇವಳ ಜೊತೆ ಮೊದಲು ಒಬ್ಬ ಪಾರ್ಟನರ್ ಇದ್ದನು. ಅವನನ್ನೇ ಊರಿಗೆ ಕರೆದುಕೊಂಡು ಹೋಗಿ, ಈತನೇ ತನ್ನ ಗಂಡ ಎಂದು ತನ್ನ ಮಗನಿಗೆ ಮತ್ತು ಸಂಬಂಧಿಕರಿಗೆ ತೋರಿಸಿದ್ದಾಳೆ.

ಈಗ ಕೆಲವು ವರ್ಷಗಳಿಂದ ಎಚ್‌ಐವಿ ಸೋಂಕು ಬಂದಿದೆ. ಆಶಾ ಮಹಿಳಾ ಸಂಸ್ಥೆಯಲ್ಲಿ ಔಟ್ ರೀಚ್ ವರ್ಕರ್ ಆಗಿ ಕೆಲಸ ಮಾಡುತ್ತಾಳೆ. ೮೫೦೦ ರೂ. ಪಗಾರ ಸಿಗುತ್ತದೆ. ಸರ್ಕಾರಿ ದವಾಖಾನೆಯಿಂದ ಫ್ರೀಯಾಗಿ ಔಷಧ ದೊರೆಯುತ್ತದೆ. ಬರುವ ಪಗಾರದಲ್ಲಿ ಮನೆಯ ಬಾಡಿಗೆ ಊಟ ಮತ್ತೆಲ್ಲ ಖರ್ಚುಗಳಿಗೆ ಸರಿಯಾಗುತ್ತದೆ. "ಈಗ ಊರಿಗೆ ಹೋಗಾಕ ಸಾಧ್ಯ ಇಲ್ಲ. ಈ ರೋಗ ನನ್ನ ಇಲ್ಲಿಯೇ ಕಟ್ಟಿ ಹಾಕೇತಿ. ತವರು ಮನ್ಯಾಗ ಇದ್ದಿದ್ರ, ನಮ್ಮ ಮಂದಿ ಮಕ್ಕಳ ಜೋಡಿ ಇರಬಹುದಿತ್ತು. ನನಗೆ ತುಂಬಾ ಮೋಸವಾಯಿತು" ಎಂದು ಕಣ್ಣೀರು ಹಾಕುತ್ತಾಳೆ.

ಮೇಲಿನ ಪ್ರಕರಣವನ್ನು ಗಮನಿಸಿದಾಗ ತಮಗೆ ಎಲ್ಲವೂ ಒಳ್ಳೆಯದಾಗಿದೆ ಎಂದು ಹೇಳುವ ಮಹಿಳೆಯರ ಪ್ರಕರಣಗಳಿಗೂ ಈ ಒಂದು ಪ್ರಕರಣಕ್ಕೂ ತುಂಬಾ ವ್ಯತ್ಯಾಸವಿದೆ. ಆ ನಾಲ್ಕೂ ಪ್ರಕರಣಗಳ ಮಹಿಳೆಯರು ಅನಕ್ಷರಸ್ಥರಾಗಿದ್ದರು ಮತ್ತು ತಾವಾಗಿಯೇ ಸಾಗಾಣಿಕೆಗೊಂಡು ಬಂದವರಾಗಿದ್ದರು. ಆದರೆ ಈ ಪ್ರಕರಣದಲ್ಲಿ ಮಹಿಳೆಯು ೫ನೇ ತರಗತಿಯವರೆಗೆ ಓದಿಕೊಂಡಿದ್ದಾಳೆ. ಮತ್ತು ತಾನಾಗಿಯೇ ಮುಂಬಯಿಗೆ ಬಂದರೂ ಸಹ, ಇವಳ ಪರಿಸ್ಥಿತಿಯನ್ನು ದುರುಪಯೋಗ ಮಾಡಿಕೊಳ್ಳಲಾಗಿರುತ್ತದೆ. ತಾನೂ ೫ನೇ ತರಗತಿವರೆಗೆ ಓದಿದ್ದೇನೆ. ಮುಂಬಯಲಿ ತನಗೆ ಏನಾದರೂ ಕೆಲಸ ಸಿಕ್ಕರೆ, ದುಡಿದು ತಂದು ತನ್ನ ಗಂಡನ ಮನೆಯವರಿಗೆ ಕೊಟ್ಟು, ಮತ್ತೆ ತನ್ನ ಸಾಂಸಾರಿಕ ಜೀವನವನ್ನು ಕಟ್ಟಿಕೊಳ್ಳಬೇಕೆಂಬ ಆಶಯವನ್ನು ಇಟ್ಟುಕೊಂಡಿರುತ್ತಾಳೆ. "ಅಂತಹ ಕೆಲಸಗಳೇ ಮುಂಬಯಲ್ಲಿ ಇವೆ" ಎಂದು ಕರೆದು ತಂದವಳು ಇವಳನ್ನು ವೇಶ್ಯಾಗೃಹಕ್ಕೆ ಮಾರಿ ಹೋಗಿರುತ್ತಾಳೆ. ಇಲ್ಲಿಗೆ ಬರುವ ಮೊದಲು ಇಲ್ಲಿ ಲೈಂಗಿಕ ದಂಧೆ ಮಾಡಬೇಕಾಗುತ್ತದೆ ಎಂಬುದು ಅವಳಿಗೆ ತಿಳಿದಿರಲಿಲ್ಲ. ಆದರೆ ಎಲ್ಲವೂ ಒಳ್ಳೆಯದಾಗಿದೆ ಎಂದು ಹೇಳುವ ನಾಲ್ಕೂ ಪ್ರಕರಣಳ ಹುಡುಗಿಯರಿಗೆ ತಾವು ಲೈಂಗಿಕ ದಂಧೆ ಮಾಡಬೇಕಾಗುತ್ತದೆಂಬುದು ಗೊತ್ತಿರುತ್ತದೆ. ಈ ಪ್ರಕರಣದಲ್ಲಿ ಬಾಲ್ಯವಿವಾಹ, ವರದಕ್ಷಿಣೆ, ಕೌಟುಂಬಿಕ ದೌರ್ಜನ್ಯ ಮತ್ತು ಸಾಗಾಣಿಕೆಗೆ ಮಹಿಳೆ ಒಳಗಾಗಿರುತ್ತಾಳೆ. ಇದೆಲ್ಲದರ ಪರಿಣಾಮ ಅವಳು ತನ್ನ ೪ ತಿಂಗಳಿನ ಮಗುವಿನಿಂದ ದೂರವಾಗಿ ಲೈಂಗಿಕ ಜೀತಕ್ಕೆ ಬಲಿಯಾಗುತ್ತಾಳೆ. ಈಗ ಇವಳಿ ಎಚ್.ಆಯ್.ವಿ/ಏಡ್ಸ್ ಪೀಡಿತೆಯಾಗಿದ್ದಾಳೆ. ಈಗ ಸಮುದಾಯ ಆಧಾರಿತ ಸಂಸ್ಥೆಯಲ್ಲಿ ಔಟ್ ರೀಚ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದಾಳೆ. ತಿಂಗಳಿಗೆ ೮೫೦೦ ರೂಪಾಯಿ ಸಂಬಳ ಬರುತ್ತದೆ. ಮನೆ ಬಾಡಿಗೆ, ಇವಳೊಬ್ಬಳ ಊಟ ಅದರಿಂದ ನೀಗಿಸಿಕೊಳ್ಳುತ್ತಾಳೆ. ಆರೋಗ್ಯಕ್ಕಾಗಿ

ಸರ್ಕಾರಿ ದವಾಖಾನೆಯಿಂದ ಎಲ್ಲ ಸವಲತ್ತುಗಳು ಸಿಗುತ್ತವೆ. ಆದರೆ ತಾನಿರುವ ಇಂತ ಪರಿಸ್ಥಿತಿಯಲ್ಲಿ ತನ್ನ ಮನೆ, ತನ್ನ ಜನರೊಂದಿಗೆ ಬದುಕಲು ಸಾಧ್ಯವಿಲ್ಲವೆಂದು ಕೊರಗುತ್ತಾಳೆ. ಇವಳ ಹಾಗೆ ಬಾಲ್ಯವಿವಾಹಕ್ಕೆ ಬಲಿಯಾಗಿ, ಸಾಗಾಣಿಕೆಗೊಂಡು ಬಂದ ಇನ್ನೂ ಇಬ್ಬರು ಮಹಿಳೆಯರು ಮಾತನಾಡದೇ ಕಣ್ಣಲ್ಲಿ ನೀರು ತಂದು ಸುಮ್ಮನೇ ನಿಲ್ಲುವಲ್ಲಿ ಅವರ ದುಸ್ಥಿತಿ ಅರ್ಥವಾಗುತ್ತದೆ.

ದೇವದಾಸಿ ಪದ್ಧತಿಯೊಂದು ಸಾಮಾಜಿಕ ಪಿಡುಗು. ಕೆಳಜಾತಿಯ ಸಮುದಾಯಗಳನ್ನು ಸಾಮಾಜಿಕವಾಗಿ ಮಾನಸಿಕವಾಗಿ, ದೈಹಿಕವಾಗಿ ಹಿಂಸಿಸುವ ಒಂದು ವಿಕೃತತೆ. ಆದರೆ ಮೇಲ್ಜಾತಿಯ ಸಮುದಾಯಗಳು ಅದಕ್ಕೆ ಧಾರ್ಮಿಕ ಕವಚ ಲೇಪಿಸಿ ಶೋಷಿತ ವರ್ಗವು ಅದು ತಮ್ಮ ಕರ್ತವ್ಯವೆಂಬಂತೆ ಮತ್ತು ಅದರಿಂದ ತಮಗೆ ಒಳ್ಳೆಯದಾಗುತ್ತದೆ. ಒಂದು ವೇಳೆ ಹಾಗೆ ಮಾಡದೇ ಹೋದರೆ ದೇವಿ ತಮ್ಮನ್ನು ಶಪಿಸುತ್ತಾಳೆ. ಎಂಬ ನಂಬಿಕೆಯ ಮೇಲೆ ೨೧ನೇ ಶತಮಾನದ ಹೊಸ್ತಿಲೊಳಗಿರುವ ಇಂದಿಗೂ ಮೂಢರಾಗಿ ಅದನ್ನೇ ಆಚರಿಸುತ್ತಿದ್ದಾರೆ. ಅದಕ್ಕೆ ಬಲಿಯಾಗುತ್ತಿರುವವರು ಕೆಳಜಾತಿ ಬಡವರ ಮನೆಯ ಹೆಣ್ಣುಮಕ್ಕಳು. ಇದ್ದ ಊರಲ್ಲಿ ಇಟ್ಟುಕೊಂಡವರಿಗೂ ಬಡತನ, ಇವರನ್ನೇ ನಂಬಿ ಮನೆ ನಡೆಯುವುದಾದರೂ ಹೇಗೆ ಎಂದುಕೊಂಡು ದೂರದ ಕಾಮಾಟಿಪುರ ಮತ್ತು ಬೀವಂಡಿಗಳಲ್ಲಿ ತಮ್ಮ ಎಳೆಯ ಹೆಣ್ಣುಮಕ್ಕಳನ್ನು ಜೀತಕ್ಕಿಟ್ಟು ಬಂದಿದ್ದರು. ಹಾಗೆ ಹೋದ ೩೦ ಮಹಿಳೆಯರನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಒಟ್ಟು ಮಹಿಳೆಯರಲ್ಲಿ ಶೇಕಡಾ ೭೩.೩೩ರಷ್ಟು ದೇವದಾಸಿ ಪ್ರಕ್ರಿಯೆಗ ಒಳಪಟ್ಟಿದ್ದರು. ತಾವು ರೆಡ್‌ಲೈಟ್ ಏರಿಯಾಗೆ ಹೋಗಿದ್ದಕ್ಕೆ ತಮಗೆ ಒಳ್ಳೆಯದಾಗಿದೆ ಎಂದು ಹೇಳುವ ೧೦ ಮಹಿಳೆಯರಲ್ಲಿ ೫ ಮಹಿಳೆಯರು ದೇವದಾಸಿಯರು. ಒಳ್ಳೆಯದಾಗಿಲ್ಲ ಎಂದು ಹೇಳುವ ೫ ಮಹಿಳೆ ಯರಲ್ಲಿ ೪ ಮಹಿಳೆಯರು ದೇವದಾಸಿಯರು. ಉಳಿದಂತೆ ೧೨ ಮಹಿಳೆಯರು ಎರಡಕ್ಕೂ ಪ್ರತಿಕ್ರಿಯಿಸದೇ, ತಮ್ಮ ಜೀವನ ಕಂಡು ಮರಗುತ್ತಿದ್ದಾರೇನೋ ಅನ್ನಿಸುತ್ತದೆ. ಅವರ ಮನಸ್ಸಲ್ಲಿ ನೋವು ಮಡುಗಟ್ಟಿರುವುದನ್ನು ಅಧ್ಯಯನವು ಗುರುತಿಸಿದೆ.

**೩.೬/೨. ದೇವದಾಸಿ ಪ್ರಕರಣಗಳು**

**ತಮಗೆ ಒಳ್ಳೆಯದಾಗಿದೆ, ನಾವು ಚೆನ್ನಾಗಿದ್ದೀವಿ ಎಂದು ಹೇಳಿದ ದೇವದಾಸಿ ಮಹಿಳೆಯರಲ್ಲಿಯ ನಾಲ್ಕು ಮಹಿಳೆಯರ ಪ್ರಕರಣಗಳನ್ನು ಇಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ.**

**ಪ್ರಕರಣ–೧** : ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಮೂವತ್ತು ವರ್ಷದ ಇವಳು. ಕುಟುಂಬದ ಬಡತನಕ್ಕಾಗಿ ದೇವದಾಸಿಯಾದವಳು. ಊರಲ್ಲಿ ಕೆಲಸವಿರಲಿಲ್ಲ. ತಿನ್ನಲು ತುತ್ತು ಕೂಳು ಸಿಗದ ಸಮಯದಲ್ಲಿ ಇವಳ ತಂದೆ ಇಡೀ ಕುಟುಂಬವನ್ನು ಕರೆದುಕೊಂಡು ಮಹಾರಾಷ್ಟ್ರದ ಸೊಲ್ಲಾಪುರಕ್ಕೆ ಬಂದಿದ್ದರು. ಬಡತನವಿರುವುದರಿಂದ ಶಾಲೆಗೆ ಹೋಗುತ್ತಲೇ ಇರಲಿಲ್ಲ. ಪುಸ್ತಕ, ಬಟ್ಟೆ ಕೊಡಬೇಕಾದರೆ ಮಾತ್ರ ಶಾಲೆಗೆ ಹೋಗುತ್ತಿದ್ದಳು. ಉಳಿದ ದಿನ ತಾಯಿಯೊಡನೆ ಕೂಲಿ ಮಾಡುವುದು. ಕಟ್ಟಿಗೆ ಆರಿಸುವುದು. ಕುಳ್ಳು(ಬೆರಣಿ) ತಟ್ಟುವುದು ಮಾಡುತ್ತಿದ್ದಳು. ಅಪ್ಪನು ಕೈಕಾಲು ನೋವಿನಿಂದ ದುಡಿಯಲು ಸಾಧ್ಯವಾಗದೇ ಹೋದಾಗ ಇವಳನ್ನು ದೇವದಾಸಿ ಮಾಡಿದ್ದರು. ಇವಳ ಚಿಕ್ಕಮ್ಮನ ಮಗಳು ಥಾಣೆ

ಜಿಲ್ಲೆಯ ಬೀವಂಡಿಯಲ್ಲಿ ಇರುತ್ತಿದ್ದಳು. ಅವಳ ಜೊತೆಗೆ ಇವಳನ್ನೂ ಕಳಿಸಲಾಗಿತ್ತು. ಇವಳು ಹೇಳುವಂತೆ "ಮೊದ ಮೊದಲು ಆದಾಯ ಅಷ್ಟೇನು ಲಾಭ ಅಂತ ಅನಿಸಿರಲಿಲ್ಲ. ಹಣ ಬರುತ್ತಿತ್ತು ಆದರೆ ಘರವಾಲೀನ ಎಲ್ಲಾ ತಗೊಂತಿದ್ದಳು. ಇದರ ನಡುವ ನನ್ನ ಗಿರಾಕಿಯಾಗಿದ್ದವರೊಬ್ಬರು ನನ್ನ ಬಾಳ ಪ್ರೀತಿಸುತ್ತಿದ್ದರು. ಮದುವಿ ಮಾಡ್ಕೊಂತನಿ ಅಂತ ಕರ್ಕೊಂಡು ಹೋದರು. ಅವರೆಲ್ಲ ಚುಲೋನ ನೋಡ್ಕೊಂತಿದ್ರು, ಆದ್ರ ನನ್ನ ತಂದಿ ತಾಯಿ ಮದುವ್ಯಾದ ಅಕ್ಕ ತಂಗ್ಯಾರು ಉಪವಾಸ ಬೀಳತೊಡಗಿದರು. ವಯಸ್ಸಾದ ನನ್ನ ತಾಯಿ ಮತ್ತ ಕೂಲಿ ಹೊಂಟಳು. ಆತ ನನ್ನೊಬ್ಬಾಕಿನ್ನ ಚುಲೋ ನೋಡಿಕೋತಿದ್ದ. ಆದ್ರ ನನ್ನ ತಂದಿ ತಾಯಿನಲ್ಲ. ನಾನು ಅವರ ಸಲುವಾಗಿ ಈ ಊರಿಗೆ ಬಂದಿದ್ದು. ಅವರಿಗೇ ಆಗದ ಹೋದರೆ ಹೆಂಗ? ಅಂತ ತಿಳಿದು ಅವರಿಗಾಗಿ ಮತ್ತೆ ಇದೇ ದಂಧೆಗೆ ಬಂದೆ. ಈಗ ಆದಾಯ ಬಾಳ ಚುಲೊ ಐತಿ. ನಂದ ಸ್ವತಂತ್ರವಾದ ಬಾಡಿಗೆ ಮನಿ ಮಾಡಿಕೊಂಡೇನಿ. ಗಳಸ್ತನಿ. ಒಬ್ಬ ಮಗ ಹುಟ್ಯಾನ. ಮನೀಗೆ ತಿಂಗಳಿಗೆ ನನ್ನ ಎಲ್ಲ ಖರ್ಚು ಕಳೆದು ೫,೦೦೦ ದಿಂದ ೧೦,೦೦೦ ರೂಪಾಯಿಗಳನ್ನು ಕಳಸ್ತನಿ. ಅವರೂ ಎಲ್ಲಾರೂ ಅರಾಮದಾರ". ಎಂದು ಇಲ್ಲಿಗೆ ಬಂದದ್ದು ಸಾರ್ಥಕವಾಯಿತೆಂದು ಮುಗುಳು ನಗುತ್ತಾಳೆ.

**ಪ್ರಕರಣ–೨** : ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನ ಬರಗಿ ಗ್ರಾಮದ ೪೫ ವರ್ಷದ ಇವಳು ದೇವದಾಸಿ ಮಹಿಳೆ. ೩–೪ ತಲೆಮಾರುಗಳಿಂದ ಇವರ ಕುಟುಂಬ ಮುಂಬಯಿಯಲ್ಲಿಯೇ ಇದೆ. ಯಾವಾಗ ಬಂದರೋ ಇವರಿಗೇ ಗೊತ್ತಿಲ್ಲ. ಇವಳ ಅಜ್ಜಿ ಹೇಳುತ್ತಿದ್ದಂತೆ, ಇವಳ ಮುತ್ತಜ್ಜಿಯ ಕಾಲದಿಂದಲೂ ಇವಳಿಗೆ ಗೊತ್ತಿದ್ದಂತೆ ದೇವದಾಸಿಯರೇ ಇದ್ದರು. ಆ ಮುತ್ತಜ್ಜಿಗೆ ಒಬ್ಬರು ಪಾರ್ಟನರ್ ಇದ್ದು, ಅವರು ಈ ಊರಿಗೆ ದುಡಿಯಲು ಬಂದಿದ್ದರು. ಬಂದ ಕೆಲವು ದಿನಗಳ ನಂತರ ಇವರ ಮುತ್ತಜ್ಜಿಯನ್ನೂ ಈ ಊರಿಗೆ ಕರೆದುಕೊಂಡು ಬಂದರು. ಮುಂಬಯಿಯ ಯಾವುದೋ ಹತ್ತಿ ಫ್ಯಾಕ್ಟ್ರಿಯಲ್ಲಿ ಕೆಲಸಕ್ಕಿದ್ದರು. ಅವರು ಬಿಜಾಪೂರ ಮೂಲದವರು. ಅವರಿಗೆ ಅವರ ಹೆಂಡತಿ ಮಕ್ಕಳು ಹೊಲ ಮನೆ ದೊಡ್ಡ ಸಂಸಾರವೇ ಇತ್ತು. ಆದರೂ ಅವರು ಇವರ ಮುತ್ತಜ್ಜಿಯ ಜೊತೆ ಲೈಂಗಿಕ ಸಂಪರ್ಕ ಇಟ್ಟುಕೊಂಡಿದ್ದು, ತಮ್ಮ ಜೊತೆಗೆ ಮುಂಬಯಿಗೂ ಕರೆತಂದಿದ್ದರು. ಇವರು ಮುಂಬಯಿಯ ವರ್ಲಿಯಲ್ಲಿ ಮನೆ ಮಾಡಿಕೊಂಡು ಇದ್ದರು, ಈಗಲೂ ಇವರ ಸ್ವಂತ ಮನೆಗಳು ಅಲ್ಲಿಯೇ ಇವೆ. ಇವಳ ಮುತ್ತಜ್ಜಿ ತನಗೆ ಹುಟ್ಟಿದ ಎಲ್ಲ ಹೆಣ್ಣುಮಕ್ಕಳನ್ನೂ ದೇವದಾಸಿ ಮಾಡಿ ಅಲ್ಲಿಯೇ ಇಟ್ಟುಕೊಂಡಳು. ಅವರಲ್ಲಿ ಇವಳ ಅಜ್ಜಿಯೂ ಒಬ್ಬಳು. ನಂತರ ಇವಳ ಅಜ್ಜಿ ತನಗೆ ಹುಟ್ಟಿದ ಎಲ್ಲ ಹೆಣ್ಣುಮಕ್ಕಳನ್ನೂ ದೇವದಾಸಿ ಮಾಡಿದ್ದಳು. ಅವರಲ್ಲಿ ಇವರ ತಾಯಿಯೂ ಒಬ್ಬರು. ನಂತರ ಇವರ ತಾಯಿ ತನಗೆ ಹುಟ್ಟಿದ ಎಲ್ಲ ಮಕ್ಕಳನ್ನೂ ದೇವದಾಸಿ ಮಾಡಿದಳು. ಅವರಲ್ಲಿ ಇವಳೂ ಒಬ್ಬಳು. ಇವಳು ಮುಂಬಯಲ್ಲಿಯೇ ಇದ್ದ ಕನ್ನಡ ಶಾಲೆಯಲ್ಲಿ ೩ನೆ ತರಗತಿ ಓದಿಕೊಂಡಿದ್ದಾಳೆ. ಇವರು ಹೇಳುವಂತೆ "ನಾನು, ನನ್ನ ತಾಯಿ ಮತ್ತು ಅಜ್ಜಿ ದಂಧೆ ಮಾಡಲೇ ಇಲ್ಲ. ನಾವು ಒಬ್ಬ ವ್ಯಕ್ತಿಯ ಜೊತೆ ಹೆಂಡಿರಂತೆ ಬದುಕು ನಡೆಸಿದ್ದೇವೆ. ಅವರೇ ನಮ್ಮ ಎಲ್ಲ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುತ್ತಾರೆ. ನಮ್ಮನ್ನು ನಮ್ಮ ತಾಯಿ ಗಳಿಸುವ ಮನೆಯಲ್ಲಿ ಇಟ್ಟಿರಲಿಲ್ಲ. ನಮಗೆ ಪ್ರತ್ಯೇಕ ಮನೆಗಳಿದ್ದವು.

ದಂಧೆಯ ಮನೆಯಲ್ಲಿ ಊರ ಕಡೆಯಿಂದ ಬಂದ ಹುಡುಗಿಯರು ದಂಧೆ ಮಾಡುತ್ತಿದ್ದರು. ನಮಗೆಲ್ಲ ಅಲ್ಲಿ ಹೋಗಲು ಬಿಡುತ್ತಿರಲಿಲ್ಲ. ಈಗ ನನ್ನ ಮಕ್ಕಳು ದೊಡ್ಡವರಾಗಿದ್ದಾರೆ. ಇಲ್ಲಿಯೇ ಮುಂಬಯಿಲಿ ಶಿಕ್ಷಣ ಪಡೆದಿದ್ದಾರೆ. ತಮ್ಮ ಮನಸ್ಸಿಗೆ ಹಿಡಿಸಿದವರನ್ನ ಪ್ರೀತಿಸಿ ಮದುವೆಯಾಗಿದ್ದಾರೆ. ಅವರು ಬೇರೆ ಜಾತಿಯವರೇ ಇದ್ದಾರೆ. ನಮ್ಮೆಲ್ಲರ ಜೊತೆಗೆ ತುಂಬಾ ಚೆನ್ನಾಗಿ ಹೊಂದಿಕೊಂಡಿದ್ದಾರೆ. ಆವರೂ ನಮ್ಮ ಮನೆಗೆ ಬರುತ್ತಾರೆ. ನಾವೂ ಅವರ ಮನೆಗೆಲ್ಲ ಹೋಗಿ ಇದ್ದು ಬರುತ್ತೇವೆ. ಗಂಡು ಮಕ್ಕಳೂ ಓದಿಕೊಂಡಿದ್ದಾರೆ.

ಈಗಲೂ ಗಳಿಸುವ ಮನೆಯಲ್ಲಿ ಹುಡುಗಿಯರಿದ್ದಾರೆ. ಗಳಿಕೆಯಲ್ಲಿ ಅರ್ಧ ಅವರಿಗೆ ಅರ್ಧ ನಮಗೆ ಸಿಗುತ್ತದೆ. ಆದಾಯ ಚೆನ್ನಾಗಿದೆ. ನಾನು ಬಾಯಕಲಾದಲ್ಲಿರುವ ಮಹಿಮಾ ಮಹಿಳಾ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೇನೆ. ತಿಂಗಳಿಗೆ ೩೫೦೦ ರೂ ಪಗಾರ ಸಿಗುತ್ತದೆ. ಜೀವನಕ್ಕೇನೂ ಕೊರತೆ ಇಲ್ಲ. ಇಲ್ಲಿಗೆ ಬಂದದ್ದರಿಂದ ಜಾತಿ ಸಮಸ್ಯೆ ಇಲ್ಲ. ಹಸಿವಿನ ಸಮಸ್ಯೆ ಇಲ್ಲ. ಎಲ್ಲರಂತೆ ಸಮಾಜದಲ್ಲಿ ಒಂದಾಗಿ ಬದುಕುತ್ತಿದ್ದೇವೆ". ಅನ್ನುತ್ತಾರೆ.

**ಪ್ರಕರಣ–೩** : ಬೆಳಗಾವಿ ಜಿಲ್ಲೆ ರಾಯಬಾಗ ತಾಲೂಕಿನ ನಿಲಜಗಿ ಗ್ರಾಮದ ೪೫ ವರ್ಷದ ಇವರು ದೇವದಾಸಿ ಮಹಿಳೆ. ಮದ್ಯಪಾನಿ ತಂದೆ ದುಡಿಯುತ್ತಿರಲಿಲ್ಲ. ತಾಯಿಯೊಬ್ಬಳೇ ದುಡಿಯುತ್ತಿದ್ದಳು. ಹೀಗಾಗಿ ತಾನೂ ತಾಯಿಗೆ ಆಸರೆ ಆಗಬೇಕೆಂದು ಶಾಲೆ ಬಿಟ್ಟು ಕೆಲಸಕ್ಕೆ ಹೋಗತೊಡಗುತ್ತಾಳೆ. ಮುಂದೆ ಇವಳ ಆರೋಗ್ಯ ಸರಿ ಉಳಿಯುವುದಿಲ್ಲ. ಅದರಿಂದ ಕಾಲುನೋವಾಗಿ ನಡೆಯಲು ಬಾರದಂತಾಗುತ್ತದೆ. ಹಾಗಾಗಿ ಊರ ಜೋಗುತಿ ಇವಳ ಆರೋಗ್ಯ ಸುಧಾರಿಸಬೇಕೆಂದರೆ ಇವಳನ್ನು ದೇವದಾಸಿ ಮಾಡಬೇಕು ಎಂದು ಹೇಳಿದರು. ಹಾಗಾಗಿ ಇವಳನ್ನು ದೇವದಾಸಿ ಮಾಡಿದ್ದರು. ಇವಳು ತನ್ನ ತಾಯಿಯ ಜೊತೆ ದುಡಿಯಲು ಹೋಗುತ್ತಿದ್ದಳು. ಅಲ್ಲಿ ತಾಯಿಗೆ ಒಂದು ರೂಪಾಯಿ, ಇವಳಿಗೆ ೫೦ ಪೈಸೆ ಕೂಲಿ ಕೊಡುತ್ತಿದ್ದರು. ಇಷ್ಟೇ ಆದಾಯದಲ್ಲಿ ಆರೇಳು ಜನ ತಿನ್ನಬೇಕಾಗುತ್ತಿತ್ತು. ರೈತರ ಮನೆಗೆ ಹೊದರೆ ಅವರ ದೊಡ್ಡ ಅಂಗಳ ಸಾರಿಸಿಕೊಟ್ಟಾಗ ಒಂದು ರೊಟ್ಟಿ ಕೊಡೋರು. ಹಾಗಾಗಿ ಹೇಗಿದ್ದರೂ ದೇವದಾಸಿ ಮಾಡಿಯೇ ಬಿಟ್ಟಿದ್ದರು. ಇವಳ ಗೆಳತಿಯೊಬ್ಬಳು ಮುಂಬಯಿಯಲ್ಲಿಯೇ ಇರುತ್ತಿದ್ದಳು. ಹಬ್ಬಕ್ಕೆಂದು ಊರಿಗೆ ಬಂದವಳ ಜೊತೆ ಇವಳೂ ಮುಂಬಯಿಗೆ ಬಂದಳು. ಅವಳೇ ಹೇಳುವಂತೆ "ಇದ ಊರಾಗ ಗಳಸೋ ಸ್ವಂತ ಮನಿ ತುಗೊಂಡೇನಿ. ಅದನ್ನ ದಂಧೆ ನಡಸಾಕ ಬಾಡಿಗಿ ಕೊಟ್ಟನಿ. ಬಂಗಾರ ಐತಿ. ಊರಾಗ ಮೂರು ಎಕರೆ ಜಮೀನು ತುಗೊಂಡೇನಿ. ನನಗೊಬ್ಬಾವ ಚುಲೋ ಪಾರ್ಟನರ್ ಸಿಕ್ಕಾನ. ಅವರ ಜೊತೆ ಜನಸಾಮಾನ್ಯರು ವಸತಿ ಇರ ಪರಿಯಾದಾಗ ಬಾಡಿಗಿ ಮನ್ಯಾಗ ಇರ್ತನಿ. ಹಂಗ ಆಶಾ ಮಹಿಳಾ ಸಂಸ್ಥಾದಾಗ ಪಿಯರ್ ವರ್ಕರ್ ಆಗಿ ಕೆಲಸ ಮಾಡಾಕತ್ತೇನಿ. ತಿಂಗಳಿಗೆ ೩೦೦೦ ರೂಪಾಯಿ ಕೊಡುತ್ತಾರೆ. ಇದೆಲ್ಲಾ ಇಲ್ಲಿಗೆ ಬಂದದ್ದಕ್ಕೆ ಆಗಿದೆ. ಎಲ್ಲಾ ಒಳ್ಳೇದ ಆಗೇತಿ". ಅನ್ನುತ್ತಾರೆ.

ಮೇಲಿನ ಮೂರು ಪ್ರಕರಣಗಳನ್ನು ಗಮನಿಸಿದಾಗ ಒಂದು ಪ್ರಕರಣಗಳು ಕುಟುಂಬದ ಬಡತನಕ್ಕಾಗಿ ದೇವದಾಸಿಯಾಗಿದ್ದರೆ, ಒಂದು ಪ್ರಕರಣದಲ್ಲಿ ಮೂಢನಂಬಿಕೆಯಿಂದಾಗಿ ಮತ್ತೊಂದು ಪ್ರಕರಣದಲ್ಲಿ ಳ

ತಲೆಮಾರುಗಳಿಂದ ಮುಂಬಯಿಯಲ್ಲಿಯೇ ಇರುವ ಕುಟುಂಬವೊಂದು ಲೈಂಗಿಕ ದಂಧೆಯನ್ನು ತನ್ನ ಕುಟುಂಬದ ವೃತ್ತಿ ಎಂಬಂತೆ ಪರಿಗಣಿಸಿ, ಅವರ ಕುಟುಂಬದಲ್ಲಿ ಜನಿಸಿದ ಎಲ್ಲ ಹೆಣ್ಣುಮಕ್ಕಳನ್ನು ದೇವದಾಸಿ ಮಾಡಿದ್ದು ಕಂಡುಬರುತ್ತದೆ.

ಪ್ರಕರಣ ಒಂದರ ಯುವತಿಯ ಕುಟುಂಬವು, ಕೆಲಸ ಹುಡುಕಿಕೊಂಡು, ಮಹಾರಾಷ್ಟ್ರದ ಸೊಲ್ಲಾಪುರಕ್ಕೆ ವಲಸೆ ಬರುತ್ತದೆ. ಮನೆಗೆ ಆಧಾರವಾಗಿದ್ದ ತಂದೆ, ಅಶಕ್ತನಾಗಿ ದುಡಿಯದ ಸ್ಥಿತಿಗೆ ತಲುಪಿದಾಗ, ಚಿಕ್ಕ ವಯಸ್ಸಿನ ಈ ಮಗಳನ್ನೇ ದೇವದಾಸಿ ಮಾಡುತ್ತಾರೆ. ಮದುವೆಯಾದ ಅಕ್ಕಂದಿರ ಸಮಸ್ಯೆಗಳು, ತಾಯಿಯೊಬ್ಬಳೇ ದುಡಿಯಬೇಕಾದ ಅನಿವಾರ್ಯತೆ, ತಂದೆಯ ಅನಾರೋಗ್ಯ, ಪುಟ್ಟ ಮಗಳನ್ನು ಹಿಂಸೆಯ ಜೀವನಕ್ಕೆ ಹೊಂದಿಕೊಳ್ಳುವಂತೆ ಮಾಡುತ್ತದೆ. ಇದರ ಮಧ್ಯೆ ಇವಳನ್ನು ಪ್ರೀತಿಸಿ ತನ್ನ ಮನೆಗೆ ಕರೆದುಕೊಂಡು ಹೋದವನ ಜೊತೆ ಆರಮವಾಗಿ ಇರಬಹುದಿತ್ತು. ಆದರೆ ತನ್ನ ತಂದೆ ತಾಯಿ ಅಕ್ಕಂದಿರ ಸಂಕಷ್ಟಗಳನ್ನು ನೆನೆದು, ಮತ್ತೆ ಅದೇ ಲೈಂಗಿಕ ದಂಧೆಗೆ ಮರುವಳಲ್ಲಿ, ಅವಳು ಅದೇ ದಂಧೆಯಲ್ಲಿ ಮುಂದುವರೆಯುವ ಅನಿವಾರ್ಯತೆಯನ್ನು ಅವಳ ಕುಟುಂಬ ಸೃಷ್ಟಿಸಿರುತ್ತದೆ.

ಎರಡನೇಯ ಪ್ರಕರಣದಲ್ಲಿ ಇವರಿಗೆ ಬೇರೆಯ ಲೋಕದ ಕುರಿತು ಅರಿವು ಬರದಂತೆ ಇವರನ್ನು ಬೆಳೆಸಿಬಿಟ್ಟಿದೆ. ವಸಾಹತು ಶಾಹಿಯ ಸಂದರ್ಭದಲ್ಲಿ ಕೈಗಾರಿಕೀಕರಣಗೊಳ್ಳುತ್ತಿದ್ದ ಮುಂಬಯಿಗೆ ಕರ್ನಾಟಕದ ಬರಗಾಲ ಪೀಡಿತ ಪ್ರದೇಶಗಳಿಂದ ಸಹಸ್ರಾರು ಸಂಖ್ಯೆಯ ಕಾರ್ಮಿಕರು, ಚಿಕ್ಕ ಪುಟ್ಟ ರೈತರು ಕೆಲಸ ಅರಸಿಕೊಂಡು ವಲಸೆ ಹೋಗಿದ್ದಿದೆ. ಹಾಗೆ ಹೋದ ಒಂದು ಕುಟುಂಬದ ಮುಖ್ಯಸ್ಥ ತನ್ನ ಜೊತೆಗಿರುತ್ತಿದ್ದ ದೇವದಾಸಿ ಮಹಿಳೆಯನ್ನೂ ತನ್ನೊಡನೆ ಕರೆದುಕೊಂಡು ಹೋಗಿರುತ್ತಾನೆ. ಅವಳ ಮರಿ ಮೊಮ್ಮಗಳು ನಮ್ಮ ಈ ಪ್ರಕರಣದ ಮಹಿಳೆ. ಆ ಸಂದರ್ಭದಲ್ಲಿ ತಮಗೆ ಹುಟ್ಟಿದ ಹೆಣ್ಣುಮಕ್ಕಳನ್ನು ದೇವದಾಸಿಯರನ್ನಾಗಿ ಮಾಡಿ, ಅವರು ದಂಧೆಯ ಮನೆಗಳನ್ನು ಕಟ್ಟಿಸಿಕೊಂಡಿದ್ದಾರೆ. ಮುಂಬಯಿಯ ವರ್ಲಿಯಲ್ಲಿ ಇವರ ದಂಧೆಯ ಮನೆಗಳಿದ್ದು, ಅಲ್ಲಿಯೇ ತಾವೂ ಇರಲು ಪ್ರತ್ಯೇಕ ಮನೆಗಳನ್ನೂ ಸಹ ವ್ಯವಸ್ಥೆ ಮಾಡಿಟ್ಟುಕೊಂಡಿದ್ದಾರೆ. ತಮ್ಮ ಹಳ್ಳಿಗಳಿಂದ ಹುಡುಗಿಯರನ್ನು ಕರೆದು ತಂದು ಲೈಂಗಿಕ ಜೀತಕ್ಕೆ ಇಟ್ಟುಕೊಂಡು ದಂಧೆ ಮಾಡುತ್ತಾ ಬಂದ ಇವರ ಕುಟುಂಬದಲ್ಲಿ, ನಾಲ್ಕು ತಲೆಮಾರಿನ ನಂತರ ಇಂದಿಗೂ ಕರ್ನಾಟಕದ ಜಮಖಂಡಿ ಮತ್ತು ಮುಧೋಳದ ಮತ್ತು ಸುತ್ತ ಮುತ್ತ ಹಳ್ಳಿಯ ಹುಡುಗಿಯರು ಇದ್ದಾರೆ. ಅವರು ಮಾಡುವ ದಂಧೆಯ ಮೇಲೆಯೇ ತಮ್ಮ ಜೀವನ ನಡೆಯುತ್ತಿದೆ. ತಾವು ದಂಧೆ ಮಾಡುವುದಿಲ್ಲ, ಒಬ್ಬರ ಜೊತೆಗೆ ಖಾಯಂ ಆಗಿ ಉಳಿದಿದ್ದೇವೆ ಎಂದು ಹೇಳುವ ಇವರು, ತಲೆಹಿಡುಕರ ದಂಧೆ ಮಾಡಿದ್ದಾರೆಂಬುದು ಖಚಿತವಾಗುತ್ತದೆ.

ಮೂರನೆ ಪ್ರಕರಣದಲ್ಲಿ, ಹೇಗಿದ್ದರೂ ದೇವದಾಸಿ ಮಾಡಿ ಮುತ್ತು ಕಟ್ಟಿಯಾಗಿದೆ, ಎಲ್ಲಿದ್ದರೂ ಲೈಂಗಿಕ ದಂಧೆಯನ್ನೇ ಮಾಡುವುದು ಇದ್ದೇ ಇದೆ. ಅದಕ್ಕಾಗಿ ಲಾಭವಿಲ್ಲದ ಹಳ್ಳಿಯಲ್ಲಿ ಉಳಿತುಕೊಳ್ಳುವುದಕ್ಕಿಂತ, ಉತ್ತಮ ಆದಾಯ ನೀಡುವ ಮುಂಬಯಿಗೆ ಹೋಗುವುದೇ ಒಳ್ಳೆಯದು ಎಂದು ಲೈಂಗಿಕ ದಂಧೆಗೆ ಇವಳು ತೊಡಗಿಕೊಂಡಿದ್ದಾಳೆ. ಕುಟುಂಬದ ಹಸಿವು ಇವಳನ್ನು ಅಲ್ಲಿ ಜಾಣತನದಿಂದ ವ್ಯವಹರಿಸುವಂತೆ ಮಾಡಿದೆ.

ಮೂರೂ ಪ್ರಕರಣಗಳನ್ನು ಅಧ್ಯಯನ ಮಾಡಿದಾಗ, ಅವರು ಗಳಿಕೆ ಮಾಡಿದ ಹಣದಿಂದ, ಮನೆಯವರ ಸಾಲಗಳನ್ನು ತೀರಿಸಿದ್ದಾರೆ, ಹೊಲ ಮನೆ ಖರೀದಿಸಿದ್ದಾರೆ, ಬಂಗಾರ ಮತ್ತು ಹಣವನ್ನು ಖರೀದಿಸಿದ್ದಾರೆ. ಮನೆಯ ಸಂಕಷ್ಟಗಳಿಗೆ ಈಗಲೂ ಪ್ರತಿ ತಿಂಗಳೂ ಹಣ ಕಳಿಸುತ್ತಾರೆ. ಕೆಲವರಿಗೆ ಜೀವನದಲ್ಲಿ ಒಳ್ಳೆಯ ಪಾರ್ಟನರ್ ಸಿಕ್ಕಿದ್ದಾನೆ. ಅಂತವರು ಲೈಂಗಿಕ ದಂಧೆ ಬಿಟ್ಟು ಆರೋಗ್ಯಕರ ಜೀವನ ಮಾಡುತ್ತಿದ್ದಾರೆ. ಹಾಗಾಗಿ ಲೈಂಗಿಕ ದಂಧೆಯಿಂದ ತಮಗೆ ಒಳ್ಳೆಯದಾಗಿದೆ ಎಂದು ಹೇಳುತ್ತಾರೆ.

**ದೇವದಾಸಿಯಾಗಿ ಲೈಂಗಿಕ ಜೀತಕ್ಕೆ ಬಂದು ತಾವು ನೋವುಗಳನ್ನೇ ಅನುಭವಿಸಿದೆವು. ಒಳ್ಳೆಯದು ಅಂತ ಏನೂ ಆಗಲಿಲ್ಲ, ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಅವರ ಕೆಲವು ಪ್ರಕರಣ ಅಧ್ಯಯನಗಳನ್ನು ಇಲ್ಲಿ ವಿವರಿಸಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.**

**ಪ್ರಕರಣ–೧ :** ಬೆಳಗಾವಿ ಜಿಲ್ಲೆ ಅಥಣಿ ತಾಲೂಕಿನ ಕನಮಡಿ ಗ್ರಾಮದ ೪೫ ವರ್ಷದ ಇವರು ದೇವದಾಸಿ ಮಹಿಳೆ. ಸಂಪ್ರದಾಯ ಬಡತನದ ಧಾವಂತಕ್ಕೆ ಚಿಕ್ಕವಳಿರುವಾಗಲೇ ದೇವದಾಸಿ ಮಾಡಲಾಗಿರುತ್ತದೆ. ತಮ್ಮ ಊರಲ್ಲೇ ಕೂಲಿ ಕೆಲಸ ಮಾಡಿಕೊಂಡಿದ್ದವಳಿಗೆ ಒಳ್ಳೆಯ ಆದಾಯ ತರುವಂತ ಕೆಲಸಗಳೇನೂ ಇರುವುದಿಲ್ಲ. ಹಾಗಾಗಿ ಮನೆಯಲ್ಲಿ ಬೇಡವೆಂದರೂ ಮಿರಜ್‌ನಲ್ಲಿ ಕಟ್ಟಡ ಕಾಮಗಾರಿ ನಡೆಯುವ ಸ್ಥಳದಲ್ಲಿ ಗೌಂಡಿಗಳ ಕೈಯಲ್ಲಿ ಕೆಲಸಕ್ಕೆ ಸೇರಿಕೊಂಡಳು. ಅಲ್ಲಿ ಜನ ಸರಿ ಇರಲಿಲ್ಲ. ತುಂಬಾ ಅಸಹ್ಯವಾಗಿ ನಡೆದುಕೊಳ್ಳುತ್ತಿದ್ದರು. ಅಲ್ಲೆಲ್ಲೋ ಮುಂಬಯಿಯಲ್ಲಿ ತುಂಬಾ ಕೆಲಸ ಇದೆ ಎಂದು ಮಾತನಾಡುವುದನ್ನು ಕೇಳಿ ಯಾರೋ ಹೋಗುವವರ ಹಿಂದೆ ತಾನೂ ಮುಂಬಯಿಗೆ ಸೇರಿಕೊಂಡಳು. ಏನೋ ಮಾಡಬಹುದು ಎಂದುಕೊಂಡು ಬಂದವಳಿಗೆ ಎದುರಾದದ್ದು ಲೈಂಗಿಕ ಚಟುವಟಿಕೆ. ಹರೆಯದ ಹೆಣ್ಣುಮಗಳು ಗೊತ್ತಿಲ್ಲದ ಊರಲ್ಲಿ ಏನು ಮಾಡಬಹುದಿತ್ತು. ಘರವಾಲಿಯೊಬ್ಬಳ ಆಶ್ರಯದಲ್ಲಿಗ್ದುಕೊಂಡು ಅವಳು ಹೇಳಿದಂತೆ ಕೇಳಬೇಕಾಯಿತು. ದಿನದ ೨೪ ತಾಸು ದುಡಿಸಿಕೊಳ್ಳುತ್ತಿದ್ದಳು. ಹೊಟ್ಟೆಗೆ ಊಟ, ಮೈಗೆ ಬಟ್ಟೆ ಕೊಡುತ್ತಿದ್ದಳು. ಅದನ್ನು ಬಿಟ್ಟರೆ ಊರಿಗೆ ಹೋಗುವಾಗಲೊಮ್ಮೆ ೫೦೦–೬೦೦ ರೂಪಾಯಿ ಕೊಡುತ್ತಿದ್ದಳು. ಈ ನಡುವೆ ಒಬ್ಬ ಒಳ್ಳೆಯ ಪರ್ಟನರ್ ಸಿಕ್ಕಿದ್ದ. ಆತ ಈ ಏರಿಯಾದಿಂದ ಹೊರಗೆ ಕರೆದೊಯ್ದು ಬಾಡಿಗೆ ಮನೆ ಮಾಡಿ ಇಟ್ಟಿದ್ದ. ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತಿದ್ದ. ಆದರೆ ಅದು ಬಹಳ ದಿನ ಉಳಿಯಲಿಲ್ಲ. ಅವನಿಗೆ ಹೆಂಡತಿ ಮಕ್ಕಳು ಅಂತ ದೊಡ್ಡ ಸಂಸಾರವೇ ಇತ್ತು. ಅವರು ಬಂದು ಜಗಳವಾಡಲಾರಂಭಿಸಿದರು ಮತ್ತು ಅವನನ್ನು ಕರೆದುಕೊಂಡು ಹೋದರು. ಆಗ ಮತ್ತೆ ಇವಳು ಅದೇ ದಂಧೆಯ ಗಲ್ಲಿಗೆ ಬರಬೇಕಾಯಿತು. ಮಗನೊಬ್ಬನಿದ್ದಾನೆ. ಆತನಿಗೂ ಏನೂ ಕೆಲಸವಿಲ್ಲ. ಈಗ ಇವಳೆ ಭಾರತೀಯ ಕುಟುಂಬ ಕಲ್ಯಾಣ ಯೋಜನೆಯಲ್ಲಿ ಪೀಯರ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದಾಳೆ. ತಿಂಗಳಿಗೆ ೩೦೦೦ ರೂಪಾಯಿ ಸಂಬಳ ಸಿಗುತ್ತದೆ. ಅದರಲ್ಲೇ ಜೀವನ ಸಾಗಿಸುತ್ತಿದ್ದಾರೆ. "ಈ ಊರಿಗೆ ಬಂದದ್ದಕ್ಕ ಚುಲೋ ಅಂತೆನೂ ಆಗಲಿಲ್ಲ. ಈ ವಯಸ್ಸಿನ್ಯಾಗ ಊರಿಗೂ ಹೋಗೋ ಹಂಗ ಇಲ್ಲ. ಜೀವನ ಸಾಗಿಸಬೇಕಷ್ಟೇ" ಎಂದು ಕಣ್ಣಲ್ಲಿ ನೀರು ತಂಬಿಕೊಂಡು ಹೇಳುತ್ತಾರೆ.

**ಪ್ರಕರಣ-೨** : ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಹುನ್ನೂರು ಗ್ರಾಮದ ಇವರಿಗೆ ಈಗ ೪೦ ವಯಸ್ಸು. ತಾಯಿ ದೇವದಾಸಿಯಾಗಿರದಿದ್ದರೂ ಸಹ ಗಂಡನ ಜೊತೆಗೆ ಬಾಳಲಾಗದೆ ವೇಶ್ಯಾಗೃಹಕ್ಕೆ ಸೇರಿಕೊಂಡವಳು. ಇವಳು ಬಹಳೇ ಸುಂದರವಾಗಿದ್ದಳು, ಇವಳ ಸೋದರಮಾವ ಇವಳನ್ನು ಮದುವೆ ಮಾಡಿಕೊಳ್ಳುತ್ತೇನೆಂದು ಹಠ ತೊಟ್ಟಿದ್ದ. ಆದರೆ ಇವಳ ಅಜ್ಜ, ಇವಳ ಅವ್ವನಂತೆ ಇವಳೂ ಓಡಿ ಹೋದರೆ ಏನು ಗತಿ. ಅಂತ ತನ್ನ ಮಗನೊಂದಿಗೆ ಮದುವೆಗೆ ಒಪ್ಪುತ್ತಿರಲಿಲ್ಲ, ಆದರೆ ಇವಳ ಮಾವ ಇವಳನ್ನು ಬಿಟ್ಟು ಬೇರೆ ಯಾರನ್ನೂ ಮದುವೆಯಾಗುವುದಿಲ್ಲ ಅನ್ನುತ್ತಿದ್ದ. ಅಲ್ಲದೇ ಇವಳಿಗೆ ಬಂದ ಸಂಬಂಧಗಳನ್ನೆಲ್ಲ ಮರಳಿ ಕಳಿಸುತ್ತಿದ್ದ. ಕಡೆಗೆ ಇವರ ತಾಯಿಗೂ ಇದೇ ಬೇಕಿತ್ತೆನ್ನಿಸುತ್ತದೆ. ಮುಂಬಯಿಗೆ ಕರೆದುಕೊಂಡು ಹೋಗಿ ದೇವದಾಸಿ ಮಾಡಿ ಬಂಗಲೆಯ ಘರವಾಲಿಯ ಹತ್ತಿರ ಗಳಿಸಲು ಬಿಟ್ಟಳು. ಮುಂದಿನ ಸ್ಥಿತಿಯ ಕುರಿತು ಅವರೇ ಹೇಳುವಂತೆ, "ನಾನೇನೋ ಚಿಕ್ಕವಳು. ಗಳಿಸಿ ತಂದು ಅವ್ವನ ಕೈಗೆ ಕೊಡುತ್ತಿದ್ದೆ. ಅವಳು ಊರಿನಿಂದ ತನ್ನ ಅಣ್ಣ ತಮ್ಮಂದಿರನ್ನ, ಅಕ್ಕ ತಂಗಿಯರನ್ನ ಕರೆಸಿಕೊಂಡ, ಅವರಿಗೆ ಮುಂಬಯಿ ತೋರಿಸೋದು, ಮಜಾ ಮಾಡಿಸಿ ಕೈಯಾಗ ಅರಿವೆ ಅಂಚಡಿ ರೊಕ್ಕಾ ಎಲ್ಲಾನೂ ಕೊಟ್ಟ ಕಳಿಸ್ತಿದ್ಳು. ಈಗ ಅವರೆಲ್ಲ ಬಾಳ ಅರಾಮದಾರ. ನಮ್ಮ ಅವ್ವ ಸತ್ತು ಹೋಗ್ಯಾಳ. ನನಗ ಶುಗರ್ ಐತಿ. ಎಚ್ ಆಯ್ ವಿ ಐತಿ. ದಂಧೆಗೆ ನಿಂತರೆ ಗಿರಾಕಿಗಳು ಆಂಟಿ, ಮಾಂಸಿ, ಅಕ್ಕಾ ಅಂತ ಕರೀತಾರ, ಏನ ಮಾಡದು. ತಂಗಿಯೊಬ್ಬಳು ನೌಕರಿ ಮಾಡ್ತಾಳ. ಆಕೀನು ದಂಧೆ ಮಾಡ್ತಿದ್ಲು. ಅದ್ರ ಒಬ್ಬನ ಜೊತಿ ಪ್ರೀತಿ ಅಂತ ಓಡಾಡಿ, ಇಗ ಅವನೂ ಬಿಟ್ಟು ಬೇರೆ ಕಡೆಗೆ ಹೋಗ್ಯಾನ. ಈಗ ಆಶಾ ಮಹಿಳಾದಲ್ಲಿ ತಿಂಗಳ ಪಗಾರಕ್ಕ ಹೋಗ್ತಾಳ. ಇದ್ದಂಗ ಇರೋದು. ಏನೂ ಚುಲೋ ಅಂತ ಆಗಲಿಲ್ಲ." ಅಂತ ಅನ್ನುತ್ತಾಳೆ.

**ಪ್ರಕರಣ-೩** : ಬೆಳಗಾವಿ ಜಿಲ್ಲೆ ಅಥಣಿ ತಾಲೂಕಿನ ತೆಲಸಂಗ ಗ್ರಾಮದ ಇವಳಿಗೆ ಈಗ ಮೂವತ್ತು ನರ್ಷ. ಚಿಕ್ಕ ವಯಸ್ಸಿನಲ್ಲಿಯೇ ದೇವದಾಸಿ ಪದ್ಧತಿಗೆ ದೂಡಲ್ಪಟ್ಟವಳು. "ಮನ್ಯಾಗ ಹಿಂದೆ ಯಾರೂ ದೇವದಾಸಿ ಇರದ, ಅಣ್ಣಂದಿರು, ತಮ್ಮಂದಿರು, ಅಕ್ಕಂದಿರು, ಅಪ್ಪ, ಅವ್ವ ಇರುವ ಮನೆಯ ನನ್ನನ್ನ ಯಾಕೆ ದೇವದಾಸಿ ಮಾಡಿದರು. ನಾನು ಆರೋಗ್ಯವಾಗಿಯೆ ಇದ್ದೆ. ನೈತಿಕವಾಗೇನೂ ಇದ್ದೆ. ಯಾರ ಹಿಂದೆಯೂ ಓಡಿ ಹೋಗುತ್ತಿರಲಿಲ್ಲ. ಅದೆಲ್ಲ ಗೊತ್ತಿದ್ದೂ ಯಾಕ ನನ್ನ ದೇವದಾಸಿ ಮಾಡಿದರು. ಈಗ ನನ್ನ ಭವಿಷ್ಯವೆಲ್ಲ ಕತ್ತಲೆಯಿಂದ ಕೂಡೇತಿ. ನಾನು ಬಂದು ನಮ್ಮ ತಂದೆ, ತಾಯಿ ವಿರುದ್ಧ ಕಂಪ್ಲೇಟ್ ಕೊಡ್ತೇನಿ. ನೀವು ನನಗೆ ಸಪೋರ್ಟ ಮಾಡಬೇಕು. ಹೆತ್ತ ಮಗಳ ಬಗ್ಗೆ ಕಾಳಜಿ ಇರದೆ ಕಂಡವರ ಪಾಲು ಮಾಡಿದ ಅವರಿಗೆ ತಕ್ಕ ಶಿಕ್ಷೆಯಾಗಬೇಕು" ಎಂದು ಹೇಳುವ ಇವರ ಧ್ವನಿಯಲ್ಲಿ ಗಟ್ಟಿತನವಿದೆ. ಇವಳ ಅಪ್ಪನಿಗೆ ಇಬ್ಬರು ಹೆಂಡಿರು. ಇನ್ನೊಬ್ಬ ತಾಯಿ ಒಬ್ಬಳೇ ಮಗಳೂ ದೇವದಾಸಿಯೆ. ಅವಳಿಗೆ ಮಕ್ಕಳಿರಲಿಲ್ಲ. ಅವಳು ಸಾಂಗ್ಲಿಯ ದಂಧೆ ಮನೆಯಲ್ಲಿದ್ದಳು. ಅವಳು ತನ್ನ ಮಕ್ಕಳಿಲ್ಲವೆಂಬ ಕಾರಣಕ್ಕೆ ಇವಳನ್ನು ದತ್ತು ತೆಗೆದುಕೊಂಡು ತನ್ನ ಜೊತೆಗೆ ಇಟ್ಟುಕೊಂಡವಳು. ಯಾವಾಗಲೂ ತನ್ನ ಜೊತೆ ಕರೆದುಕೊಂಡು ತಿರುಗಾಡುವುದು. ಬೇಕಾದ್ದನ್ನು ಕೊಡಿಸುವುದು ಹೀಗೆ

ಅಕ್ಕನಾಗಿ ತಾಯಿಯಂತೆ ನೋಡಿಕೊಂಡಿದ್ದಳು. ಹಾಗೆಯೇ ಮುಂದೆ ತನಗೆ ಯಾರೂ ಇಲ್ಲವೆಂಬ ಕಾರಣಕ್ಕೆ ಇವಳನ್ನು ದೇವದಾಸಿಯನ್ನಾಗಿಯೂ ಮಾಡಿದಳು.

ಮೇಲಿನ ಮೂರೂ ಪ್ರಕರಣಗಳನ್ನು ಗಮನಿಸಿದಾಗ, ಮೂರೂ ಮಹಿಳೆಯರೂ ತಾವು ದೇವದಾಸಿಯಾಗಬೇಕು ಎಂದು ಅಂದುಕೊಂಡವರಲ್ಲ. ಪರಿಸ್ಥಿತಿಗಳು ಮತ್ತು ಅವರು ಇರುವ ಸಾಮಾಜಿಕ ಮತ್ತು ಆರ್ಥಿಕ ಪರಿಸರಗಳು ಎಳೆದು ತಂದತ್ತ ಬಂದು ನಿಂತಿದ್ದಾರೆ.

ಪ್ರಕರಣ ಒಂದರ ಮಹಿಳೆಗೆ ದೇವದಾಸಿಯಾಗಿದ್ದರೂ ಕೂಡ, ಲೈಂಗಿಕ ದಂಧೆಯ ಒಳ ಅರವುಗಳು, ಘರವಾಲಿಗಳನ್ನು ನಿಭಾಯಿಸುವ, ಕಾಲಕ್ಕೆ ತಕ್ಕಂತೆ ತನ್ನನ್ನು ಬದಲಾಯಿಸಿಕೊಳ್ಳುವ ಚಾಕಚಕ್ಯತೆ ಇರಲಿಲ್ಲ. ಅವರಿಗೆ ದಂಧೆ ಮಾಡಬೇಕು ಅನ್ನುವುದಕ್ಕಿಂತ, ಬದುಕಿನಲ್ಲಿ ನಿರಾಳರಾಗಿರಬೇಕು ಅನ್ನುವ ತುಡಿತವೇ ಜಾಸ್ತಿ ಇತ್ತು. ಈಗ ವಯಸ್ಸು ಹೋಗಿದೆ. ಮದುವೆಯ ವಯಸ್ಸಿಗೆ ಬಂದ ಮಗನಿದ್ದಾನೆ. ಬದುಕ ಕಟ್ಟಿಕೊಳ್ಳಲು ಮಾಡಿದ ಪ್ರಯತ್ನಗಳು ವಿಫಲವಾಗಿವೆ. ಈ ಸ್ಥಿತಿಯಲ್ಲಿ ಊರಿಗೆ ಹೋಗಲು ಮರ್ಯಾದೆಯ ಪ್ರಶ್ನೆ.

ಪ್ರಕರಣ ಎರಡರ ಮಹಿಳೆಯ ತಾಯಿಯು ತಾನು ವಿವಾಹಿತಳಾಗಿದ್ದರೂ ಸಹ, ಅವಳ ವಿವಾಹ ಬಾಹಿರ ಸಂಬಂಧಗಳು ಮತ್ತು ಲೈಂಗಿಕ ದಂಧೆಗೆ ಸೇರಿಕೊಂಡಿದ್ದು, ಅವಳ ಮಕ್ಕಳಿಗೂ ಸಹ ಉತ್ತಮ ಸಾಮಾಜಿಕ ಜೀವನ ದೊರೆಯದಂತೆ ಮಾಡುತ್ತದೆ. ಇವಳು ದೇವದಾಸಿಯಾಗಿ ಲೈಂಗಿಕ ಜೀತಕ್ಕೆ ಒಳಪಡುವ ಅನಿವಾರ್ಯತೆಗೆ ತಲುಪಿದರೆ, ತಾಯಿ ಅದರಿಂದ ಸಂತೋಷದ ಸ್ಥಿತಿಯನ್ನು ಅನುಭವಿಸುತ್ತಾಳೆ. ಪ್ರಕರಣದ ಮಹಿಳೆಯು ತಾನು ಲೈಂಗಿಕ ದಂಧೆ ಮಾಡಿ ಗಳಿಸಿದ ಹಣವನ್ನೆಲ್ಲ ತಾಯಿಯ ಕೈಗೆ ಕೊಟ್ಟರೆ, ತಾಯಿ ಒಂದು ದುಡ್ಡನ್ನೂ ಉಳಿಸುವುದಿಲ್ಲ. ಈಗ ಅವಳು ಇಲ್ಲ. ಅವಳಿಂದ ಪ್ರಯೋಜನ ಪಡೆದವರು ಚೆನ್ನಾಗಿದ್ದಾರೆ. ಇವಳಿಗೆ ಏಡ್ಸ್ ರೋಗ ತಗುಲಿದೆ. ದಂಧೆ ನಿಂತು ಹೋಗಿದೆ. ಬದುಕಲು ತುಂಬಾ ಪರದಾಡಬೇಕಾದ ಸ್ಥಿತಿ ನಿರ್ಮಾಣ ಆಗಿದೆ.

ಪ್ರಕರಣ ಮೂರರ ಮಹಿಳೆ, ತನ್ನನ್ನು ದೇವದಾಸಿ ಮಾಡಿದ ತಂದೆ ತಾಯಿಯ ವಿರುದ್ಧವೇ ಸಮರ ಸಾರುತ್ತಿದ್ದಾಳೆ. ಏನೂ ಕಾರಣವಿಲ್ಲದೇ ತನ್ನನ್ನು ಕಂಡವರ ಪಾಲು ಮಾಡಿ, ಅವರು ತಮ್ಮ ಸ್ವಾರ್ಥಕ್ಕೆ ಇವಳ ಬಾಲ್ಯವನ್ನು, ಹರೆಯವನ್ನು ಉಪಯೋಗಿಸಿಕೊಂಡಿದ್ದ ಕುರಿತು ಇವಳಿಗೆ ನೋವಿದೆ. ದೇವದಾಸಿ ಮಾಡಿದವರೂ ತಂದೆ ತಾಯಿಯೇ ಆಗಿದ್ದರೂ ಅವರ ವಿರುದ್ಧ ಕಾನೂನಿನ ಕ್ರಮ ಕೈಗೊಳ್ಳಬೇಕು ಎಂದು ಅಭಿಪ್ರಾಯ ವ್ಯಕ್ತಪಡಿಸುವ ರೀತಿ, ಲೈಂಗಿಕ ಜೀತದ, ದಂಧೆಯ ಜಗತ್ತು ಅವಳನ್ನು ಯಾವ ಪ್ರಮಾಣಕ್ಕೆ ಹಿಂಸಿಸಿದೆ ಅನ್ನುವುದು ತಿಳಿಯುತ್ತದೆ.

ತಮಗೆ ಒಳ್ಳೆಯದಾಗಿದೆ, ತಮಗೆ ಒಳ್ಳೆಯದಾಗಲಿಲ್ಲ, ಎಂದು ಹೇಳುವ ಮಹಿಳೆಯರ ಮಧ್ಯದಲ್ಲಿ, ತಮಗೆ ಏನಾಯಿತು ಎಂದು ಹೇಳಲು ಸಾಧ್ಯವಾಗದೇ ಮಾತು ಕಳೆದುಕೊಂಡವರು ಬಹಳ ಸಂಖ್ಯೆಯಲ್ಲಿದ್ದಾರೆ. ಇದರಲ್ಲಿ ಬಹಳಷ್ಟು ಮಹಿಳೆಯರು ಘರವಾಲಿಗಳ, ಗಿರಾಕಿಗಳ ಕ್ರೂರತೆಗೆ ಒಳಗಾಗಿ, ಕುಡಿತ, ಮಾದಕ ವಸ್ತು ಸೇವನೆ ಕಲಿತಿದ್ದಾರೆ. ಅವುಗಳನ್ನು ಬಿಟ್ಟು ಬದುಕಲಾರದ ಹಂತಕ್ಕೆ

ಇಂದು ತಲುಪಿ ಬಿಟ್ಟಿದ್ದಾರೆ. ಕೆಂಪು ದೀಪ ಇವರನ್ನು ಹೊರದಬ್ಬಿದರೂ ಹೋಗಲಾಗದ ಅವಸ್ಥೆ ತಲುಪಿದ್ದಾರೆ. ಗಳಿಸಿದ ಹಣವನ್ನು ತಾಯಿ, ಅಣ್ಣ ತಮ್ಮಂದಿರಿಗೆ ಹಂಚಿ ಕೈ ಖಾಲಿ ಮಾಡಿಕೊಂಡಿದ್ದಾರೆ. ಇವರ ದೇಹದ ಜೀತದಿಂದಲೇ ಇಂದು ಒಳ್ಳೆಯ ಸ್ಥಾನದಲ್ಲಿರುವ ಅಣ್ಣ ತಮ್ಮಂದಿರು, ಇವರು ಅವರೊಡನೆ ಇದ್ದರೆ, ತಮಗೆ ಸಾಮಾಜಿಕ ಕಳಂಕವೆಂದು ತಮ್ಮ ಹತ್ತಿರಕ್ಕೆ ಸೇರಿಸಿಕೊಳ್ಳುತ್ತಿಲ್ಲ. ಜೊತೆಗೆ ಪ್ರೀತಿಸುತ್ತೇನೆಂದು ನಾಟಕವಾಡಿ ಎರಡು ದಿನ ಪುಕ್ಕಟೆ ಮಲಗೆದ್ದು ಹೋದ ಪಾರ್ಟನರ್‌ಗಳು ಹಚ್ಚಿದ ಏಡ್ಸ್ ರೋಗ, ಲೈಂಗಿಕ ಸಂಬಂಧಿ ಕಾಯಿಲೆಗಳು ಇವರನ್ನು ಬದುಕು ಸಾಕು ಅನ್ನುವ ಹಂತಕ್ಕೆ ತಂದು ನಿಲ್ಲಿಸಿವೆ. ೨೫-೨೬ ವರ್ಷಕ್ಕೆ ಎಲ್ಲವನ್ನೂ (ದೈಹಿಕತೆ, ಮಾನಸಿಕತೆ) ಕಳೆದುಕೊಂಡು, ತಂಬಾಕಿಗೆ ಗಿರಾಕಿಗಳನ್ನು ಹುಡುಕುವ ಹಂತಕ್ಕೆ ಬಂದು ನಿಂತಿದ್ದಾರೆ.

ಎಳೆಯ, ಮುಗ್ಧ, ಅಸಹಾಯಕ ಹೆಣ್ಣುಮಕ್ಕಳನ್ನು ಮುಂದಿಟ್ಟುಕೊಂಡು, ಹಸಿವನ್ನು ಹಿಂಗಿಸಿಕೊಳ್ಳುವ ದುರಂತಕ್ಕಿಂತ ಮತ್ತೊಂದು ದೊಡ್ಡ ದುರಂತ ಯಾವುದೂ ಇಲ್ಲ. ಆದರೆ ಅವರು ಯಾಕೆ ಈ ಸ್ಥಿತಿಗೆ ಬಂದರು ಅನ್ನುವುದು ಅದರಷ್ಟೇ ದೊಡ್ಡ ಸಂಗತಿಯಾಗಿ ಕಾಡುತ್ತದೆ. ದುಡಿಯಲು ಕೌಶಲ್ಯಗಳಿಲ್ಲದ, ಅವಕಾಶಗಳಿಲ್ಲದ, ಸಾಮಾಜಿಕ ಮಾನ್ಯತೆ ಇಲ್ಲದ ಬದುಕು ಇವರದಾಗಿತ್ತು. "ಜಗತ್ತಿನಲ್ಲಿ ಬಡವರೇ ಇಲ್ಲವೇ, ಎಷ್ಟೋ ಜನ ಹೆಣ್ಣುಮಕ್ಕಳು, ಕಷ್ಟಪಟ್ಟು ಬೆವರು ಸುರಿಸಿ ಬದುಕು ಮಾಡುತ್ತಿಲ್ಲವೇ? ಇವರೂ ಮಾಡಬಹುದಿತ್ತು?" ಇದು ಬುದ್ಧಿ ಜೀವಿಗಳೆನ್ನಿಸಿಕೊಂಡವರ ಪ್ರಶ್ನೆ. ನಿಜ ಆದರೆ ಅವಳು ಇನ್ನೂ ಕಣ್ಣನ್ನೇ ಬಿಟ್ಟಿರಲಿಲ್ಲ. ಹುಟ್ಟಿದ್ದು ಹೆಣ್ಣು ಅನ್ನುತ್ತಲೇ ಮರುಕ್ಷಣದಲ್ಲಿಯೇ ರೆಡ್‌ಲೈಟ್ ಏರಿಯಾದಲ್ಲಿ ಒಂದು ಸೀಟ್ ಬುಕ್ಕ್ ಆಗಿರುತ್ತಿತ್ತು. ಆ ಕೂಸು ಯಾವ ಬದುಕು ಕಟ್ಟಿಕೊಳ್ಳಲು ಸಾಧ್ಯ? ಇದಕ್ಕೆ ಕಾರಣ ಅವಳ ಅಪ್ಪ ಅವ್ವ ಪರಿಸರ ಎಂದು ಹೇಳುವಾಗ, ಅವರು ಯಾವ ಪರಿಸರದಲ್ಲಿ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ ಬದುಕುತ್ತಿದ್ದರು ಎನ್ನುವುದು ಅಷ್ಟೇ ಮುಖ್ಯವಾಗುತ್ತದೆ. ಕೃಷಿ ಕಾರ್ಮಿಕರಾಗಿ ಸಾವಿರ ಸಾವಿರ ಜನರಿಗೆ ಕಾಳು ಬೆಳೆದು ಕೊಡುವ ಇವರು, ತಮ್ಮ ಹಸಿವು ಹಿಂಗಿಸಿಕೊಳ್ಳಲು, ಹಲಗೆ ಬಾರಿಸಬೇಕು, ಕಕ್ಕಸು ತೊಳೆಯಬೇಕು, ಸತ್ತು ನಾರುವ ದನಗಳ ಹೆಣಗಳನ್ನು ಪ್ರೀತಿಯಿಂದ ಎತ್ತಿ ತರಬೇಕು, ಮನೆಯ ಹೆಣ್ಣುಮಕ್ಕಳಿಗೆ ಮುತ್ತು ಕಟ್ಟಿ ಅವಳ ಸೆರಗ ತಂದು ಉಳ್ಳವರಿಗೆ ಒಪ್ಪಿಸಬೇಕು. ಆಗ ಇವರಿಗೆ ಒಂದು ತುತ್ತು ಕೂಳು. ಮುಡಿಗಾಸು ಕೂಲಿ. ಮನೆ ತುಂಬ ಮಕ್ಕಳನ್ನು ಕಟ್ಟಿಕೊಂಡು ಅದರಿಂದ ಹೇಗೆ ಹಸಿವನ್ನು ನೀಗಿಸಬಹುದಿತ್ತು. ಮೇಲಿಂದ ಮೇಲೆ ಬೀಳುವ ಬರಗಾಲಗಳಿಂದಾಗಿ ಈ ಅವಮಾನದ ಗಂಜಿಗೂ ಕೂಡ ಕಲ್ಲು ಬೀಳುತ್ತಿತ್ತು. ಮನುಷ್ಯ, ಮನುಷ್ಯನನ್ನೇ ತಿಂದು ಬದುಕುವ ಹೊತ್ತು ಬಂದಾಗ, ಭಾವನೆಗಳು, ಮಾತುಗಳು ಇಲ್ಲಿ ಅರ್ಥ ಕಳೆದುಕೊಂಡಿದ್ದವು. ಜಮಖಂಡಿಯ ಹುಲ್ಯಾಳದ ಸಾವಕ್ಕ "ಮನ್ಯಾಗ ಒಬ್ಬಾಕಿ ದೇವದಾಸಿ ಆದಾಳ ಅಂದ್ರ ಅದು ಯಾಡ ಎಕರೆ ಹೊಲಕ್ಕ ಸಮ ಆಗಿರುತ್ತಿತ್ತು" ಅಂತ ಹೇಳೋವಾಗ, ಹಸಿವನ್ನು ಹಿಂಗಿಸಿಕೊಳ್ಳಲು ಹುಡುಕಿಕೊಂಡ ದಾರಿ ಇದಾಗಿತ್ತು. ಬಿ.ಎಂ.ಪುಟ್ಟಯ್ಯ ಅವರು "ಉತ್ತರ ಕರ್ನಾಟಕದ ಭೂ ರಹಿತ ದಲಿತರ ವಸ್ತುಸ್ಥಿತಿ ಅವರನ್ನು ವಿಕೃತ ಪರಿಸ್ಥಿತಿಗೆ ತಳ್ಳಿದೆ. ದೇವದಾಸಿ ಪದ್ಧತಿ ಮತ್ತು ಅಸ್ಪೃಶ್ಯತೆಗಳು ಇಲ್ಲಿ ಸಾಮಾನ್ಯ

ಭೂಮಿ ಇಲ್ಲದೇ ಕಡಿಮೆ ಕೂಲಿ ಪಡೆಯುವುದು, ಮಳೆಯನ್ನೇ ಆಧರಿಸಿರುವ ಭಾಗಗಳಲ್ಲಿ ಮಳೆ ಆಗದಿರುವುದು, ತುಂಗಭದ್ರಾ ಡ್ಯಾಮಿನ ನೀರಿನಿಂದ ಕೃಷಿ ಮಾಡುವ ಕಡೆ ಗದ್ದೆಗಳಿಗೆ ಭಾರೀ ಯಂತ್ರಗಳು(ಕಳೆ ಕೀಳಲು, ನಾಟಿ ಮಾಡಲು, ಕೊಯ್ಲು ಮಾಡಲು) ಬಂದಿರುವುದು-ಇವು ಕೃಷಿಕೂಲಿ ದಲಿತರ ದುಡಿಮೆಯನ್ನು ಕಿತ್ತು ಕೊಂಡಿವೆ. ಪರಿಣಾಮವಾಗಿ ದೇವದಾಸಿ ಪದ್ಧತಿ ಹೆಚ್ಚುತ್ತಿದೆ. ಗುಳೆ ಹೋಗುವವರ ಪ್ರಮಾಣ ಜಾಸ್ತಿಯಾಗಿದೆ"ಎಂದು ತಮ್ಮ 'ದಲಿತರು ಮತ್ತು ಭೂಮಿಯ ಪ್ರಶ್ನೆ ಪುಸ್ತಕದಲ್ಲಿ ವಿಶ್ಲೇಷಿಸುತ್ತಾರೆ. ಭೂರಹಿತರಾಗಿದ್ದ ಇವರು ತಮ್ಮ ಹೆಣ್ಣುಮಕ್ಕಳ ದೇಹವನ್ನೇ ಭೂಮಿಯನ್ನಾಗಿ ಮಾಡಿ ಫಸಲು ತೆಗೆಯತೊಡಗಿದ್ದು ವಿಪರ್ಯಾಸವೆನ್ನಿಸಿದರೂ ನಿಜವಾಗಿತ್ತು. ಪರಿಣಾಮವಾಗಿ ಮನೆಯ ಚಿಕ್ಕ ಚಿಕ್ಕ ಹೆಣ್ಣು ಕೂಸುಗಳು ಮುಂಬಯಿಯ ವೇಶ್ಯಾಗೃಹದಲ್ಲಿ ಇದ್ದವು.

ಎಳೆಯ ಬಾಲೆಯರು ಲೈಂಗಿಕ ಜೀತಕ್ಕೆ ನಿಂತ ಮೇಲೆ, ಅಲ್ಲಿ ಅವಳನ್ನು ಶೋಷಿಸುವ ವರ್ಗವೇ ಸುತ್ತುವರೆದಿತ್ತು. ಅಪ್ಪನಿಗೆ, ಅವ್ವನಿಗೆ ಸಾಲ ಕೊಟ್ಟ ಘರವಾಲಿ ಬಡ್ಡಿಗೆ ಬಡ್ಡಿ ಹಚ್ಚಿ ವಿಷ ವರ್ತುಲ ನಿರ್ಮಿಸುತ್ತಿದ್ದಳು. ಆದರೂ ಕಷ್ಟಪಟ್ಟು ಅವಳಿಂದ ಮುಕ್ತಗೊಂಡು, ತಾನೇ ಸ್ವತಂತ್ರವಾಗಿ ದಂಧೆ ಮಾಡಿ ಹಣ ಗಳಿಸಬೇಕೆಂದುಕೊಂಡವರು, ಯಶಸ್ಸನ್ನೂ ಕಂಡಿದ್ದಾರೆ. ಮತ್ತೆ ಕೆಲವರಿಗೆ ಏನೂ ಸಾಧ್ಯವಾಗದೇ ಇನ್ನೂ ಈಸುತ್ತಲೇ ಇದ್ದಾರೆ. ಪೊಲೀಸರು, ಗುಂಡಾಗಳು ನೀಡುವ ಹಿಂಸೆಯ ಮಧ್ಯೆ ಗಳಿಸಿದ ನಾಲ್ಕು ರೂಪಾಯಿಗಳು ತಮಗೇ ಆಗಲಿ ಎಂದು ಆಶಿಸುತ್ತಾ ಮತ್ತೆ ಮತ್ತೆ ತಮ್ಮ ದೇಹವನ್ನು ಭೂಮಿ ಮಾಡಿ, ಫಸಲು ತೆಗೆಯಲು ಗಿರಾಕಿಗಳನ್ನು ಹುಡುಕುತ್ತಲೇ ಇದ್ದಾರೆ. ಇಷ್ಟೆಲ್ಲ ನೋವನುಂಡಿದ್ದರೂ ಮಾಜಿ ಲೈಂಗಿಕ ದಂಧೆಯ ಹೆಣ್ಣುಮಕ್ಕಳು, ಊರಿನಿಂದ ಬಾಲೆಯರನ್ನು ಸೆಳೆದು ತರುವ ಕೃತ್ಯವನ್ನು ಎಸಗುತ್ತಲೇ ಇದ್ದಾರೆ. ಆದರೆ ಇದೆಲ್ಲದರ ಮಧ್ಯ, ಈಗ ೧೦-೧೫ ವರ್ಷಗಳ ಹಿಂದಿನ ಪರಿಸ್ಥಿತಿಗೂ ಇಂದಿಗೂ ಮಕ್ಕಳನ್ನು ಸಾಗಿಸುವ ಸಂಖ್ಯೆಯಲ್ಲಿ ಇಳಿಮುಖವಾಗುತ್ತಿರುವುದು ಕೋಷ್ಟಕಗಳನ್ನು ಗಮನಿಸಿದಾಗ ಕಂಡು ಬರುತ್ತದೆ. ಬಾಲೆಯರಾಗಿ ಬಂದು, ಯುವತಿಯರಾಗಿ, ಮಹಿಳೆಯರಾಗಿ ಇಂದಿಗೂ ಹಣ ಗಳಿಸುವ ಧಾವಂತದಲ್ಲಿ ಅವರ ಆರೋಗ್ಯ ಹೇಗಿದೆ? ಅದಕ್ಕಾಗಿ ಅವರು ತೆಗೆದುಕೊಳ್ಳುವ ಮುನ್ನೆಚ್ಚರಿಕೆಗಳೇನು ಎಂಬುದನ್ನು ಅರ್ಥಮಾಡಿಕೊಳ್ಳುವುದು ಅವಶ್ಯವಿದೆ.

## ೩.೭ ಲೈಂಗಿಕ ದಂಧೆ ಮತ್ತು ಆರೋಗ್ಯ

ಈ ಭಾಗದಲ್ಲಿ ಲೈಂಗಿಕ ಜೀತಕ್ಕೊಳಪಟ್ಟ ಲೈಂಗಿಕ ದಂಧೆಯಲ್ಲಿ ಬದುಕಿದ ಮಹಿಳೆಯರ ವಾಸ್ತವಿಕ ಆರೋಗ್ಯ ಸ್ಥಿತಿಯನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಈ ವಿವರಣೆಯು ಬಹುತೇಕ. ಕ್ಷೇತ್ರಕಾರ್ಯ ಸಮಯದಲ್ಲಿ ಅವರೇ ಹೇಳಿದ ವಿವರಣೆಗಳಾಗಿವೆ. ಇದರೊಟ್ಟಿಗೆ ಅವರ ಜೊತೆ ಸಂವಾದ ಮಾಡುವಾಗ ಕ್ಷೇತ್ರಕಾರ್ಯದಲ್ಲಿ ನಾವು ಅವಲೋಕಿಸಿದ ಅವರ ದೈಹಿಕ ಚಹರೆಗಳ ಆಧಾರದಲ್ಲಿ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಲೈಂಗಿಕ ಜೀತ ಮತ್ತು ದಂಧೆಯಲ್ಲಿರುವ ಹೆಣ್ಣುಮಕ್ಕಳಿಗೆ ಆರೋಗ್ಯವೆಂಬುದು ಮರೀಚಿಕೆಯಾಗಿರುತ್ತದೆ. ತಮ್ಮ ಆರೋಗ್ಯವನ್ನು ಗಂಡಾಂತರದಲ್ಲಿ ಸಿಲುಕಿಸಿ, ಹೊಟ್ಟೆ ತುಂಬಿಸಿಕೊಳ್ಳಬೇಕಾದ ಪರಿಸ್ಥಿತಿ

ಇವರದಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಮೊದಲಿಗೆ ಇವರನ್ನು ಆವರಿಸುವುದು ಚಟಗಳು. ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಲ್ಲಿ ಶೇಕಡಾ ೭೦ರಷ್ಟು ಮಹಿಳೆಯರಿಗೆ ಚಟಗಳು ಇರುವುದು ಮತ್ತು ಶೇಕಡಾ ೩೦ ಮಹಿಳೆಯರಿಗೆ ಚಟಗಳು ಇಲ್ಲದೇ ಇರುವುದು ಕಂಡುಬರುತ್ತದೆ.

ಹೆಚ್ಚಿನ ಮಹಿಳೆ ತಂಬಾಕು ಮತ್ತು ಗುಟಕಾ ಚಟಕ್ಕೆ ಬಲಿಯಾದರೆ, ಭಾಗಶಃ ಮಹಿಳೆಯರು ಮದ್ಯಪಾನಕ್ಕೆ ಶರಣಾಗಿದ್ದಾರೆ. ಈ ಚಟಗಳಿಗಾಗಿ ಅವರು ಹೆಚ್ಚಾಗಿ ಗಿರಾಕಿಗಳನ್ನು ಅವಲಂಬಿಸಿರುವುದಾಗಿ ತಿಳಿಸುತ್ತಾರೆ. ಈ ಚಟಗಳನ್ನು ಕೆಲವರು ಗೆಳತಿಯರಿಂದ ಕಲಿತುಕೊಂಡರೆ, ಕೆಲವರು ಗಿರಾಕಿಗಳಿಂದ ಕಲಿತುಕೊಂಡಿದ್ದಾರೆ. ಕೆಲವರು ತಮ್ಮಷ್ಟಕ್ಕೆ ತಾವೆ ಕಲಿತುಕೊಂಡಿದ್ದಾರೆ. ೨೩ ವರ್ಷದ ಯುವತಿಯೊಬ್ಬಳು ಗುಟುಕಾ ಚಟಕ್ಕೆ ಅಂಟಿಕೊಂಡಿದ್ದು, ಒಂದೈದು ನಿಮಿಷವೂ ಬಿಟ್ಟರದೆ ತಿನ್ನುತ್ತಿರುತ್ತಾಳೆ. ಅವಳು "ಸಂಜೀ ನಾಲ್ಕರಿಂದ ದಂಧೆಗೆ ನಿಂತರ, ಬೆಳಗಿನ ನಾಲ್ಕರವರೆಗೆ ನಿಲ್ಲಬೇಕು. ಗಿರಾಕಿಗಳಿಗಾಗಿ ಕಾಯುವುದು ದೊಡ್ಡ ಕೆಲಸ. ಸುಮ್ಮನೆ ಎಷ್ಟು ಹೊತ್ತು ನಿಲ್ಲುವುದು. ಹಾಗೆ ಸುಮ್ಮನೆ ನಿಂತರೆ ಬೇಸರವಾಗಿ ನಿದ್ದೆ ಬರುತ್ತದೆ. ಆ ನಿದ್ರೆ ಹೋಗಿಸಲು ಈ ಗುಟುಕಾ ಚಟ ಅಂಟಿಕೊಂಡಿದೆ" ಎಂದು ಹೇಳುತ್ತಾಳೆ. ಘರವಾಲಿಗಳು ಮತ್ತು ಮಹಿಳೆಯರು ಹೇಳಿಕೊಂಡಂತೆ ಬಹುತೇಕ ಹುಡುಗಿಯರು ಬಹುಬೇಗ ಕುಡಿತದ ಚಟಕ್ಕೆ ಒಳಗಾಗುತ್ತಾರೆ. ಹೀಗಾಗಿ ಗಳಿಸಿದ್ದನ್ನೆಲ್ಲ ಚಟಕ್ಕೆ ಹಾಕುತ್ತಾರೆ.

ಮಹಿಳೆಯರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಬಂದವರಾಗಿರುತ್ತಾರೆಂಬುದು ಈ ಹಿಂದಿನ ಹಲವಾರು ಕೋಷ್ಟಕಗಳಿಂದ ತಿಳಿದು ಬಂದಿದೆ. ಈ ಸಂದರ್ಭದಲ್ಲಿ ಅವರೊಂದಿಗೆ ಒತ್ತಾಯದಿಂದ ಲೈಂಗಿಕ ಸಂಪರ್ಕದ ಪ್ರಕ್ರಿಯೆ ನಡೆಯುತ್ತದೆ. ಅವರಿಗೆ ಅದು ಗೊತ್ತಿರದ ವಿಷಯವಾಗಿದ್ದರಿಂದ ಚೀರಾಡುವುದು, ಹೊಡೆಯುವುದು, ಜೋರಾಗಿ ಅಳುವುದು, ಓಡಿ ಹೋಗಲು ಪ್ರಯತ್ನಿಸುವುದು ನಡೆಯುತ್ತದೆ. ಮಕ್ಕಳು ಸಂಪೂರ್ಣವಾಗಿ ಅಸಹಕಾರ ಪ್ರತಿಭಟಿಸುತ್ತವೆ. ಆದ್ದರಿಂದ ಅವರನ್ನು ಮಣಿಸಲು ಘರವಾಲಿಗಳು ಕೋಲ್ಡ ಡ್ರಿಂಕ್ಸ್‌ಗಳಲ್ಲಿ ಸಾರಾಯಿಯನ್ನು ಕೂಡಿಸಿ ಕುಡಿಸುತ್ತಾರೆ. ಮಕ್ಕಳು ಗೊತ್ತಿರದೇ ಅದನ್ನು ಕುಡಿದು ಪ್ರಜ್ಞಾಹೀನರಾದಾಗ ಅವರ ಮೇಲೆ ಅತ್ಯಾಚಾರಗಳು ನಡೆಯುತ್ತವೆ. ಇಂತ ಚಿಕ್ಕ ಮತ್ತು ಕನ್ಯೆಯರಾದ ಹುಡುಗಿಯರಿಗೆ ಗಿರಾಕಿಗಳು ಲಕ್ಷಗಟ್ಟಲೆ ಹಣ ಕೊಡಲು ತಯಾರಿರುತ್ತಾರೆ. ಹೀಗೆ ಪ್ರಾರಂಭವಾದ ಸಾರಾಯಿಯ ಚಟ ಎಷ್ಟೋ ಮಹಿಳೆಯರಿಗೆ ಅವರ ಸಾವಿಗೂ ಕಾರಣವಾಗುತ್ತದೆ. ಎಷ್ಟು ಗಳಿಸಿದರೂ ಕೈಗೆ ಹತ್ತುವುದೇ ಇಲ್ಲ. ಗಳಿಸಿದ್ದನ್ನೆಲ್ಲ ಕುಡಿತಕ್ಕೆ ಹಾಕುತ್ತಾರೆ.

ಅಧ್ಯಯನಕ್ಕೆ ಒಳಪಡಿಸಿದ ಯುವತಿಯೊಬ್ಬಳ ಇಬ್ಬರು ಅಕ್ಕಂದಿರು ಅತಿಯಾದ ಮದ್ಯಪಾನದಿಂದಲೇ ಮರಣ ಹೊಂದಿದರು ಎಂದು ತಿಳಿಸುತ್ತಾಳೆ. ಅವರು ಮರಣ ಹೊಂದಿದ್ದಕ್ಕಾಗಿ ಇವಳ ತಾಯಿ ಕಾಲೇಜಿಗೆ ಹೋಗುತ್ತಿದ್ದ ಇವಳನ್ನೇ ಎಳೆದು ತಂದು ದಂಧೆಗೆ ಹಚ್ಚಿದ್ದನ್ನು ನೆನಪಿಸಿಕೊಳ್ಳುತ್ತಾಳೆ. ಹಾಗೆಯೇ ಇನ್ನೋರ್ವ ಯುವತಿಯ ಅಕ್ಕನೂ ಸಹ ಅತಿಯಾದ ಮದ್ಯಪಾನದಿಂದಾಗಿ ಒಂದು ಸ್ಥಳದಲ್ಲಿ ಸರಿಯಾಗಿ ನಿಲ್ಲುತ್ತಿರಲಿಲ್ಲ. ಮುಂಬಯಿ ಕೋಲ್ಹಾಪೂರ, ಪುಣೆ, ಸಾಂಗ್ಲಿ, ಮಿರಜ್ ಈ ಊರುಗಳ ನಡುವೆ ಮನ ಬಂದಂತೆ ತಿರುಗುತ್ತಿದ್ದಳು. ಯಾರಿಗೂ ಹೇಳುತ್ತಲೂ ಇರಲಿಲ್ಲ. ಅವಳನ್ನು

ಹುಡುಕುವುದೇ ಒಂದು ದೊಡ್ಡ ಕೆಲಸವಾಗಿರುತ್ತಿತ್ತು. ಈಗ ಹಳ್ಳಿಯಲ್ಲಿ ಅನಾರೋಗ್ಯದಿಂದ ಹಾಸಿಗೆ ಹಿಡಿದು ಮಲಗಿದ್ದಾಳೆಂದು ಯುವತಿಯು ಹೇಳುತ್ತಾಳೆ.

ಕೆಲವರಿಗೆ ಚರಸ್ ಚಟವೂ ಅಂಟಿಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಈ ಚಟಗಳಿಗೆ ಅಂಟಿಕೊಂಡ ಇವರು ಸರಿಯಾಗಿ ದಂಧೆ ಮಾಡಲು ಆಗದೇ, ಸಿಕ್ಕಷ್ಟು ಹಣವನ್ನು ಉಪಯೋಗಿಸಿ ಮಟಕಾ ಆಡುವ ಚಟಗಳನ್ನು ಕಲಿತಿರುತ್ತಾರೆ. ಅವರು ಇದರಲ್ಲಿ ಒಂದು ದಿನ ಸೋಲುತ್ತಾರೆ, ಒಂದು ದಿನ ಗೆಲ್ಲುತ್ತಾರೆ. ಆದರೆ ಪ್ರತಿದಿನ ಮಟಕಾ ನಂಬರ್ ಹಚ್ಚಲೇಬೇಕು ಎಂದು ಕೆಲವು ಹುಡುಗಿಯರು ತಮ್ಮೊಳಗಿನ ಮಹಿಳೆಯರ ಪರಿಸ್ಥಿತಿಗಳನ್ನು ವಿವರಿಸುತ್ತಾರೆ.

ನಿರಂತರವಾದ ಲೈಂಗಿಕ ಸಂಭೋಗ, ಮಾನಸಿಕ ಒತ್ತಡಗಳಿಂದಾಗಿ ಅಧ್ಯಯನಕ್ಕೊಳಪಡಿಸಿದ ಮಹಿಳೆಯರಲ್ಲಿ ಶೇಕಡಾ ೩೦ ಮಹಿಳೆಯರು ಅನಾರೋಗ್ಯದಿಂದ ಬಳಲುವುದು ಕಂಡುಬರುತ್ತದೆ. ಅವರಲ್ಲಿ ಶೇಕಡಾ ೧೩.೩೩ರಷ್ಟು ಮಹಿಳೆಯರು ಎಚ್.ಆಯ್.ವಿ/ಏಡ್ಸ್ ಸೋಂಕಿನಿಂದ, ಶೇಕಡಾ ೬.೬೭ರಷ್ಟು ಮಹಿಳೆಯರು ಅಸ್ತಮಾದಿಂದ ಮತ್ತು ಶೇಕಡಾ ೧೦ರಷ್ಟು ಮಹಿಳೆಯರು ಬಿ.ಪಿ ಮತ್ತು ಹೃದಯ ಸಂಬಂಧಿ ತೊಂದರೆಗಳಿಂದ ಬಳಲುವುದು ಕಂಡುಬರುತ್ತದೆ. ಅನಾರೋಗ್ಯಕ್ಕೆ ಒಳಗಾದವರೆಲ್ಲರೂ ಚಿಕಿತ್ಸೆ ಪಡೆಯುತ್ತಿದ್ದಾರೆ.

ಎಚ್.ಐ.ವಿ/ಏಡ್ಸ್ ತಗುಲಿದವರಿಗೆ ಸರ್ಕಾರಿ ಆಸ್ಪತ್ರೆಯಲ್ಲಿ ಉಚಿತವಾದ ಚಿಕಿತ್ಸೆ ಮತ್ತು ಔಷಧೋಪಚಾರ ದೊರೆಯುತ್ತದೆ. ಇವರಲ್ಲಿ ಒಬ್ಬರು ಆಶಾ ಮಹಿಳಾದಲ್ಲಿ ಔಟ್ ರೀಚ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದಾರೆ. ಮತ್ತೊಬ್ಬರ ತಂಗಿಯೂ ಆಶಾ ಮಹಿಳಾ ಸಂಸ್ಥೆಯಲ್ಲಿ ಔಟ್ ರೀಚ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದು ಇವರನ್ನು ನೋಡಿಕೊಳ್ಳುತ್ತಾಳೆ. ಆದರೆ ಇನ್ನಿಬ್ಬರ ಸ್ಥಿತಿ ಗಂಭೀರವಾಗಿದೆ. ಅವರು ನಿರೋಧ್ ಉಪಯೋಗಿಸಿ ದಂಧೆ ನಡೆಸುತ್ತಾರೆ. ತಮ್ಮಿಂದ ರೋಗ ಹರಡಬಹುದು ಎಂಬ ವಿಚಾರ ಅವರಿಗೆ ಗೊತ್ತಿದ್ದರೂ ಸಹ, ಬರುವ ಗಿರಾಕಿಗಳಿಗೆ ತಮ್ಮ ರೋಗದ ಅರಿವು ಇರುವುದಿಲ್ಲ ಎಂದು ಅಂಜದೇ ಈ ಚಟುವಟಿಕೆಯಲ್ಲಿ ತೊಡಗುತ್ತಾರೆ. ಆದರೆ ಒಂದೊಂದು ಸಾರಿ ನಿರೋಧಗಳ ಗುಣಮಟ್ಟ ಸರಿ ಇರದೆ ಹೋದಾಗ ಅಥವಾ ಡ್ಯಾಮೇಜ್ ಆಗಿದ್ದರೆ ಸೋಂಕು ತಗಲುವ ಸಾಧ್ಯತೆಗಳು ಇವೆ.

ಉಳಿದಂತೆ ಶೇಕಡಾ ೭೦ರಷ್ಟು ಮಹಿಳೆಯರಿಗೆ ಅಂಥಾ ಗಂಭೀರವಾದ ಯಾವ ರೋಗಗಳೂ ಇಲ್ಲ. ಆದರೆ ಮೇಲಿಂದ ಮೇಲೆ ಸಂಭೋಗಕ್ಕೆ ಒಳಗಾಗುವುದರಿಂದ ದೈಹಿಕವಾಗಿ ತುಂಬಾ ತೊಂದರೆಯಾಗುತ್ತಿರುವ ಕುರಿತು ಮಹಿಳೆಯರು ತಿಳಿಸಿದರು. ಇದರಿಂದ ಅವರಿಗೆ ಗುಪ್ತ ಭಾಗದಲ್ಲಿ ನೋವುಂಟಾಗುವುದು, ರಕ್ತ ಸ್ರಾವವಾಗುವುದು, ಅರಜಿಕೆ, ಕುರುಳಿ ಏಳುವುದು, ಗುಳ್ಳೆ ಏಳುವುದು, ಬಿಳಿ ಸೆರಗು ಹೋಗುವುದು ಇಂತಹ ಲೈಂಗಿಕ ಸಂಬಂಧೀ ಕಾಯಿಲೆಗಳು ಬರುತ್ತವೆ ಎಂದು ಹೇಳಿದರು.

ಲೈಂಗಿಕ ದಂಧೆಯಲ್ಲಿರುವ ಇವರಿಗೆ ಮಕ್ಕಳಾಗುವುದು ಅಂದರೆ, ಇವರ ದಂಧೆಗೆ ಅಡ್ಡಗಾಲು ಇದ್ದಂತೆ. ಚಿಕ್ಕ ವಯಸ್ಸಿನಲ್ಲಿ ಮಕ್ಕಳಾದರೆ, ಗಳಿಸುವ ವಯಸ್ಸಿನಲ್ಲಿ, ಸಮಯ ಹಾಳು ಮಾಡಿಕೊಂಡಂತೆ ಎಂದು ಘರವಾಲಿಗಳಾಗಿರುವ ಮಹಿಳೆಯರು ಹೇಳುತ್ತಾರೆ. ಅಲ್ಲದೇ ಇವರ ಮೇಲೆ ಸಾಲದ ಹೊರೆ ಇರುವುದರಿಂದ, ಘರವಾಲಿ ಇವರಿಗೆ ಮಕ್ಕಳಾಗುವುದನ್ನು ನಿಷೇಧಿಸಿರುತ್ತಾಳೆ. ಮಕ್ಕಳಾಗುವುದರಿಂದ ದೇಹದ ಫಿಟ್ ನೆಸ್ ಹಾಳಾಗಿ ದಂಧೆಯೂ ಕಡಿಮೆಯಾಗುತ್ತದೆಂದು ಭಾವಿಸುವ ಹುಡುಗಿಯರು, ನಿರಂತರವಾಗಿ ಕಟ್ಟುವ ಗರ್ಭಗಳನ್ನು ನಿಲ್ಲದಂತೆ ನೋಡಿಕೊಳ್ಳುತ್ತಾರೆ. ಇದಕ್ಕಾಗಿ ಶೇಕಡಾ ೫೬.೬೬ರಷ್ಟು ಹುಡುಗಿಯರು ನಿರೋಧ್‌ಗಳನ್ನು ಬಳಸುತ್ತಾರೆ ಮತ್ತು ಶೇಕಡಾ ೪೩.೩೩ರಷ್ಟು ಮಹಿಳೆಯರು ಗರ್ಭ ನಿರೋಧಕ ಮಾತ್ರೆಗಳನ್ನು ಬಳಸುತ್ತಾರೆ.

ಬೀವಂಡಿಯ ಭಾರತೀಯ ಕುಟುಂಬ ಯೋಜನಾ ಸಂಘದ ಯೋಜನಾಧಿಕಾರಿಗಳು "ಲೈಂಗಿಕ ಚಟುವಟಿಕೆಯಲ್ಲಿ ತೊಡಗಿಕೊಂಡ ಇವರಿಗೆ ಗರ್ಭ ನಿರೋಧಕ ಗುಳಿಗೆಗಳಿಂದ ಗರ್ಭ ಧರಿಸುವುದನ್ನು ತಡೆಗಟ್ಟಲು ಸಾಧ್ಯವಿಲ್ಲ, ಏಕೆಂದರೆ ಬಹಳಷ್ಟು ಮಹಿಳೆಯರಿಗೆ ಮದ್ಯಪಾನ, ಗಾಂಜಾ, ಸೇವಿಸುವ ಹವ್ಯಾಸವಿರುತ್ತದೆ. ಇದರಿಂದಾಗಿ ಗುಳಿಗೆಗಳು ಪರಿಣಾಮ ಬೀರುವುದಿಲ್ಲ. ಡಿಪೋ ಪವೇರಾ(ಡಿಂಪಾ) ಎಂಬ ಇಂಜಕ್ಷನ್ ಇದೆ. ಇದನ್ನು ತೆಗೆದುಕೊಂಡರೆ ೯೦ ದಿನಗಳವರೆಗೆ ಗರ್ಭಧರಿಸುವುದನ್ನು ತಡೆಗಟ್ಟಬಹುದು. ಆದರೆ ಇದರ ಬೆಲೆ ಜಾಸ್ತಿ ಎಂದು ಅವರು ಇದನ್ನು ಉಪಯೋಗಿಸುವುದಿಲ್ಲ. ಇನ್ನು ಗರ್ಭ ನಿಂತನಂತರ ಎಮ್.ಟಿ.ಪಿ (Medicale TerminationProcess) ಇದನ್ನು ಗರ್ಭಧರಿಸಿದ ೪ ವಾರಗಳ ಒಳಗೆ ಮಾಡಿಸಿಕೊಳ್ಳಬೇಕು. ಬಹಳಷ್ಟು ಜನರು ಬರುವುದಿಲ್ಲ. ಬಹಳಷ್ಟು ಮಹಿಳೆಯರಿಗೆ ಗರ್ಭ ನಿಂತದ್ದೂ ಸಹ ಗೊತ್ತಾಗುವುದಿಲ್ಲ. ಹೀಗಾಗಿ ಅನಿರೀಕ್ಷಿತವಾಗಿ ಮಕ್ಕಳು ಹುಟ್ಟುವ, ಮತ್ತೆ ಯಾವುದೋ ಅಸುರಕ್ಷಿತ ವಿಧಾನಗಳ ಬಳಕೆಯಿಂದ ಪ್ರಯತ್ನಿಸುವ ಅಪಾಯಕಾರಿ ಪ್ರಯತ್ನಕ್ಕೆ ಕೈ ಹಾಕುತ್ತಾಗೆ ಎಂದು ಹೇಳುತ್ತಾರೆ.

ಅಧ್ಯಯನಕ್ಕೆ ಒಳಗಾದ ಎಲ್ಲ ಹುಡುಗಿಯರಿಗೂ ಏಡ್ಸ್ ರೋಗದ ಕುರಿತು ತಿಳುವಳಿಕೆ ಇದೆ. ಆದರೂ ಶೇಕಡಾ ೪೩.೩೩ರಷ್ಟು ಮಹಿಳೆಯರು ನಿರೋಧದ ಬದಲಿಗೆ, ಗರ್ಭ ನಿರೋಧಕ ಮಾತ್ರೆಗಳನ್ನು ಬಳಸುವುದರಿಂದ, ಇವರು ಎಚ್.ಐ.ವಿ/ಏಡ್ಸ್ ಗೆ ಬಲಿಯಾಗುವ ಸಾಧ್ಯತೆಗಳು ತುಂಬಾ ಇರುತ್ತವೆ. ಬಹುತೇಕ ನಿರೋಧ್ ಬಳಸದ ಮಹಿಳೆಯರು ಪಾರ್ಟನರ್‌ಗಳನ್ನು ಹೊಂದಿರುತ್ತಾರೆ. ಪಾರ್ಟನರ್‌ಗಳು ತಾವು ಇಟ್ಟುಕೊಂಡ ಮಹಿಳೆಯರ ಜೊತೆ ಲೈಂಗಿಕ ಸಂಬಂಧ ಹೊಂದುವಾಗ ನಿರೋಧ್ ಬಳಸಲು ಒಪ್ಪುವುದಿಲ್ಲ. ಅಲ್ಲದೇ ನಮ್ಮ ಮಹಿಳೆಯರು ಆ ಪಾರ್ಟನರ್‌ಗಳಿಂದ ತಮಗೆ ಮಕ್ಕಳಾಗಲಿ ಎಂಬ ಆಕಾಂಕ್ಷೆಯನ್ನು ಹೊಂದಿರುತ್ತಾರೆ. ಆದರೆ ಆತ ಅವಳ ಈ ಪ್ರೀತಿಗೆ ಅನರ್ಹ ಎಂದು ಎಷ್ಟೋ ಪ್ರಕರಣಗಳು ನಮ್ಮ ಅಧ್ಯಯನದಲ್ಲಿ ಸಾಬೀತುಗೊಳಿಸಿವೆ. ಆತ ತನ್ನ ಕೆಲಸ ಮುಗಿಯುವವರೆಗೆ ಅಥವಾ ಮತ್ತೊಬ್ಬಳು ಹುಡುಗಿ ಸಿಗುವವರೆಗೆ ಇವಳೊಂದಿಗೆ ಇರುತ್ತಾನೆ. ಹಾಗೆ ಬಂದವನು ಹೇಗಿರುತ್ತಾನೋ, ಅವನ ಆರೋಗ್ಯದ ಸ್ಥಿತಿ ಏನೋ, ಒಂದೂ ಇವಳಿಗೆ ತಿಳಿದಿರುವುದಿಲ್ಲ.

ಹೀಗೆ ಬರುವ ಪಾರ್ಟನರ್‌ಗಳಿಂದಲೇ ಹುಡುಗಿಯರು ಮೋಸ ಹೋಗಿ ಎಚ್.ಐ.ವಿ.ಯಂತಹ ಗಂಡಾಂತರಕ್ಕೆ ಸಿಲುಕಿ ಹಾಕಿಕೊಳ್ಳುತ್ತಾರೆ.

ಲೈಂಗಿಕತೆ ಅನ್ನುವುದು ಬರೀ ದೈಹಿಕ ಪ್ರಕ್ರಿಯೆ/ಚಟುವಟಿಕೆ ಆಗಿರುವುದಿಲ್ಲ. ಅದು ಮಾನಸಿಕವಾದ ಜೈವಿಕತೆಯಿಂದ ಕೂಡಿದ ಪ್ರಕ್ರಿಯೆಯಾಗಿದೆ ಹಾಗೂ ಪ್ರತಿಯೊಂದು ಜೀವಿಯ ಸಹಜವಾದ ಬಯಕೆ ಕೂಡಾ ಆಗಿರುತ್ತದೆ. ಅಂತಹ ಒಂದು ಸಹಜ ಪ್ರಕ್ರಿಯೆ ಕೆಲವರಿಗೆ ಹಸಿವು ನೀಗಿಸುವ, ಬಡತನಕ್ಕೆ ಪರಿಹಾರ ಒದಗಿಸುವ ಒಂದು ವ್ಯವಹಾರವಾಗಿದೆ. ದೇಹ ಮನಸ್ಸನ್ನು ಘಾಸಿಗೊಳಿಸುವ ಈ ವ್ಯವಹಾರದಲ್ಲಿ ದಿನವೂ ಹತ್ತಾರು ಗಿರಾಕಿಗಳು ಬಂದು ಹೋಗುತ್ತಾರೆ. ಹೀಗೆ ದಿನವೂ ಬರುವ ಗಿರಾಕಿಗಳು ಒಂದು ದಿನ ಬರದೇ ಹೋದರೆ ಈ ಹುಡುಗಿಯರಿಗೆ ಏನನ್ನಿಸುತ್ತದೆ ಎಂದು ನಮ್ಮ ಅಧ್ಯಯನಕ್ಕೊಳಪಡಿಸಿದ ಮಹಿಳೆಯರ ಹತ್ತಿರ ಚರ್ಚಿಸಿದಾಗ ಶೇಕಡಾ ೧೩.೩೩ರಷ್ಟು ಮಹಿಳೆಯರಿಗೆ ಸಮಾಧಾನವಾಗುವುದಿಲ್ಲ. ಅಂದರೆ ಆ ದೇಹ ಲೈಂಗಿಕ ಚಟುವಟಿಕೆಗೆ ಒಗ್ಗಿಕೊಂಡಿರುವುದರಿಂದ ಅದು ಒಂದು ಚಟವಾಗಿ ಕೆಲವರಿಗೆ ಪರಿಣಮಿಸಿರುತ್ತದೆ. ಹಾಗಾಗಿ ಗಿರಾಕಿಗಳು ಬರದೇ ಹೋದರೇ ಅವರಿಗೆ ಸಮಾಧಾನವಾಗುವುದಿಲ್ಲ ಎಂದು ವಿವರಿಸಿದರು. ಇನ್ನು ಶೇಕಡಾ ೧೦ರಷ್ಟು ಮಹಿಳೆಯರಿಗೆ ಬೇಸರವಾಗುತ್ತದೆ ಎಂದು ಹೇಳಿದರು. ಶೇಕಡಾ ೧೦ರಷ್ಟು ಮಹಿಳೆಯರಿಗೆ ತಾವು ಈ ಊರಲ್ಲಿ ಯಾಕಾದರೂ ಇರಬೇಕು ಎಂದು ಅನಿಸುವ ಅಂಶಗಳು ಕಂಡು ಬಂದವು. ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಶೇಕಡಾ ೬೬.೬೭ರಷ್ಟು ಮಹಿಳೆಯರಿಗೆ, ಗಿರಾಕಿಗಳು ಬರದೇ ಹೋದರೆ ನಾಳೆ ತಮ್ಮ ಬದುಕು ಹೇಗೆ, ತಮ್ಮನ್ನು ಅವಲಂಬಿಸಿದವರ ಗತಿ ಏನು, ಎಂಬ ಚಿಂತೆ ಕಾಡಲಾರಂಭಿಸುತ್ತದೆ ಎಂಬುದಾಗಿ ತಿಳಿಸಿದರು.

ವೇಶ್ಯಾವಾಟಿಕೆಯನ್ನು ತಮ್ಮ ಬದುಕಾಗಿಸಿ ಜೀವಿಸುತ್ತಿರುವವರು ಬಹುತೇಕರಿದ್ದಾರೆ. ನಮ್ಮ ಅಧ್ಯಯನಕ್ಕೊಳಪಡಿಸಿದ ಮಹಿಳೆಯರು, ಒಂದು ದಿನ ಗಿರಾಕಿಗಳು ಬರದೇ ಹೋದರೆ ಅವರಿಗೆ ತುಂಬಾನೇ ಚಿಂತೆಯಾಗುತ್ತದೆ ಎಂದು ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ. ಹಾಗಾಗಿ ಪುನರ್ವಸತಿ ಪುನರ್ನೆಲೆ ಎಂಬುದು ಬರೀ ಒಬ್ಬರ ಬದುಕಿನ ಪ್ರಶ್ನೆ ಅಲ್ಲ, ಆ ಒಬ್ಬರ ಹಿಂದೆ ಅದೆಷ್ಟು ಜನ ಹಸಿವಿನಿಂದ ನಿಂತಿರುವರೋ ಗೊತ್ತಿಲ್ಲ. ಅದರಿಂದಾಗಿಯೇ ಗಿರಾಕಿಗಳು ಬರದೆ ಹೋದರೆ ಅವರಿಗೆ ಚಿಂತೆಯಾಗುತ್ತದೆ ಎಂದು ಹೇಳುತ್ತಾರೆ.

ಬದುಕಿಗೆ ಲೈಂಗಿಕ ದಂಧೆಯನ್ನು ಆಧರಿಸಿರುವ ಜನರು ಇರುವಾಗಲೇ, ಇರುವವರನ್ನೇ ಮುಖ್ಯ ಮಾಡಿಕೊಂಡು ಜಾಗತೀಕ ಬಂಡವಾಳವು ಪ್ರವಾಸೋದ್ಯಮದ ನೆಪದಲ್ಲಿ 'ಸೆಕ್ಸ ವರ್ಕರ್ಸ್' ಎನ್ನುವ ಹೊಸ ಪದಗಳ ಮೂಲಕ ಲೈಂಗಿಕ ದಂಧೆಯನ್ನು ಕಾನೂನಾತ್ಮಕಗೊಳಿಸಲು ಒಂದಷ್ಟು ಜನ ಹೋರಾಡುತ್ತಿದ್ದಾರೆ. ಅದೇ ಸಂದರ್ಭದಲ್ಲಿ ಲೈಂಗಿಕ ಕಾರ್ಯಕರ್ತರು ಮತ್ತು ಅವರ ದಂಧೆಯನ್ನು ಕಾನೂನಾತ್ಮಕಗೊಳಿಸಲಾಗದೆಂದು ಪ್ರಗತಿಪರ ಜನರು ಚರ್ಚಿಸುತ್ತಿದ್ದಾರೆ. ಈ ಎರಡೂ ಚರ್ಚೆಯ ದ್ವಂದ್ವದಲ್ಲಿ ಸಹಜ ಲೈಂಗಿಕತೆಯಂತೂ ಅಸಹಜವಾಗಿ ವ್ಯಾಪಾರೀಕರಣವಾಗಿಬಿಟ್ಟಿರುವುದು ಕಂಡುಬರುತ್ತಿದೆ.

ಈ ವ್ಯಾಪಾರೀಕರಣಕ್ಕಾಗಿ ಆ ಮಹಿಳೆಯೇ ಹಕ್ಕುಗಳಿಗಾಗಿ ಪ್ರತಿಪಾದಿಸುತ್ತಿರುವ, ಅವಳನ್ನು ವಸ್ತುವಿನಂತೆ ಖರೀದಿಸುವ ಕೊಳ್ಳುಬಾಕ ಸಂಸ್ಕೃತಿಯೂ ನಮ್ಮ ಮುಂದಿರುತ್ತದೆ. ಈ ದ್ವಂದ್ವಕ್ಕೆ ಕಾರಣವಾಗುತ್ತಿರುವ ಬಾಲೆಯರು ಮತ್ತು ಮಹಿಳೆಯರು ಅದೆಷ್ಟೋ. ಲೈಂಗಿಕ ಜೀತಕ್ಕೆ ಬಲಿಯಾಗಿದ್ದ ಮಹಿಳೆಯರ ರಕ್ಷಣಾ ಕಾರ್ಯ ಹೇಗಿತ್ತು, ಬಾಲೆಯರ ಮನಸ್ಥಿತಿ ಹೇಗಿತ್ತು, ಎಂಬ ವಿಷಯಗಳನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

## ಉಲ್ಲೇಖಿತ ಗ್ರಂಥಗಳು


೧. ಚಂದ್ರಶೇಖರ್ ಟಿ. ಆರ್., (೨೦೧೦), ಹಕ್ಕು–ಹಂಗು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ ಪು. ೧೦೦–೧೦೧

೨. ಪ್ರಶಾಂತ್ ಎಚ್. ಡಿ., (೨೦೦೯), ಶಾಲಾ ಶಿಕ್ಷಣದ ಸಾರ್ವತಿಕರಣ: ದಲಿತ ಮಕ್ಕಳ ಸ್ಥಿತಿ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮೈಸೂರು. ಪು. ೧೩

೩. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೫೬–೭೩

೪. ಗುರುಮೂರ್ತಿ ಕೆ. ಜಿ., (೧೯೯೬), ಧರ್ಮ ಮತ್ತು ರಾಜಕೀಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೨೭೨

೫. ಹೀಗೊಂದು ಪಯಣ: ಮಾಸ್ ಸಂಸ್ಥೆ, ಘಟಪ್ರಭಾ, ಪು. ೨೧–೨೨

೬. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ, ಪು. ೧೬೫–೧೬೬

೭. ಪ್ರಶಾಂತ್ ಎಚ್. ಡಿ., (ಮಾರ್ಚ್, ೨೦೧೬), ಸಂವಾದ, ಮಾಸಿಕ ಪತ್ರಿಕೆ, ಪು. ೧೪

೮. ವಾಸವಿ ಎ. ಆರ್. (೨೦೧೫), ಸಾಮಾಜಿಕ ಆಕಾರರೇಖೆ.ಕನ್ನಡ ಅನುವಾದ, ಪ್ರಶಾಂತ್ ಎಚ್.ಡಿ. ಮತ್ತು ಇತರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು. ೨೧–೨೩

೯. ಪುಟ್ಟಯ್ಯ ಬಿ. ಎಂ. (೨೦೦೮), ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು. ೨೩–೨೪

ಅಧ್ಯಾಯ ನಾಲ್ಕು

# ಲೈಂಗಿಕ ಜೀತದಲ್ಲಿ ಭದ್ರತೆ ಮತ್ತು ರಕ್ಷಣೆ

## ೪.೧ ಪ್ರಸ್ತಾವನೆ

ಸಾಮಾಜಿಕ ಅಭಿವೃದ್ಧಿಯು ಪ್ರತಿಯೊಬ್ಬ ವ್ಯಕ್ತಿ ಸೇರಿದಂತೆ ಜೀವಜಗತ್ತು ಸಹಜವಾಗಿ ಬದುಕಲು ಅವಶ್ಯವಾಗಿ ಬೇಕಾದ ಎಲ್ಲ ಸೌಲಭ್ಯಗಳನ್ನು ಮತ್ತು ರಕ್ಷಣೆಯನ್ನು ಅಲ್ಲಿಯ ಸರ್ಕಾರಗಳು ಒದಗಿಸಬೇಕು ಎಂದು ಹೇಳುತ್ತದೆ. ಅಂದರೆ ಒಂದು ಜೀವ ಬದುಕಿ ಬಾಳಲು ಅಗತ್ಯವಾಗಿ ಬೇಕಾದ ಎಲ್ಲ ಸೌಲಭ್ಯಗಳನ್ನು ಕಲ್ಪಿಸುವುದೇ ಸಾಮಾಜಿಕ ಅಭಿವೃದ್ಧಿ. ಇದು ಮುಖ್ಯವಾಗಿ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಯನ್ನು ಪ್ರತಿಪಾದಿಸುತ್ತದೆ. ರಕ್ಷಣೆ ಅನ್ನುವುದು ನಾಗರಿಕ ಸಮಾಜದಲ್ಲಿ ಸಹಜ ಸ್ಥಿತಿಯಲ್ಲಿ ಒಂದು ರೀತಿಯಾಗಿದ್ದರೆ, ಅಸಹಜ ವರ್ತನೆಗಳನ್ನು ನಿಯಂತ್ರಿಸುವ ಮತ್ತು ಅಸಹಜ ವರ್ತನೆಗಳಿಂದಾಗುವ ಸಾಮಾಜಿಕ ಪರಿಣಾಮಗಳನ್ನು ತಡೆಯುವ ಆಶಯವನ್ನು ಹೊಂದಿರುತ್ತದೆ. ಅಂದರೆ ಸಮಾಜದಲ್ಲಿ ಅಸಹಜ ಬೆಳವಣಿಗೆಗಳು ಆಗದಂತೆ ಅವುಗಳನ್ನು ಕಾನೂನಾತ್ಮಕವಾಗಿ ತಹಬಂದಿಗೆ ತರುವ ಜವಾಬ್ದಾರಿಯೂ ಆಯಾ ಸಮಾಜದ ರಕ್ಷಣಾ ವ್ಯವಸ್ಥೆಗೆ ಸೇರಿರುತ್ತದೆ.

ನಮ್ಮ ಅಧ್ಯಯನದ ಕೇಂದ್ರ ವಿಷಯ ಲೈಂಗಿಕ ದಂಧೆಯಲ್ಲಿರುವವರ ಸಾಮಾಜಿಕ ರಕ್ಷಣೆಯದಾಗಿದೆ. ಅವರ ಆರೋಗ್ಯ, ಅವರ ಮೇಲೆ ನಡೆಯುವ ಹಿಂಸೆ ಇತ್ಯಾದಿ. ಈ ಎಲ್ಲ ಬಗೆಯ ಅಸಹಜ ಕ್ರಿಯೆಗಳಿಗೆ ತಡೆ ನೀಡಲು ಒಂದಷ್ಟು ಕಾನೂನಾತ್ಮಕ ನೀತಿ ನಿಯಮಮಗಳನ್ನು ಈಗಾಗಲೇ ರಚಿಸಿ ಕೊಳ್ಳಲಾಗಿದೆ. ಅವುಗಳಿದ್ದರೂ ಲೈಂಗಿಕ ದಂಧೆಯಲ್ಲಿ ತೊಡಗಿರುವ ಮಹಿಳೆಯರ ಮೇಲೆ ನಡೆದಿರುವ ದೌರ್ಜನ್ಯಗಳನ್ನು ಮೆಟ್ಟಿ ನಿಲ್ಲಲು ಯಾವುದೇ ಸಾಮಾಜಿಕ ಭದ್ರತೆ ಇರುವುದಿಲ್ಲ ಅನ್ನುವುದನ್ನು, ನಮ್ಮ ಅಧ್ಯಯನ ಕಂಡುಕೊಂಡಿದೆ. ಇದನ್ನು ಒಂದಿಷ್ಟು ಸಂಖ್ಯಾತ್ಮಕ ಮತ್ತು ಗುಣಾತ್ಮಕ ಮಾಹಿತಿಗಳ ಮೂಲಕ ಮುಂದೆ ವಿಶ್ಲೇಷಿಸಲಾಗಿದೆ.

## ೪.೨. ರಕ್ಷಣಾ ಅಂಶಗಳು

ಮುಂಬಯಿಯ ಕಾಮಾಟಿಪೂರ ಮತ್ತು ಥಾಣೆಯ ಭೀವಂಡಿಯ ರೆಡ್‌ಲೈಟ್ ಏರಿಯಾಗಳಲ್ಲಿ ಅಧ್ಯಯನಕ್ಕೊಳಪಡಿಸಿದ ಎಲ್ಲ ಮಹಿಳೆಯರೂ ತಮ್ಮ ಅಪ್ರಾಪ್ತ ವಯಸ್ಸಿನಲ್ಲಿಯೇ ಬಂದವರಾಗಿದ್ದರೆಂದು.

ನಮ್ಮ ಅಧ್ಯಯನದ ವಕ್ತೃಗಳ ವೈಯಕ್ತಿಕ ಮಾಹಿತಿಯಿಂದ ಕಂಡು ಬಂದಿದೆ. ಹಾಗೆ ಬಂದವರು ಘರವಾಲಿಗಳ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನ ಮಾಡಿದ್ದರೆ ಅಥವಾ ಇಲ್ಲವೆ ಎಂದು ಅವರೊಂದಿಗೆ ಚರ್ಚಿಸಿದಾಗ, ಒಟ್ಟು ಮಹಿಳೆಯರಲ್ಲಿ ಶೇಕಡಾ ೩.೩೩ರಷ್ಟು ಮಹಿಳೆಯರು ಮಾತ್ರ ಅಲ್ಲಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ್ದರು. ಉಳಿದ ೯೬.೬೭ರಷ್ಟು ಮಹಿಳೆಯರು ತಪ್ಪಿಸಿಕೊಳ್ಳಲು ಪ್ರಯತ್ನಿಸಿರಲಿಲ್ಲ(ಅದರಲ್ಲಿ ಶೇಕಡಾ ೧೦ರಷ್ಟು ಮಹಿಳೆಯರ ತಾಯಂದಿರೇ ಘರವಾಲಿಗಳಾಗಿದ್ದರು. ಹಾಗಾಗಿ ಅವರಿಗೆ ತಪ್ಪಿಸಿಕೊಂಡು ಹೋಗುವ ಅವಶ್ಯಕತೆ ಇರಲಿಲ್ಲ ಎಂಬುದು ಕಂಡುಬರುತ್ತದೆ) ವಿವರವನ್ನು ಕೆಳಗಿನ ವೃತ್ತಚಿತ್ರದಲ್ಲಿ ನೋಡಬಹುದು.

**ವೃತ್ತಚಿತ್ರ ೪.೧: ತಪ್ಪಿಸಿಕೊಳ್ಳಲಾರದ್ದಕ್ಕೆ ಕಾರಣಗಳು**




ತಪ್ಪಿಸಿಕೊಳ್ಳಲು ಪ್ರಯತ್ನಿಸಲಾರದ ಮಹಿಳೆಯರಿಗೆ ಯಾಕೆ ತಪ್ಪಿಸಿಕೊಳ್ಳಲಿಲ್ಲ ಎಂಬುದಕ್ಕೆ ಕೆಳಗಿನ ಕೋಷ್ಟಕದಲ್ಲಿ ಮಹಿಳೆಯರೇ ವಿವರಿಸಿರುವಂತೆ,

**ಕೋಷ್ಟಕ ೪.೧: ತಪ್ಪಿಸಿಕೊಳ್ಳಲಾರದ್ದಕ್ಕೆ ಕಾರಣಗಳು**

| ಅ.ಸಂ. | ತಪ್ಪಿಸಿಕೊಳ್ಳಲಾರದ್ದಕ್ಕೆ ಕಾರಣಗಳು | ಸಂಖ್ಯೆ | ಶೇಕಡಾ |
|---|---|---|---|
| ೧ | ನಾನು ತುಂಬಾ ಚಿಕ್ಕವಳಿದ್ದೆ | ೧ | ೩.೩೩೩ |
| ೨ | ರೂಮಿನಲ್ಲಿ ಕೂಡಿ ಹಾಕಿದ್ದರು | ೧ | ೩.೩೩೩ |
| ೩ | ಘರವಾಲಿ ನನ್ನನ್ನು ಕಾಯುತ್ತಿದ್ದಳು | ೩ | ೧೦ |
| ೪ | ಇಲ್ಲಿಯೇ ಇರುವುದು ಇಷ್ಟವಿತ್ತು | ೭ | ೨೩.೩೩ |
| ೫ | ಅಂಜಿಕೆ | ೫ | ೧೬.೬೭ |
| ೬ | ನನ್ನ ಮನೆಯವರೆ ಇಲ್ಲಿಗೆ ತಂದು ಬಿಟ್ಟು ಹೋಗಿದ್ದರು | ೯ | ೩೦ |
| ೭ | ಇತರೆ (ಹೆಸರಿಸಿ) | ೧ | ೩.೩೩೩ |
| ೮ | ಅನ್ವಯಿಸುವುದಿಲ್ಲ | ೩ | ೧೦ |
| | **ಒಟ್ಟು** | ೩೦ | ೧೦೦ |

ಕ್ಷೇತ್ರಕಾರ್ಯದಿಂದ ಪಡೆದ ಮಾಹಿತಿ

ನಮ್ಮ ಅಧ್ಯಯನಕ್ಕೆ ಒಳಗಾದ ಮಹಿಳೆಯರಲ್ಲಿ ಶೇಕಡಾ ೩೦ರಷ್ಟು ಮಹಿಳೆಯರನ್ನು, ಅವರ ಮನೆಯವರೇ ದೇವದಾಸಿ ಮಾಡಿ ತಮಗೆ ಪರಿಚಯವಿರುವ, ಸಂಬಂಧಿಕರಿರುವ ಘರವಾಲಿಗಳ ಕಡೆಗೆ ಇವರನ್ನು ಲೈಂಗಿಕ ಜೀತಕ್ಕಾಗಿ ಇಟ್ಟು, ಸಾಲ ತೆಗೆದುಕೊಂಡು ಹೋಗಿರುತ್ತಿದ್ದರು. ಈ ಬಾಲೆಯರು ತಮ್ಮ ಮನೆಗಳಲ್ಲಿ, ಮನೆಯ ಸುತ್ತಮುತ್ತ, ಸಂಬಂಧಿಕರ ಮನೆಗಳಲ್ಲಿಯ ಹುಡುಗಿಯರು ಹೆಣ್ಣುಮಕ್ಕಳನ್ನು ಹೀಗೆ ಲೈಂಗಿಕ ಜೀತಕ್ಕೆ ಇರುವುದನ್ನು ನೋಡಿದ್ದರು. ಹಾಗಾಗಿ ಇವರು ದೈಹಿಕವಾಗಿ ಪಕ್ವವಿಲ್ಲದಿದ್ದರೂ ಸಹ ಮಾನಸಿಕವಾಗಿ ತಯಾರಾಗಿಯೆ ಇದ್ದರು. ಹಾಗಾಗಿ ತಪ್ಪಿಸಿಕೊಂಡು ಹೋಗುವ ಪ್ರಯತ್ನ ಮಾಡಲಿಲ್ಲ. ಶೇಕಡಾ ೨೩.೩೩ರಷ್ಟು ಮಹಿಳೆಯರಿಗೆ ಅವರ ಮನೆಗಳಲ್ಲಿನ ಹಸಿವು, ಬಡತನ, ಸಾಲಗಾರರ ಕಾಟಗಳಿಂದ ಮುಕ್ತಿ ಸಿಕ್ಕಂತಾಗಿತ್ತು. ಅಲ್ಲದೇ ಬಾಲ್ಯವಿವಾಹಕ್ಕೊಳಗಾಗಿ, ಆ ಜೀವನಕ್ಕೆ ಹೊಂದಿಕೊಳ್ಳಲಾಗದೇ, ತವರು ಮನೆ ಸೇರಿದವರಿಗೆ, ಮನೆಯ ಸದಸ್ಯರಿಂದ ತಿರಸ್ಕಾರ, ಸುತ್ತ ಮುತ್ತಲಿನ ಪರಿಸರದಲ್ಲಿ ಗಂಡ ಬಿಟ್ಟವಳೆಂಬ ಅವಹೇಳನಗಳು ಮತ್ತು ಅಲ್ಲಿಯ ಬಡತನದ ಸ್ಥಿತಿಯೂ ಸಹ ಕೆಲವರನ್ನು ಲೈಂಗಿಕ ದಂಧೆಗೆ ಹೋಗಲು ಪ್ರೇರೇಪಿಸಿದ್ದವು. ಇವರ ಸಾಮಾಜಿಕ, ಆರ್ಥಿಕ ಮತ್ತು ಮಾನಸಿಕ ಹಿನ್ನೆಲೆಯು ವೇಶ್ಯಾಗೃಹಗಳನ್ನು ಒಪ್ಪಿಕೊಳ್ಳುವಂತೆ ಮಾಡಿದ್ದವು. ಹಾಗಾಗಿ ಇವರು ತಮಗೆ ವೇಶ್ಯಾಗೃಹದಲ್ಲಿರುವುದು ಇಷ್ಟವಿತ್ತು ಎಂದು ಹೇಳಿರುವುದು ಕಂಡುಬಂದಿದೆ.

ಅತ್ಯಂತ ಚಿಕ್ಕ ವಯಸ್ಸಿನ, ಏನೂ ಅರ್ಥವಾಗದ ಶೇಕಡಾ ೧೬.೬೭ರಷ್ಟು ಹುಡುಗಿಯರಿಗೆ, ಘರವಾಲಿ ತಮ್ಮನ್ನು ಏನಾದರೂ ಮಾಡಿಯಾರೆಂಬ ಅಂಜಿಕೆ ಅವರಿಗೆ ಇತ್ತು. ಇವರ ನಡುವೆ ತಲೆ ಹಿಡುಕರಿಂದ, ದೇವದಾಸಿ ಮಹಿಳೆಯರಿಂದ ಹುಡುಗಿಯರ ಮನೆಯವರಿಗೆ ಗೊತ್ತಾಗದಂತೆ, ಸಾಗಾಣಿಕೆ ಮಾಡಲ್ಪಟ್ಟ ಶೇಕಡಾ ೧೦ರಷ್ಟು ಮಹಿಳೆಯರನ್ನು ಘರವಾಲಿ ಪ್ರತಿನಿಮಿಷವೂ ಕಾಯುತಿದ್ದಳು. ಏಕೆಂದರೆ, ಘರವಾಲಿಯು, ಮಾರಿ ಹೋದವರಿಗೆ ಹಣ ಕೊಟ್ಟು ಇವರನ್ನು ಖರೀದಿ ಮಾಡಿದ್ದಳು. ಒಂದು ವೇಳೆ ಇವರು ತಪ್ಪಿಸಿಕೊಂಡು ಹೋದರೆ, ಪೊಲೀಸರು ಹಿಡಿದುಕೊಂಡು ಹೋದರೆ, ತಾನು ಹಾಕಿದ್ದ ಹಣ ಮರಳಿ ಬರುವುದಿಲ್ಲವೆಂಬುದಕ್ಕಾಗಿ, ಅಂತ ಹುಡುಗಿಯರನ್ನು ಘರವಾಲಿ ತಾನೇ ಕಾಯುತ್ತಿದ್ದಳು. ದಂಧೆ ಮಾಡಲು ತಕರಾರು ಮಾಡುತ್ತಿದ್ದ ಶೇಕಡಾ ೩.೩೩ರಷ್ಟು ಮಹಿಳೆಯರನ್ನು ರೂಮಿನಲ್ಲಿ ಕೂಡಿ ಹಾಕಲಾಗಿತ್ತು ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರು ತುಂಬಾ ಚಿಕ್ಕವರಿದ್ದು ಅವರಿಗೆ ಯಾಕೆ ತಪ್ಪಿಸಿಕೊಳ್ಳಬೇಕು ಎಂಬುದೇ ಗೊತ್ತಿರಲಿಲ್ಲ. ಉಳಿದ ಶೇಕಡಾ ೧೦ರಷ್ಟು ಮಹಿಳೆಯರ ತಾಯಂದಿರೇ ಘರವಾಲಿಗಳಗಿದ್ದರು ಅವರ ಸ್ವಂತ ಮನೆಗಳು ಅಲ್ಲಿದ್ದವು. ಹಾಗಾಗಿ ತಪ್ಪಿಸಿಕೊಂಡು ಹೋಗುವ ಪ್ರಮೇಯವೇ ಇರಲಿಲ್ಲ. ಆದರೆ ಇವರಲ್ಲಿ ಶೇಕಡಾ ೩.೩೩ರಷ್ಟು ಮಹಿಳೆಯರು ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದವರೂ ಇದ್ದಾರೆ.

ನಮ್ಮ ಅಧ್ಯಯನಕ್ಕೆ ಒಳಪಡಿಸಿದ ೩೦ ಮಹಿಳೆಯರಲ್ಲಿ ಎಲ್ಲರೂ ೧೯೮೬ನೇ ಇಸ್ವಿಗಿಂತ ಮೊದಲೇ ವೇಶ್ಯಾಗೃಹಕ್ಕೆ ಸಾಗಿಸಲ್ಪಟ್ಟವರಾಗಿದ್ದರು. ಆ ಸಂದರ್ಭದಲ್ಲಿ ನಮ್ಮ ಅಧ್ಯಯನಕ್ಕೆ ಒಳಪಟ್ಟವರಲ್ಲಿ ಪ್ರಸ್ತುತ (೪೫–೪೬ ವರ್ಷ) ಅತೀ ಹೆಚ್ಚಿನ ವಯೋಮಾನದ, ಶೇಕಡಾ ೧೩.೩೩ರಷ್ಟು ಮಹಿಳೆಯರು ಅಪ್ರಾಪ್ತ ಬಾಲೆಯಾರಾಗಿದ್ದರು. ಉಳಿದವರೆಲ್ಲ ಅವರ ನಂತರ. ಕೆಲವರು ಈಗ ೮–೧೦ ವರ್ಷಗಳ

ಹಿಂದೆ ಸಾಗಾಣಿಕೆಯಾದವರು ಇರುವುದು ಕಂಡುಬಂದಿದೆ. ಈ ಮಹಿಳೆಯರನ್ನು ರಕ್ಷಿಸುವ ಹೊಣೆಯು ಭಾರತದ ಸಂವಿಧಾನದ ಆಶಯದಂತೆ ಸರ್ಕಾರದ ಕರ್ತವ್ಯವಾಗಿತ್ತು. ಇದಕ್ಕಾಗಿಯೇ, ೧೯೨೯ರಲ್ಲಿ ಜಾರಿಗೊಂಡು ಕಾಲಕಾಲಕ್ಕೆ ಅಧಿನಿಯಮಗೊಳ್ಳುತ್ತಾ ಬಂದ ಬಾಲ್ಯ ವಿವಾಹ ನಿಷೇಧ ಕಾಯಿದೆ, ೧೯೫೬ರಲ್ಲಿ ಜಾರಿಗೆಗೊಂಡ ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕಾ ತಡೆ ಕಾಯಿದೆ, ೧೯೮೨ರಲ್ಲಿ ಜಾರಿಗೊಂಡ ಕರ್ನಾಟಕ ದೇವದಾಸಿ ಸಮರ್ಪಣಾ ನಿಷೇಧ ಕಾಯಿದೆ, ೧೯೮೬ರಲ್ಲಿ ಜಾರಿಯಾದ ಬಾಲ ಕಾರ್ಮಿಕ ನಿಷೇಧ ಕಾಯಿದೆ ಮತ್ತು ೧೯೮೬ರಲ್ಲಿ ಜಾರಿಗೆ ಬಂದಿದ್ದ ಬಾಲ ನ್ಯಾಯ ಕಾಯಿದೆಗಳು ಏನು ಮಾಡಿದವು ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ಈ ದಿಶೆಯಲ್ಲಿ ಕೆಲಸ ಮಾಡಬೇಕಾಗಿದ್ದ ಯಾವ ಒಂದು ಇಲಾಖೆಯೂ ಜವಾಬ್ದಾರಿಯಿಂದ ನಡೆದುಕೊಳ್ಳಲಿಲ್ಲ. ಪ್ರತಿಯೊಂದು ಮಗುವಿಗೂ ಅವರ ೦-೩, ೩-೬, ಮತ್ತು ೬ ರಿಂದ ೧೪ ವರ್ಷಗಳವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕೊಡಬೇಕು ಎಂದು ಸಂವಿಧಾನದ ೪೫ನೇ ಕಲಂ ಹೇಳುತ್ತದೆ. ಸಂವಿಧಾನವನ್ನು ಗೌರವಿಸುವುದನ್ನು ಕಲಿಸಬೇಕಾದ ಶಾಲೆಗಳಾದರೂ ಸಂವಿಧಾನದ ಆಶಯಕ್ಕೆ ಬದ್ಧರಾಗಿದ್ದಿದ್ದರೆ, ಶಾಲೆಯಲ್ಲಿ ಆಡಿಕೊಂಡಿರಬೇಕಾಗಿದ್ದ ಮಗು, ಹೀಗೆ ಎಲ್ಲೋ ಕಳೆದು ಹೋಗುವ ಸಂದರ್ಭ ನಿರ್ಮಾಣವಾಗುತ್ತಿರಲಿಲ್ಲ. ಹುಟ್ಟಿದೂರಲ್ಲಿ ರಕ್ಷಣೆಯಾಗದಿದ್ದ ಮಗುವನ್ನು, ಸಾಗಾಣಿಕೆಯಾದನಂತರವಾದರೂ ರಕ್ಷಿಸಬಹುದಿತ್ತು. ಆದರೂ ಅಧ್ಯಯನಕ್ಕೊಳಪಟ್ಟ ಈ ಮಹಿಳೆಯರು ತಮ್ಮ ಬಾಲ್ಯದಲ್ಲಿ ಯಾಕೆ ರಕ್ಷಣೆಯಾಗಲಿಲ್ಲ ಎಂಬುದನ್ನು ನಮ್ಮ ಅಧ್ಯಯನವು ಹುಡುಕಲು ಪ್ರಯತ್ನಿಸಿದಾಗ, ಅದೇ ಮಹಿಳೆಯರೇ ನೀಡಿದ ಮಾಹಿತಿ ಹೀಗಿದೆ.

"ಲೈಂಗಿಕ ದಂಧೆ ನಡೆಯುವ ಗಲ್ಲಿಗಳಲ್ಲಿ ಬಹಳಷ್ಟು ಪೊಲೀಸರು ಇರುತ್ತಿದ್ದರು. ಆಗಾಗ ದಾಡ(ರೇಡ್)ಗಳೂ ಬೀಳುತ್ತಿದ್ದವು. ಆದರೆ ಅವರಿಗೆ ನಾವು ಸಿಗಲಿಲ್ಲ. ಸಿಕ್ಕರೂ ಹಿಡಿದಿರಲಿಲ್ಲ" ಎಂದು ಶೇಕಡಾ ೬೬.೬೬ರಷ್ಟು ಮಹಿಳೆಯರು ಹೇಳುತ್ತಾರೆ. ಮತ್ತು ನಮ್ಮನ್ನು ಹಿಡಿದಿದ್ದರು ಎಂದು ಶೇಕಡಾ ೧೦ರಷ್ಟು ಮಹಿಳೆಯರು ಹೇಳುತ್ತಾರೆ. ಅದನ್ನು ಕೆಳಗೆ ನೀಡಿರುವ ವೃತ್ತಚಿತ್ರದ ಮೂಲಕ ಗಮನಿಸಬಹುದು.

**ವೃತ್ತಚಿತ್ರ ೪.೨: ನಿಮ್ಮನ್ನು ಪೊಲೀಸರು ಹಿಡಿದಿದ್ದರೇ?**



ದಂಧೆಯ ಗಲ್ಲಿಯಲ್ಲಿನ ಹುಡುಗಿಯರು "ಮುಂಬಯಿ ಲೋಕಲ್ ಪೋಲಿಸರ ರೇಡ್ ಬಿದ್ದರೆ, ನಮಗೆ ಗೊತ್ತಾಗಿ ಬಿಡುತ್ತದೆ. ಅವರಲ್ಲಿರುವ ಪೋಲೀಸರೇ ನಮ್ಮ ಘರವಾಲಿಗಳಿಗೆ ಪೋನ್ ಮಾಡಿ ತಿಳಿಸಿರುತ್ತಾರೆ. ಆಗ ನಾವು ಸಿನೇಮಾ ಟಾಕೀಸಿಗೋ ಅಥವಾ ಗಲ್ಲಿಗಳ ಸಂಧಿಯಲ್ಲಿಯೋ ಮತ್ತೆಲ್ಲಾದರೂ ರಕ್ಷಣೆ ಸಿಗುವ ಜಾಗಕ್ಕೆ ಓಡಿ ಹೋಗಿ ಮರೆಯಾಗಿರುತ್ತೇವೆ. ಆದರೆ ಮೇಲಿನ ರೇಡ್(ಮೇಲಿನ ಅಧಿಕಾರಿಗಳು ನಡೆಸುವ) ಬೀಳುವುದಿದ್ದರೆ ಗೊತ್ತಾಗುವುದಿಲ್ಲ. ಆಗ ಬಹಳಷ್ಟು ಹುಡುಗಿಯರನ್ನು ಜೈಲಿಗೆ ಕರೆದೊಯ್ಯುತ್ತಾರೆ. ಆದರೂ ಸಹ ಘರವಾಲಿಗಳು ಹುಡುಗಿಯರನ್ನು ಮುಚ್ಚಿಡಲು ಬೇರೆ ಬೇರೆ ರೀತಿಯ ವ್ಯವಸ್ಥೆಗಳನ್ನು ಮಾಡಿರುತ್ತಾರೆ" ಎಂದು ಹೇಳುತ್ತಾರೆ.

ಪೊಲೀಸರಿಂದ ಬಂಧಿಸಲ್ಪಟ್ಟಿದ್ದ ಶೇಕಡಾ ೩೩.೩೩ರಷ್ಟು ಹುಡುಗಿಯರಲ್ಲಿ ಶೇಕಡಾ ೧೩.೩ರಷ್ಟು ಹುಡುಗಿಯರು ಒಂದು ಸಾರಿ, ಶೇಕಡಾ ೧೩.೩೩ರಷ್ಟು ಮಹಿಳೆಯರನ್ನು ಮೂರಕ್ಕಿಂತ ಹೆಚ್ಚು ಸಾರೆ, ಶೇಕಡಾ ೩.೩೩ರಷ್ಟು ಮಹಿಳೆಯರನ್ನು ಎರಡು ಸಾರಿ ಮತ್ತು ಶೇಕಡಾ ೩.೩೩ರಷ್ಟು ಮಹಿಳೆಯರನ್ನು ಮೂರು ಸಾರಿ ಬಂಧಿಸಿದ್ದರು ಎಂಬ ಅಂಶಗಳು ಕಂಡು ಬರುತ್ತದೆ. ಈ ವಿವರನ್ನು ಕೆಳಗಿನ ಗ್ರಾಫ್ ಮೂಲಕ ಗಮನಿಸಬಹುದು.

**ರೇಖಾಚಿತ್ರ ೪.೧: ಪೊಲೀಸರು ನಿಮ್ಮನ್ನು ಎಷ್ಟು ಸಾರಿ ಬಂಧಿಸಿದರು**




ಹೀಗೆ ಬಂಧಿಸಿದಂತ ಬಾಲೆಯರಲ್ಲಿ ಶೇಕಡಾ ೨೬.೬೭ರಷ್ಟು ಮಹಿಳೆಯರನ್ನು ಪೋಲೀಸರು ಅಲ್ಲಿಯೇ ಬಿಟ್ಟು ಬಿಟ್ಟಿದ್ದರು. ಉಳಿದ ಶೇಕಡಾ ೬.೬೭ರಷ್ಟು ಮಹಿಳೆಯರನ್ನು ಬಂಧಿಸಿ ಪ್ರಕರಣ ದಾಖಲು ಮಾಡಿದ್ದು ತಿಳಿದು ಬರುತ್ತದೆ. "ಪೋಲೀಸರಿಗೆ ಪ್ರತಿ ತಿಂಗಳು ಘರವಾಲಿಗಳು ಹಫ್ತಾ ಕೊಡುತ್ತಿದ್ದರು(ಈಗಲೂ ಕೊಡುತ್ತಾರೆ). ಹಾಗಾಗಿ ಪೋಲೀಸರಿಗೆ ಸಿಕ್ಕರೂ ಕೂಡ ಕೇಸ್ ಫೈಲ್ ಆಗುತ್ತಿರಲಿಲ್ಲ. ದಂಡ ಕಟ್ಟಿಸಿಕೊಂಡು ಬಿಟ್ಟು ಬಿಡುತ್ತಿದ್ದರು" ಎಂದು ಮಹಿಳೆಯರು ಹೇಳುತ್ತಾರೆ. ಒಬ್ಬಳು ಹುಡುಗಿಯಂತೂ ತಾನು ೧೦-೨೦ ಸಾರಿ ಸಿಕ್ಕಿರುವ ಕುರಿತು ಹೇಳುತ್ತಾಳೆ. ಮತ್ತೊಬ್ಬಳು ಯುವತಿ ೭-೮ ಸಾರಿ ಸಿಕ್ಕ ಕುರಿತು ಮತ್ತು ತನ್ನೊಡನೆ ನಡೆದ ಅನ್ಯಾಯದ ಕುರಿತು ಈ ಕೆಳಗಿನಂತೆ

ಮಾತನಾಡುತ್ತಾಳೆ. "ಎಲ್ಲರೂ ರಕ್ಷಿಸುವ ನೆಪದಲ್ಲಿ ಹಿಡಿಯಲ್ಪಟ್ಟಿದ್ದರೆ, ನನಗೆ ಆ ಜಾಗದಲ್ಲಿ ಇರುವುದು ಬೇಡವಾಗಿ, ಹೇಗ್ಹೇಗೋ ತಪ್ಪಿಸಿಕೊಂಡು ಹೋಗುತ್ತಿದ್ದೆ. ಆದರೆ ಪ್ರತಿ ಸಾರಿ ತಪ್ಪಿಸಿಕೊಂಡಾಗಲೂ ನನ್ನನ್ನು ಪೋಲೀಸರೇ ಹಿಡಿಯುತ್ತಿದ್ದರು. ಅವರು ಕರೆ ತಂದು ಮತ್ತೆ ಅದೇ ಘರವಾಲಿಯ ಮನೆಯಲ್ಲಿ ಒಪ್ಪಿಸುತ್ತಿದ್ದರು. ಆ ರೀತಿ ವಾಪಸ್ಸು ಬಂದಾಗಲೆಲ್ಲ ನನಗೆ ತುಂಬಾ ಹೊಡೆಯುತ್ತಿದ್ದರು. ಸಾಯಿಸುವ ಬೆದರಿಕೆ ಹಾಕುತ್ತಿದ್ದರು. ನನ್ನನ್ನು ಹಿಡಿದು ತರುತ್ತಿದ್ದ ದೊಡ್ಡ ಪೋಲಿಸ್ ಅಧಿಕಾರಿಯು ನನ್ನ ಘರವಾಲಿಯ ಜೊತೆಗೆ ಪರಮನೆಂಟಾದ ಪಾರ್ಟನರ್ ಆಗಿ ಇದ್ದ. ಹಾಗಾಗಿ ನಾನು ತಪ್ಪಿಸಿಕೊಂಡಾಗಲೆಲ್ಲ ಅವನಿಗೆ ಸುದ್ದಿ ಮುಟ್ಟುತ್ತಿತ್ತು. ಆತನ ಕೆಳಗಿನ ಪೊಲೀಸರ ಕೈಗೆ ನಾನು ಸಿಕ್ಕು ಬೀಳುತ್ತಿದ್ದೆ. ಮುಂದೆ ಇದು ಅಸಾಧ್ಯವಾದ ಕೆಲಸವೆಂದು ಅವರ ಜೊತೆಗೇ ಹೊಂದಿಕೊಂಡು ಹೋಗುವುದನ್ನು ಕಲಿತೆ" ಎಂದು ಹೇಳುತ್ತಾಳೆ.

ಯಾವ ಕಾನೂನುಗಳು, ಯಾವ ಕಾನೂನು ಪರಿಪಾಲಕರು ಶೋಷಿತರನ್ನು ರಕ್ಷಿಸಬೇಕಾಗಿತ್ತೋ ಅವರೆ ಶೋಷಕರೊಂದಿಗೆ ಕೈ ಜೋಡಿಸಿದಾಗ ಅಮಾಯಕರು ಉಳಿಯುವುದು ಹೇಗೆ? ಬದುಕುವುದು ಹೇಗೆ? ಈ ಕುರಿತು ಅಧ್ಯಯನಕ್ಕೆ ಒಳಪಟ್ಟ ಕೆಲವು ಮಹಿಳೆಯರು "ಪೋಲೀಸರು ಘರವಾಲಿಗಳ ಜೋಡಿ ಒಂದಾಗಿರ್ತಾರ. ಇನ್ನೇನ ಅವರು ನಮ್ಮನ್ನ ರಕ್ಷಣೆ ಮಾಡ್ತಾರ. ಗಲ್ಲ್ಯಾಗ ಒಂದು ಸಾರಿ ಬಂದ್ರ ಮಕ್ಕಳನ್ನಂಗಿಲ್ಲ. ಮುದುಕರನ್ನಂಗಿಲ್ಲ. ಗಾಡಿ ತುಂಬಿಕೊಂಡು ಹೋಕ್ಕಾರ. ದಂಡ ಕಟ್ಟಿಸಿಕೊಂಡು ಬಿಡ್ತಾರ. ಹಫ್ತಾ ಕೊಡೋ ಘರವಾಲಿಗಳ ಹುಡುಗಿಯರನ್ನು ಅಲ್ಲಲ್ಲಿಯೇ ಬಿಟ್ಟು ಹೋಗಿರ್ತಾರ. ಅವರ್ನ ಕಛೇರಿ ತನಕ ಒಯ್ಯಂಗೇ ಇಲ್ಲ" ಎಂದು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ.

ಈ ಎಲ್ಲ ಪ್ರಹಸನಗಳ ಮಧ್ಯ, ಬಂದಿಸಲಾಗಿದ್ದ ಒಟ್ಟು ಮಹಿಳೆಯರಲ್ಲಿ ಶೇಕಡಾ ೬.೬೬ರಷ್ಟು ಮಹಿಳೆಯರ ಮೇಲೆ ಪ್ರಕರಣ ದಾಖಲಿಸಲಾಗಿತ್ತು ಎಂದು ಕಂಡು ಬಂದ ಪ್ರಕರಣಗಳನ್ನು ಬಾಲ ನ್ಯಾಯ ಕಾಯಿದೆಯ ಪ್ರಕಾರ ಸರಕಾರಿ ಬಾಲಕಿಯರ ಬಾಲ ಮಂದಿರದಲ್ಲಿ ಇಟ್ಟಿದ್ದರು ಎಂಬುದನ್ನು ಮಹಿಳೆಯರು ತಿಳಿಸುತ್ತಾರೆ. ಅಲ್ಲಿ ಇವರು ಎಷ್ಟು ದಿನ ಇದ್ದರು, ಏನು ಮಾಡುತ್ತಿದ್ದರು ಎಂದು ಚರ್ಚಿಸಿದಾಗ, ಶೇಕಡಾ ೩.೩೩ರಷ್ಟು ಮಹಿಳೆಯರು ಶಾಲೆಗೆ ಹೋಗುತ್ತಿದ್ದರು ಮತ್ತು ೩.೩೩ರಷ್ಟು ಮಹಿಳೆಯರು ಅಲ್ಲಿಯೇ ಕಸ ಗುಡಿಸುವುದು, ನೀರು ತುಂಬುವುದು, ನೆಲ ಒರೆಸುವ ಕೆಲಸಗಳನ್ನು ಮಾಡುತ್ತಿದ್ದರು ಎಂದು ಅಧ್ಯಯನಕ್ಕೊಳಪಟ್ಟ ಮಹಿಳೆಯರು ತಿಳಿಸುತ್ತಾರೆ. ಇದರ ಜೊತೆಗೆ ಬೆಳಗಿನ ಹೊತ್ತು ಪ್ರಾರ್ಥನೆ ಮಾಡುವುದನ್ನೂ ಹೇಳಿಕೊಡುತ್ತಿದ್ದರು ಎಂದು ನೆನಪಿಸಿಕೊಳ್ಳುತ್ತಾರೆ.

ಸರ್ಕಾರದವರು ನಿಮ್ಮನ್ನು ರಕ್ಷಿಸಿ ಒಂದು ಒಳ್ಳೆಯ ವಾತಾವರಣದಲ್ಲಿ ನೀವು ಬೆಳೆಯಲಿ ಎಂದು ವ್ಯವಸ್ಥೆ ಮಾಡಿದ್ದರು. ಆದರೆ ನೀವು ಇನ್ನೂ ಇದೇ ದಂಧೆಯ ಮನೆಗಳಲ್ಲಿ ಇದ್ದೀರಿ. ಯಾಕೆ ನಿಮಗೆ ರಕ್ಷಣೆ ಮಾಡಿದ್ದು ಉಪಯೋಗವಾಗಲಿಲ್ಲವೇ? ಎಂದು ಕೇಳಿದಾಗ, ಅವರಲ್ಲಿ ಒಬ್ಬಳು, "ನನ್ನನ್ನು ಪೋಲೀಸರು ಹಿಡಿದು ಚಿಲ್ಡರ್ಸ್ ಹೋಮ್(ಚಿಲ್ಡ್ರನ್ಸ್ ಹೋಮ್)ನಲ್ಲಿ ಇಟ್ಟಾಗ ನನಗೆ ೧೦ ವರ್ಷ. ಅಲ್ಲಿ ಟೀಚರು ಹೇಳಿದ ಕೆಲಸ ಮಾಡುತ್ತಾ ಆಟ ಆಡಿಕೊಂಡು ಇರುತ್ತಿದ್ದೆ. ಆದರೆ ನನ್ನನ್ನು

ಇಟ್ಟುಕೊಂಡಿದ್ದ ಘರವಾಲಿ ಸ್ವಲ್ಪ ದಿನದೊಳಗ ಅಲ್ಲಿಂದ ಬಿಡಿಸಿಕೊಂಡು ಬಂದಳು. ಬಿಡಿಸಿಕೊಂಡು ಬರಲು ಅವರಿಗೆ ೫೦೦ ರೂಪಾಯಿ ಕೊಟ್ಟಿದ್ದೇನೆಂದು, ನನ್ನ ಮೇಲೆ ಸಾಲ ಹೊರೆಸಿದ್ದಳು". ಎಂದು ಹೇಳುತ್ತಾಳೆ. ಇನ್ನೊಬ್ಬಳು ಯುವತಿ "ನಮ್ಮವ್ವ ಕಾಮಾಟಿಪೂರದಲ್ಲಿ ಬಾಡಿಗಿ ಮನಿ ಹಿಡದು ಹುಡುಗ್ಯಾರ್ನ ಇಟ್ಟುಕೊಂಡು, ತಾನೂ ನಿಂತು ದಂಧೆ ಮಾಡ್ತಿದ್ದಳು. ಆಕೀ ಜೋಡ ನಮ್ಮ ಅಕ್ಕನೂ ದಂಧೆ ಮಾಡ್ತಿದ್ದಳು. ನಾನು ಊರಾಗ ಸಾಲಿಗೆ ಹೋಗ್ತಿದ್ದೆ. ಸಾಲ್ಯಾಗ ಮಾಸ್ತರು ನಾವು ಎಸ್.ಸಿ ಹುಡುಗರ ಅಂತ ಸಾಲ್ಯಾಗ ಕೆಲಸಾ ಬಾಳ ಹಚ್ತಿದ್ರು, ಹಂಗಾಗಿ ನಾನು ಸಾಲೀಗೆ ಹೋಗ್ತ, ಹಂಗ ಊರಾಗ ತಿರಗ್ತಿದ್ದೆ. ಅದಕ್ಕ ನಮ್ಮವ್ವ ಇಲ್ಲೀಗೆ ನನ್ನ ಕರ್‍ಕೊಂಡು ಬಂದಿದ್ಳು. ಆದ್ರ ನಾನು ದಂಧೆ ಮಾಡ್ತಿರಲಿಲ್ಲ. ಆದ್ರ ಅವರ ಜೋಡಿ ಇರ್‍ತಿದ್ದೆ. ಒಂದು ಸಾರಿ ನಮ್ಮವ್ವ ಎಲ್ಲೋ ಹೊರಗ ಹೋದಾಗ, ನಾವಿರುವ ಬಿಲ್ಡಿಂಗ್ ಮೇಲೆ ದಾಡ ಬಿದ್ದಿತ್ತು. ಆ ಮನೆಯ ಹುಡುಗಿಯರು ನನ್ನನ್ನು ಬಾತ್ರೂಮಿನಲ್ಲಿ ಮುಚ್ಚಿಟ್ಟಿದ್ದರು. ಆದರೆ ಪೊಲೀಸರು ನನ್ನನ್ನು ಹುಡುಕಿ ಕರ್‍ಕೊಂಡು ಹೋಗಿದ್ದರು. ಆಮ್ಯಾಲೆ ಚಿಲ್ಲರ್ಸ(ಚಿಲ್ಡ್ರನ್ಸ್) ಹೋಮ್ನ್ಯಾಗ ಇಟ್ಟಿದ್ದರು. 'ಅಲ್ಲಿ ನಾನು ತುಂಬಾ ಖುಷಿಯಿಂದ ಇದ್ದೆ. ಮೊದ ಮೊದಲು ಹೊಂದ್ಕೊಳ್ಳೋದು ತ್ರಾಸ ಆಕ್ಕಿತ್ತು. ಆದ್ರ ಅಲ್ಲಿ ನನ್ನಂತವರು ಇನ್ನೂ ಕೆಲವು ಮಕ್ಕಳಿದ್ದರು. ಅವರ ಕೂಡ ನನ್ನನ್ನೂ ಶಾಲೆಗೆ ಕಳಿಸುತ್ತಿದ್ದರು. ಶಾಲೇನೂ ಚುಲೋ ಇತ್ತು. ಟೀಚರು ಬಾಳ ಪ್ರೀತಿಸುತ್ತಿದ್ದರು. ಹಳೆಯ ಶಾಲೆಯಂತೆ ಕೆಲಸ ಹಚ್ಚುತ್ತಿರಲಿಲ್ಲ. ದಿನಾ ಹೋದಂಗ, ನನಗೆ ಅಲ್ಲಿರದ ಚುಲೋ ಅನಿಸಿತ್ತು. ಆದ್ರ ನಮ್ಮವ್ವ ನನ್ನನ್ನ ಅಲ್ಲಿರಾಕ ಬಿಡಲಿಲ್ಲ. ವಕೀಲರನ್ನು ಇಟ್ಟು ನಾನು ದಂಧೆ ಮಾಡುತ್ತಿರಲಿಲ್ಲ ಎಂದು ಸಾಬೀತು ಮಾಡಿ ಹೊರಗೆ ಕರೆದುಕೊಂಡು ಬಂದಳು. ಅಲ್ಲಿ ಚಿಲ್ಲರ್ಸ್ ಹೋಮ್(ಚಿಲ್ಡ್ರನ್ಸ್ ಹೋಮ್)ನಲ್ಲಿ ನಮ್ಮವ್ವ ನನ್ನನ್ನು ಭೆಟ್ಟ್ಯಾಗಾಕ ಬಂದ್ರ, ನನಗೆ ಇವರು ಸೀರಿ ಉಡಿಸಿ ಅಪರಾಧಿಯಂತೆ ಕರ್‍ಕೊಂಡು ಬರ್‍ತಿದ್ದರು. ಇದರಿಂದ ನಮ್ಮವ್ವನಿಗೆ ಜೈಲಿನಲ್ಲಿ ಇಟ್ಟು ತನ್ನ ಮಗಳ ಜೀವನಾ ಹಾಳು ಮಾಡ್ತಾರೆಂಬ ಕಲ್ಪನಾ ಬಂದಿತ್ತು. ಆದರೆ ಒಳಗ ಹಂಗ ಇರ್‍ಲಿಲ್ಲ. ಆ ಸಂಸ್ಥೆಯವರು ನಮ್ಮವ್ವಾಗೆ ತಿಳಿಸಿ ಹೇಳಬೇಕಿತ್ತು. ನಾನು ಒಂದು ವೇಳೆ ಅಲ್ಲಿಯೇ ಇದ್ದಿದ್ರ, ಇವತ್ತು ಒಂದು ಚುಲೋ ಜಾಗಾದಾಗ ಇರ್‍ತಿದ್ದೆ. ಅಲ್ಲಿ ಬಿಡದೆ ಇದ್ದದ್ದಕ್ಕ ನನ್ನ ಅವರು ರಕ್ಷಣಾ ಮಾಡಿದ್ದು ಉಪಯೋಗವಾಗಲಿಲ್ಲ" ಎಂದು ಹೇಳುತ್ತಾರೆ.

ಪೊಲೀಸರು ರಕ್ಷಣೆ ಮಾಡಿ ತಂದಿದ್ದ ಬಾಲಕಿಯರೇ ಕಡಿಮೆ. ಅದರಲ್ಲಿ ಬಾಲಕಿಯರ ಬಾಲ ಮಂದಿರದ ಅಧಿಕಾರಿಗಳು ಮುಂದಾಲೋಚನೆ ಮಾಡದೇ ಬೇಜವಾಬ್ದಾರಿಯಿಂದ, ಈಗಾಗಲೇ ಒಬ್ಬ ಮಗಳನ್ನು ಲೈಂಗಿಕ ದಂಧೆಗೆ ಹಚ್ಚಿದ ತಾಯಿಯ ಸುಪರ್ದಿಗೆ ಬಾಲೆಯನ್ನು ಒಪ್ಪಿಸಿದ್ದು ಮತ್ತು ಇನ್ನೊಂದು ಪ್ರಕರಣದಲ್ಲಿ ಲೈಂಗಿಕ ಜೀತಕ್ಕಾಗಿಯೇ ಮಗುವನ್ನು ತಂದಿಟ್ಟುಕೊಂಡವಳಿಗೆ ಬಾಲೆಯನ್ನು ಒಪ್ಪಿಸಿದ್ದು ಯಾವ ಕಾನೂನಿನ ನ್ಯಾಯವೋ. ಬಾಲ ಮಂದಿರದ ವಾತಾವರಣಕ್ಕೆ ಹೊಂದಿಕೊಂಡು, ಶಾಲೆಗೆ ಹೋಗುವುದನ್ನು ರೂಢಿ ಮಾಡಿಕೊಳ್ಳುತ್ತಿದ್ದ ಹುಡುಗಿಯನ್ನು ಬಿಡಿಸಿ, ಲೈಂಗಿಕ ದಂಧೆ ಮಾಡುವ ತಾಯಿಗೆ ಒಪ್ಪಿಸಿದ ರೀತಿ ಕ್ರಮ ಸರಿಯಾಗಿರಲಿಲ್ಲ. ಅವಳೋ ಮಗಳನ್ನು ಬಿಡಿಸಿಕೊಂಡು

ಹೋಗುತ್ತಲೇ, ಅಲ್ಲಿಯೇ ದಂಧೆಯ ಮನೆಯಲ್ಲಿಯೇ ಐದು ಜನ ಜೋಗತಿಯರನ್ನು ಸೇರಿಸಿ ಮಗಳನ್ನು ದೇವದಾಸಿ ಮಾಡಿ ದಂಧೆಗೆ ಹಚ್ಚಿದಳು. ಈಗ ಆ ಬಾಲೆ ೩೦ ವಯಸ್ಸಿನ ಯುವತಿ. ೭ ವರ್ಷದ ಮಗಳೊಬ್ಬಳಿದ್ದಾಳೆ. ಅವಳನ್ನು ಕ್ರಿಶ್ಚಿಯನ್ ಸಂಸ್ಥೆಯೊಂದರಲ್ಲಿ ಓದಲು ಇಟ್ಟಿದ್ದಾಳೆ. ಮಗಳು ತುಂಬಾ ಚೆನ್ನಾಗಿ ಓದುತ್ತಿದ್ದಾಳೆ. ಇವಳು ಈಗ ದಂಧೆ ಮಾಡುವುದಿಲ್ಲ. ಸಿಜಿಓ ಒಂದರಲ್ಲಿ ಔಟ್ ರೀಚ್ ವರ್ಕರ್ ಆಗಿ ಕೆಲಸ ಮಾಡುತ್ತಿದ್ದಾಳೆ. ತಿಂಗಳಿಗೆ ೮೫೦೦ ರೂಪಾಯಿ ಕೊಡುತ್ತಾರೆ. ಘರವಾಲಿಯೇ ಬಿಡಿಸಿಕೊಂಡು ಬಂದಿದ್ದ ಇನ್ನೊಬ್ಬಳಿಗೆ ಈಗ ೪೨ ವರ್ಷ. ಇನ್ನೂ ದಂಧೆಯ ಮನೆಯಲ್ಲಿಯೇ ಇದ್ದಾಳೆ.

ಇಡೀ ಮುಂಬಯಿಯ ಕಾಮಾಟಿಪುರ, ಬೀವಂಡಿ ಮೊದಲಾದ ರೆಡ್‌ಲೈಟ್ ಏರಿಯಾಗಳಲ್ಲಿ ಇವರ ಹಾಗೆ ಕಳೆದು ಹೋಗುವ ಮಕ್ಕಳೆಷ್ಟೋ. ಕಾನೂನು, ರಕ್ಷಣೆ ಅನ್ನುವುದು ಒಂದು ಸಾಂಕೇತಿಕವಾಗಿ ನಡೆಯುವಂತಹ ಚಟುವಟಿಕೆಗಳಾಗಿಬಿಟ್ಟಿವೆ. ಇದೆಲ್ಲವನ್ನು ದಾಟಿ ಇಂದಿಗೂ ರೆಡ್‌ಲೈಟ್ ಏರಿಯಾಗಳಿಗೆ ಅಪ್ರಾಪ್ತ ವಯಸ್ಸಿನ ಬಾಲೆಯರು ಬರುತ್ತಾರೆ, ಅದಕ್ಕೆ ನಿಮ್ಮ ಅಭಿಪ್ರಾಯವೇನು ಎಂದು ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರನ್ನು ಪ್ರಶ್ನಿಸಿದಾಗ, ಅದರಲ್ಲಿ ಕೆಲವರು ಹೇಳಿದ ಅಭಿಪ್ರಾಯವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

- "ನಮ್ಮ ಊರುಗಳಿಂದ ಈಗ ಹುಡುಗಿಯರು ಬರೋದು ಕಡಿಮ್ಯಾಗೇತಿ. ಆದ್ರ ಬಾಂಗ್ಲಾದೇಶ, ನೇಪಾಳ ಮತ್ತು ಕಲ್ಕತ್ತಾಗಳಿಂದ ಸಣ್ಣ ಹುಡುಗಿಯರು ಬರ್ತಾರ".
- "೧೮, ೨೦, ೨೨, ೨೫ರ ವಯಸ್ಸಿನ ಹುಡುಗೀರು ಇಲ್ಲಿ ಅದಾರ ಅಂದ್ರ, ಸಣ್ಣ ಹುಡುಗೇರ ಇರಬಹುದು. ಆ ಸಣ್ಣ ಹುಡುಗೇರ ದೊಡ್ಡವರಾಗಿ ಇವರು ಕಾಣಸ್ತಿರ್ತಾರ. ಆ ಸಣ್ಣ ಹುಡುಗೇರು ಕಾಣ್ಸಂಗಿಲ್ಲ. ಅಂದರೆ ನನ್ನ ಹಂಗ ಮೋಸಗೊಂಡವರು ಬರ್ತಿರಬಹುದು. ಇಲ್ಲ ಅನ್ನಾಕ ಬರಂಗಿಲ್ಲ" ಅಂತ ತುಂಬಾ ಸೂಕ್ಷ್ಮವಾಗಿ ಮಾತನಾಡಿದಳು.
- "ಹೌದು ಬರ್ತಾರ, ಕರ್ನಾಟಕದ ಹುಡುಗೀರು, ಮೊದಲಿಗಿಂತ ಬಾಳ ಕಡಿಮಿ. ಈಗ ಡಿಮ್ಯಾಂಡ್ ಇಲ್ಲ. ನೇಪಾಳಿ ಹುಡುಗ್ಯಾರು ಬಾಳ ಬರ್ತಾರ".
- "ಹೌದು ಚಿಕ್ಕ ಹುಡುಗೀರು ಬರ್ತಾರ. ಅವರಿಗೆ ಇಲ್ಲಿ ಡಿಮ್ಯಾಂಡ್ ಜಾಸ್ತಿ ಬರ್ತಾರ. ನಾನ ೫-೬ ಹುಡುಗಿಯರನ್ನ ಕರ್ಕೊಂಡು ಬಂದಿದ್ದ್ಯಾ. ಈಗ ಅವರೆಲ್ಲ ಸತ್ತು ಹೋಗ್ಯಾರ" ಎಂದು ಹೇಳುತ್ತಾರೆ.

ಇವರೆಲ್ಲರ ಮಾತುಗಳ ತಾತ್ಪರ್ಯದಂತೆ, ಮೊದಲ ೧೦ ವರ್ಷಗಳ ಹಿಂದೆ ಬರುತ್ತಿದ್ದ ಹುಡುಗಿಯರ ಪ್ರಮಾಣಕ್ಕೂ, ಈಗಿನ ಪ್ರಮಾಣಕ್ಕೂ ವ್ಯತ್ಯಾಸವಿದ್ದು, ಕಡಿಮೆ ಆಗಿರಬಹುದು. ಆಶಾ ಮಹಿಳಾದ ಕಾರ್ಯಕರ್ತರೊಬ್ಬರು, "ಮೊದಲು ಮುಂಬಯಿಯ ವೇಶ್ಯಾಗೃಹಗಳು ಅಂದರೆ ಅಲ್ಲಿ ಶೇ. ೯೯ರಷ್ಟು ಕನ್ನಡದ ಹೆಣ್ಣುಮಕ್ಕಳೇ ಇರುತ್ತಿದ್ದರು. ಅತೀ ಕಡಿಮೆ ಸಂಖ್ಯೆಯ ಮರಾಠಿ ಮಹಿಳೆಯರು ಇರುತ್ತಿದ್ದರು.

ಅಷ್ಟರಲ್ಲಿ ಅಲ್ಲೊಂದು ಇಲ್ಲೊಂದು ನೇಪಾಳಿ ಹುಡುಗಿಯರು ಇರುತ್ತಿದ್ದರು. ಕಾಮಾಟಿಪುರದ ಮನೆಗಳೆಲ್ಲ ಕನ್ನಡದ ಮನೆಗಳಿಗೇ ಆಗಿದ್ದವು. ಆದರೆ ಈಗ ಚಿತ್ರ ಬದಲಾಗಿದೆ. ಕರ್ನಾಟಕದ ಹುಡುಗಿಯರ ಸಂಖ್ಯೆ ಕಡಿಮೆ ಆಗಿದೆ" ಎಂದು ಅಭಿಪ್ರಾಯ ಪಡುತ್ತಾರೆ.

ಲೈಂಗಿಕ ದಂಧೆಯಲ್ಲಿ ೫೦ ವರ್ಷಗಳಿಂದ ತನ್ನನ್ನು ತೊಡಗಿಸಿಕೊಂಡಿರುವ ಜಮಖಂಡಿ ತಾಲೂಕಿನ ಘರವಾಲಿಯೊಬ್ಬಳು ಬೀವಂಡಿಯಲ್ಲಿ ಸ್ವಂತ ದಂಧೆಯ ಮನೆಗಳನ್ನು ಹೊಂದಿದ್ದಾಳೆ. ಇವಳು ದೇವದಾಸಿಯಾಗಿದ್ದಾಳೆ. ಇವಳಿಗೊಬ್ಬಳು ಹೂಗಾರ ಜಾತಿಯ ಗೆಳತಿ ಇದ್ದಳು. ಅವಳು ಇವಳು ಸೇರಿಯೇ ದಂಧೆಯ ಮನೆಗಳನ್ನು ನಡೆಸುತ್ತಿದ್ದರು. ಇವರಿಗೆ ಸೇರಿದ ಮನೆಗಳು ಅಥಣಿಯಲ್ಲೂ ಜಮಖಂಡಿಯಲ್ಲೂ ಇವೆ. ಊರಿಗೆ ಹೋದಾಗ ಇವರ ಕೈಯಲ್ಲಿ ಸಹಜವಾಗಿ ಲಕ್ಷ, ಎರಡು ಲಕ್ಷ ರೂಪಾಯಿಗಳು ಇರುತ್ತಿದ್ದವು. ಆರ್ಥಿಕವಾಗಿ ಸಮಸ್ಯೆ ಇದ್ದ ಮನೆ ಹುಡುಕುವುದು, ಅವರ ಕೈಯಲ್ಲಿ ಕೇಳಿದಷ್ಟು ಹಣ ಇಟ್ಟು, ಅವರ ಹೆಣ್ಣುಮಕ್ಕಳನ್ನು ಬೀವಂಡಿಗೆ ಕರೆದು ತರುವುದು ಇವರ ಕೆಲಸವಾಗಿತ್ತು. ಅದರಲ್ಲಿ ಈಗ ಒಬ್ಬಳು ಸತ್ತು ಹೋಗಿದ್ದಾಳೆ. ಈಗ ತಾನೊಬ್ಬಳೇ ನಿಭಾಯಿಸುತ್ತಾಳೆ. ಇವಳು "ಮೇಲಿಂದ ಮೇಲೆ ಹುಡುಗಿಯರನ್ನು ಹಿಡಿದು ಜೈಲಿಗೆ ಹಾಕುತ್ತಿರುವುದರಿಂದ, ನಮ್ಮ ಕನ್ನಡದ ಹುಡುಗಿಯರು ಕಡಿಮೆ ಆಗಿದ್ದಾರೆ. ಕನ್ನಡದ ಹುಡುಗಿಯರು ಮಾನಕ್ಕೆ ಬಾಳ ಅಂಜುತ್ತಾರೆ. ಬಂಗಾಲಿ ಹುಡುಗಿಯರು ಹಾಗಿಲ್ಲ. ಅವರು ಎಲ್ಲದಕ್ಕೋ ಸೈ ಅನ್ನುತ್ತಾರೆ" ಎಂದು ಕನ್ನಡದ ಹುಡುಗಿಯರು ಕಡಿಮೆಯಾದ ಕುರಿತು ಹೇಳುತ್ತಾಳೆ.

ನಾಲ್ಕು ತಲೆ ಮಾರುಗಳಿಂದ ಮುಂಬಯಿಯಲ್ಲಿಯೇ ದಂಧೆ ಮಾಡುತ್ತಾ, ದಂಧೆಯ ಮನೆಗಳನ್ನು ನಡೆಸುತ್ತಿರುವ ಮುಧೋಳ ತಾಲೂಕಿನ ಮಹಿಳೆಯೊಬ್ಬರು ಹೇಳುವಂತೆ, ಪೊಲೀಸರಿಂದ ಮೇಲಿಂದ ಮೇಲೆ ರೇಡ್ ಆಗುತ್ತಿರುವುದರಿಂದ, ಚಿಕ್ಕ ಮತ್ತು ಹೊಸ ಹುಡುಗಿಯರು ಮುಂಬಯಿಗೆ ಬರುವುದು ಕಡಿಮೆಯಾಗಿದೆ. ಹಾಗೆಯೇ ಬಿಲ್ಡರ್ಸ್ ಲಾಬಿಯಿಂದ ಘರವಾಲಿಗಳು ಊರು ಸೇರಿರುವುದರಿಂದ ಹೊಸ ಹುಡುಗಿಯರು ಬರುವುದು ನಿಂತಿದೆ. ಆದರೆ ಅವೇ ಹುಡುಗಿಯರು ಈಗ ಮೀರಜ್, ಪುಣೆ, ಸಾಂಗ್ಲಿ, ಕರಾಡ ಊರುಗಳಲ್ಲಿ ಇದ್ದಾರೆ. ಇಲ್ಲಿಂದ ತಿರುಗಿ ಹೋದವರು ಊರಲ್ಲಿಯೇ ದಂಧೆ ಮಡುತ್ತಿದ್ದಾರೆ. ಮುಧೋಳ ಮತ್ತು ಅದರ ಸುತ್ತ ಮುತ್ತ ಹಳ್ಳಿಗಳಲ್ಲಿ ದಂಧೆಯ ಮನೆಗಳು ಪ್ರಾರಂಭವಾಗಿವೆ. ಇದರ ಜೊತೆಗೆ ಎಚ್ ಐ ವಿ/ಏಡ್ಸ್‌ನಿಂದಾಗಿ ಬಹಳ ಚಿಕ್ಕ ಚಿಕ್ಕ ಹುಡುಗಿಯರು ಸತ್ತರು. ಬಹಳಷ್ಟು ಮಂದಿ ಊರಿಗೆ ಹೋಗಲೇ ಇಲ್ಲ. ಅವರನ್ನು ಹುಡುಕಿಕೊಂಡು ಸಹ ಯಾರೂ ಬರಲಿಲ್ಲ. ಹಾಗಾಗಿ ಇಲ್ಲಿ ಮುಂಬಯಿಗೆ ಬರುವ ಹುಡುಗಿಯರು ಕಡಿಮೆಯಾಗಿರಬಹುದು. ಆದರೆ ಊರಿನಿಂದ ಬರುವ ಹುಡುಗಿಯರು ಬರುತ್ತಲೇ ಇದ್ದಾರೆ ಎಂದು ಹೇಳುತ್ತಾಳೆ.

ಮುಧೋಳದ ಸಮೀಪದ ಗ್ರಾಮದಲ್ಲಿ ಒಂಬತ್ತು ಮಕ್ಕಳಿರುವ ಕುಟುಂಬದಲ್ಲಿ ಹಿರಿಯಳಾದ ಹೆಣ್ಣುಮಗಳೊಬ್ಬಳು ೫೭ ವರ್ಷಗಳಿಂದ ಮುಂಬಯಿಯ ಗ್ರ್ಯಾಂಟ್ ರೋಡಿನಲ್ಲಿ ಜೀವನ ನಡೆಸಿದ್ದಾಳೆ. ಕುಟುಂಬ ಹಸಿವನ್ನು ಹಿಂಗಿಸಲು ಹಿರಿಯಳಾದ ಇವಳನ್ನು, ಊರಿನ ಗೌಡರೇ ನಿಂತು ದೇವದಾಸಿ

ಮಾಡಿ ಮುಂಬಯಿಗೆ ಕಳಿಸಿರುತ್ತಾರೆ. ಆಗ ಇವಳಿಗೆ ೧೦–೧೧ರ ಎಳೆಯ ವಯಸ್ಸು. ಈಗ ೫೬ ವರ್ಷಗಳು ಕಳೆದಿವೆ. ಅಂದಿನಿಂದಲೂ, ಲೈಂಗಿಕ ದಂಧೆಯ ವ್ಯವಹಾರದಲ್ಲಿ ತೊಡಗಿಕೊಂಡಿರುವ ಇವಳು, "ಈಗ ೧೦–೧೨ ವರ್ಷಗಳಿಂದ ಪೊಲೀಸ್ ಕಾರವಾಯಿ ಬಾಳ ಜಿರುಸಾಗಿ ನಡದೈತಿ. ಒಂದು ಸಣ್ಣ ಹುಡುಗಿ ಗಲ್ಲ್ಯಾಗ ಬಂತಂದ್ರ ಖಬರಿಗಳು ಪೊಲೀಸರಿಗೆ ಸುದ್ದಿ ಮುಟ್ಟಸ್ತಾರ. ಆ ಹುಡುಗಿಯನ್ನು, ಘರವಾಲಿಯನ್ನೂ ಹಿಡಿದ ಪೊಲೀಸರು ಕೇಸ್ ಮಾಡದ ಹಂಗ ಬಿಡಬೇಕು ಅಂದ್ರ, ೧೦ ಲಕ್ಷ ರೂಪಾಯಿ ಕೇಳುತ್ತಾರೆ. ಕಡಿಮೆ ಅಂದ್ರೂ ೩ ರಿಂದ ೫ ಲಕ್ಷ ರೂಪಾಯಿ ಕೊಡಾಕ ಬೇಕು. ಇಲ್ಲದಿದ್ರ, ಕೇಸ್ ಮಾಡಿ ಘರವಾಲೀನ್ನ ಜೈಲಿಗೆ ಹಾಕ್ತಾರ. ಹಿಂಗ ಜೈಲಿಗೆ ಹೋದ ಘರವಾಲೆರಿಗೆ ಜಾಮೀನ್ ಇಲ್ಲ. ಇಲ್ಲೇ ನಮ್ಮ ಮನೀ ಮುಂದಿನವು ಎರಡ ಮನಿ, ಹೋದ ತಿಂಗಳದಾಗನ ರೇಡ್ ಆಗಿದ್ದವು. ಸರ್ಕಾರ ಸೀಲ್ ಮಾಡಿ ಹೋಗೇತಿ. ಹಂಗಾಗಿ ಹುಡುಗೇರ್ನ ಮುಂಬಯಿಗೆ ಕರ್ಕೊಂಡು ಬರೋದು ಬಾಳ ಕಮ್ಮ ಆಗೇತಿ. ಹಂಗ ಏಡ್ಸ್ ಜಡ್ಡಗೆ ಬಾಳ ಮಂದಿ ಸತ್ತು ಹೋಗ್ಯಾರ. ನನ್ನ ಕಡೆ ಇದ್ದ ೭–೮ ಹುಡಗೇರ ಸತ್ತ ಹೋದ್ರು, ಇದರಿಂದಲೂ ಜನ ಅಂಜೇತಿ. ಇನ್ನೊಂದು ದೊಡ್ಡ ಕಾರಣಾ ಅಂದ್ರ, ಈಗ ಬಂಗಾಳಿ ಹುಡಗ್ಯಾರು ಬಾಳ ಬರಾಕತ್ಯಾರ. ಕರ್ನಾಟಕದ ಹುಡುಗ್ಯಾರಿಗೆ ರೊಕ್ಕಾ ಬೇಕು. ಬಂಗಾಳದ ಹುಡುಗ್ಯಾರಿಗೆ ಆ ಗಂಡಸ ಅಷ್ಟ ಆದ್ರ ಸಾಕ. ಅದಕ್ಕಾಗಿ ಎಷ್ಟು ಕಡಿಮಿ ರೊಕ್ಕಾ ಕೊಟ್ಟರೂ ಬಂದ ಬಿಡ್ತಾರ. ಇದರಿಂದಲೂ ಕರ್ನಾಟಕದ ಹುಡುಗ್ಯಾರಿಗೆ ಡಿಮ್ಯಾಂಡ್ ಕಮಿ ಆಗೇತಿ" ಎಂದು ಹೇಳುತ್ತಾರೆ.

ಕಾಮಾಟಿಪುರದಲ್ಲಿ ದಂಧೆ ಮಾಡುತ್ತಿದ್ದ, ಈಗಲೂ ಅಲ್ಲಿಯೇ ಇರುವ ಮಹಿಳೆಯರ ಗುಂಪೊಂದು, "ಮೊದಲಾದ್ರೆ ನಾವಷ್ಟ ಇರ್ತಿದ್ವಿ, ನಮಗ ದಂಧಾನೂ ಹೆಚ್ಚಿತ್ತು. ಆದರೆ ಈಗ ನೇಪಾಳಿ ಮತ್ತು ಬಂಗಾಲಿ ಹುಡುಗಿಯರು ಬಾಳ ಬಂದಾರ, ಅವರು ವಯಸ್ಸಲೇನೂ ಬಾಳ ಬಾಳ ಸಣ್ಣಾವರು ಇರ್ತಾರ. ಅವರ ಗಂಡಂದಿರ ಅವರ್ನ ಇಲ್ಲೀಗಿ ಕರ್ಕೊಂಡು ಬಂದ ಮುಂದ ನಿಂತ ದಂದಾ ಮಾಡಸ್ತಾರ. ಅವರು ನಮ್ಮ ಕರ್ನಾಟಕದ ಹುಡುಗೇರಗತೆ ನಾಚಂಗಿಲ್ಲ. ಎಲ್ಲಾ ಮರ್ಯಾದಿ ಬಿಟ್ಟ ಹಾಪ್‌ಪ್ಯಾಂಟ್, ಬ್ರಾ ಮ್ಯಾಲೆ ನಿಲ್ತಾರ. ಕೊಟ್ಟಷ್ಟು ರೊಕ್ಕಕ್ಕ ಗಿರಾಕಿ ಕರ್ಕೊಂತಾರ. ನಮ್ಮವರು ಒಂದ ಚೂಡಿದಾರ ಹಾಕ್ಕೊಳ್ಳಾಕೂ ನಾಚ್ಕೋತಾರ, ಅದ ಸೀರಿ ಮ್ಯಾಲೆ ನಿಲ್ತಿನಿ ಅಂತಾರ. ಹಂಗಾಗಿ ಗಂಡಸರು ಅವರಕಡೇನೆ ಜಾಸ್ತಿ ಒಲವ ತೋರಸ್ತಾರ. ಆಮ್ಯಾಲಿಂತ ನಮ್ಮವರು ಖಾಯಂ ಪಾರ್ಟನರ್ ಕೂಡ ಇರಲಿಕ ಬಾಳ ಇಷ್ಟ ಪಡ್ತಾರ. ಹಂಗಾಗಿ ಆದಾನು ಕಡಿಮೆ ಆಕ್ಕೈತಿ ಇತ್ತಿತ್ತಲಾಗಿ ಪೊಲೀಸ್ ದಾಡ(ರೇಡ್) ಬಾಳ ಆಗ್ಯಾವು. ಮುಂಜಾನೆ ಬಂದವ್ರು ಒಂದೊಂದು ಸಾರಿ ಮತ್ತ ಸಂಜೀಕ್ಕೊ ಬರತಾರ. ಹಿಡಕ್ಕೊಂಡು ಹೋಗಿ ಜೈಲಿಗೆ ಹಾಕೋದು, ದಂಡ ಕಟ್ಟಿಸ್ಕೋಳೊದು ಬಾಳ ನಾಡದೈತಿ. ದಂಡ ಕಟ್ಟಿ ಕಟ್ಟಿ ಹುಡುಗೀರು ಸಾಲದಾಗ ಬೀಳಾಕತ್ಯಾರ. ಕರ್ನಾಟಕದ ಘರವಾಲೇರು ಇದೆಲ್ಲ ಸಾಕ ಅಂತ ಎಲ್ಲಾ ಮಾರಕ್ಕೊಂದು ಊರಕಡೆ ಹೊಂಟಾರ. ಹಂಗಾಗಿ ಬರೋ ಮಂದಿ ಕಮಿಮ್ಯಾಗೈತಿ" ಅಂತ ಕರ್ನಾಟಕದ ಹಿರಿಯ ಮಹಿಳೆಯರ ಗುಂಪು ತಿಳಿಸುತ್ತವೆ.

ರತ್ನಾಗಿರಿಯ ಸುನೀತಾ ಎಂಬುವರು ೨೦-೨೫ ವರ್ಷದಿಂದ ಗ್ರ್ಯಾಂಟ್ ರೋಡ್‌ನಲ್ಲಿ ದಂಧೆ ಮಾಡಿ ಈಗ ಬ್ರಾಥೆಲ್ ಮ್ಯಾನೇಜರ್ ಆಗಿ ಕೆಲಸ ಮಾಡುತ್ತಿದ್ದಾರೆ. ಅವರ ಪ್ರಕಾರ "ಹೌದು ಕರ್ನಾಟಕದ ಹುಡುಗಿಯರು ಈಗ ಕಡಿಮೆಯಾಗಿದ್ದಾರೆ. ಮೊದಲು ಇಡೀ ಬಿಲ್ಡಿಂಗ್ ತುಂಬಾ ಅವರೇ ಇರುತ್ತಿದ್ದರು. ಈಗ ನೂರಕ್ಕೆ ೧೦-೧೫ ಸಿಗಬಹುದು. ಅದಕ್ಕೆ ಕಾರಣ ಹುಡುಗಿಯರೇ. ಕನ್ನಡದ ಹುಡುಗಿಯರಲ್ಲಿ ಓಪನ್‌ನೆಶ್ ಇಲ್ಲ. ಅವರು ಇಂದಿಗೂ ಅದೇ ಸೀರೆ, ಅದೇ ಬಟ್ಟೆ ಹಾಕಿಕೊಂಡು ಗೌರಮ್ಮನಂತೆ, ವಯಸ್ಸಾದವಳಂತೆ ಕಾಣುತ್ತಾರೆ. ಹಾಗೆಯೇ ಸೆಕ್ಸ್ ವಿಷಯದಲ್ಲೂ ಸಹ ಅವರಲ್ಲಿ ಓಪನ್‌ನೆಸ್ ಇಲ್ಲ. ಅದೇ ಬಂಗಾಳಿ ಹುಡುಗಿಯರು ಎಲ್ಲದಕ್ಕೂ ಸೈ ಎನ್ನುತ್ತಾರೆ. ಅತೀ ಕಡಿಮೆ ಬಟ್ಟೆ ಹಾಕಿಕೊಂಡು ಮೇಕಪ್ ಮಾಡಿಕೊಂಡು ರೋಡಿಗೆ ನಿಲ್ಲುತ್ತಾರೆ. ಗಂಡಸರೊಂದಿಗೆ ವ್ಯವಹರಿಸುವಾಗಲೂ ಸಹ ತುಂಬಾ ಓಪನ್ ಆಗಿರುತ್ತಾರೆ" ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಕಾಮಾಟಿಪೂರದಲ್ಲೇ ೩೫ ವರ್ಷಗಳಿಂದ ಜೀವನ ನಡೆಸುತ್ತಿರುವ ೫೦ ವರ್ಷದ ಕರ್ನಾಟಕದ ಮಹಿಳೆ "ನಾವೆಲ್ಲ ಈ ಊರಿಗೆ ಬಂದಾಗ ಏಟೇಟು ಇದ್ವಿ ಚಂದಗ ಎದೀ ಸೂದ ಬೆಳದಿದ್ವಿಲ್ಲ. ಆಗೆಲ್ಲ ಗಲ್ಲಿ ತುಂಬ ನನ್ನಂತವರೇ ಇರ್ತಿದ್ರು, ಪೊಲೀಸರು ಹಿಡಿದರೂ ಘರವಾಲಿ ದಂಡ ಕಟ್ಟಿ ಬಿಡಿಸ್ಕೊಂಡು ಬರ್ತಿದ್ದಳು. ಆದರ ಈಗ ಕಾನೂನೂ ಬಿಗಿ ಆಗ್ಯೆತಿ. ಸಣ್ಣ ಹುಡುಗೇರ್ನ ಇಟಗೊಂಡಾರ ಅಂತ ಸುದ್ದಿ ಸಿಕ್ಕರ, ಆ ಇಡೀ ಮನೀಗೇನ ಕೀಲಿ ಬೀಳ್ತಾವು. ಮೇಲಾಗಿ ಘರವಾಲಿಗೆ ಜೈಲು ಶಿಕ್ಷೆ ದಂಡ ಬೀಳತ್ತೈತಿ. ಹಂಗಾಗಿ ಆ ಧೈರ್ಯ ಮಾಡೋರು ಬಾಳ ಕಡಿಮೆ. ಈಗ ಕರ್ನಾಟಕದಾಗ ವ್ಯವಸ್ಥಾ ಬಾಳ ಚುಲೋ ಐತಿ. ಸರ್ಕಾರದ ಸೌಲಭ್ಯ ಬಾಳ ಆದಾವು ಮತ್ತು ದೇವದಾಸಿ ಬಿಡೋದು ಕಮ್ಮಿ ಆಗೇತಿ ಅದ್ಕ ಆ ಕಡೀಂದ ಸಣ್ಣಮಕ್ಕಳು ಬರೋದು ಕಡಿಮೆ ಆಗ್ಯೆತಿ. ಇದರ ಜೊತೀಗಿ ಊರಿನಲ್ಲಿ ಮೊದಲ ಇದ್ದ ಸ್ಥಿತಿ ಈಗ ಇಲ್ಲ. ಕೆಳಜಾತಿ ಮಂದೀನ ಬಾಳ ತುಚ್ಛವಾಗಿ ನೋಡುವ ಕಾಲ ಇತ್ತು. ಅಂಬೇಡ್ಕರ ಬಾಬಾರ ಪುಣ್ಯದಿಂದ ನಮಗ ಒಂದು ನೆಲೀ ಸಿಕ್ಕೈತಿ" ಎಂದು ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ.

ಜಮಖಂಡಿ ಮೂಲದ, ಕಾಮಾಟಿಪುರದಲ್ಲಿ ಪಿಂಪ್ ಆಗಿ ಕೆಲಸ ಮಾಡಿದ ಚಂದ್ರೇಶ್. ತನ್ನ ೪೫ ವರ್ಷಗಳ ಅನುಭವದ ಮೂಲಕ ಕನ್ನಡದ ಹುಡುಗಿಯರು ಕಡಿಮೆಯಾದ ಕುರಿತು ಈ ರೀತಿ ಮಾತನಾಡುತ್ತಾನೆ. "೧೯೯೩-೯೪ರಲ್ಲಿ ಮುಂಬಯಿ ಪೋಲೀಸ್ ಕಮೀಶನರ್ ಅವರ ಮಗಳನ್ನು ಯಾರೋ ಕಿಡ್ನ್ಯಾಪ್ ಮಾಡಿ ಬ್ರಾಥೆಲ್‌ಗಳಲ್ಲಿ ಮಾರಿ ಬಿಟ್ಟಿದ್ದಾರೆ ಎಂಬ ಸುದ್ದಿ ಹರಡಿತ್ತು. ಅದಕ್ಕಾಗಿ ಎಲ್ಲ ಬ್ರಾಥೆಲ್‌ಗಳ ಮೇಲೂ ದೊಡ್ಡ ದೊಡ್ಡ ರೇಡ್ ಬೀಳುತ್ತಿದ್ದವು. (ಮುಂದೆ ಕಮೀಶನರ್ ಮಗಳು ಗಾಟಕೋಪರ್ ಏರಿಯಾದಲ್ಲಿ ಸಿಕ್ಕಳು ಎಂದು ಸುದ್ದಿಯಾಯಿತು.) ದೊಡ್ಡ ದೊಡ್ಡ ವ್ಯಾನ್‌ಗಳಲ್ಲಿ ಹುಡುಗಿಯರನ್ನ ತುಂಬಿಕೊಂಡು ಜೈಲಿಗೆ ಹಾಕಿದ್ದರು. ಆ ಸಂದರ್ಭದಲ್ಲಿ ಬಹಳಷ್ಟು ಘರವಾಲಿಗಳು ಜೈಲು ಪಾಲಾದರು. ಅವರನ್ನೆಲ್ಲ ಅವರವರ ಊರಿಗೆ ಸಂಬಂಧಿಸಿದ ಜೈಲಿಗೆ ಕಳಿಸಲಾಯಿತು. ಎಷ್ಟೋ ಹುಡುಗಿಯರನ್ನು ಜಮಖಂಡಿ, ಬಾಗಲಕೋಟೆ, ಬಿಜಾಪುರ ಹೀಗೆ ಅವರ ಊರಿಗೆ

ಸಮೀಪವಿರುವ ಜೈಲುಗಳಲ್ಲಿ ಹಾಕಲ್ಪಟ್ಟಿದ್ದರು. ಇದು ಹುಡುಗಿಯರ ಅಪ್ಪಂದಿರಿಗೆ, ತಾಯಂದಿರಿಗೆ ಸಂಬಂಧಿಗಳಿಗೆ ಅವಮಾನದ ಸಂಗತಿಯಾಗಿತ್ತು. ಅವರ ಮಗಳು, ಅಕ್ಕ ತಂಗಿ, ಜೈಲಿನಲ್ಲಿ ಇದ್ದಾರೆಂಬುದನ್ನು ಅರಗಿಸಿಕೊಳ್ಳುವುದು ಅವರಿಗೆ ಕಷ್ಟದ ವಿಷಯವಾಗಿತ್ತು. ಮಾನದ ಪ್ರಶ್ನೆಯಾಗಿತ್ತು. ಹಾಗಾಗಿ ಎಷ್ಟೋ ಜನ ಹೆಣ್ಣುಮಕ್ಕಳು ಹೆದರಿ ಮನೆ ಇದ್ದವರು ಮನೆ ಮಾರಿ, ಇಲ್ಲದವರು ಹಾಗೆ ಮುಂಬಯಿ ಬಿಟ್ಟು ಊರು ಸೇರಿದರು. ಆ ಸಂದರ್ಭದಲ್ಲಿಯೇ ಕನ್ನಡದ ಹುಡುಗಿಯರು ಕಡಿಮೆ ಆಗಿದ್ದು.

ಈಗ ಬಿಲ್ಡರ್ಸ್ ಲಾಬಿ ಆಗುತ್ತಿದೆ ಮುಂಬಯಿಯಲ್ಲಿ ಕಾಮಾಟಿಪೂರದ ಹೆಸರು ಸೆಕ್ಸ್‌ವರ್ಕ್‌ನಿದಾಗಿ ತುಂಬಾ ಕೆಳದರ್ಜೆಯದಾಗಿದೆ. ಹಾಗಾಗಿ ಇಡೀ ಮುಂಬಯಿಯನ್ನು ಹೋಲಿಸಿದರೆ ಕಾಮಾಟಿಪೂರದ ಜಾಗದ ಬೆಲೆ ಕಡಿಮೆ. ಹಾಗಾಗಿ ಬಿಲ್ಡರ್ಸ್‌ಗಳು ಇಲ್ಲಿಯ ಜಾಗ ಖರೀದಿಸಿ ಮಾರುಕಟ್ಟೆಗೆ ಬೇಕಾಗುವ ರೀತಿಯಲ್ಲಿ ಕಟ್ಟಡಗಳನ್ನು ಪುನರ್ ನಿರ್ಮಿಸುವ ಉದ್ದೇಶವನ್ನು ಹೊಂದಿದ್ದಾರೆ. ಕನ್ನಡದ ಹೆಣ್ಣುಮಕ್ಕಳು ಯಾವುದೋ ಕಾಲದಲ್ಲಿ ಅತೀ ಕಡಿಮೆ ಬೆಲೆಗೆ ತಾವಿರುವ ಮನೆಯನ್ನು ಕೊಂಡುಕೊಂಡಿದ್ದಾರೆ. ಇವು ಬಹು ಅಂತಸ್ತಿನ ಕಟ್ಟಡಗಳಾಗಿರುವುದರಿಂದ, ಅವಳು ಇರುವ ಮನೆ ಮಾತ್ರ ಅವಳದಿದ್ದು, ಜಾಗ ಮಾತ್ರ ಮೂಲ ಮಾಲೀಕನ ಹೆಸರಲ್ಲಿಯೇ ಇದೆ. ಈಗ ಮೂಲ ಮಾಲೀಕರು ಬಿಲ್ಡರ್‌ಗಳಿಗೆ ತಮ್ಮ ಜಾಗ ಮಾರಿದ್ದಾರೆ. ಹಾಗಾಗಿ ಬಿಲ್ಡರ್‌ಗಳು ಹಾಕಿದ ಯೋಜನೆಗೆ ಮನೆ ಇದ್ದವರು ಒಪ್ಪಿಕೊಳ್ಳಬೇಕು ಅಥವಾ ಆ ಜಾಗ ಅವರಿಗೇ ಮಾರಿ ಬಿಡಬೇಕು. ಒಂದು ವೇಳೆ ಬಿಲ್ಡರ್ ಜೊತೆ ಒಪ್ಪಿಕೊಂಡು ತಾವು ಹಣ ಶೇರ್ ಮಾಡಿ ಬಿಲ್ಡಿಂಗ್ ಕಟ್ಟಿಸಿಕೊಂಡರೆ ನಾಳೆ ಅಲ್ಲಿ ದಂಧೆ ನಡೆಯುವುದು ಕಷ್ಟವಿದೆ. ಇದರಿಂದ ಘರವಾಲಿ ಇದ್ದವಳು ಮುಂಬಯಿಯಲ್ಲಿ ಏನೂ ಮಾಡಲು ಸಾಧ್ಯವಿಲ್ಲ. ಹಾಗಾಗಿ ಚಿಕ್ಕ ಚಿಕ್ಕ ಜಾಗವಿದ್ದವರು ಈಗ ಸಿಗುತ್ತಿರುವ ಅತ್ಯುತ್ತಮ ಬೆಲೆಗಳಿಗೆ ಮಾರಾಟ ಮಾಡಿ ಊರು ಸೇರಿ ಕೊಂಡಿದ್ದಾರೆ. ಕೆಲವರು ಅದರಲ್ಲಿಯೇ ಜೀವನ ನಡೆಸಿದ್ದಾರೆ. ಮತ್ತೆ ಕೆಲವರು ಬಾಡಿಗೆ ಕೊಟ್ಟು ಹೋಗಿದ್ದಾರೆ. ಘರವಾಲಿಗಳೇ ಊರು ಸೇರಿಕೊಂಡ ಮೇಲೆ ಹುಡುಗಿಯರನ್ನು ಯಾರು ತರಬೇಕು. ಹಾಗಾಗಿ ಕರ್ನಾಟಕದ ಹುಡುಗಿಯರು ಕಡಿಮೆ ಆಗಿದ್ದಾರೆ ಅನ್ನಿಸುತ್ತಿದೆ" ಎಂದು ಅವರು ತಮ್ಮ ಅನುಭವ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಚಂದೇಶ್ ಮೇಲೆ ತಿಳಿಸಿದ ವಿಷಯಗಳಿಗೆ ಪೂರಕವಾಗಿ ಕೆಲವಷ್ಟು ವಿಚಾರಗಳನ್ನು ಇಲ್ಲಿ ವಿವರಿಸುವುದಾದರೆ, ೧೯೯೬ರ ಜನವರಿಯಲ್ಲಿ, ಸೋ ಮೋಟೋ ಎಂಬುವರು, ಮುಂಬಯಿಯ ಲೈಂಗಿಕ ದಂಧೆಯಲ್ಲಿ, ಅಪ್ರಾಪ್ತ ವಯಸ್ಸಿನ ಬಾಲೆಯರ ದುಸ್ಥಿತಿ ಕುರಿತು ಮುಂಬೈ ಹೈ ಕೋರ್ಟಿಗೆ ರಿಟ್ ಪಿಟಿಶನ್ (ನಂ.೧೧೨) ಹಾಕಿದ್ದರು. ಅದನ್ನು ಪರಿಶೀಲಿಸಿದ ನ್ಯಾಯಾಲಯವು, ಈ ಕುರಿತು ದಿನಪತ್ರಿಕೆಯಲ್ಲಿ ಪ್ರಕಟವಾದ ಕೆಲವು ನಂಬಲರ್ಹವಾದ ಲೇಖನಗಳ ಆಧಾರದ ಮೇಲೆ, ಪೊಲೀಸ್ ಇಲಾಖೆಯು ಸೂಕ್ತ ಕಾರ್ಯಾಚರಣೆ ಮಾಡಿ ಆ ನಿರ್ಲಕ್ಷಿತ ಬಾಲಾಪರಾಧಿ ಬಾಲೆಯರನ್ನು ರಕ್ಷಿಸಬೇಕೆಂದು ಆದೇಶ ಹೊರಡಿಸಿತು. ಇದರ ಮೇರೆಗೆ ಬೃಹತ್ ಮುಂಬೈ ನಗರದ ಪೊಲೀಸರು, ನಾಗಪಡಾ, ವಿ ಪಿ ರೋಡ್, ಎನ್ ಎಮ್ ಜೋಷಿ ಮಾರ್ಗ ಮತ್ತು ಬಾಂಡೂಪ್ ಪೊಲೀಸ್

ಠಾಣೆಗಳ ವ್ಯಾಪ್ತಿಯಲ್ಲಿ ಬರುವ ಹೆಸರುವಾಸಿಯಾದ ಕಾಮಾಟಿಪುರ, ಫಾರಸ್ ರೋಡ್, ಫಾಕ್ ಲ್ಯಾಂಡ್ ರೋಡ್, ಬಾಂಡೂಪ್ ಸೋನಾಪುರ ರೆಡ್‌ಲೈಟ್ ಏರಿಯಾಗಳ ಮೇಲೆ ರಕ್ಷಣಾ ಕಾರ್ಯಾಚರಣೆಯನ್ನು ಮಾಡುವುದಾಗಿ ತೀರ್ಮಾನಿಸಲಾಗಿತ್ತು. ಆ ಪ್ರಕಾರ ದಿನಾಂಕ ಫೆಬ್ರುವರಿ ೦೫, ೧೯೯೬ರಂದು ಕಾರ್ಯಾಚರಣೆ ಕೈಗೊಂಡು, ಜೆ ಜೆ ಯ್ಯಾಕ್ಟ್ ೧೯೮೬ದ ಸೆಕ್ಷನ್ ೧೩(೨) ಅಡಿಯಲ್ಲಿ, ೪೮೭ ಬಾಲೆಯರನ್ನು ರಕ್ಷಿಸಲಾಯಿತು. ಹೀಗೆ ರಕ್ಷಣೆಗೊಂಡ ಬಾಲೆಯರಲ್ಲಿ ೬೫ ಹುಡುಗಿಯರು ೧೮ ವರ್ಷದ ಮೇಲಿನವರೂ ಮತ್ತು ಉಳಿದ ೪೨೨ ಹುಡುಗಿಯರು ೧೮ ವರ್ಷದ ಒಳಗಿನವರಾಗಿದ್ದರು. ಇದರಲ್ಲಿ ಮಹಾರಾಷ್ಟ್ರ, ಕರ್ನಾಟಕ, ಆಂದ್ರ ಪ್ರದೇಶ, ತಮಿಳನಾಡು, ಪಶ್ಚಿಮ ಬಂಗಾಳ ಮತ್ತು ನೇಪಾಳದ ಹುಡುಗಿಯರಿದ್ದರು. ನೇಪಾಳದ ೨೨೩ ಹುಡುಗಿಯರನ್ನು ಬಿಟ್ಟರೆ, ನಮ್ಮ ರಾಜ್ಯಗಳ ಪೈಕಿ ಕರ್ನಾಟಕದ ಹುಡುಗಿಯರೇ ಅತೀ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಕರ್ನಾಟಕದ ಒಟ್ಟು ೯೧ ಬಾಲೆಯರನ್ನು ರಕ್ಷಿಸಲಾಗಿತ್ತು. ಇದರ ಜೊತೆಗೆ ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆ ತಡೆ ಕಾಯಿದೆ ಅನ್ವಯ ೧೫೧ ಜನ ಘರವಾಲಿಗಳನ್ನು, ಮ್ಯಾನೇಜರ್‌ಗಳನ್ನು ಬಂಧಿಸಿದ್ದರು. ನ್ಯಾಯಾಲಯವು ರಕ್ಷಣೆಗೊಂಡ ಮಕ್ಕಳಿಗೆ ಸೂಕ್ತ ಸಮಾಲೋಚನೆ ಮತ್ತು ಪುನರ್ವಸತಿ ಕಲ್ಪಿಸಬೇಕೆಂದು ಆದೇಶವನ್ನೂ ಹೊರಡಿಸಿತು. ಈ ಪ್ರಕರಣವನ್ನು ಒಮ್ಮೆ ಗಮನಿಸಿದರೆ, ಸಾರ್ವಜನಿಕರಿಂದ ಮತ್ತು ದಿನಪತ್ರಿಕೆಗಳಿಂದ ಎಚ್ಚೆತ್ತುಕೊಂಡ ನ್ಯಾಯಾಲಯವು ಆದೇಶ ಮಾಡಿದ ಮೇಲೆಯೆ ಪೊಲೀಸರಿಗೆ ತಿಳಿಯುತ್ತದೆ. ಅಲ್ಲಿಯವರೆಗೂ ನಡೆದ ಕಾರ್ಯಾಚರಣೆಗಳು ಹೆಸರಿಗೆ ಮಾತ್ರ ಆಗಿರುತಿದ್ದವೆಂಬುದನ್ನು ಸಂಕೇತಿಸುತ್ತದೆ. ಇದರಲ್ಲಿ ಇನ್ನೊಂದು ಗಮನಿಸಬಹುದಾದ ವಿಷಯವೆಂದರೆ, ಈ ಎಲ್ಲ ರಾಜ್ಯಗಳ ಪೈಕಿ ಕರ್ನಾಟಕದಿಂದ ಅತೀ ಹೆಚ್ಚು ಹುಡುಗಿಯರು (೯೧) ಕಂಡು ಬಂದಿರುವುದು. ಇದರಿಂದ ಕರ್ನಾಟಕದಿಂದ ಬಾಲೆಯರ ಸಾಗಾಣಿಕೆ ನಿರಂತರ ನಡೆದೇ ಇರುವುದು ಆದರೆ ಅವರ ದಂಧೆಯ ದಿಕ್ಕು ಬದಲಿಯಾಗಿರಬಹುದಾದ ಸಾಧ್ಯತೆಗಳು ಕಂಡುಬರುತ್ತವೆ (ಚೈಲ್ಡ್ ಪ್ರಾಸ್ಟಿಟ್ಯೂಶನ್ ಇನ್ ವೆಸ್ಟರ್ನ ಇಂಡಿಯಾ: ಇನ್ಸಾಫ್, ಗೋವಾ, ಯುನಿಸೆಫ್ ಸಹಯೋಗ, ೧೯೯೬).

ರೆಸ್ಕ್ಯೂ ಫೌಂಡೇಶನ್ ಮುಂಬಯಿಯ ಸಮಾಲೋಚಕರು, "ಕರ್ನಾಟಕದ ಹುಡುಗಿಯರು ದಂಧೆಗೆ ಬರುವುದು ಕಡಿಮೆಯಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಮುಂಬಯಿಲಿ ಕೇಸ್‌ಗಳು ಕಡಿಮೆ ಆಗಿವೆ ಅಂದ ಮಾತ್ರಕ್ಕೆ ಬರುವುದೇ ನಿಂತಿದೆ ಅನ್ನುವ ಹಾಗಿಲ್ಲ. ಇಲ್ಲಿ ಈಗ ರೇಡ್‌ಗಳು ಜಾಸ್ತಿ ಆಗಿರುವುದರಿಂದ, ಹೆದರಿಕೆಯಾಗಿ ಅವರ ದಿಕ್ಕು ಬದಲಾಗಿರಬಹುದು. ದೆಹಲಿ, ಪೂಣೆ, ಸಾಂಗ್ಲಿ ಹೀಗೆ ಬೇರೆ ಕಡೆ ಲೈಂಗಿಕ ದಂಧೆ ಮಾಡುತ್ತಿರಬಹುದು" ಎಂದು ಅಭಿಪ್ರಾಯ ಪಡುತ್ತಾರೆ.

ಪ್ರಯಾಸ್ ಸಂಸ್ಥೆಯ ಸಮಾಲೋಚಕರು ಹೇಳುವಂತೆ "ಕಾಮಾಟಿಪೂರದಾಗ ಹುಡುಗಿಯರು ಕಡಿಮೆ ಆಗ್ಯಾರ ಅಂದ್ರ ಅವರು ದಂಧೆ ಬಿಟ್ಟು ಬಿಟ್ಟಿದ್ದಾರೆ ಅನ್ನೊ ಹಾಗಿಲ್ಲ. ಯಾಕೆಂದ್ರ ಹುಡುಗಿಯರು ಈಗ ಮೊದಾಲಿನಂಗ ಇಲ್ಲ. ಫಿಂಪ್‌ಗಳು ಸಹ ಮೊದಲಿನಂಗ ಇಲ್ಲ. ಓದಿಕೊಂಡವರೂ ಸಹ ದಂಧೆ ಮಾಡುತ್ತಿದ್ದಾರೆ. ಓದಿಕೊಂಡವರೂ ಸಹ ಫಿಂಪ್ ಆಗಿದ್ದಾರೆ. ಕಾಮಾಟಿಪೂರ ಅದರ ಪೊಲೀಸ್‌ರ

ಕಾಟ, ಸಮಾಜ ಕಾರ್ಯಕರ್ತರ ಕಾಟ ಅವರಿಗೆ ಇರುತ್ತದೆ. ಅದಕ್ಕಾಗಿ ಕುಟುಂಬಸ್ಥರು ಇರುವ ಅಪಾರ್ಟಮೆಂಟಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಳ್ಳುತ್ತಾರೆ. ೩-೪ ಅದಕ್ಕಿಂತ ಹೆಚ್ಚು ಹುಡುಗಿಯರು ಸೇರಿ ಅಲ್ಲಿರುತ್ತಾರೆ. ತುಂಬಾ ಪಾಶ್ ಆಗಿ ಕಾಲೇಜು ಹುಡುಗಿಯರ ರೀತಿ, ಜಾಬ್‌ಗೆ ಹೋಗುವರ ರೀತಿ ಡ್ರೈಸ್ ಮಾಡ್ಕೋಳ್ತಾರೆ. ಗಿರಾಕಿಗಳನ್ನು ಫೋನ್ ಮೂಲಕವೇ ಸಂಪರ್ಕಿಸಿ, ಆಟೋ ಕರೆಸಿಕೊಂಡು ಗಿರಾಕಿಗಳಿದ್ದ ಜಾಗಕ್ಕೆ ಹೋಗುತ್ತಾರೆ. ಇವರು ಇಂಥವರೇ ಅಂತ ಯಾರಿಗೂ ಗೊತ್ತಾಗುವುದಿಲ್ಲ. ಹೀಗೆ ಅವರ ದಂಧಾ ಮಾಡುವ ತರೀಕಾ(ಪದ್ಧತಿ)ಗಳು ಬದಲಿ ಆಗ್ಯಾವ. ಪರಂತು ಹುಡುಗಿಯರು ಬರುವುದು ಕಡಿಮೆ ಆಗಿರಲಿಕ್ಕಿಲ್ಲ" ಎಂದು ಹೇಳುತ್ತಾರೆ.

ಈ ಕುರಿತು ಮುಂಬೈ ನಗರದ ಸಹಾಯಕ ಪೊಲೀಸ್ ಆಯುಕ್ತರ ಜೊತೆ ಚರ್ಚಿಸಿದಂತೆ, "ಮುಂಬಯಿಗೆ ತಮ್ಮ ಮಕ್ಕಳನ್ನು ಕಳಿಸುವ ಪಾಲಕರ ಮನೋಭಾವ ಬದಲಾಗಬೇಕು. ಅವರ ಬಡತನವನ್ನು ಹೋಗಲಾಡಿಸಲು ಅಲ್ಲಿಯ ಸರ್ಕಾರಗಳು ಕೆಲಸ ಮಾಡಬೇಕು. ಕಾನೂನುಗಳ ಸ್ಪಷ್ಟ ಅರಿವು ಅವರಿಗೆ ಇರಬೇಕು. ಅಂದಾಗ ತಾನೇ ಕಡಿವಾಣಗೊಳ್ಳುತ್ತದೆ"

ಸಮಸ್ಯೆ ಇಷ್ಟೊಂದು ಆಳವಾಗಿರುವಾಗ ಅದರಲ್ಲಿ ದೌರ್ಜನ್ಯಕ್ಕೀಡಾಗುತ್ತಿರುವ ಬಾಲೆಯರ ಸಾಗಾಣಿಕೆ ಮತ್ತು ದುರುಪಯೋಗಕ್ಕೆ ಕಡಿವಾಣ ಹಾಕಲು ಅಥವಾ ತಡೆಯೊಡ್ಡಲು ಏನು ಮಾಡಬೇಕು ಎಂಬ ಪ್ರಶ್ನೆಯನ್ನು ನಮ್ಮ ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಿಗೆ ಕೇಳಿದಾಗ ಅವರು ನೀಡಿದ ಉತ್ತರಗಳು ಈ ಕೆಳಗಿನಂತಿವೆ.

- ಸರ್ಕಾರ ಚಲೋ ಕೆಲಸ ಮಾಡಬೇಕು.
- ಕಾನೂನುಗಳು ಸರಿಯಾದ ರೀತಿಯಲ್ಲಿ ಕೆಲಸ ಮಾಡಬೇಕು. ಕಾನೂನು ಹೇಳುವುದು ಒಂದು, ಇವರು ಮಾಡುವುದು ಇನ್ನೊಂದು ಆಗಬಾರದು. ಏಕೆಂದರೆ ನಮ್ಮಂತವರಿಗೆ ಕಾನೂನು ಏನು ಹೇಳುತ್ತದೆ ಎಂಬುದು ಗೊತ್ತಿರುವುದಿಲ್ಲ. ಕೆಲಸ ಮಾಡುವವರು ಅದನ್ನು ಸರಿಯಾಗಿ ಉಪಯೋಗಿಸ ಬೇಕು.
- ಊರಲ್ಲಿ ಬಡವರಿಗೆ, ಅವರ ಮಕ್ಕಳಿಗೆ ಸಹಾಯ ಮಾಡಬೇಕು ಹೆಚ್ಚು ಹೆಚ್ಚು ಕೆಲಸ ಸಿಗುವಂತೆ ಮಾಡಬೇಕು.
- ಊರಲ್ಲಿ ಉದ್ಯೋಗ ವ್ಯವಸ್ಥೆ ಮಾಡಬೇಕು.

ಮೇಲೆ ಸಿಕ್ಕ ಮಾಹಿತಿಯ ಪ್ರಕಾರ ಸರ್ಕಾರ ಸರಿಯಾಗಿ ಕೆಲಸ ಮಾಡುತ್ತಿಲ್ಲ. ಜವಾಬ್ದಾರಿಯು ಸ್ಥಾನದಲ್ಲಿ ಇರುವವರು, ಕಾನೂನು ಪರಿಪಾಲನೆ ಮಾಡುವವರು ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಬೇಕು ಎಂದು ಮಹಿಳೆಯರು ಹೇಳುತ್ತಿರುವುದು ಕಂಡುಬರುತ್ತದೆ.

ಬಾಲೆಯರ ಸಾಗಾಣಿಕೆಯನ್ನು ತಡೆಗಟ್ಟುವ ಕುರಿತು ಇದೇ ಪ್ರಶ್ನೆಯನ್ನು, ಮುಂಬಯಿಯ ಗ್ರ್ಯಾಂಟ್ ರೋಡಿನಲ್ಲಿ ನಡೆಯುತ್ತಿರುವ ಸಿ ಬಿ ಓ ಒಂದರ ನಿರ್ದೇಶಕರಾಗಿ ಕೆಲಸ ಮಾಡುತ್ತಿರುವ

ಸುಗುಣ ಎಂಬುವರನ್ನು ಕೇಳಲಾಯಿತು ಅವರ ಜೊತೆ ಚರ್ಚಿಸಿದ ವಿಷಯಗಳನ್ನು ಅವರ ಪ್ರಕರಣ ಅಧ್ಯಯನದ ಮೂಲಕ ಇಲ್ಲಿ ವಿಶ್ಲೇಷಿಸಲಾಗಿದೆ. ಸುಗುಣ ತನ್ನ ಕಿಶೋರಾವಸ್ಥೆಯಲ್ಲಿಯೇ ಮುಂಬಯಿಗೆ ಬಂದವಳು. ೧೦ನೇ ತರಗತಿ ಓದು ಮುಗಿಸಿದ ಸುಗುಣ, ಕುಟುಂಬದ ಬಡತನಕ್ಕಾಗಿ ಓದನ್ನು ನಿಲ್ಲಿಸುತ್ತಾಳೆ. ಇವಳ ತಂದೆ ಮೀನು ದೋಣಿಯಲ್ಲಿ ಕೂಲಿ ಕೆಲಸ ಮಾಡುತ್ತಿದ್ದರು. ಅವರು ದಿನಪೂರ್ತಿ ಕೆಲಸಕ್ಕೆ ಹೋದರೆ ೪ ರೂಪಾಯಿ ತರುತ್ತಿದ್ದರು. ಮಳೆಗಾಲದ ಸಂದರ್ಭದಲ್ಲಿ ಅಂದರೆ ಎಪ್ರೀಲ್‌ನಿಂದ ಹಿಡಿದು ಅಕ್ಟೋಬರ್ ತಿಂಗಳಿನವರೆಗೂ ಮಳೆ ಬಿಟ್ಟೂ ಬಿಡದೇ ಸುರುಯುತ್ತಿತ್ತು. ಇದರಿಂದಾಗಿ ಅವಳ ತಂದೆಗೆ ಹತ್ತು ಇಪ್ಪತ್ತು ದಿನಗಳವರೆಗೆ, ಒಂದೊಂದು ಸಾರಿ ತಿಂಗಳುಗಟ್ಟಲೇ ಕೆಲಸವೇ ಸಿಗುತ್ತಿರಲಿಲ್ಲ. ಆಗೆಲ್ಲ ಮನೆಯ ಎಲ್ಲ ಮಂದಿ ಉಪವಾಸವೆ ಇರಬೇಕಾಗುತ್ತಿತ್ತು. ಇಂತ ಸಂದರ್ಭದಲ್ಲಿ ಏನಾದರೂ ಉದ್ಯೋಗ ಮಾಡಬೇಕೆಂದು ಮುಂಬಯಿಗೆ ಬಂದವಳನ್ನು, ಅದೇ ಲೈಂಗಿಕ ದಂಧೆಯೇ ಬಾಚಿ ತಬ್ಬಿಕೊಂಡಿತ್ತು.

ಹಾಗೆಯೇ ಸಗುಣಳ ಜೊತೆ ಮಾತಾಡ್ತಾ, **'ಕಾರವಾರದಿಂದ ಇಷ್ಟು ದೂರ ಯಾಕೆ ಬಂದ್ರಿ ಸುಗುಣಮ್ಮ, ೭೩ನೇ ಇಸ್ವಿಯಲ್ಲಿಯೇ ೧೦ನೇ ವರ್ಗಕ್ಕೆ ಪರೀಕ್ಷೆ ಬರೆದವರು ನೀವು, ಅಲ್ಲಿಯೇ ಏನಾದ್ರೂ ಉದ್ಯೋಗ ಮಾಡಬಹುದಿತ್ತಲ್ಲ, ಇಲ್ಲಿಗೆ ಬಂದು ಈ ದಂಧೆ ಅಂದ್ರೆ.......'** ಅಂದ ಕೂಡಲೇ, ಸುಗುಣ ಹೇಳಿದಳು,

"ಮ್ಯಾಡಂ, ನೋಡಿ, ನಾನು ಇಲ್ಲಿಗೆ ಬರುವಾಗ ಒಳ್ಳೆ ಉದ್ಯೋಗ ಮಾಡಬೇಕೆಂದೇ ಬಂದೆ. ಆದರೆ ಜನ ನನ್ನನ್ನ ಹಾಗೆ ಬಿಡಲಿಲ್ಲ. ಬೆಳಗಿನಿಂದ ಸಂಜೆಯವರೆಗೆ, ಜನ ಕೊಡುವ ಲೈಂಗಿಕ ಹಿಂಸೆಗಳನ್ನು ಅನುಭವಿಸಿಕೊಂಡು ಕಾರ್ಖಾನೆಗಳಲ್ಲಿ ಉದ್ಯೋಗ ಮಾಡುತ್ತಿದ್ದಾಗ, ನನಗೆ ಸಿಗುತ್ತಿದ್ದ ಸಂಬಳ ೬ ರೂಪಾಯಿ. ಆದರೆ ಅದೇ ಇಲ್ಲಿ ಸುಮ್ಮನೇ ನಿಂತು ನೋಡಿದರೂ ಸಹ ಸಾವಿರಾರು ರೂಪಾಯಿಗಳು ಸಿಗುತ್ತಿದ್ದವು. ನಮ್ಮ ಕಷ್ಟಕ್ಕೆ ನಾವು ಹೇಗೋ ಬದುಕು ಕಟ್ಟಿಕೊಂಡೆವು, ಈಗ ಊಟಕ್ಕೇನೂ ಬರವಿಲ್ಲ. ಇಂತ ನಮ್ಮನ್ನು, ಈ ಸಮಾಜ, ಸರಕಾರ 'ವೇಶ್ಯೆಯರು' ಅಂತ ಪಟ್ಟ ಕಟ್ಟಿ, ನೀವು ಹೀಗೆ ಇರಬಾರದು, ಹೀಗೆ ಇರಬೇಕು, ಅಂತೆಲ್ಲ ನಮ್ಮನ್ನ ಪೀಡಿಸುತ್ತಿದೆ. ಆಗ ನಾವು ಕಷ್ಟ ಪಟ್ಟು ದುಡಿಯುತ್ತಿದ್ದಾಗ, ನಮ್ಮನ್ನು ನೈತಿಕತೆಯಿಂದ ಬದುಕಲು ಬಿಡಲಿಲ್ಲ. ಈಗ ಅದೇ ಅನೈತಿಕತೆಯಿಂದ ಚೆನ್ನಾಗಿ ಬದುಕುತ್ತಿದ್ದೀವಿ ಈಗಲೂ ಬಿಡುತ್ತಿಲ್ಲ. ನಾನು ಒಪ್ಪಿಕೊಳ್ಳುತ್ತೇನೆ ಇದು ತಪ್ಪು ಅಂತ. ಆದರೆ ಇಲ್ಲಿಗೆ ಬರುವ ಮುನ್ನವೇ ನಮ್ಮನ್ನು ತಡೆದಿದ್ದರೆ.....'(ಹಾಗೆ ಅಂದವಳ ಕಣ್ಣಲ್ಲಿ ನೀರಾಡಿದ ನೆರಳು ಸುಳಿಯುತ್ತದೆ).

ಸಂಡಿಗೆ ಮಾಡಬೇಕಂತೆ, ಹಪ್ಪಳ ಮಾಡಬೇಕಂತೆ, ಉಪ್ಪಿನಕಾಯಿ ಮಾಡಬಹುದಂತೆ, ಯಾರು ತಿನ್ನುತ್ತಾರೆ ನಾವು ಮಾಡಿದ್ದನ್ನು, ಜನ ಇದು **ಸೂಳೆಯರು ಮಾಡಿದ್ದು ಬೇಡ** ಅಂತಾರೆ. ಇನ್ನು ಟೇಲರಿಂಗ್ ಅಂತೆ, ಅದನ್ನು ನಾವೇ ಯಾಕೆ ಕಲೀಬೇಕು? ಕಲಿತರೂ ಸಹ, ಈಗ ಚಿಕ್ಕ ಹಳ್ಳಿಯಲ್ಲಿಯೂ ಸಿನೇಮಾದಲ್ಲಿ ಹಿರೋಯಿನ್ ಹಾಕಿಕೊಂಡಂತಹ ಡಿಸೈನರ್ ಬಟ್ಟೆಗಳನ್ನೇ ಹಾಕಿಕೊಳ್ಳಬೇಕು ಎಂಬ

ಅಭಿಲಾಶೆ ಎಲ್ಲರಲ್ಲೂ ಇರುತ್ತದೆ. ನಮಗೆ ತರಬೇತಿ ನೀಡುವ ಸರಕಾರ ಆ ಮಟ್ಟದಲ್ಲಿ ತರಬೇತಿ ಕೊಡಲು ಸಾಧ್ಯವಿದೆಯಾ? ಸಾಧ್ಯವಿದೆ ಅಂತಾದರೆ, ನಾವು ಈ ವಯಸ್ಸಿನಲ್ಲಿ ಅದನ್ನು ಕಲಿಯಲು ಸಾಧ್ಯಾನಾ? ಯಾವ ಹೊತ್ತಲ್ಲಿ ಸರಕಾರ ರಕ್ಷಣೆ ಕೊಡಬೇಕಾಗಿದ್ದಿತೋ ಆಗ ಏನೂ ಕೊಡಲಿಲ್ಲ. ಈಗ ನಾವೇನೂ ಬಯಸುತ್ತಿಲ್ಲ, ಆದರೂ ಸರಕಾರ ಬಂದು ಏನೇನೋ ಹೇಳುತ್ತಿದೆ.

ಇದೇ ಟೇಲರಿಂಗ್ ಕೌಶಲ್ಯವನ್ನು, ಕಂಪ್ಯೂಟರ ಶಿಕ್ಷಣವನ್ನು, ಸರಕಾರ ನನಗೆ ಶಾಲೆಯಲ್ಲಿದ್ದಾಗಲೇ ಕಲಿಸಿದ್ದರೆ, ನಾನಿಲ್ಲಿ ಬರ್ತಾನೇ ಇರಲಿಲ್ಲ. ಆಗ ಸರಕಾರದಿಂದ ಯಾವುದೇ ಇಂತಹ ತರಬೇತಿಗಳೂ ಇರಲಿಲ್ಲ. ಟೇಲರಿಂಗ್ ಕಲಿಯಬೇಕೆಂದರೆ ನಾನು ೫ ರೂಪಾಯಿ ಕೊಡಬೇಕಾಗಿದ್ದಿತು. ನನ್ನ ತಂದೆಯ ದಿನದ ಪೂರ್ಣ ದುಡಿತವೇ ೪ ರೂಪಾಯಿ ಇದ್ದು, ಟೇಲರಿಂಗ್‌ಗೆ ೫ ರೂಪಾಯಿ ಹೇಗೆ ಕೊಡಲು ಸಾಧ್ಯ?

ಈ ಹಿನ್ನೆಲೆಯಲ್ಲಿ, ಇಂದಿಗೂ ಸಹ ನಾನು ಹೇಳುವುದೆಂದರೆ, ಒಬ್ಬ ೮ನೇ ವರ್ಗದ ವಿದ್ಯಾರ್ಥಿನಿಗೆ, ಟೇಲರಿಂಗ್, ಕಂಪ್ಯೂಟರ್ ನಂತಹ ತರಬೇತಿಗಳನ್ನು ಕಲಿಸಿದರೆ, ಕಷ್ಟ ಬಂದಾಗ ಮನೆ ಬಿಟ್ಟು ಹೋಗುವ ಬದಲು, ತನಗೆ ಗೊತ್ತಿದ್ದ, ಕೌಶಲ್ಯದಿಂದ ಇದ್ದ ಜಾಗೆಯಲ್ಲಿಯೇ ದುಡಿಯಲು ಅವಕಾಶ ಗಳಿರುತ್ತವೆ. ಆದ್ದರಿಂದ ಆ ಕೌಶಲ್ಯಗಳನ್ನು ನಮಗೆ ಈ ಹಂತದಲ್ಲಿ ಕಲಿಸುವುದಕ್ಕಿಂತ ಶಾಲೆಗಳಲ್ಲಿ ಮಕ್ಕಳಿಗೆ ಕಲಿಸುವುದು ಒಳ್ಳೆಯದು. ಎಂದು ಸುಗುಣ ಅಭಿಪ್ರಾಯ ಪಡುತ್ತಾರೆ.

ಹಾಗೆಯೇ ಇಂದು ಕರ್ನಾಟಕದಲ್ಲಿ ೧೦ನೇ ವರ್ಗದವರೆಗೂ ಮಕ್ಕಳಿಗೆ ಫ್ರೀ ಶಿಕ್ಷಣ, ಊಟ, ಸೈಕಲ್ ಕೊಡುತ್ತಿದ್ದಾರಂತೆ. ಅದು ತುಂಬಾ ಒಳ್ಳೆಯದು. ಬಡವರ ಮನೆಯ ಹೆಣ್ಣುಮಕ್ಕಳು ಕಲಿಯಲು ಆಸಕ್ತಿ ಇದ್ದಲ್ಲಿ ಅವರಿಗೆ ಸರಕಾರ ಒಳ್ಳೆಯ ಬೆಂಬಲ ಸಹಾಯ ನೀಡಿದರೆ, ಮಕ್ಕಳು ಕೆಲಸದ ನೆಪದಲ್ಲಿ ಮುಂಬಯಿಯಂತಹ ನಗರದಲ್ಲಿ ತನ್ನ ದೇಹವನ್ನು ಮಾರಿಕೊಳ್ಳುವುದು ತಪ್ಪುತ್ತದೆ". ಎಂದು ಹೇಳುತ್ತಾಳೆ.

ಮೇಲಿನ ಪ್ರಕರಣದೊಂದಿಗಿನ ಚರ್ಚೆಯಲ್ಲಿ ಸುಗುಣ ಹೇಳುವಂತೆ, ಶಾಲೆಗಳಲ್ಲಿ ಅಕ್ಷರಭ್ಯಾಸದ ಜೊತೆಗೆ, ಟೇಲರಿಂಗ್ ಮತ್ತು ಕಂಪ್ಯೂಟರ್ ನಂತಹ ಕುಶಲತೆಗಳನ್ನು ಹೇಳಿಕೊಟ್ಟರೆ ಮಕ್ಕಳು ಬಡತನವನ್ನು ಎದುರಿಸುವ ಶಕ್ತಿಯನ್ನು ಹೊಂದುತ್ತಾರೆ.

ಮುಂಬಯಿಯ ಟಾಟಾ ಇನ್ಸ್ಟಿಟ್ಯೂಟ್‌ನಲ್ಲಿ ಪ್ರಾಧ್ಯಾಪಕರಾಗಿರುವ ಶರಾನ ಅವರು "ಶಿಕ್ಷಣ ಅನ್ನುವುದು ಒಂದು ಅಭಿವೃದ್ಧಿಯ ಮೂಲ ಮಂತ್ರವಾಗಿದೆ. ಹಾಗಾಗಿ ಹುಟ್ಟುವ ಎಲ್ಲ ಮಕ್ಕಳಿಗೂ ಶಿಕ್ಷಣ ದೊರಕುವಂತೆ ಮಾಡಬೇಕು. ಅದಕ್ಕಾಗಿ ಇಲ್ಲಿಗೆ ಬರುವ ಮೊದಲೇ ಅವರನ್ನು ಅವರ ಮೂಲ ಸ್ಥಳದಲ್ಲಿಯೇ ತಡೆಗಟ್ಟಲು ಕ್ರಮ ಕೈಗೊಳ್ಳುವುದು ಕ್ಷೇಮ" ಎಂದು ಅಭಿಪ್ರಾಯ ಪಡುತ್ತಾರೆ.

ಸಹಾಯಕ ಪೋಲೀಸ್ ಕಮೀಶನರ್, ವಿ.ಟಿ ಮುಂಬಯಿ ಇವರು, "ನಾವು ಮಕ್ಕಳ ರಕ್ಷಣೆಯ ವಿಷಯದಲ್ಲಿ ಎಲ್ಲ ಆಯಾಮಗಳಿಂದಲೂ ಕೆಲಸ ಮಾಡುತ್ತಿದ್ದೇವೆ. ರಕ್ಷಣೆ ಮಾಡಿ ಕಳಿಸಿದ ಮೇಲೆ

ಮಕ್ಕಳು ಮತ್ತೆ ಮರಳಿ ಬರದಂತೆ ನೋಡಿಕೊಳ್ಳಬೇಕು. ಇಲ್ಲದಿದ್ದರೆ ಹೀಗೆ ಬರುವ ಮಕ್ಕಳು ಮತ್ತ್ತ ಹೊಸ ಮಕ್ಕಳು ರೆಡ್‌ಲೈಟ್ ಏರಿಯಾಗಳಿಗೆ ಬರುವಂತೆ ಮಾಡುವ ಪ್ರೇರಕರಾಗಿರುತ್ತಾರೆ. ಹೀಗೆ ಪುನರ್ವಸತಿಗೆ ಹೋದ ಮಕ್ಕಳಿಗೆ ಸರಕಾರದಿಂದ ಸರಿಯಾದ ಸೌಲಭ್ಯ ಸಿಗುವುದಿಲ್ಲ. ಹೊರಗೆ ಹೇಳಿದಂತೆ ಒಳಗೆ ಇರುವುದಿಲ್ಲ. ಮಲಗಲು ಬೆಚ್ಚಗಿನ ಹಾಸಿಗೆ ಹೊದಿಕೆ ಇರುವುದಿಲ್ಲ. ಸ್ನಾನಕ್ಕೆ ಸೋಪು, ಬಟ್ಟೆ, ಒಳ್ಳೆಯ ನೀರು ಸಿಗುವುದಿಲ್ಲ. ಒಳ್ಳೆಯ ಊಟವೂ ಸಿಗುವುದಿಲ್ಲ. ಆಟವಾಡಲು, ಮಾತನಾಡಲು ಒಳ್ಳೆಯ ವಾತಾವರಣ ಇರುವುದಿಲ್ಲ. ಇದನ್ನೆಲ್ಲ ಸರಕಾರ ಗಮನಿಸಬೇಕು. ಅದರ ಜೊತೆಗೆ ಅವಳಲ್ಲಿ ತಾನು ಬದಲಾಗುತ್ತೇನೆ ಅನ್ನುವ ವಿಚಾರ ಹೃದಯದಿಂದ ಬರುವಂತೆ, ಅವಳನ್ನು ಮಾನಸಿಕವಾಗಿ ಸಿದ್ಧ ಮಾಡಬೇಕು. ಅವಳಲ್ಲಿ ಎಲ್ಲ ರೀತಿಯಿಂದಲೂ ಸಶಕ್ತತೆ ಬೆಳೆಯುವಂತೆ ಮಾಡಬೇಕು. ಹಾಗೆಯೇ ಪುನರ್ನೆಲೆಗೆ ಹೋದಾಗ ಈ ಮಕ್ಕಳು ಕುಟುಂಬದಲ್ಲಿ ಒಬ್ಬ 'ಆಡ್ ಮ್ಯಾನ್' ಆಗಿರುತ್ತಾರೆ. ಅವಳಿಗೆ ಆ ಭಾವ ಬರದಂತೆ ಕುಟುಂಬ ನೋಡಿಕೊಳ್ಳಬೇಕಾಗುತ್ತದೆ. ಹಾಗೆಯೇ ಸಮಾಜದಲ್ಲಿ ಮಕ್ಕಳ ಕುರಿತಾದ, ಮಹಿಳೆಯರ ಕುರಿತಾದ ಪುರುಷರ ವಿಚಾರ ಬದಲಾಗಬೇಕು. ನಾವು ನೀವೆಲ್ಲ ಈ ಜವಾಬ್ದಾರಿಯುತ ಸ್ಥಾನದಲ್ಲಿ ಇದ್ದೇವೆ. ಹೀಗೆ ವಿಚಾರವನ್ನು ಮಾಡುತ್ತೇವೆ. ಆದರೆ ಈ ರೀತಿಯ ವಿಚಾರಗಳು, ಚಿಂತನೆಗಳು ಸಮಾಜದ ಎಲ್ಲ ವ್ಯಕ್ತಿಗಳಿಗೂ ಬರಬೇಕು. ಆಗ ಮಕ್ಕಳು ಸುರಕ್ಷಿತವಾಗಿರಲು ಸಾಧ್ಯ" ಎಂದು ಅಭಿಪ್ರಾಯ ವ್ಯಕ್ತ ಪಡಿಸಿದರು.

**ವೇಶ್ಯಾವಾಟಿಕೆಯನ್ನು ಕಾನೂನು ಕ್ರಮಕ್ಕೆ ಒಳಪಡಿಸುವ ಕುರಿತು ನಿಮ್ಮ ಅಭಿಪ್ರಾಯ ಏನು?** ಎಂಬ ಪ್ರಶ್ನೆಯನ್ನು ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಿಗೆ ಕೇಳಲಾಗಿತ್ತು. ಅದಕ್ಕೆ ಎಲ್ಲರೂ ಉತ್ತರಿಸಲಿಲ್ಲ. ಬಹಳಷ್ಟು ಮಂದಿಗೆ ಅದರ ಅರಿವೂ ಇರಲಿಲ್ಲ. ಕೆಲವರು ಈ ರೀತಿ ಉತ್ತರಿಸಿದರು,

• ಕಾನೂನು ಮಾನ್ಯತೆ ಬ್ಯಾಡ, ನಿಯಂತ್ರಣ ಕಷ್ಟವಾಗುತ್ತದೆ. ಒಂದು ವೇಳೆ, ಮಾನ್ಯತೆ ಕೊಟ್ರೆ ಅಮಾಯಕರನ್ನು ಫಸಾಯಿಸಿ ತರ್ತಾರ.

• ಕಾನೂನು ಮಾನ್ಯತೆ ಮಾಡಬೇಕು. ಯಾಕಂದ್ರ ಇಲ್ಲಿಗೆ ಯಾರೂ ಬೇಕಂತ ಬಂದಿರಂಗಿಲ್ಲ. ಪರಿಸ್ಥಿತಿ ಎಳೆದು ತಂದಿರ್ತೈತಿ. ಮೋಸ ಹೋಗಿರ್ತಾರ. ಕಾನೂನಿನ ಪ್ರಕಾರ ಇದು ಅಪರಾಧ. ಅದರಿಂದನ ನಮ್ಮ ಜೀವ ಹಿಂಡತಾರ. ಪ್ರತಿಕ್ಷಣವೂ ಹೆದರಕೊಂತಾನೆ ಬದುಕಬೇಕು. ಒಂದು ಸಲ ಪೋಲೀಸರು ಇಡೀ ಗಲ್ಲಿನ ರೈಡ್ ಮಾಡಿದ್ದರು. ಎಲ್ಲ ಹುಡುಗೀರು, ಹೆಣ್ಣುಮಕ್ಕಳು, ಮುದುಕಿಯರು ಎಲ್ಲರನ್ನೂ ಹಿಡಿದು ಜೈಲಿಗೆ ಹಾಕಿದ್ರು, ಮುಂಬೈ ಜೈಲು ತುಂಬಿ, ಜಾಗ ಇಲ್ಲಾಗ ಅವರವರ ಊರಿನ ಜೈಲುಗಳಿಗೂ ಕಳಿಸಿದ್ದರು. ಎಲ್ಲ ಕೇಸ್ ಖುಲಾಸೆ ಆಗಿ ಹೆಣ್ಣುಮಕ್ಕಳು ಹೊಳ್ಳಿ(ಮರಳಿ) ಗಲ್ಲಿಗೆ ಬಂದಾಗ ಜೈಲಿನ್ಯಾಗ ಬಸರ(ಗರ್ಭಿಣಿ) ಆಗಿ ಬಂದಿದ್ದರು. ಇದರ ಅರ್ಥ ಏನು? ರಕ್ಷಣಾ ಮಾಡುತ್ತೇವೆಂದು ಕರ್ಕೊಂಡು ಹೋಗಿದ್ದ ಪೋಲೀಸ್ರು ನಮ್ಮ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡಿದ್ರು, ಇಂಥ ಪ್ರಸಂಗ ದಿನಾಲೂ ನಡೀತಾವು. ಹೊರ ಜಗತ್ತಿಗೆ, ಸಮಾಜಕ್ಕೆ, ಸರ್ಕಾರಕ್ಕೆ ಅರ್ಥವಾಗುವುದಿಲ್ಲ. ಅದೇ ಕಾನೂನಿನ ಮಾನ್ಯತೆ ಸಿಕ್ಕರೆ ನಾವು ಇಂತ ಯಾವ ಶಕ್ತಿಗಳಿಗೂ ಅಂಜಬೇಕಾಗಿಲ್ಲ. ಎಂದು ಹೇಳುತ್ತಾರೆ.

ಕೊನೆಯಲ್ಲಿ, ಮಹಿಳೆಯರಿಗೆ ನೀವು ಹೇಗಿದ್ದೀರಿ? ನಿಮ್ಮ ಮನಸ್ಸು ಏನು ಹೇಳುತ್ತದೆ? ಎಂಬ ಪ್ರಶ್ನೆಯನ್ನು ಕೇಳಿದಾಗ, ಎಲ್ಲರೂ ಉತ್ತರಿಸಲಿಲ್ಲ. ಆದರೂ ಹತ್ತು ಯುವತಿಯರು ತುಂಬಾ ಭಾವನಾತ್ಮಕವಾಗಿ ಉತ್ತರಿಸಲು ಪ್ರಯತ್ನಿಸಿದರು.

- ರೆಸ್ಕ್ಯೂ ಹೋಂನಲ್ಲಿ ಇದ್ದಿದ್ರ ಬಾಳ ಆರಾಮಿರ್ತಿದ್ವ್ಯಾ, ಇವತ್ತ ಚಲೋ ನೌಕರಿಗೆ ಹತ್ತಿರ್ತಿದ್ವ್ಯಾ.
- ನಾನು ಗಳಿಸಿ ನನ್ನ ತಾಯಿಗೆ ಕೊಡ್ತಿದ್ದ್ಯಾ. ಆಕೀ ಅದನ್ನು ಊರಾಗಿರೋ ತನ್ನ ಅಣ್ಣ ತಮ್ಮಂದಿರಿಗೆ, ಸಂಬಂಧಿಕರಿಗೆ ಕೊಡ್ತಿದ್ದಳು. ಇವತ್ತು ಅವರೆಲ್ಲ ಆರಾಮ ಅದಾರ ನಮಗ ಏನೂ ಇಲ್ಲ. ಅವರನ್ನ ನೋಡಿ ಜೀವ ಮರಗತೈತಿ. ನಾವು ಊರಾಗ ಇದ್ದಿದ್ದರ ಅವರಂಗ ಚೆನ್ನಾಗಿ ಇರ್ತಿದ್ವಿನ ಅನಿಸತೈತಿ.
- ನಾ ಆರಾಮ ಅದನಿ ಏನೂ ಸಮಸ್ಯೆ ಇಲ್ಲ.
- ಇವತ್ತಿಗೂ ನನಗ ಬಾಳ ದುಃಖ ಅನಿಸ್ತೈತಿ. ಈ ಕಸಾರಕಿ ಇರದಿದ್ರ ನನ್ನ ಮಂದಿ, ನನ್ನ ಮಕ್ಕಳ ಜೋತೀಗಿ ಒಂದಾಗಿ ಇರ್ತಿದ್ದ್ಯಾ.
- ತುಂಬಾ ಕೆಟ್ಟ ಅನಿಸ್ತೈತಿ. ಹಂಗಂತ ಓಡಿ ಹೋಗಾಕೂ ಆಗಂಗಿಲ್ಲ. ಇಲ್ಲೀನೂ ಏನು ಸಿಗಂಗಿಲ್ಲ.
- ಓದಬೇಕಿತ್ತು, ಇದು ಯಾರಿಗೂ ಬ್ಯಾಡ ಬಾಳ ತ್ರಾಸ ಐತಿ.
- ಏನೋ ಕಷ್ಟ ಅಂತ ಬಂದ ಬಿಟ್ಟೇವಿ. ಎಲ್ಲಾನೂ ಚಲೋನ ಆಗೈತಿ.
- ಹಣೆಬರಹ ಹಿಂಗಿತ್ತು.
- ಕಷ್ಟನೋ ಸುಖಾನೋ ಗೊತ್ತಿಲ್ಲ. ಈ ದಂಧೆ ಒಳಗ ಅದನಿ. ಎಲ್ಲಾ ಕನಸೂ ನನಸಾಗ್ಯಾವ. ಎಲ್ಲದಕ್ಕಿಂತ ಮುಖ್ಯ ನನ್ನ ಮಗಳ ಮದುವೆ ಆಗೈತಿ. ಅದೇ ಸಂತೋಷ.

ಮೇಲಿನ ಉತ್ತರಗಳನ್ನು ಗಮನಿಸಿದಾಗ ಅವರ ಅಸಹಾಯಕತೆ ಎದ್ದು ಕಾಣುತ್ತದೆ. ಚೆನ್ನಾಗಿ ಇದ್ದೇವೆ ಎಂದು ಹೇಳುವ ಇಬ್ಬರನ್ನು ಸೇರಿಸಿಯೇ ತಮ್ಮನ್ನು ರಕ್ಷಣೆ ಮಾಡಿಕೊಳ್ಳಲು ಆಗದಿರುವ ನೋವನ್ನು ವ್ಯಕ್ತಪಡಿಸುತ್ತಾರೆ. ಓದಿದ್ದರೆ ನಾನು ಚೆನ್ನಾಗಿರುತ್ತಿದ್ದೆ ಎಂಬ ಮಾತಲ್ಲಿ ಭವಿಷ್ಯದ ಕುರಿತು ಮುಂದಾಲೋಚನೆ ಇತ್ತು ಎಂಬುದು ಕಂಡು ಬರುತ್ತದೆ. ಇಂಥವರು ತಮ್ಮ ಮಕ್ಕಳನ್ನು ಉತ್ತಮ ದಾರಿಯಲ್ಲಿ ನಡೆಸುತ್ತಾರೆಂಬ ಒಂದು ನಂಬಿಕೆಯೇ ಸಮಾಜದ ಆರೋಗ್ಯಕರ ಸ್ಥಿತಿಗೆ ಆಧಾರವಾಗುತ್ತದೆ ಎಂಬ ವಿಶ್ವಾಸ ಬೆಳೆಸುತ್ತದೆ.

ಲೈಂಗಿಕ ಜೀತಕ್ಕೆ ಒಳಗಾದ ಬಾಲೆಯರ ರಕ್ಷಣಾ ಅಂಶಗಳನ್ನು ಗಮನಿಸಿದಾಗ ತುಂಬಾ ಗಂಭೀರವೆನಿಸುವ ಅಂಶಗಳು ಬೆಳಕಿಗೆ ಬರುತ್ತವೆ. ೧೯೬೦ನೇ ಇಸ್ವಿಯಲ್ಲಿಯೇ ಬಾಲ ನ್ಯಾಯ ಕಾಯಿದೆಯು ಜಾರಿಗೊಂಡಿತ್ತು. ಸಂಯುಕ್ತ ರಾಷ್ಟ್ರ ಸಂಸ್ಥೆಯು ೧೯೮೯ರ ನವೆಂಬರ್ ೨೦ರಂದು

ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಅಂಗೀಕರಿಸಿತು. ಈ ಒಡಂಬಡಿಕೆಯು, ಬಲಿಪಶುವಾದ ಮಕ್ಕಳನ್ನು ಸಾಧ್ಯವಾದಷ್ಟು ಮಟ್ಟಿಗೆ ನ್ಯಾಯಿಕ ವ್ಯವಹರಣೆಗಳಿಗೆ ಗುರಿಪಡಿಸದೆ ಸಾಮಾಜಿಕ ಜೀವನದಲ್ಲಿ ಪುನಃ ಒಂದಾಗಿ ಬೆರೆಯುವಂತೆ ಮಾಡುವುದಕ್ಕೆ ಒತ್ತು ನೀಡಿರುತ್ತದೆ. ಈ ಒಡಂಬಡಿಕೆಯನ್ನು ಭಾರತ ಸರ್ಕಾರವು ೧೯೯೨ರ ಡಿಸೆಂಬರ್ ೧೧ರಂದು, ಸಹಿ ಹಾಕಿ ಒಪ್ಪಿಕೊಂಡ ಹಿನ್ನೆಲೆಯಲ್ಲಿ ೧೯೮೬ನೇ ಇಸ್ವಿಯಲ್ಲಿ ಜಾರಿಗೊಂಡಿದ್ದ ಬಾಲನ್ಯಾಯದ ಮೂಲ ಕಾಯಿದೆಗೆ ೨೦೦೦ರಲ್ಲಿ ತಿದ್ದುಪಡಿ ತಂದು ಬಾಲನ್ಯಾಯ(ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯಿದೆ, ೨೦೦೦ ಎಂದು ಜಾರಿಗೊಳಿಸಲಾಯಿತು. ೧೯೮೬ರಲ್ಲಿ ಜಾರಿಗೊಂಡಿದ್ದ ಮೂಲ ಕಾನೂನಿನನ್ವಯ, ಬಾಲ ಕಾರ್ಮಿಕ ಕಾಯಿದೆ ೧೯೮೬ರ ಅನ್ವಯ, ಅಲ್ಲದೇ ಅನೈತಿಕ ಸಾಗಾಣಿಕ ತಡೆ ಕಾಯಿದೆ ೧೯೫೬ರ ಅನ್ವಯ ಸಹ ಬಾಲೆಯರನ್ನು ರಕ್ಷಿಸಬಹುದಿತ್ತು. ಆದರೆ ಪೊಲೀಸ್ ಪಡೆಯು ಹೆಸರಿಗೆ ಮಾತ್ರ ಕಾರ್ಯಾಚರಣೆ ಮಾಡಿ, ಘರವಾಲಿಗಳಿಂದ ಹಣ ಪಡೆದು, ಬಂಧಿಸಿದ ಮಕ್ಕಳನ್ನು ಅಲ್ಲಿಯೇ ಬಿಟ್ಟು ಹೋದ ಘಟನೆಗಳು ನಡೆದಿವೆ. ಅಲ್ಲದೇ ಪ್ರತಿ ತಿಂಗಳೂ ಘರವಾಲಿಗಳು ಪೊಲೀಸರಿಗೆ ಹಫ್ತಾ ನೀಡಬೇಕಾಗಿತ್ತು. ಇದರ ಅರ್ಥ ಮಕ್ಕಳನ್ನು ರಕ್ಷಿಸುವ ನಾಟಕ ಮಾತ್ರ ಅಲ್ಲಿ ನಡೆಯುತ್ತಿತ್ತು. ರೇಡಿಗೆ ಬರುವ ಮೊದಲೇ ಘರವಾಲಿಗಳಿಗೆ ಪೊಲೀಸರು ಮಾಹಿತಿ ನೀಡುತ್ತಿದ್ದರು, ಹೀಗಾಗಿ ಮಕ್ಕಳನ್ನು ಘರವಾಲಿಯರು ಮುಚ್ಚಿಡುತ್ತಿದ್ದರು. ಕೆಲವು ಹುಡುಗಿಯರು ಹೇಳುವಂತೆ, ಅವರಾಗಿಯೇ ತಪ್ಪಿಸಿಕೊಂಡು ಹೋದರೂ ಕೂಡ ಅವಳನ್ನು ಪೊಲೀಸರೇ ಹಿಡಿದು ತಂದು ಘರವಾಲಿಗಳಿಗೆ ಒಪ್ಪಿಸಿದ ಪ್ರಕರಣಗಳು ಇವೆ. ಹೀಗಾಗಿ ಸಂವಿಧಾನದ ಆಶಯದಂತೆ ಕಾನೂನುಗಳು ರಚನೆಗೊಂಡಿದ್ದರೂ ಸಹ ಅವುಗಳ ಪಾಲನೆ ಸರಿಯಾಗಿ ಆಗದೇ ಇರುವುದು ಕಂಡುಬರುತ್ತದೆ.

### ೪.೩. ಪುನರ್ವಸತಿ ಬಾಲೆಯರೊಂದಿಗೆ ಗುಂಪು ಚರ್ಚೆ

ಇದೇ ಅಧ್ಯಾಯದ ಭಾಗವಾಗಿ ಲೈಂಗಿಕ ಜೀತದಿಂದ ರಕ್ಷಿಸಿ ತಂದ ಕರ್ನಾಟಕದ ಹೆಣ್ಣುಮಕ್ಕಳಿರುವ ಎರಡು ಗುಂಪುಗಳ ಜೊತೆ ಸಂವಾದ ಮಾಡಲಾಯಿತು. ಇದರಲ್ಲಿ ಒಂದು ಗುಂಪು ಸರ್ಕಾರದ ವಿಶೇಷ ಗೃಹದಲ್ಲಿ ಮತ್ತು ಇನ್ನೊಂದು ಗುಂಪು ಸ್ವಯಂ ಸೇವಾ ಸಂಸ್ಥೆಯಲ್ಲಿ ಪುನರ್ವಸತಿ ಪ್ರಕ್ರಿಯೆಯಲ್ಲಿದ್ದವು. ಹಾಗೆಯೇ ಲೈಂಗಿಕ ಜೀತಕ್ಕೆ ಬಲಿಯಾಗಿ ಮುಂಬಯಿಯಲ್ಲಿಯೇ ಬದುಕು ಕಟ್ಟಿಕೊಳ್ಳಲು ಪರದಾಡುತ್ತಿರುವ ಮಹಿಳೆಯರ ಗಂಡು ಮಕ್ಕಳೊಂದಿಗೂ ಸಂವಾದ ಮಾಡಲಾಯಿತು.

#### ೪.೩/೧. ಗುಂಪು ಚರ್ಚೆ–೧

ಮುಂಬಯಿಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ನಡೆಯುತ್ತಿರುವ ಹೆಣ್ಣುಮಕ್ಕಳ ವಿಶೇಷ ಗೃಹಕ್ಕೆ ಅಧ್ಯಯನದ ಅವಧಿಯಲ್ಲಿ ಭೇಟಿ ಕೊಡಲಾಗಿತ್ತು. ಅಲ್ಲಿ ೧೫ ದಿನಗಳ ಹಿಂದೆ ಪೊಲೀಸ್ ರೇಡ್‌ನಲ್ಲಿ ಸಿಕ್ಕ ಹುಡುಗಿಯರ ಗುಂಪಲ್ಲಿ ೧೩ ಜನ ಕರ್ನಾಟಕದ ಹುಡುಗಿಯರಿದ್ದರು. ಅವರ ಜೊತೆ ಸಂವಾದ ಮಾಡಲಾಯಿತು. ಆ ಪ್ರಕಾರ ಹುಡುಗಿಯರು ೧೭–೧೮ರ ವಯಸ್ಸಿನವರಾಗಿದ್ದರು. ಅವರು ಕರ್ನಾಟಕದ ಕೋಲಾರ, ಗೌರಿಬಿದನೂರು, ಬೆಂಗಳೂರು, ಚಾಮರಾಜನಗರಗಳಿಂದ

ಬಂದವರಾಗಿದ್ದರು. ಅವರಲ್ಲಿ ಒಬ್ಬಳು ಮಾತ್ರ ೬ನೇ ತರಗತಿವರೆಗೆ ಓದಿಕೊಂಡವಳಾಗಿದ್ದಳು. ಉಳಿದವರು ಅನಕ್ಷರಸ್ಥರಾಗಿದ್ದರು. ಮುಂಬಯಿಯ ಖೇತವಾಡಿ, ಕಾಮಾಟಿಪೂರ, ಜೀವಂಡಿ, ಗ್ರ್ಯಾಂಟ್ ರೋಡ್ ಹೀಗೆ ಬೇರೆ ಬೇರೆ ಕಡೆಯಿಂದ ಅವರನ್ನು ಬಂಧಿಸಿ ತರಲಾಗಿತ್ತು. ವಿಶೇಷ ಗೃಹದಲ್ಲಿ ಅವರನ್ನು ಪುನರ್ವಸತಿಗಾಗಿ ಇರಿಸಿದ್ದರು. ಅಲ್ಲಿ ಅವರಿಗೆ ಟೇಲರಿಂಗ್ ತರಬೇತಿ ನಡೆಯುತ್ತಿತ್ತು. ಅವರಿಗೆ ಇಷ್ಟವಿದ್ದರೆ ಕಲಿಯಬಹುದಿತ್ತು. ಒತ್ತಾಯವಿರಲಿಲ್ಲ. ಇವರಲ್ಲಿ ಒಬ್ಬಳೇ ಕಲಿಯುತ್ತಿದ್ದಳು. ಒಟ್ಟಿನಲ್ಲಿ ತರಬೇತಿ ಪಡೆಯುವವರಿಗಿಂತ ಹಾಗೇ ತಿರುಗಾಡೋರೇ ಜಾಸ್ತಿ ಇದ್ದರು.

ಯಾಕೆ ನೀವು ತರಬೇತಿಯಲ್ಲಿ ಪಾಲ್ಗೊಳ್ಳುತ್ತಿಲ್ಲ? ಎಂದು ಕೇಳಿದಾಗ, "ನಮಗೆ ಓದಲು ಬರೆಯಲು ಬರೋದಿಲ್ಲ. ಅದು ಅರ್ಥವಾಗೋದಿಲ್ಲ" ಅಂತ ಹೇಳುತ್ತಿದ್ದರು. ಅವರಲ್ಲಿ ಎಲ್ಲ ಹುಡುಗಿಯರದೂ ಮದುವೆಯಾಗಿತ್ತು. ಕೆಲವರಿಗೆ ಮಕ್ಕಳೂ ಇದ್ದವು. ಕೆಲವರನ್ನ ಗಾರ್ಮೆಂಟ್ ಕಂಪನಿಗಳಲ್ಲಿ ಕೆಲಸ ಮಾಡುವಾಗ, ಇನ್ನು ಚೆನ್ನಾಗಿರೋ ಕೆಲಸ ಕೊಡಿಸುವ ಭರವಸೆ ನೀಡಿ ಸಾಗಾಣಿಕೆ ಮಾಡಲಾಗಿತ್ತು. ಒಬ್ಬಳನ್ನು ಮದುವೆ ಮಾಡಿಕೊಂಡ ಗಂಡನೇ ವೇಶ್ಯಾಗೃಹಕ್ಕೆ ಮಾರಿ ಹೋಗಿದ್ದ. ಒಂದೆರಡು ಹುಡುಗಿಯರನ್ನು ರೈಲ್ವೇ ಸ್ಟೇಶನ್ನಿನಿಂದ ಮೋಸ ಮಾಡಿ ಸಾಗಾಣಿ ಮಾಡಲಾಗಿತ್ತು. ಇವರ ಮನೆಯವರಿಗೆ ಇವರನ್ನು ಲೈಂಗಿಕ ವ್ಯವಹಾರದಲ್ಲಿ ತೊಡಗಿಸಲಾಗಿದೆ ಎಂಬುದೇ ಗೊತ್ತಿಲ್ಲ ಎಂದು ಹುಡುಗಿಯರು ಹೇಳುತ್ತಿದ್ದರು.

ಹುಡುಗಿಯರು ತುಂಬಾ ಬೇಸರದಲ್ಲಿದ್ದರು. ಕನ್ನಡ ಮಾತನಾಡುವವರು ಬಂದಿದ್ದಾರೆ. ತಮ್ಮನ್ನು ಅಲ್ಲಿಂದ ಬಿಡಿಸಿ ಊರಿಗೆ ಕಳಿಸುತ್ತಾರೆ ಎಂಬ ದೊಡ್ಡ ಭರವಸೆಯಿಂದ ಮಾತನಾಡುತ್ತಿದ್ದರು. ಕೆಲವು ಹುಡುಗಿಯರ ವಿಷಯದಲ್ಲಿ ಅವರು ವೇಶ್ಯಾಗೃಹಗಳಲ್ಲಿರುವಾಗ ಪರಿಚಯವಾಗಿದ್ದ ಖಾಯಂ ಗಿರಾಕಿಗಳೇ ಅವರನ್ನ ತಮ್ಮವರೆಂದು ಪರಿಚಯಿಸಿಕೊಂಡು ಬಿಡಿಸಿಕೊಂಡು ಹೋಗಲು ಓಡಾಡುತ್ತಿರುವುದು ಕಂಡು ಬರುತ್ತಿತ್ತು. ಈ ಹುಡುಗಿಯರೂ ಅವರ ಜೊತೆ ಹೋಗಲು ಇಷ್ಟಪಡುತ್ತಿದ್ದರು.

ವಿಶೇಷ ಗೃಹದಲ್ಲಿ ಹುಡುಗಿಯರಿಗೆ ಊಟಕ್ಕೆ ಮಲಗಲಿಕ್ಕೆ ಓಡಾಡಲಿಕ್ಕೆ ಯಾವುದೇ ಕೊರತೆ ಇರಲಿಲ್ಲ. ಆರಾಮಾಗಿ ಇದ್ದರು. ಆದರೆ ಅಲ್ಲಿಯ ನೀರಿನಿಂದ ಸೋಂಕು ತಗುಲಿ ಬಹುತೇಕ ಎಲ್ಲ ಹುಡುಗಿಯರಿಗೂ ಮೈಮೇಲೆ ಅಗಲ ಅಗಲವಾದ ಗಾಯಗಳಾಗಿದ್ದವು. ಆ ಕುರಿತು ಹುಡುಗಿಯರನ್ನು ಮಾತನಾಡಿಸಿದಾಗ ಅವರು, "*ಈ ಗಾಯಗಳಿಂದ ತುಂಬಾ ಕೆರೆತ ಉಂಟಾಗುತ್ತವೆ. ಹಿಂಸೆ ಅನ್ನಿಸುತ್ತವೆ. ಕೆರೀತಾ ಇದ್ದರೆ ರಕ್ತ ಬರೋವರೆಗೂ ಕೆರೆಯಬೇಕೆನಿಸುತ್ತವೆ. ಕೆರೆದ ಮೇಲೆ ಗಾಯಗಳಾಗುತ್ತಿದ್ದವು. ಅವು ದೇಹದ ಗುಪ್ತಾಂಗಗಳ ಸಂದಿಯಲ್ಲಿ, ಎದೆಯ(ಸ್ತನ) ಕೆಳಗೆ ಜಾಸ್ತಿ ಆಗಿವೆ. ಆಸ್ಪತ್ರೆಗೆ ಕರೆದು ಕೊಂಡು ಹೋಗಿದ್ದರು. ವೈದ್ಯರು ಎರಡು ಮಾತ್ರೆ ಒಂದು ಮುಲಾಮು ಟ್ಯೂಬ್ ಕೊಟ್ಟಿದ್ದು ಎಂದೋ ಮುಗಿದು ಹೋಗಿದೆ. ಆ ಕೆರೆತಕ್ಕೆ ಸಾಯಬೇಕು ಅನ್ನಿಸುತ್ತದೆ. ಅದಕ್ಕಾಗಿ ನಾವು ನಮ್ಮ ಉಚ್ಚೆ(ಮೂತ್ರ)ಯನ್ನು ಗಾಯಕ್ಕೆ ಹಚ್ಚಿಕೊಂಡಿದ್ದೇವೆ. ಇಲ್ಲಿರುವ ಬಹಳಷ್ಟು ಹುಡುಗಿಯರು ಹಾಗೇ ಮಾಡುತ್ತಾರೆ*" ಎಂದು ತಿಳಿಸಿದರು.

ಇದೇ ವಿಚಾರವನ್ನು ಇಲ್ಲಿಯೇ ಇದ್ದು ಪುನರ್ವಸತಿ ಪಡೆಯುತ್ತಿರುವ ಬಾಗಲಕೋಟೆ ಜಿಲ್ಲೆಯ ಮುಧೋಳದ ಹುಡುಗಿಯರೂ ಹೇಳಿದ್ದರು. ಸಂಸ್ಥೆಯಲ್ಲಿ ಹುಡುಗಿಯರು ಹೇಗಿದ್ದಾರೆ ಏನು ಮಾಡುತ್ತಿದ್ದಾರೆ ಅನ್ನುವುದಕ್ಕಿಂತ ಅವರನ್ನು ಎಲ್ಲಿಯೂ ಹೋಗದಂತೆ ಜಗಳವಾಡದಂತೆ ಕಾಯುವುದೇ ಸಿಬ್ಬಂದಿಯು ಮಾಡುತ್ತಿದ್ದ ದೊಡ್ಡ ಕೆಲಸವಾಗಿತ್ತು. ಹೆಚ್ಚಿನ ಹುಡುಗಿಯರಿಗೆ ಅಲ್ಲಿಂದ ಹೊರಗೆ ಹೋಗುವ ಮಾನಸಿಕ ಒತ್ತಡದಲ್ಲಿ ಇದ್ದುದರಿಂದ ಅವರು ಹೆಚ್ಚು ಮಾತನಾಡಲಿಲ್ಲ.

**೪.೩/೨. ಗುಂಪು ಚರ್ಚೆ-೨**

ಕರ್ನಾಟಕದ ಬೆಂಗಳೂರು, ರಾಣೆಬೆನ್ನೂರು, ಶಿವಮೊಗ್ಗ, ಚಿಕ್ಕಮಗಳೂರು, ಗುಲ್ಬರ್ಗ ಹೀಗೆ ಕರ್ನಾಟಕದ ವಿವಿಧ ಭಾಗಗಳಿಂದ ಬಂದು ಲೈಂಗಿಕ ಜೀತಕ್ಕೆ ಒಳಪಟ್ಟು, ರಕ್ಷಣೆಗೊಂಡು ಸರ್ಕಾರೇತರ ಸಂಸ್ಥೆಯಲ್ಲಿ ಪುನರ್ವಸತಿ ಪಡೆಯುತ್ತಿರುವ ಬಾಲೆಯರ ಗುಂಪಿನೊಂದಿಗೆ ಸಂವಾದ ನಡೆಸಲಾಯಿತು. ಈ ಗುಂಪಿನಲ್ಲಿರುವ ಬಾಲೆಯರನ್ನು ೪-೫ ದಿನಗಳ ಹಿಂದೆ ರೇಡ್ ಮಾಡಿ ಕರೆದುಕೊಂಡು ಬರಲಾಗಿತ್ತು. ಅದರಲ್ಲಿ ಇದಕ್ಕಿಂತ ಮೊದಲು ರೇಡ್ ಮಾಡಿದಾಗ ಸಿಕ್ಕ ಹುಡುಗಿಯರೂ ಇದ್ದರು.

ಹಾಗೆಯೇ ಮಾತನಾಡುತ್ತಾ 'ಹೆಣ್ಣುಮಕ್ಕಳು ತುಂಬಾ ಸೂಕ್ಷ್ಮ. ಒಂದು ಮನೆಯಿಂದ ಇನ್ನೊಂದು ಮನೆಗೆ ಹೋಗಲಿಕ್ಕೇ ಭಯ ಪಡುವಂತವರು. ಆದರೆ ನೀವು ಇಷ್ಟು ದೂರ ಬರಲಿಕ್ಕೆ ಹೇಗೆ ಸಾಧ್ಯವಾಯಿತು? ನಿಮಗೆ ಹೆದರಿಕೆ ಆಗಲಿಲ್ಲವಾ? ಎಂಬ ಪ್ರಶ್ನೆಗೆ, ಬಾಲೆಯರಿಂದ ಸಾಮೂಹಿಕವಾದ ಉತ್ತರ ಬಂದದ್ದು, "ನಾವು ಇಲ್ಲಿಗೆ ನಾವಾಗಿಯೇ ಬಂದವರಲ್ಲ. ನಮ್ಮನ್ನು ಕರೆದುಕೊಂಡು ತಂದು ಬಿಟ್ಟರು. ಮೋಸ ಮಾಡಿ ತಂದು ಬಿಟ್ಟರು. ಉದ್ಯೋಗ ಕೊಡಿಸುತ್ತೇವೆಂದು ತಂದರು. ನಮಗೆ ಇಲ್ಲಿ ಹೇಗೆ? ಏಕೆ? ಬಂದೆವೆಂಬುದು ಗೊತ್ತೇ ಆಗಿರಲಿಲ್ಲ" ಎಂದು ಹೇಳಿದರು. 'ಅದು ಏನೇ ಆಗಿರಲಿ, ಅಂತ ನರಕದಿಂದ ನಿಮ್ಮನ್ನು ಪಾರು ಮಾಡಿಕೊಂಡು ಬಂದಿದ್ದಕ್ಕಾಗಿ, ನಿಮಗೆ ಖುಷಿ ಆಗಿರಬೇಕು', ಅಂತ ಅಂದಾಗ, ಕೆಲವು ಜನರಿಗೆ ಮಾತ್ರ ಅದು ಸಂತಸದ ವಿಷಯವಾಗಿತ್ತು. ಆದರೆ ಬಹಳಷ್ಟು ಹುಡುಗಿಯರಿಗೆ ಅದರಿಂದ ಸಂತೋಷವಾದ ಹಾಗೆ ಕಾಣಲಿಲ್ಲ. ಯಾಕೆ? ಎಂದು ಚರ್ಚಿಸಿದಾಗ, ಬೆಂಗಳೂರಿನ ಸಾಜನಾ ಉತ್ತರಿಸಿದ್ದು ಹೀಗೆ, "ಮನೆ ಕಡೆಗೆ ತುಂಬಾ ಕಷ್ಟ. ಅಲ್ಲಿ ಊಟಕ್ಕೂ ಸಹ ಇಲ್ಲ. ನಾವು ಇಲ್ಲಿ ಈ ಕೆಲಸ ಮಾಡಿ ಹಣ ಕಳಿಸಬೇಕು. ಈಗ ಅವರ ಗತಿ ಏನು? ಕೇಸ್ ಇದ್ದ ಹುಡುಗಿಯರನ್ನು ಅಂದರೆ ಮನೆಯಿಂದ ಕಳೆದು ಹೋಗಿದ್ದಾಳೆ ಹುಡುಕಿ ಕೊಡಿ ಅಂತ ಪೊಲೀಸ್ ಕೇಸ್ ಇದ್ದವರನ್ನು ಮಾತ್ರ ಹಿಡಿದುಕೊಂಡು ಬರಬೇಕು. ಅವರ ಜೊತೆ ನಮ್ಮನ್ನೂ ಹಿಡಿದು ತಂದಿರುವುದು ಒಳ್ಳೆಯದಲ್ಲ. ನಾವು ಈಗ ಏನು ಮಾಡಬೇಕು. ಅವರವರ ಇಷ್ಟಕ್ಕೆ ಅವರವರು ಬದುಕಿರ್ತಾರೆ. ಅವರ ಸ್ವಾತಂತ್ರ್ಯ ಕಿತ್ತುಕೊಳ್ಳೋಕೆ ಇವರ್‍ಯಾರು. ಈಗ ಹಕ್ಕಿರೋದು ತಮ್ಮ ತಮ್ಮ ಸ್ವಾತಂತ್ರ್ಯಕ್ಕೆ ಬದುಕೋ ಹಾಗೆ. ನಾನೂ ಓದಿದಿನಿ. ನಮ್ಮ ಸ್ವಾತಂತ್ರ್ಯ ಕಸ್ಕಳ್ಳೋಕೆ ಯಾರಿಗೂ ಹಕ್ಕಿಲ್ಲ ಅಲ್ವಾ! ಈ ಕೆಲಸ ಮಾಡಾಕೆ ಯಾರಿಗೆ ಇಷ್ಟ ಇಲ್ಲ ಅಂತವರನ್ನು ಹಿಡಕೊಂಡು ಕರಕೊಂಡು ಹೋಗಲಿ. ಈಗ ಇಲ್ಲಿಗೆ ಬಂದು ಒಂದು ತಿಂಗಳಾಯ್ತು, ಅಲ್ಲಿ ಮನೇಲಿ ಏನೇನು ಪರಿಸ್ಥಿತಿ

ನಡೆದಿದೆಯೋ ಏನೋ, ಅವರ ಜೊತೆ ಸಂಪರ್ಕಾನೇ ಇಲ್ಲ. ಅವರಿಗೆ ದುಡ್ಡು ಕಳಿಸಿಲ್ಲ. ಏನು ಕಷ್ಟ ಇರತ್ತೋ ಏನೋ. ಅಲ್ಲಿಯ ಮಜಬೂರಿಗಾಗಿಯೇ ಇವರೆಲ್ಲ ಬಂದಿರ್ತಾರೆ. ಎಷ್ಟೋ ಜನ ತಂದೆ ತಾಯಿಗೆ ಇವರು ಇಂತಲ್ಲಿ ಇದ್ದಾರೆ ಅಂತಲೂ ಗೊತ್ತಿರೋದಿಲ್ಲ. ಅವರವರ ಬದುಕಿಗೆ ಅವರು ಬಂದಿರ್ತಾರೆ. ಅದಕ್ಕೂ ಕಲ್ಲು ಹಾಕೋದು ಒಳ್ಳೇದಲ್ಲ. ಅಂತ ಹೇಳ್ತಾ, ಒಂದು ಸಾರಿ ಮರ್ಯಾದಿ ಹೋಗಿ ಬಿಟ್ಟಿದೆ. ಹೀಗೆ ಮಾಡೋದ್ರಿಂದ ಇವರಿಗೆ ಸಮಾಜದಲ್ಲಿ ಆ ಮರ್ಯಾದೆ ಮರಳಿ ಕೊಡಕ್ಕಾಗತ್ತಂದ್ರ ಹಿಡಕಳ್ಳಿ, ಬೇಡ ಅನ್ನಲ್ಲ. ಆದ್ರೆ ಹೊಟ್ಟೆ ಪಾಡಿಗಾಗಿ ಮಾಡ್ತಿರ್ತಾರೆ, ಚಿಕ್ಕ ಚಿಕ್ಕ ಮಕ್ಕಳಿರ್ತಾರೆ. ಅವರೇನು ಮಾಡಬೇಕು. ಹೀಗೆಲ್ಲ ಹೇಳೋ ಸಾಜನಾ ಈಗ ೫ ತಿಂಗಳು ಗರ್ಭಿಣಿ. ಅಪ್ಪ ಸತ್ತು ಹೋಗಿದ್ದಾರೆ. ಅಮ್ಮ ಮತ್ತೊಂದು ಮದುವೆ ಆಗಿದ್ದಾರೆ. ಅದೇ ಮಲ ಅಪ್ಪ ಇವಳ ಮೇಲೆ ಅತ್ಯಾಚಾರ ಮಾಡಿ ಇವಳ ಅಮ್ಮನ ಜೊತೆಗೆ ಕೂಡಿ ವೇಶ್ಯಾಗೃಹಕ್ಕೆ ಮಾರಿ ಹೋಗಿದ್ದಾನೆ. ಸಾಜನಾಳ ಈ ಮಾತಿಗೆ, ಚಿಕ್ಕಮಗಳೂರಿನ ಫಾತಿಮಾ ಹೇಳಿದ್ದೆಂದರೆ, "ನನ್ನ ಗಂಡ ತೀರಿ ಹೋಗಿದ್ದಾರೆ. ಎರಡು ಮಕ್ಕಳು ಇವೆ. ಮಗ ೮ನೇ ವರ್ಗದಲ್ಲಿ ಮತ್ತು ಮಗಳು ೯ನೇ ವರ್ಗದಲ್ಲಿ ಓದುತ್ತಿದ್ದಾರೆ. ನಾನಂತೂ ಓದಿಲ್ಲ. ಅವರನ್ನಾದರೂ ಓದ್ಸೋಣ ಅಂತ ಶಾಲೆಗೆ ಸೇರಿಸಿದ್ದೀನಿ. ಅವರನ್ನ ನನ್ನ ವಯಸ್ಸಾದ ತಾಯಿ ನೋಡಿಕೊಳ್ಳುತ್ತಾರೆ. ಈಗ ನಾವೆಲ್ಲ ಏನು ಮಾಡಬೇಕು". ಅಂತ ಹೇಳಿದ ಮಾತಿಗೆ ಮತ್ತೆ ಬೆಂಗಳೂರಿನ ಸಾಜನಾ ಪ್ರತಿಕ್ರಿಯಿಸಿದ್ದೆಂದರೆ, "ಶೀಲವನ್ನೇ ಕಳೆದುಕೊಂಡಿದ್ದೇವೆ. ಯಾರಾದ್ರೂ ತಂದು ಕೊಡಲಿಕ್ಕೆ ಸಾಧ್ಯಾನಾ ಅದನ್ನ. ಇಲ್ಲಿಗೆ ಬರೋ ಹೊತ್ತಲ್ಲಿ ಯಾರೂ ಕೇಳಲಿಲ್ಲ, ಕಾಪಾಡಲಿಲ್ಲ. ಈಗ್ಯಾಕೆ ನಮ್ಮನ್ನ ಕೇಳ್ತಾರೆ" ಅಂತ ಮುಂಬೈನ ಸುಗುಣಳ ಶೈಲಿಯಲ್ಲಿ ಕೇಳುತ್ತಾಳೆ.

"ನನ್ನ ಹೊಟ್ಟೆ ಪಾಡಿಗಾಗಿ ನಾನು ಬಂದಿದ್ದೀನಿ. ನನ್ನನ್ನ ಯಾರೂ ಕರ್ಕೊಂಡು ಬಂದು ಬಿಟ್ಟಿಲ್ಲ. ಮದುವೆ ಮಾಡಿಕೊಂಡ ಗಂಡ ಬಿಟ್ಟು ಹೋಗಿ ಬೇರೆ ಮದುವೆ ಮಾಡಿಕೊಂಡ. ಈಗ ವಯಸ್ಸಿರುವಾಗಲೇ ಹಣ ಗಳಿಸಿ ಜೀವನಕ್ಕೆ ದಾರಿ ಮಾಡಿಕೊಳ್ಳೋಣ ಅಂತ ಬಂದಿದ್ದೀನಿ. ಅಣ್ಣ ತಮ್ಮ ಎಲ್ಲರೂ ಇದ್ದಾರೆ. ಅವರವರ ಜೀವನ ಅವರಿಗೆ. ನಾನು ಹೋಗಿ ಅವರಿಗೆ ತೊಂದರೆ ಕೊಡಕ್ಕಾಗಲ್ಲ. ಈಗ ನನ್ನನ್ನು ಯಾರು ನೋಡಿಕೊಳ್ತಾರೆ?" ಅಂತ ಗಳ ಗಳನೇ ಕಣ್ಣೀರು ಸುರಿಸುತ್ತಾಳೆ ರಾಣೆಬೆನ್ನೂರಿನ ಚಿಂತನಾ. ಹಾಗೇ ಮುಂದುವರೆದು "ಇಂತ ಕೆಲಸ ಮಾಡ್ತೀವಿ ಅಂತ ಮನೆ ಕಡೆಗೆ ಊರ ಕಡೆಗೆ ಗೊತ್ತಿಲ್ಲ. ಏನೋ ಅಡಿಗೆ ಕೆಲಸ ಮಾಡ್ತೀನಿ ಅಂತ ಹೇಳಿದ್ದೀನಿ. ಈಗ ನಾವು ಹೀಗೆ ಅಂತ ಕರಕೊಂಡು ಹೋದರೆ ಮರ್ಯಾದೆ ಪ್ರಶ್ನೆ ಅಲ್ವ ಮ್ಯಾಡಂ! ಆಗ ಇರುವ ಮನೇನಲ್ಲೂ ಸೇರಿಸ್ಕೊಳ್ಳಲ್ಲ" ಅಂತ ಹೇಳಿದ್ದಕ್ಕೆ ಚಿಕ್ಕಮಗಳೂರಿನ ಫಾತಿಮಾ "ಬುದ್ಧಿ ತಿಳಿಯೋ ಮಕ್ಕಳು ಮನೇನಲ್ಲಿ ಇದ್ದಾರೆ. ನಾವು ಅವರಿಗೋಸ್ಕರ ಇದನ್ನ ಮಾಡ್ತೀವಿ. ನಾವು ಹೀಗೆ ಅಂತ ಗೊತ್ತಾದರೆ ಅವರು ನಮ್ಮನ್ನ ತಿರುಗಿಯೂ ನೋಡಲ್ಲ. ಅದಕ್ಕೆ ನಮ್ಮನ್ನು ನಮ್ಮಷ್ಟಕ್ಕೆ ಬಿಟ್ಟು ಬಿಡಿ. ನಾವೇ ನಮ್ಮ ಮನೆಗೆ ಹೋಗ್ತೀವಿ. ಇಲ್ಲಿಗೆ ಬರೋದಕ್ಕೆ ಮೊದಲು ಹೀಗೆಲ್ಲ ಇರುತ್ತೆ ಅಂತ ಗೊತ್ತಿರಲಿಲ್ಲ. ಏನೋ ಕೆಲಸ ಇರುತ್ತೆ ಚೆನ್ನಾಗಿ ಸಂಪಾದಿಸಬಹುದು ಅಂತ ಬಂದ್ವಿ". ಅಂತ ಅಂದ ಕೂಡಲೇ ಕೌನ್ಸಲರ್ ಅವರು.

"ಹುಡುಗಿಯರು ಹೀಗೆಲ್ಲ ಯಾಕೆ ಮಾಡ್ತಾರೆ? ತುಂಬಾ ಬೇಗ ನಂಬಿ ಬಿಡ್ತಾರೆ. ಒಂದು ಉದ್ಯೋಗ ಕೊಡಿಸ್ತೀನಿ, ಮದುವೆ ಮಾಡಿಕೊಳ್ತೀನಿ ಅಂದ್ರೆ ಸಾಕು, ಹಿಂದೆ ಮುಂದೆ ನೋಡೋದೇ ಇಲ್ಲ. ಮೋಸಕ್ಕೆ ಬಲಿಯಾಗ್ತಾರೆ ಅದರಲ್ಲೂ ಕರ್ನಾಟಕದ ಹುಡುಗಿಯರು ಬಹುಬೇಗ ಮೋಸ ಹೋಗ್ತಾರೆ". ಹೀಗೆ ಕೌನ್ಸಲರ್ ಹೇಳಿದ ಕೂಡಲೇ ಚಿಕ್ಕಮಗಳೂರಿನ ಫಾತಿಮಾ ತುಂಬಾ ನೋವಿನಿಂದ, "ಮ್ಯಾಡಂ, ಹೇಗೆ ಗೊತ್ತಾಗಬೇಕು. ಚಿಕ್ಕ ವಯಸ್ಸಿನಲ್ಲಿ ಗಂಡ ಸತ್ತು ಹೋದಾಗ, ಮಡಿಲಲ್ಲಿ ಎರಡು ಮಕ್ಕಳು. ಎಷ್ಟೋ ದಿನ ಉಪವಾಸ ಕುಳಿತೆವು. ಯಾರೂ ಸಹಾಯಕ್ಕೆ ಬರಲಿಲ್ಲ. ಮಕ್ಕಳನ್ನ ಪುಸ್ತಕ ಇಲ್ಲ ಅಂತ, ಯುನಿಫಾರ್ಮ ಇಲ್ಲ ಅಂತ ಶಾಲೆಯಿಂದ ಹೊರ ಹಾಕಿದ್ರು, ಅಂತ ಹೊತ್ತಲ್ಲಿ ನನ್ನನ್ನು ಬೆಳೆಸಿದ ಪಕ್ಕದ ಮನೆಯ ಹೆಣ್ಣುಮಗಳು, ಬಟ್ಟೆ ಅಂಗಡಿಯಲ್ಲಿ ಕೆಲಸಕ್ಕೆ ಹಚ್ಚುತ್ತೇನೆ ಬಾ. ಅಂತ ಇಲ್ಲಿಗೆ ತಂದು ಬಿಟ್ಟಳು. ನಾನು ಅವಳ ಮುಂದೆ ಬೆಳೆದ ಮಗು. ಅವಳು ನನ್ನ ಕಷ್ಟಕ್ಕೆ ಆಗ್ತಾಳೆ ಅಂದ್ರೆ, ನಂಬದೇ ಇರಕ್ಕಾಗುತ್ತಾ? ಅಂತ ಕಣ್ಣೀರಿಡುತ್ತಾಳೆ.

### ೪.೪. ಲೈಂಗಿಕ ದಂಧೆಯ ಮಹಿಳೆಯರ ಗಂಡು ಮಕ್ಕಳೊಂದಿಗೆ ಚರ್ಚೆ

ಮುಂಬಯಿಯ ಕಾಮಾಟಿಪೂರದಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡವರ ಮಕ್ಕಳ ಪುನರ್ವಸತಿಗಾಗಿ ಪ್ರೇರಣಾ ಎಂಬ ಸ್ವಯಂ ಸೇವಾ ಸಂಸ್ಥೆ ಕಾರ್ಯನಿರ್ವಹಿಸುತ್ತಿದೆ. ಇದು ಮಕ್ಕಳಿಗೆ ಶಿಕ್ಷಣ ಆರೋಗ್ಯ ನೀಡುವದರ ಜೊತೆಗೆ ರಕ್ಷಣೆಯನ್ನೂ ನೀಡುತ್ತಿದೆ. ಮಹಿಳೆಯರು ಸಾಯಂಕಾಲ ಮೂರು ಗಂಟೆಯಿಂದ ಬೆಳಗಿನ ಜಾವದವರೆಗೂ ಲೈಂಗಿಕ ದಂಧೆಯಲ್ಲಿ ನಿರತರಾಗುವುದರಿಂದ ಅಂತವರ ಮಕ್ಕಳಿಗೆ ರಾತ್ರಿ ಇರಲು ಸಂಸ್ಥೆಯು ವ್ಯವಸ್ಥೆ ಮಾಡುತ್ತದೆ. ಅಂತ ಮಕ್ಕಳು ಓದಿ ಸ್ವಾವಲಂಬಿಗಳಾಗುವವರೆಗೆ ಇವರ ಸಹಕಾರ ಬೆಂಬಲ ಮಾರ್ಗದರ್ಶನ ಮಕ್ಕಳಿಗೆ ಇರುತ್ತದೆ. ತಾಯಿ ತುಳಿದ ದಾರಿಯನ್ನು ಮಕ್ಕಳು ತುಳಿಯಬಾರದೆಂಬುದು ಸಂಸ್ಥೆಯ ಉದ್ದೇಶವಾಗಿದೆ. ಅಂತ ಸಂಸ್ಥೆಯ ಸಹಾಯ ಪಡೆದ ಮಕ್ಕಳ ಜೊತೆಗೆ ಒಂದು ಗುಂಪು ಚರ್ಚೆಯನ್ನು ಅಧ್ಯಯನದ ಅವಧಿಯಲ್ಲಿ ಮಾಡಲಾಯಿತು.

ಗುಂಪು ಚರ್ಚೆಯಲ್ಲಿ ಅಧ್ಯಯನ ಕ್ಷೇತ್ರಗಳಾದ ಉತ್ತರ ಕರ್ನಾಟಕದ ಬೆಳಗಾವಿ, ವಿಜಯಪೂರ ಮತ್ತು ಬಾಗಲಕೋಟೆ ಜಿಲ್ಲೆಯ ಆರು ಮಕ್ಕಳು ಪಾಲ್ಗೊಂಡಿದ್ದರು.

ಸಂಸ್ಥೆಯ ಮೇಲ್ವಿಚಾರಕರಿಗೆ ಹೆಣ್ಣು ಮತ್ತು ಗಂಡು ಇಬ್ಬರನ್ನು ಸೇರಿಸಲು ವಿನಂತಿಸಲಾಗಿತ್ತು. ಆದರೆ ಬರೀ ಹುಡುಗರಷ್ಟೇ ಚರ್ಚೆಗೆ ಸೇರಿದ್ದರು. ಆರು ಮಕ್ಕಳಲ್ಲಿ ಒಬ್ಬರು ಪಿ.ಯು.ಸಿ. ಸೆಕೆಂಡ್ ಇಯರ್ ಪಾಸಾಗಿ ಸಂಸ್ಥೆಯೊಂದರಲ್ಲಿ ಔಟ್‌ರೀಚ್ ವರ್ಕರ್ ಆಗಿದ್ದರು. ಎರಡನೆಯವರು ಎಸ್.ಎಸ್.ಎಲ್.ಸಿ. ಫೇಲಾಗಿ ಕಾಲ್‌ಸೆಂಟರ್‌ನಲ್ಲಿ ಕೆಲಸ ಮಾಡುತ್ತಿದ್ದಾರೆ. ಮೂರನೆಯವರು ಎಸ್.ಎಸ್.ಎಲ್.ಸಿ. ಫೇಲಾಗಿ ಆಟೋ ಪಾರ್ಟ್ಸ್‌ಗಳನ್ನು ಜೋಡಿಸುವ ಕೆಲಸ ಮಾಡುತ್ತಿದ್ದಾರೆ. ನಾಲ್ಕನೆಯವರು ಬಿ.ಕಾಂ. ಓದುತ್ತಾ ಕಚೇರಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದಾನೆ. ಐದನೆಯವನು ಬಿ.ಕಾಂ. ಸೆಕೆಂಡ್ ಇಯರ್‌ನಲ್ಲಿ ಓದುತ್ತಿದ್ದಾನೆ. ಆರನೆಯವನು ಕುಕ್ ಆಗಿ ಕೆಲಸ ಮಾಡುತ್ತಿದ್ದಾನೆ. ಹೀಗೆ ಎಲ್ಲರೂ ಒಂದಲ್ಲ ಒಂದು

ಕೆಲಸದಲ್ಲಿ ತೊಡಗಿಕೊಂಡವರಿದ್ದರು. ಅವರಿಗೆ ಕನ್ನಡದಲ್ಲಿ ಮಾತನಾಡುವ ಅವಕಾಶ ಸಿಕ್ಕಿದ್ದಕ್ಕಾಗಿ ತುಂಬಾ ಖುಷಿಯಿಂದ ಇದ್ದರು.

"ನಾವೆಲ್ಲ ಬಾಳ ಸಣ್ಣವರಿದ್ದಾಗಿಂದ ಈ ಸಂಸ್ಥಾದಾಗ ಅದೇವಿ. ಮತ್ತು ಸಹಾಯ ತಗೊಂಡೀವಿ. ನಮ್ಮವ್ವ ಅಲ್ಲೆಲ್ಲೋ ಕೆಲಸ ಮಾಡ್ತಿದ್ರ, ಸಂಸ್ಥಾದೊಳಗಿನ ಸೋಷಿಯಲ್ ವರ್ಕರ್ಸ್ ನಮ್ಮನ್ನು ನೋಡ್ಕೋತಿದ್ರು, ನಮ್ಮ ಉಚ್ಚಿ, ಸಂಡಾಸ್ ತಗೀತಿದ್ರು, ಊಟ ಮಾಡಿಸಿ ತಪ್ಪಡಿಸಿ ಮಲಗಿಸುತ್ತಿದ್ರು, ಬೆಳಗ್ಗೆ ಎದ್ದ ಕೂಡಲೆ ಸ್ನಾನ ಮಾಡಿಸಿ ಬೆಚ್ಚಗಿನ ಬಟ್ಟೆ ಹಾಕುತ್ತಿದ್ದರು. ಅವರು ಇದ್ದಾರಂತ ನಾವು ಇವತ್ತ ಇಷ್ಟು ದೊಡ್ಡರಾಗೇವಿ. ಇಲ್ದಿದ್ರ ಎಲ್ಲಿರ್ತಿದ್ವೋ ಏನೋ..." ಎಂದು ಕುಮಾರ ತಮಗೆ ರಕ್ಷಣೆ ಆಶ್ರಯ ದೊರೆತ ಕುರಿತು ಮಾತನಾಡುತ್ತಾರೆ.

"ನಾವೀಗ ಇಲ್ಲೇ ಬೆಳದು ಇಲ್ಲೇ ದೊಡ್ಡವರಾಗೀವಿ. ಚಿಕ್ಕವರಿದ್ದಾಗ ನಮಗ ಏನೂ ಅನಸ್ತಿದ್ದಿಲ್ಲ. ಆದರೆ ದೊಡ್ಡವರಾದ ಹಾಗೆ ತುಂಬಾ ಮುಜುಗರ ಉಂಟಾಗತೊಡಗುತ್ತಿದೆ. ನಮಗೂ ಶಾಲೆ, ಕಾಲೇಜುಗಳಲ್ಲಿ ಸ್ನೇಹಿತರು ಸಿಗುತ್ತಾರೆ. ನಾವು ಇಂತವರ ಮಕ್ಕಳು, ಇಂತ ಏರಿಯಾದಲ್ಲಿ ಇರುತ್ತೇವೆ ಎಂಬುದನ್ನು ಅವರ ಹತ್ತಿರ ಹೇಳಿಕೊಳ್ಳಲು ಸಾಧ್ಯವೇ ಇಲ್ಲ. ಆ ವಿಷಯವನ್ನು ಮುಚ್ಚಿಡುವುದೇ ನಮ್ಮ ಇಡೀ ಜೀವನದ ಸರ್ಕಸ್ ಆಗಿ ಬಿಡುತ್ತದೆ. ಗೊತ್ತಾದ್ರೆ ಅವರು ನಮ್ಮನ್ನು ಕೀಳಾಗಿ ಕಾಣಬಹುದು. ನಮ್ಮೊಂದಿಗಿನ ದೋಸ್ತಿಯನ್ನು ಕಟ್ ಮಾಡಬಹುದು ಎಂಬ ಅಂಜಿಕೆ ನಮಗೆ ಯಾವಾಗಲೂ ಇದ್ದೇ ಇರುತ್ತದೆ" ಎಂದು ಆನಂದ ಹೇಳುತ್ತಾನೆ.

ಸಂಸ್ಥೆಯ ಸಹಾಯ ತೆಗೆದುಕೊಂಡವರಲ್ಲಿ ಹುಡುಗಿಯರಿಗಿಂತ ಹುಡುಗರೇ ಹೆಚ್ಚು. "ಚಿಕ್ಕವರಿದ್ದಾಗ ಹೆಣ್ಣು-ಗಂಡು ಎಲ್ಲರೂ ಇರುತ್ತೇವೆ. ಹುಡುಗಿಯರು ೫-೬ನೇ ಕ್ಲಾಸಿಗೆ ಬರುವ ಹೊತ್ತಿಗೆ ಮಾಯವಾಗಿ ಬಿಡುತ್ತಾರೆ. ಅವರ ತಾಯಂದಿರು ಏನೋ ಒಂದು ಸುಳ್ಳು ನೆಪಹೇಳಿ ಹೊರಗೆ ಕರೆದೊಯ್ಯುತ್ತಾರೆ. ನಂತರ ಅವರನ್ನು ದಂಧೆಗೆ ಹಚ್ಚುತ್ತಾರೆ. ಇಲ್ಲವೇ ಮದುವೆ ಮಾಡಿಕೊಡುತ್ತಾರೆ. ಮದುವೆಯಾದವರಿಗಿಂತ ದಂಧೆಗೆ ನಿಂತವರೇ ಜಾಸ್ತಿ ಇದ್ದಾರೆ" ಎಂದು ಶಿವರಾಜ್ ಹೇಳುತ್ತಾನೆ.

"ಈ ಗಳಸೋ ಕೇರ್ಯಾಗ ಹುಡುಗೀರ ಜೀವನ ಬಾಳ ಚುಲೋ ಇರ್ತೈತಿ. ಆಕೀಗೆ ಹೆಜ್ಜೆ ಹೆಜ್ಜೆಗೂ ಪ್ರೀತಿ ಮಾಡ್ತಾರ, ಯಾಕಂದ್ರ ನಾಳೆ ಆಕೀ ಅವರಿಗೆ ಗಳಸಿ ಕೊಡಾಕಿ ಇರ್ತಾಳ. ಆದ್ರ ನಮ್ದು ಜೀವನ ಬಾಳ ಕೆಟ್ಟದು. ಉಂಡ್ರಿ ಅನ್ನೋರಿಲ್ಲ, ತಿಂದ್ರಿ ಅನ್ನೋರಿಲ್ಲ. ಎದುರಿಗೆ ಸಿಕ್ಕರ ಸಾಕ, 'ಏ ಜಾಬೇ ದೋ ಸೀಗರೇಟ್ ಲೇಕರ್ ಆ', 'ಏ ಜಾಬೇ ದೋ ಬಾಟಲ್ ಲೇಕರ್ ಆ', 'ಸ್ಟಾರ್ ಲೇಕರ್ ಆ', 'ಗುಟಕಾ ಲಾ' ಹಿಂಗೇ ತಮ್ಮ ಚಟಗಳ ಪೂರೈಕೆಗೆ ಬಳಸಿಕೊಳ್ಳುತ್ತಾರೆ. ಹಾಗೆ ಅವರಿಗೆ ಬೇಕಾದ್ದನ್ನು ತಂದು ಕೊಟ್ಟಾಗ ನಮ್ಮ ಕೈಗೆ ಒಂದೋ ಎರಡೋ ರೂಪಾಯಿ ಕೈಗೆ ತುರುಕುತ್ತಾರೆ. ಕೆಲವು ಕೆಟ್ಟ ಜನರು ಸಾರಾಯಿ ತಂದು ಕೊಟ್ಟರೆ, ನಮಗೂ ಕುಡಿಸಿ ಮಜಾ ಮಾಡುವ ಚಟದವರಿರುತ್ತಾರೆ. ಹೀಂಗ ಗಲ್ಲಿಯೊಳಗ ನಾವ್ ಕಾಣ್ತಿದ್ರ ಪೊಲೀಸರು ನಮ್ಮನ್ನ ಹಿಡ್ಕೊಂಡು ಹೋಗಿ ಜೈಲಿಗೆ ಹಾಕ್ತಾರ. ಏನೂ ಕಾರಣ ಇಲ್ದೆ ಹೊಡೆಯೋದು, ಬಡಿಯೋದು ಮಾಡ್ತಾರ. ಹಿಂಗಾಗಿ ದಂದೆ ಮಾಡುವರ

ಗಂಡುಮಕ್ಕಳ ಪರಿಸ್ಥಿತಿ ಬಾಳ ಕೆಟ್ಟದ್ದು. ಇಂತಾ ಜಾಗಾದಾಗ ಗಂಡ ಮಕ್ಕಳು ಹುಟ್ಟಬಾರದು". ಎಂದು ರಾಜು ಹೇಳುತ್ತಾನೆ.

"ನಮ್ಮ ಜಾಣತನ ನೋಡಿ, ನಮ್ಮ ಪರ್ಸನ್ಯಾಲಿಟಿ ನೋಡಿ ನಮ್ಮನ್ನ ಪ್ರೀತಿಸೋ ಹುಡುಗೀರು ಇರ್ತಾರೆ. ಒಂದು ದಿನ ನಿಮ್ಮ ಮನೀ ತೋರುಸು, ನಿಮ್ಮ ತಾಯಿ ಭೇಟಿ ಮಾಡಿಸು ಅಂತ ಹಠ ಹಿಡೀತಾರ. ನಮ್ಮ ಮನಿ ಇಲ್ಲೈತಿ, ನಮ್ಮವ್ವ ಇಂತಾ ದಗದಾ ಮಾಡ್ತಿದ್ದು ಅಂದ್ರ, ಗುಡ್ ಬೈ ಹೇಳಿ ಹೋಗಿ ಬಿಡ್ತಾರ. ಇಂತವು ಬಾಳ ಕೇಸ್ ಆಗ್ಯಾವು" ಅಂತ ರಾಕೇಶ್ ಹೇಳುತ್ತಾನೆ.

"ಕೆಲವೊಂದು ಹೆಣ್ಣುಮಕ್ಕಳನ್ನ ಎಲ್ಲಿಂದಲೋ ತಂದು ಮಾರಿ ಹೋಗಿರ್ತಾರ. ಅವರಿಗೆ ಯಾರೂ ಇರೋದಿಲ್ಲ. ಅವರಿಗೆ ಹುಟ್ಟುವ ಮಕ್ಕಳು ಅಕ್ಷರಶಃ ಅನಾಥರಾಗುತ್ತಾರೆ" ಎಂದು ಆನಂದ ನುಡಿಯುತ್ತಾನೆ.

"ನಾವು ಇದ ಊರಾಗ ಹುಟ್ಟಿ ಇಲ್ಲೇ ದೊಡ್ಡವರಾಗೀವಿ, ಊರಾಗ ಬಂದು ಏನು ಮಾಡಬೇಕು. ನಮಗ ಅಲ್ಲಿ ಹವಾಮಾನ, ನೀರು ಹೊಂದಂಗಿಲ್ಲ. ಪಿಕ್‌ನಿಕ್‌ಗೆ ಅಂತ ಬರ್ತೇವಿ. ಆದ್ರ ಅಲ್ಲೇ ಇರಾಕ ಬರೋದು ಸುಳ್ಳ ಐತಿ" ಅಂತ ಚರಣ್ ಹೇಳುತ್ತಾನೆ.

ಮೇಲಿನ ಮೂರು ಚರ್ಚೆಗಳಲ್ಲಿ ಭಾಗವಹಿಸಿದವರೆಲ್ಲ ಮಕ್ಕಳೇ ಆಗಿದ್ದಾರೆ. ಸರ್ಕಾರಿ ವ್ಯವಸ್ಥೆಯಲ್ಲಿದ್ದವರಿಗೆ ಯಾವುದೇ ರೀತಿಯ ಆಸಕ್ತಿಯನ್ನು ಹುಟ್ಟಿಸುವ ಪ್ರಯತ್ನಗಳು ನಡೆಯುತ್ತಿಲ್ಲ. ಅವರ ಕೇಸ್‌ಗಳು ಖಲಾಸೆ ಆಗಿ ಅಲ್ಲಿಂದ ಅವರು ಹೋದರೆ ಸಾಕು ಎಂಬ ಭಾವದಲ್ಲಿ ಇಲಾಖೆಯ ಸಿಬ್ಬಂದಿ ಇದ್ದರೆ, ನಮ್ಮನ್ನ ಬಿಟ್ಟರೆ ಸಾಕು, ನಮ್ಮ ದಾರಿ ನಾವು ನೋಡಿಕೊಳ್ಳುತ್ತೇವೆ ಎಂಬ ವಿಚಾರದಲ್ಲಿ ಮಕ್ಕಳು ಇದ್ದಾರೆ. ಅವರಲ್ಲಿ ಚಿಕ್ಕ ವಯಸ್ಸಿನ ೪-೫ ಹುಡುಗಿಯರನ್ನು ಅವರ ಜೊತೆ ಖಾಯಂ ಆಗಿ ಇದ್ದ ಪಾರ್ಟನರ್‌ಗಳೇ, ಅವರ ಸಂಬಂಧಿಕರೆಂದು ಇಲಾಖೆಯನ್ನು ನಂಬಿಸಿ ತಮ್ಮ ಜೊತೆ ಕರೆದುಕೊಂಡು ಹೋಗುವ ಪ್ರಯತ್ನಗಳು ನಡೆಯುತ್ತಿರುವ ಕುರಿತು ಹುಡುಗಿಯರ ಮಾತುಗಳಿಂದ ಅರ್ಥವಾಗುತ್ತದೆ. ಇನ್ನು ಆರೋಗ್ಯದ ವಿಚಾರಕ್ಕೆ ಬಂದಾಗ ಅವರು ತುಂಬಾ ನಿಕೃಷ್ಟವಾದ ಜೀವನ ಮಾಡುತ್ತಿದ್ದಾರೆನ್ನಿಸುತ್ತದೆ.

ಸರ್ಕಾರೇತರ ಸಂಸ್ಥೆಯಲ್ಲಿ ಪುನರ್ವಸತಿ ಪಡೆಯುತ್ತಿರುವ ಹೆಣ್ಣುಮಕ್ಕಳಿಗೆ ಪುನರ್ವಸತಿ ತರಬೇತಿಯಲ್ಲಿ ಭಾಗವಹಿಸಲೇಬೇಕೆಂಬ ಒತ್ತಡ, ಪ್ರೇರಣೆ ಮಾಡಲಾಗುತ್ತಿದೆ. ಆದರೆ ಸ್ಥಳಾವಕಾಶ ಚಿಕ್ಕದಿರುವುದರಿಂದ ಅವರನ್ನು ತುಂಬಾ ದಿನಗಳವರೆಗೆ ಇಟ್ಟುಕೊಳ್ಳುವುದು ಸಂಸ್ಥೆಗೆ ಕಷ್ಟವಾಗುತ್ತಿದೆ. ಹಾಗಾಗಿ ಮುಂದಿನ ರೇಡ್‌ನಲ್ಲಿ ಹುಡುಗಿಯರು ಬರುವ ಮೊದಲೇ, ಹಳೆಯ ಹುಡುಗಿಯರನ್ನು ಪುನರ್ನೆಲೆಗೆ ಕಳಿಸುವ ಪ್ರಯತ್ನದಲ್ಲಿ ಸಂಸ್ಥೆ ಇರುತ್ತದೆ. ಸಂವಾದದಲ್ಲಿ ಭಾಗವಹಿಸಿದ ಗುಂಪು, ಸಂಸ್ಥೆಗೆ ಬಂದು ೪-೫ ದಿನಗಳಷ್ಟೇ ಆದುದರಿಂದ, ಸಂಸ್ಥೆಗೆ ಇನ್ನೂ ಹೊಂದಿಕೊಂಡಿರಲಿಲ್ಲ. ಅವರನ್ನು ಹಿಡಿದು ತಂದಿದ್ದಕ್ಕೆ ಕೋಪ, ಅಸಹನೆ ಇತ್ತು. ತಮ್ಮದೇ ನೆಲೆಯಲ್ಲಿ ತಮ್ಮದು ಸರಿ ಇತ್ತು ಎಂದು ವಾದಿಸುತ್ತಿದ್ದರು. ತಾವು ಅಸಹಾಯಕರಾಗಿದ್ದಾಗ ಸರ್ಕಾರ ತಮಗೆ ರಕ್ಷಣೆ ಕೊಟ್ಟಿಲ್ಲ.

ಹೇಗೋ ತಾವು ಬದುಕುತ್ತಿದ್ದಿವಿ ಯಾಕೆ ತೊಂದರೆ ಕೊಡುತ್ತಿದ್ದೀರಿ ಎಂಬುದು ಅವರ ಪ್ರಶ್ನೆಯಾಗಿತ್ತು. ಬಹಳಷ್ಟು ಹುಡುಗಿಯರನ್ನು ಅವರ ಮನೆಯವರೇ, ನಂಜಿಕೆ ಇಟ್ಟವರೇ, ಇವರನ್ನು ರಕ್ಷಿಸಬೇಕಾದವರೇ ವೇಶ್ಯಾಗೃಹಕ್ಕೆ ಮಾರಿ ಹೋದ ಕುರಿತು ಹುಡುಗಿಯರ ಮಾತುಗಳಿಂದ ಸ್ಪಷ್ಟವಾಗುತ್ತದೆ. ಕೆಲವು ಯುವತಿಯರು ಶಿಕ್ಷಣ ಪಡೆದುದರಿಂದ ಹಕ್ಕುಗಳ ಕುರಿತು ಮಾತನಾಡುತ್ತಾರೆ. ಈ ಪ್ರಕರಣದಲ್ಲೆಯೂ ಸಹ ಕೆಲವು ಹುಡುಗಿಯರ ಜೊತೆ ಖಾಯಂ ಆಗಿ ಇರುತ್ತಿದ್ದ ಪಾರ್ಟನರ್ ಇವರನ್ನು ಬಿಡಿಸಿಕೊಂಡು ಹೋಗಲು ಪ್ರಯತ್ನ ನಡೆಸಿರುವುದಾಗಿ ಕಂಡುಬರುತ್ತದೆ.

ಲೈಂಗಿಕ ಜೀತಕ್ಕೊಳಗಾದ ಮಹಿಳೆಯರ ಗಂಡುಮಕ್ಕಳದು ವಿಚಿತ್ರವಾದ ಸನ್ನಿವೇಶ. ಅವರು ಅನುಭವಿಸುವ ಸಾಮಾಜಿಕ, ಮಾನಸಿಕ ತುಮುಲಗಳನ್ನು ನಗುನಗುತ್ತಲೇ ಬಿಡಿಸಿಟ್ಟರು. ಸ್ನೇಹಿತ, ಸ್ನೇಹಿತೆಯರಂತಹ ಸಹಜ ಸಂಬಂಧಗಳನ್ನೂ ಸಹ ಎದುರಿಸಲಾರದಂತಹ ಅವರ ಸ್ಥಿತಿ, ಪೊಲೀಸರು, ರೌಡಿಗಳು ಇವರನ್ನು ನೋಡುವ ಮತ್ತು ನಡೆಸಿಕೊಳ್ಳುವ ರೀತಿಗಳು ಇವರನ್ನು ಸಮಾಜದಿಂದ ವಿಮುಖರನ್ನಾಗಿಸುತ್ತವೆ. ಇಂತವೇ ಸಂದರ್ಭಗಳು ಗಂಡು ಮಕ್ಕಳನ್ನು ರೌಡಿಯಂತಹ ಸಮಾಜ ಘಾತುಕ ಶಕ್ತಿಗಳನ್ನಾಗಿ ರೂಪಿಸುವಲ್ಲಿ ಮಹತ್ತರ ಪಾತ್ರ ವಹಿಸುತ್ತವೆ. ಜೊತೆಗೆ ಓದುತ್ತಿದ್ದ ಹೆಣ್ಣುಮಕ್ಕಳು ೧೦-೧೧ ವರ್ಷಗಳಿರುವಾಗಲೇ ಕಳೆದು ಹೋಗುತ್ತಿರುವ ಕುರಿತ ಮಾಹಿತಿ ಆಘಾತವನ್ನುಂಟು ಮಾಡುತ್ತದೆ. ಈ ಮಾಹಿತಿಯಿಂದ ಅಪ್ರಾಪ್ತ ಮಕ್ಕಳನ್ನು ಬಿಕ್ಕಟ್ಟಿಗೆ ಸಿಕ್ಕಿಸುತ್ತಿರುವ ಒಂದು ಮೂಲ ಇದಾಗಿರಬಹುದು ಎಂದು ಗೋಚರಿಸುತ್ತದೆ.

ಬಡತನಕ್ಕೆ, ಮೂಢನಂಬಿಕೆಗೆ, ಅನಕ್ಷರತೆಗೆ ಕಟ್ಟುಬಿದ್ದು ಬಾಲ್ಯ ವಿವಾಹ ಮಾಡುವ ಪಾಲಕರು, ಅನೈತಿಕತೆಗೆ ಒಳಗಾಗಿ ಮಗಳೆನ್ನದೇ, ತನ್ನ ಎರಡನೆಯ ಗಂಡನ ಅತ್ಯಾಚಾರಕ್ಕೆ ಬಲಿಯಾದ ಮಗಳನ್ನು ವೇಶ್ಯಾವಾಟಿಕೆಗೆ ಮಾರಿದ ತಾಯಿ, ಮದುವೆಯಾದ ಹೆಂಡತಿಯನ್ನು ತಿರಸ್ಕರಿಸಿ ಮತ್ತೊಂದು ಸಂಬಂಧಕ್ಕೆ ಮುಖ ಮಾಡುವ ಗಂಡಸು, ಕೆಲಸದ, ಮದುವೆಯ ಆಮಿಷ ಒಡ್ಡಿ ಮರಳು ಮಾಡಿ ಮಾರಿ ಹೋಗುವ ಗೆಳೆಯರು, ಮುತ್ತು ಕಟ್ಟಿ ದೇವದಾಸಿ ಮಾಡಿ, ಮಗಳು ಮೈ ಮಾರಿಕೊಂಡು ದುಡಿದ ಹಣದಲ್ಲಿ ಸುಖದಲ್ಲಿ ತೇಲುವ ತಂದೆ ತಾಯಿಗಳು. ಯಾರು ಇವರ ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲರು? ಕಾನೂನು ಕಟ್ಟಳೆಗಳು ಹಸಿವನ್ನು ಹೊಡೆದೋಡಿಸಬಹುದಾ? ಇದು ನಮ್ಮ ನೊಂದ ಮಕ್ಕಳ ಮುಂದಿರುವ ಪ್ರಶ್ನೆ.

ಕುಟುಂಬದ ಹಸಿವನ್ನು ನೀಗಿಸಲು ಪರಿಶಿಷ್ಟ ಜಾತಿಯ ಬಾಲೆಯರನ್ನು ಲೈಂಗಿಕ ಜೀತಕ್ಕೆ ನೂಕಲಾಗಿದೆ. ಇದರಲ್ಲಿ ಸಾಮಾಜಿಕ ಪಿಡುಗುಗಳಾದ ದೇವದಾಸಿ ಪದ್ಧತಿ, ಬಾಲ್ಯವಿವಾಹಗಳು ಪ್ರಮುಖ ಪಾತ್ರವನ್ನು ವಹಿಸುತ್ತಿವೆ. ಅದರ ಜೊತೆಗೆ ಜಾತಿ ಸಮಸ್ಯೆಯು ಮೂಲ ಸಮಸ್ಯೆಯಾಗಿ ನಿಲ್ಲುತ್ತದೆ. ಒಂದೊಮ್ಮೆ ಪರಿಶಿಷ್ಟರಾಗದೇ ಹೋಗಿದ್ದರೆ ಈ ಸಂಪ್ರದಾಯಗಳು ಇವರನ್ನು ಕಾಡುತ್ತಿರಲಿಲ್ಲವೇನೋ ಎಂಬ ಆಶಯ ಅಧ್ಯಯನಕ್ಕೆ ಬರುತ್ತದೆ. ಬಡತನಕ್ಕೆ ಉತ್ತರವಾಗಿ ಬೇರೆ ಎಲ್ಲ ಕೆಲಸಗಳನ್ನೂ ಮಾಡಬಹುದಿತ್ತು. ಆದರೆ ಅಸ್ಪೃಶ್ಯತೆಯ ಆಚರಣೆಯು ಪರಿಶಿಷ್ಟ ಜಾತಿಯ ಮಹಿಳೆಯರು

ಅಂಚಿನಾಚೆಗೆ ಉಳಿಯುವಂತೆ ಮಾಡುತ್ತಿದೆ. ದುಡಿಯಲು ಭೂಮಿ ಇರದ, ಅನಕ್ಷರಸ್ಥರಾಗಿರುವ ಇವರ ಕುಟುಂಬಗಳು ಅತೀ ಕಡಿಮೆ ಕೂಲಿಗೆ ದುಡಿಯುವ ಕೃಷಿ ಕಾರ್ಮಿಕರಾಗಿದ್ದಾರೆ. ಅದರಲ್ಲಿ ಅತೀ ಹೆಚ್ಚಿನವರು ದೇವದಾಸಿಯರೇ ಆಗಿದ್ದು, ಅವರೇ ಕುಟುಂಬದ ಮುಖ್ಯಸ್ಥರಾಗಿದ್ದಾರೆ. ಜೊತೆಗೆ ಆ ಪ್ರದೇಶಗಳ ಬರಗಾಲಗಳು ಇವರನ್ನು ಅಸಹಾಯಕರನ್ನಾಗಿ ಮಾಡುತ್ತವೆ. ಅನ್ಯ ಮಾರ್ಗವಿಲ್ಲದೇ ತಮ್ಮ ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳನ್ನು ಲೈಂಗಿಕ ಜೀತಕ್ಕೆ ನೂಕುತ್ತಿದ್ದಾರೆ. ಆದ್ದರಿಂದಲೇ "ದುರ್ಬಲ ವರ್ಗಗಳಿಗೆ ಸೇರಿದ ಜನರ ಶೈಕ್ಷಣಿಕ ಮತ್ತು ರಾಜಕೀಯ ಆಸಕ್ತಿಗಳನ್ನು ಬಹಳ ಎಚ್ಚರಿಕೆಯಿಂದ ಉತ್ತೇಜಿಸಬೇಕು. ಮತ್ತು ಅದರಲ್ಲೂ ವಿಶೇಷವಾಗಿ ಪರಿಶಿಷ್ಟ ವರ್ಗಗಳಿಗೆ ಸೇರಿದ ಜನರಿಗೆ ಎಲ್ಲಾ ಬಗೆಯ ಸಾಮಾಜಿಕ ಅನ್ಯಾಯಗಳಿಂದ ರಕ್ಷಣೆ ಕೊಡಬೇಕು" ಎಂದು ಭಾರತೀಯ ರಾಜ್ಯಾಂಗದ ೪೬ನೇ ವಿಧಿಯಲ್ಲಿ ಅಡಕವಾಗಿರುವ ರಾಜ್ಯ ನೀತಿಯ ಮಾರ್ಗದರ್ಶನ ತತ್ವಗಳಲ್ಲಿ ಹೇಳಲಾಗಿದೆ. ಆದರೆ ಸಂವಿಧಾನ ರಚಿತಗೊಂಡು ೬೭ ವರ್ಷಗಳು ಸರಿದು ಹೋಗುತ್ತಿದ್ದರೂ ಸಹ ಹಸಿವಿನಿಂದ ನರಳುತ್ತಿರುವ ಪರಿಶಿಷ್ಟರ ಕುಟುಂಬಗಳಿಗೆ ಸರಿಯಾದ ಸಾಮಾಜಿಕ ಆರ್ಥಿಕ ಭದ್ರತೆಯನ್ನು ಒದಗಿಸಲು ಸಾಧ್ಯವಾಗಿಲ್ಲ. ಅದಕ್ಕೆ ಇಂದಿಗೂ ಲೈಂಗಿಕ ಜೀತಕ್ಕಾಗಿ ಸಾಗಾಣಿಕೆಯಾಗುತ್ತಿರುವ ನಮ್ಮ ಬಾಲೆಯರು ಮತ್ತು ಸಾಗಾಣಿಕೆಗೊಂಡು ಇಂದಿಗೂ ಅದೇ ಕೂಪದಲ್ಲಿ ಅಸಹಾಯಕರಾಗಿ, ರೋಗಗ್ರಸ್ಥರಾಗಿ ನರಳುತ್ತಿರುವದೇ ಸಾಕ್ಷಿಯಾಗಿದೆ. ರಕ್ಷಣೆ ಎಂಬುದು ಮರೀಚಿಕೆಯಾಗಿದೆ. ಈ ದುಸ್ಥಿತಿಗೆ ಬಾಲೆಯರು ಬರುವ ಮುನ್ನವೆ ಅವರ ಮೂಲ ನೆಲೆಯಲ್ಲಿಯೇ ಈ ವಿಕೃತಿಗೆ ಬಲಿಯಾಗದಂತೆ ಅವರನ್ನು ರಕ್ಷಿಸಬಹುದಿತ್ತು. ಆದರೆ ಆಗಿಲ್ಲ. ಆ ನಂತರವಾದರೂ ಪಾರು ಮಾಡಿ ನ್ಯಾಯ ಒದಗಿಸಬಹುದಿತ್ತು. ಆದರೆ ತಲೆ ಹಿಡುಕ ಘರವಾಲಿಗಳು ಮಕ್ಕಳು ಸಿಗದಂತೆ ಮಾಡುವ ಪ್ರಯತ್ನಗಳು ಅದಕ್ಕೆ ಸಹಕಾರ ನಿಡುವ ಭ್ರಷ್ಟರಾದ ಕೆಲವು ಪೊಲೀಸ್ ಅಧಿಕಾರಿಗಳು ಮತ್ತು ಅವರ ಸಿಬ್ಬಂದಿ ಚಪ್ಪಲಿಯೊಳಗೆ ಸಿಕ್ಕ ಹರಳಿನಂತಾಗಿದ್ದಾರೆ. ಅದಕ್ಕೆ ಅಧ್ಯಯನದಲ್ಲಿ ವಿವರಿಸಲಾದ ಮಹಿಳೆಯರ ಪ್ರಕರಣ ಅಧ್ಯಯನಗಳು, ಕಾಮಾಟಿಪೂರದಲ್ಲಿಯೆ ಹುಟ್ಟಿ ಅಲ್ಲಿಯೇ ಬೆಳೆದು, ಇಂದಿಗೂ ಅಲ್ಲಿಯೇ ಇರುವ ಲೈಂಗಿಕ ದಂಧೆಯ ಮಹಿಳೆಯರ ಮಕ್ಕಳೊಂದಿಗೆ ನಡೆದ ಸಂವಾದವೂ ಸಾಕ್ಷಿಯಾಗಿದೆ. ರಕ್ಷಿತಗೊಂಡು ಸಮಾಲೋಚನೆಗೆ ಬಂದು ನಿಂತ ಬಾಲೆಯರೊಂದಿಗಿನ ಸಂವಾದವೂ ಸಹ ಸಾಕ್ಷಿಯಾಗುತ್ತವೆ.

ಲೈಂಗಿಕ ಜೀತ ಮತ್ತು ದಂಧೆಯಿಂದ ವಿಮುಕ್ತಿ ಪಡೆಯಲು ವೈಯಕ್ತಿಕವಾಗಿ ಅದರಿಂದ ಹೊರ ಬಂದವರು ಅಲ್ಲಿನ ಪರಿಸರದಲ್ಲಿ ಉಳಿಯಲಾರದೇ ಒತ್ತಡದಿಂದ ಹೊರಬಂದಿರುವ ಕೆಲವರ ವಾಸ್ತವಿಕ ಬದುಕನ್ನು ನಮ್ಮ ಅಧ್ಯಯನ ಹುಡುಕ ಹೊರಟಿತು. ಇವರ ನೈಜ ಜೀವನದ ಚಿತ್ರಣವನ್ನು ಅಧ್ಯಾಯ ಐದರಲ್ಲಿ ವಿವರಿಸಲಾಗಿದೆ. ಓದುಗರಲ್ಲಿ ಒಂದು ವಿನಂತಿ ಏನೆಂದರೆ, ಈಗಾಗಲೇ ನಾವು ಅಧ್ಯಾಯ ಮೂರು ಮತ್ತು ನಾಲ್ಕರಲ್ಲಿ (ಪ್ರಸ್ತುತ ಅಧ್ಯಾಯ) ವಿವರಿಸಿರುವ ಪ್ರಕರಣ ವಿಶ್ಲೇಷಣೆಯು ಅಧ್ಯಾಯ ಐದರಲ್ಲಿ ಪುನರಾವರ್ತನೆಗೊಳ್ಳುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಆದರೆ ಅಧ್ಯಾಯ ಐದರ ಪ್ರಕರಣಗಳು ಬಿಚ್ಚಿಡುವ ವಾಸ್ತವಿಕತೆ ಬೇರೆಯಾಗಿದೆ. ಹಾಗಾಗಿ ಅಧ್ಯಾಯ ಮೂರು ಮತ್ತು ನಾಲ್ಕರಲ್ಲಿಯ

ಪ್ರಕರಣಗಳು ಮತ್ತು ಅಧ್ಯಾಯ ಐದರಲ್ಲಿಯ ಪ್ರಕರಣಗಳು ಪೂರಕವಾಗಿ ಒಂದು ಮತ್ತೊಂದನ್ನು ಪ್ರತಿಕ್ರಿಯಿಸುತ್ತವೆ. ಈ ಪ್ರತಿಕ್ರಿಯೆಯಲ್ಲಿ ಕೆಲವು ಸಂದರ್ಭದಲ್ಲಿ ಪ್ರತಿಬಿಂಬವಾಗಿಯೂ ಕಾಣುತ್ತದೆ. ಆದರೆ ಅತ್ಯಂತ ಸೂಕ್ಷ್ಮವಾಗಿ ಗಮನಿಸಿದಾಗ ಪ್ರತಿ ಪ್ರಕರಣಗಳು ಬಿಚ್ಚಿಡುವ ವಾಸ್ತವ ಬೇರೆ ಎಂದು ನಮಗೆ ಮನದಟ್ಟಾಗುತ್ತದೆ. ಹೀಗಾಗಿ ಮುಂದಿನ ಅಧ್ಯಾಯವನ್ನು ಓದುವಾಗ ಓದುಗರು ಇದನ್ನು ಪರಿಶೀಲಿಸಬೇಕೆಂದು ವಿನಂತಿ.

**ಉಲ್ಲೇಖಿತ ಗ್ರಂಥಗಳು**

೧. ಚೈಲ್ಡ್ ಪ್ರಾಸ್ಟಿಟ್ಯೂಶನ್ ಇನ್ ವೆಸ್ಟರ್ನ ಇಂಡಿಯಾ: ೧೯೯೬, ಕಾರ್ಯಗಾರ ವರದಿ, ಇನ್ಸಾಫ್, ಗೋವಾ, ಯುನಿಸೆಫ್ ಸಹಯೋಗ, ಅನುಬಂಧ ಪು. viii

ಅಧ್ಯಾಯ ಐದು

# ಲೈಂಗಿಕ ಜೀತದ ನಂತರದ ಬದುಕು

## ೫.೧. ಪ್ರಸ್ತಾವನೆ

ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕೆ ಒಳಗಾಗಿ, ಮಹಾರಾಷ್ಟ್ರದ ರೆಡ್‌ಲೈಟ್ ಏರಿಯಾದಲ್ಲಿ ಬದುಕು ಕಳೆದು, ಆ ಬದುಕಿನ ಯಾವುದೋ ಗಳಿಗೆಯಲ್ಲಿ ಮರಳಿ ಬಂದು ಊರು ಸೇರಿದ ಅಧ್ಯಯನ ಕ್ಷೇತ್ರದ ಮಹಿಳೆಯರ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಳ್ಳುವುದು ಈ ಅಧ್ಯಾಯದ ಆಶಯ. ನಮ್ಮ ಅಧ್ಯಯನದಲ್ಲಿ ಸಿಕ್ಕ ಬಹುತೇಕ ಮಹಿಳೆಯರು, ಇಬ್ಬರನ್ನು ಬಿಟ್ಟು (ಎಸ್.ಟಿ-ಬೇಡ ನಾಯಕ ಮತ್ತು ಕುರುಬ-ಪ್ರವರ್ಗ ೨ಎ) ದಲಿತ ಸಮುದಾಯದ ಪರಿಶಿಷ್ಟ ಜಾತಿಗೆ(ಹೊಲೆಯ ಮತ್ತು ಮಾದಿಗ) ಸೇರಿದವರು. ಈ ಸಮುದಾಯದ ಸಾಮಾಜಿಕ ಸ್ಥಿತಿಯ ಕುರಿತು, ಚಿಂತಕ ಮತ್ತು ನ್ಯಾಯಮೂರ್ತಿ ಆದ ಕೃಷ್ಣ ಅಯ್ಯರ್ ಅವರು "ಅಸ್ಪೃಶ್ಯರ ಮೇಲಿನ ದೌರ್ಜನ್ಯಗಳು, ದುರಾಕ್ರಮಣಗಳು ಇಂದಿಗೂ ಜೀವಂತವಾಗಿವೆ. ದಲಿತರ ಜೀತಗಾರಿಕೆ ಮತ್ತು ಗುಲಾಮಗಿರಿಯಿಂದ ಈ ವ್ಯವಸ್ಥೆ ಇನ್ನೂ ಮುಕ್ತವಾಗಿಲ್ಲ ವೆಂಬುದು ಮುಚ್ಚುಮರೆಯ ಮಾತಲ್ಲವಷ್ಟೇ. ದಲಿತರ ಮೇಲಿನ ದೌರ್ಜನ್ಯ ತಡೆಯುವ ಸಲುವಾಗಿ ಹಲವಾರು ಕಾನೂನುಗಳು ಕಟ್ಟಳೆಗಳು ಇದ್ದಾಗ್ಯೂ ಅವುಗಳಿಗೆ ಅನುಷ್ಠಾನದ ಆತ್ಮಗಳಿಲ್ಲದೇ ಅವು ಪ್ರೇತಾತ್ಮಗಳಾಗಿವೆ. ದಲಿತರ ಮೇಲಿನ ದೌರ್ಜನ್ಯಗಳ ತನಿಖಾ ದಳಗಳು ಪುರೋಹಿತಶಾಹಿ ಮತ್ತು ಜಮೀನ್ದಾರಿ ವ್ಯವಸ್ಥೆಯ ದಂಡಾಧಿಕಾರಿಗಳಾಗಿರುವ ನಗ್ನ ಸತ್ಯವನ್ನು ಮುಚ್ಚಿಡಲು ಸಾಧ್ಯವೇ ಇಲ್ಲದಂತಾಗಿದೆ. ದಲಿತ ಮಹಿಳೆಯರ ಮೇಲಿನ ಸಾಮೂಹಿಕ ಅತ್ಯಾಚಾರಗಳು ಅನೇಕ ಕಾರಣಗಳಿಗಾಗಿ ನ್ಯಾಯಾಲಯದ ಹಂತವನ್ನು ಹತ್ತುವ ಮಾತಂತಿರಲಿ, ಪೋಲೀಸ್ ಠಾಣೆಯಲ್ಲಿ ಒಂದು ದೂರು ಕೂಡ ದಾಖಲಾಗಿರುವುದಿಲ್ಲ. ಹಾಗೆ ದೂರು ಕೊಟ್ಟವರು ಬದುಕುಳಿಯುವುದು ಸುಲಭದ ಮಾತೇನೂ ಅಲ್ಲ. ಆದ್ದರಿಂದ ಇಲ್ಲಿನ ಮೂಲಭೂತ ಸಮಸ್ಯೆ ಏನೆಂದರೆ, ಇಂಥ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯಗಳಲ್ಲಿ ಭಾವನಾತ್ಮಕ ತೊಡಗುವಿಕೆಗಿಂತಲೂ ಕೇವಲ ದಾಖಲೆಗಳ ಪರಿಶೀಲನೆಯ ಮೇಲೆ ಮಾತ್ರ ವಿಚಾರಣೆ ನಡೆಯುತ್ತದೆ"(ಮ.ನ.ಜವರಯ್ಯ,೧೯೯೫) ಎಂದು ತಳಸಮುದಾಯಗಳ ಜನರ ಸಾಮಾಜಿಕ ಬದುಕಿನ ಹೀನ ಪರಿಸ್ಥಿತಿ ನಮಗೆ ಕಾಣುತ್ತದೆ. ದಲಿತರನ್ನು ಉಳಿಸಿಕೊಳ್ಳುವಲ್ಲಿ

ಇರುವ ಕಾಯ್ದೆ ಕಾನೂನುಗಳು ಸಹ ಶೋಷಣೆ ಮಾಡುವವರ ಹಿಡಿತದಲ್ಲಿಯೇ ಇರುವುದನ್ನು ಈ ಮೇಲಿನ ವಿವರಣೆ ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ತಳಸಮುದಾಯಗಳ ಬಾಲೆಯರನ್ನು ಮೂಲದಲ್ಲಿ ರಕ್ಷಿಸಿಕೊಳ್ಳದ ಕುಟುಂಬ, ಸಂಬಂಧಿಕರು ಮತ್ತು ಹಿತೈಷಿಗಳು ಹಾಗೂ ತಳಮಟ್ಟದಲ್ಲಿ ರಕ್ಷಿಸದ ಸಮುದಾಯ, ಶಾಲೆ, ಪಂಚಾಯತಿಗಳು, ಸಂಬಂಧಿಸಿದ ಇಲಾಖೆಗಳು(ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕಾರ್ಮಿಕ ಇಲಾಖೆ, ಶಿಕ್ಷಣ ಇಲಾಖೆ,), ಸಂಕಷ್ಟಕ್ಕೆ ಸಿಲುಕಿಕೊಂಡ ಮೇಲೂ ರಕ್ಷಿಸದ ಕಾನೂನುಗಳು ಮತ್ತು ಅದರ ಪರಿಪಾಲಕರು, ಬಾಲೆಯರ ಮೇಲಿನ ದೌರ್ಜನ್ಯಕ್ಕೆ ನೇರ ಹೊಣೆಗಾರರಾಗಿದ್ದಾರೆ. ಇವರೆಲ್ಲರ ಹೊಣೆಗೇಡಿತನದ ಪ್ರತಿಫಲವಾಗಿ ಸಾವಿರಾರು ಮಕ್ಕಳು ನೆಲೆಗಾಣದೇ, ಇಂದು ರೆಡ್‌ಲೈಟ್ ಏರಿಯಾದಲ್ಲಿ ಕಳೆದು ಹೋಗುತ್ತಿದ್ದಾರೆ. ಅವರ ರಕ್ಷಣೆ ಪರಿಪೂರ್ಣವಾಗಿ ನಡೆಯುತ್ತಿಲ್ಲ. ಆದರೂ ಸಾಕಷ್ಟು ಯುವತಿಯರು ಮಹಿಳೆಯರು ತಮ್ಮಷ್ಟಕ್ಕೆ ತಾವೇ ರಕ್ಷಿಸಿಕೊಂಡು ಮರಳಿ ಊರಿಗೆ ಬಂದಿದ್ದಾರೆ. ಈ ಸಂದರ್ಭದಲ್ಲಿ ಅವರ ಪೂರ್ವಾಪರಗಳನ್ನು ಚರ್ಚಿಸಿ, ಅವರು ಮರಳಿ ಊರಿಗೆ ಬರಲು ಕಾರಣವಾದ ಸಂದರ್ಭಗಳೇನು? ಹಾಗೆ ಬಂದಾಗ ತಮ್ಮನ್ನು ತಾವು ನೆಲೆಗೊಳಿಸಿಕೊಳ್ಳುವಲ್ಲಿ ಅವರು ಎದುರಿಸಿದ ಸವಾಲುಗಳು ಯಾವುವು? ಅವು ಸಾಮಾಜಿಕವಾದುವೇ? ಸಾಂಸ್ಕೃತಿಕವಾದುವೇ? ಅಥವಾ ಆರ್ಥಿಕವಾದುವೇ? ಎಂಬುದನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಇಲ್ಲಿ ದೌರ್ಜನ್ಯಕ್ಕೊಳಗಾದವರ ಪೂರ್ವಸ್ಥಿತಿಗಳನ್ನು, ಒಳಗಾದ ನಂತರದ ಸ್ಥಿತಿಯನ್ನು ಮತ್ತು ಲೈಂಗಿಕ ಜೀತದಿಂದ ಹೊರ ಬಂದ ಸ್ಥಿತಿಯನ್ನು ಗುಣಾತ್ಮಕ ಮಾಹಿತಿ ಮೂಲಕ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### ೫.೨. ಲೈಂಗಿಕ ಜೀತಕ್ಕೊಳಗಾದ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ

ಅಧ್ಯಯನ ಕ್ಷೇತ್ರದ ಆರು ತಾಲೂಕುಗಳಿಂದ (ಬಿಜಾಪೂರ, ಬಸವನ ಬಾಗೇವಾಡಿ, ಅಥಣಿ, ರಾಯಭಾಗ, ಮುಧೋಳ ಮತ್ತು ಜಮಖಂಡಿ) ತಲಾ ೨೦ರಂತೆ ಒಟ್ಟು ೬೦ ಮಹಿಳೆಯರನ್ನು ಅಧ್ಯಯನಕ್ಕೆ ಒಳಪಡಿಸಲಾಗಿತ್ತು. ಈಗಾಗಲೇ ಈ ಹಿಂದಿನ ಅಧ್ಯಾಯದಲ್ಲಿ ಪ್ರಸ್ತುತ ಲೈಂಗಿಕ ದಂಧೆಯಲ್ಲಿರುವ ಮಹಿಳೆಯರ ಸಾಮಾಜಿಕ ಆರ್ಥಿಕ ಹಿನ್ನೆಲೆಯನ್ನು ನಾವು ಗಮನಿಸಿದ್ದೇವೆ. ಅವರ ಸ್ಥಿತಿಗೂ ಈ ಮಹಿಳೆಯರ ಸ್ಥಿತಿಗೂ ಹೆಚ್ಚು ಅಂತರ ಕಂಡುಬರುವುದಿಲ್ಲ.

#### ೫.೨/೧. ಸಾಮಾಜಿಕ

ಎಲ್ಲ ಅರವತ್ತೂ ಮಹಿಳೆಯರು ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದು, ಜಾತಿಯಿಂದ ಶೇಕಡಾ ೯೮.೬೬ರಷ್ಟು ಮಹಿಳೆಯರು ಪರಿಶಿಷ್ಟ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಅವರಲ್ಲಿ ಹೆಚ್ಚಿನವರು ಅಂದರೆ ಶೇಕಡಾ ೭೮.೩೩ರಷ್ಟು ಮಹಿಳೆಯರು ಹೊಲೆಯ ಸಮುದಾಯಕ್ಕೂ ಮತ್ತು ಶೇಕಡಾ ೨೧.೬೬ರಷ್ಟು ಮಹಿಳೆಯರು ಮಾದಿಗ ಸಮುದಾಯಕ್ಕೂ ಸೇರಿದವರಾಗಿದ್ದಾರೆ. ಇನ್ನುಳಿದ ಶೇಕಡಾ ೩.೩೩ರಷ್ಟು ಮಹಿಳೆಯರಲ್ಲಿ ಶೇಕಡಾ ೧.೬೬ರಷ್ಟು ಪರಿಶಿಷ್ಟ ಪಂಗಡ ಮತ್ತು ಶೇಕಡಾ ೧.೬೬ರಷ್ಟು

ಕುರುಬ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಅವರು ಶೈಕ್ಷಣಿಕವಾಗಿ ಅನಕ್ಷರಸ್ಥರಾಗಿದ್ದು, ಶೇಕಡಾ ೧೩.೩೩ರಷ್ಟು ಮಹಿಳೆಯರು ಶಾಲೆಗೆ ಹೋಗಿದ್ದರೂ, ಓದಲು ಬರೆಯಲು ಬರುವುದಿಲ್ಲ. ಒಬ್ಬಳು ಮಾತ್ರ ಹಿಂದಿ ಶಿಕ್ಷಣವನ್ನು ಮಾಡಿಕೊಂಡಿದ್ದು, ಓದುವುದು ಬರೆಯುವುದನ್ನು ಮಾಡುತ್ತಾಳೆ.

**ಕೋಷ್ಟಕ ೫.೧. ವಕ್ತೃಗಳ ಪ್ರಸ್ತುತ ವಯೋಮಾನ**

| ಅ.ಸಂ. | ವಯೋಮಾನ | ಸಂಖ್ಯೆ | ಶೇಕಡಾ |
|---|---|---|---|
| ೧ | ೨೦-೩೦ | ೧೧ | ೧೮.೩೩ |
| ೨ | ೩೧-೪೦ | ೨೧ | ೩೫ |
| ೩ | ೪೧-೫೦ | ೧೭ | ೨೮.೩೩ |
| ೪ | ೫೧-೬೦ | ೦೪ | ೬.೬ |
| ೫ | ೬೧-೭೦ | ೦೫ | ೮.೩ |
| ೬ | ೭೧-೮೦ | ೦೨ | ೩.೩೩ |
| ಒಟ್ಟು | | ೬೦ | ೧೦೦ |

ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ಮಹಿಳೆಯರಲ್ಲಿ ಮೇಲೆ ತಿಳಿಸಿದ, ವಯೋಮಾನದವರಾಗಿದ್ದಾರೆ. ಅವರು ತಮ್ಮ ರೆಡ್‌ಲೈಟ್ ಏರಿಯಾವನ್ನು ಬಿಟ್ಟು ಬಂದ ಕಾರಣಕ್ಕೂ ಅವರ ವಯಸ್ಸಿಗೂ ಸಂಬಂಧವಿರುವುದಿಲ್ಲ. ಏಕೆಂದರೆ ಬಹುತೇಕರು ರೆಡ್‌ಲೈಟ್ ಏರಿಯಾ ಬಿಟ್ಟು ಬಂದು ಬಹಳ ದಿನಗಳು ಗತಿಸಿವೆ.

**೫.೨/೨ ಆರ್ಥಿಕ**

ನಾವು ಗಮನಿಸಿದಂತೆ ಎಲ್ಲರೂ ಕೃಷಿ ಕೂಲಿ ಕಾರ್ಮಿಕರ ಕುಟುಂಬಕ್ಕೆ ಸೇರಿದವರಾಗಿದ್ದಾರೆ. ಕುರುಬ ಜಾತಿಗೆ ಸೇರಿದ ಶೇಕಡಾ ೧.೬೬ರಷ್ಟು ಕುಟುಂಬದಲ್ಲಿ ಭೂಮಿ ಇದ್ದು, ಸಾಗುವಳಿಯನ್ನು ಮಾಡುತ್ತಾರೆ. ಹಾಗೆಯೇ ಶೇಕಡಾ ೧೩.೩೩ರಷ್ಟು ಪರಿಶಿಷ್ಟ ಜಾತಿಯ ಮಹಿಳೆಯರ ಕುಟುಂಬಗಳಲ್ಲಿ ಭೂಮಿ ಇದೆ. ಅದರಲ್ಲಿ ಶೇಕಡಾ ೧.೬೬ರಷ್ಟು ಮಹಿಳೆಯರ ಕುಟುಂಬಗಳಲ್ಲಿ ಉಳಿಮೆಗೆ ಯೋಗ್ಯವಾದ ಮತ್ತು ಹೆಚ್ಚಿನ ಪ್ರಮಾಣದ ಭೂಮಿ ಇದೆ. ಆದರೆ ಉಳಿದ ೧೧.೬೬ರಷ್ಟು ಪರಿಶಿಷ್ಟ ಜಾತಿಯವರ ಕುಟುಂಬಗಳ ಭೂಮಿಯು ಸಾಗುವಳಿಗೆ ಯೋಗ್ಯವಾಗಿಲ್ಲ ಮತ್ತು ಅತೀ ಕಡಿಮೆ ಪ್ರಮಾಣದಲ್ಲಿ ಇದ್ದು(ಒಂದು ಗುಂಟೆ, ಅರ್ಧ ಗುಂಟೆ). ಅದರಲ್ಲಿಯೂ ೧೦-೧೨ ಜನ ಪಾಲುದಾರರಾಗಿದ್ದಾರೆ. ಹಾಗಾಗಿ ಅದರಿಂದ ಏನೂ ಉಪಯೋಗವಿಲ್ಲದಾಗಿದೆ.

ಕೆಲವು ಮಹಿಳೆಯರ ಕುಟುಂಬಗಳಲ್ಲಿ ಅವರ ತಂದೆ, ಕೊಂಬು ಊದುವ, ಚಪ್ಪಲಿ ಹೊಲಿಯುವ, ಕಟ್ಟಿಗೆ ಕಡಿಯುವ, ಕಟ್ಟಿಗೆ ಆರಿಸುವ, ಕಟ್ಟಿಗೆ ಮಾರುವ, ವೀಳ್ಯದೆಲೆ ವ್ಯಾಪಾರ ಮಾಡುವ, ಕತ್ತಿ

ತುಂಬಿಸಿಕೊಂಡು ಮಾರುವ, ಜೀತ ಸೇರಿದಂತೆ ಇನ್ನೂ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. ಒಂದು ಕುಟುಂಬ ಎರಡು ಎತ್ತುಗಳನ್ನು ಇಟ್ಟುಕೊಂಡು ಸಾಹುಕಾರರ ಹೊಲವನ್ನು ಗೇಣಿಗೆ ಮಾಡುತ್ತಿತ್ತು. ಬಹುತೇಕರು ದುಡಿಮೆ ಅರಸಿ ವಲಸೆ ಹೋಗುತ್ತಿದ್ದರು ಮತ್ತು ಈಗಲೂ ಕೆಲವರು ಹೋಗುತ್ತಿದ್ದಾರೆ. ಬಹುತೇಕರ ಕುಟುಂಬಗಳಲ್ಲಿ ೬ ಮತ್ತು ೬ಕ್ಕಿಂತ ಹೆಚ್ಚು ಮಕ್ಕಳಿರುವುದು ಕಂಡು ಬರುತ್ತದೆ. ಕೆಲವು ಮನೆಗಳಲ್ಲಿ ಹಿರಿಯ ದೇವದಾಸಿಯರೇ ಕುಟುಂಬದ ಆರ್ಥಿಕ ಶಕ್ತಿಯಾಗಿದ್ದಾರೆ.

ಈ ಹಿನ್ನೆಲೆಯಲ್ಲಿ ಮಹಿಳೆಯರನ್ನು ಅವರ ಅಪ್ರಾಪ್ತ ವಯಸ್ಸಿನಲ್ಲಿ ಯಾಕೆ ಲೈಂಗಿಕ ಜೀತಕ್ಕೆ ಇಟ್ಟಿದ್ದರು ಮತ್ತು ಅವರು ಅಲ್ಲಿ ಹೇಗಿದ್ದರು, ಮರಳಿ ಊರಿಗೆ ಬರಲು ಕಾರಣವಾದ ಅಂಶಗಳು ಯಾವುವು ಎಂಬುದನ್ನು ಆಯ್ದ ಕೆಲವು ಪ್ರಕರಣ ಅಧ್ಯಯನಗಳ ಮೂಲಕ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

**೫.೩. ಪೂರ್ವಸ್ಥಿತಿ**

ಪ್ರಕರಣಗಳನ್ನು ಅವುಗಳ ಸ್ವರೂಪದ ಆಧಾರದ ಮೇಲೆ ಎರಡು ಭಾಗಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ಅವುಗಳೆಂದರೆ, ಒಂದು ದೇವದಾಸಿ ಆಚರಣೆಗೆ ಒಳಗಾದವರು, ಎರಡು ಇತರೆ ಒತ್ತಡಕ್ಕೆ ಒಳಗಾದವರು

**೫.೩/೧. ದೇವದಾಸಿ ಆಚರಣೆಗೆ ಒಳಗಾದವರು**

ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ೬೦ ಮಹಿಳೆಯರಲ್ಲಿ ಶೇಕಡಾ ೮೩.೩೩ರಷ್ಟು ದೇವದಾಸಿ ಪದ್ಧತಿಗೆ ಒಳಪಟ್ಟವರಾಗಿದ್ದಾರೆ. ದೇವದಾಸಿ ಪದ್ಧತಿಗೆ ಒಳಗಾಗುವ ಕಾರಣಗಳು ಸಂಕೀರ್ಣವಾಗಿವೆ. ಇಂತಹದೇ ಒಂದು ಕಾರಣ ಎಂದು ನಿಖರವಾಗಿ ಹೇಳಲು ಸಾಧ್ಯವಾಗದೇ ಹೋದರೂ, ಪ್ರಕರಣಗಳ ಸ್ವರೂಪದ ಆಧಾರದಲ್ಲಿ ಪ್ರಕರಣಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ಮಾಡಲಾಗಿದೆ. ಪ್ರಕರಣಗಳು ವಿವರಿಸುವಂತೆ, ಅವರಲ್ಲಿ ಸಂಪ್ರದಾಯ ಮತ್ತು ಮೂಢನಂಬಿಕೆಗಳು (೫-ಶೇಕಡಾ ೧೦), ಒಬ್ಬಳೇ ಮಗಳಿರುವುದರಿಂದ (೪-ಶೇಕಡಾ ೮), ಪರಿಸರದ ಪ್ರಭಾವದಿಂದ(೫-ಶೇಕಡಾ ೧೦), ಬಡತನ ಮತ್ತು ಅನಿಯಂತ್ರಿತ ಸಂತಾನೋತ್ಪತ್ತಿ (೧೫-ಶೇಕಡಾ ೩೦), ತಂದೆಯ ಅನಾರೋಗ್ಯ (೨-ಶೇಕಡಾ ೪), ತಂದೆಯ ಮದ್ಯಪಾನ(೪-ಶೇಕಡಾ ೮), ತಾಯಿಯೊಬ್ಬಳೇ ದುಡಿಯುವದರಿಂದ (೮-ಶೇಕಡಾ ೧೬), ವಿಘಟಿತ ಕುಟುಂಬ (೨-ಶೇಕಡಾ ೪), ವಿವಾಹ ಪೂರ್ವ ಸಂಬಂಧ (೫-ಶೇಕಡಾ ೧೦) ಈ ಕಾರಣಗಳಿಂದಾಗಿ ದೇವದಾಸಿಯಾಗಿ ಲೈಂಗಿಕ ಜೀತಕ್ಕೆ ಸಾಗಾಣಿಕೆಯಾಗಿರುವುದು ಕಂಡು ಬರುತ್ತದೆ.

ಹೀಗೆ ದೇವದಾಸಿಯರಾಗಿ ಲೈಂಗಿಕ ಜೀತಕ್ಕೆ ಒಳಗಾದ ಮಹಿಳೆಯರ ಪೂರ್ವಸ್ಥಿತಿ, ಜೀತದಲ್ಲಿ ಇದ್ದಾಗಿನ ಸ್ಥಿತಿ ಮತ್ತು ಲೈಂಗಿಕ ಜೀತದಿಂದ ಹೊರಗೆ ಬಂದ ಸ್ಥಿತಿಗಳನ್ನು ಈ ಕೆಳಗಿನ ಪ್ರಕರಣ ಅಧ್ಯಯನಗಳ ಮೂಲಕ ವಿವರಿಸಲಾಗಿದೆ.

**೫.೩/೧.೧. ಸಂಪ್ರದಾಯ ಮತ್ತು ನಂಬಿಕೆ**

ಧಾರ್ಮಿಕ ಆಚರಣೆಯ ಒಂದು ಭಾಗವಾಗಿ ಬೆಳೆದು ಬಂದ ದೇವದಾಸಿ ಪದ್ಧತಿಯು, ಕಾಲ ಕಳೆದಂತೆ, ತಳ ಸಮುದಾಯಗಳ ಮಹಿಳೆಯರು, ಉನ್ನತ ಸಮುದಾಯದ ಪುರುಷ ವರ್ಗಕ್ಕೆ ಮುಕ್ತವಾಗಿ ಲೈಂಗಿಕ ಸೇವೆಯನ್ನು ಒದಗಿಸುವ ಒಂದು ಸಾಮಾಜಿಕ ಸಂಪ್ರದಾಯವಾಗಿ ಬೆಳೆದು ಬಂದಿತು. ಅದನ್ನು ನಿರಂತರವಾಗಿ ಉಳಿಯುವಂತೆ ಮಾಡಲು ಮೂಢ ಆಚರಣೆಗಳನ್ನು ಸೃಷ್ಟಿಸಿ, ತಳ ಸಮುದಾಯದ ಜನರು ತಾವಾಗಿಯೇ ತಮ್ಮ ಹೆಣ್ಣುಮಕ್ಕಳನ್ನು ಈ ವ್ಯವಸ್ಥೆಯ ಒಳಗೆ ಉಳಿಸುವಂತೆ ಮಾಡಿದರು. ಅನಕ್ಷರಸ್ಥ, ಮುಗ್ಧ, ಬಡ ಜನರು ಅದನ್ನು ಇಂದಿಗೂ ನಂಬುತ್ತಿದ್ದಾರೆ (ಜೋಗನ್ ಶಂಕರ್, ೧೯೯೩, ಕೆ.ಜಿ. ಗುರುಮೂರ್ತಿ) ಅಧ್ಯಯನಕ್ಕೆ ಒಳಪಟ್ಟ ಒಟ್ಟು ದೇವದಾಸಿ ಮಹಿಳೆಯರಲ್ಲಿ ಶೇಕಡಾ ೧೦ರಷ್ಟು ಮಹಿಳೆಯರನ್ನು ಸಂಪ್ರದಾಯ ಮತ್ತು ಮೂಢನಂಬಿಕೆಗಳಿಂದಾಗಿ ದೇವದಾಸಿ ಮಾಡಲಾಗಿದೆ. ಅದರಲ್ಲಿ ಎರಡು ಪ್ರಕರಣಗಳಲ್ಲಿ ಅವರ ತಂದೆ ತಾಯಿಗೆ ಅನಾರೋಗ್ಯ ಉಂಟಾದಾಗ, ಮೈಮೇಲೆ ದೇವರು ಬಂದು ಭವಿಷ್ಯ ಹೇಳುವ, ಯಲ್ಲಮ್ಮ ದೇವಿಯ ಅವತಾರಿಣಿ ಎಂದು ಹೇಳುವ, ಜೋಗತಿ ದೇವದಾಸಿಯು, 'ನಿಮ್ಮ ಹೆಣ್ಣುಮಕ್ಕಳನ್ನು ದೇವದಾಸಿ ಮಾಡಿದರ ಎಲ್ಲಾ ಸರಿ ಹೋಗುತ್ತದೆ' ಎಂದು ಹೇಳಿದ್ದಕ್ಕಾಗಿ ಮುತ್ತು ಕಟ್ಟಿದ್ದಾರೆ. ಇನ್ನೊಂದು ಪ್ರಕರಣದಲ್ಲಿ ಹೆಣ್ಣು ಮಗುವಿಗೆ ಏನೊ ಸೋಂಕು ತಗುಲಿ ಬಿಳಿ ಮುಟ್ಟು ಆಗುತ್ತಿದ್ದ ಕಾರಣಕ್ಕೆ, ಅವಳು ಸಮಸ್ಯೆಯಿಂದ ಮುಕ್ತಳಾದರೆ, ಅವಳನ್ನೇ ದೇವರಿಗೆ ಬಿಡುತ್ತೇವೆಂದು ಹರಸಿಕೊಂಡಿದ್ದಕ್ಕೆ ಮುತ್ತು ಕಟ್ಟಲಾಗಿದೆ. ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ, ಮದುವೆಯಾದ ಎರಡು ವರ್ಷದ ಒಳಗೆ ಆ ದಂಪತಿಗಳಿಗೆ ಮಕ್ಕಳಾಗಬೇಕು. ಆಗದಿದ್ದರೆ, ಅದು ದೇವಿಯ ಕಾಟವೇ ಆಗಿರುತ್ತದೆ. ಎಂಬ ನಂಬಿಕೆ ಇದೆ. ಹಾಗಾಗಿ ಆ ಮಕ್ಕಳಾಗದ ದಂಪತಿಗಳು, ಎಲ್ಲಮ್ಮನ ಪೂಜೆ ಮಾಡಿ, ಹೆಣ್ಣು ಹುಟ್ಟಿದರೆ ಮುತ್ತುಕಟ್ಟಿ ನಿನಗೆ ಅರ್ಪಿಸುತ್ತೇವೆ ಎಂದು ಹರಕೆ ಮಾಡಿಕೊಳ್ಳಲು, ಹಿರಿಯರೊಬ್ಬರು ಸಲಹೆ ನೀಡಿದ್ದಕ್ಕಾಗಿ, ಇಲ್ಲಿಯ ಒಂದು ಪ್ರಕರಣದಲ್ಲಿ ಹಾಗೆ ಹರಕೆ ಹೊತ್ತುಕೊಂಡ ಕಾರಣಕ್ಕೆ, ಹುಟ್ಟಿದ ಮಗಳನ್ನು ದೇವದಾಸಿ ಮಾಡಲಾಗಿದೆ. ಹಾಗೆಯೇ ಇನ್ನೊಂದು ಪ್ರಕರಣದಲ್ಲಿ ಮನೆತನದ ಅಜ್ಜಿಯೊಬ್ಬರು ತಮಗೆ ಹೆಣ್ಣುಮಕ್ಕಳು ಹುಟ್ಟಲಿಲ್ಲವೆಂಬ ಕಾರಣಕ್ಕೆ ತನಗೆ ಹುಟ್ಟಿದ ಗಂಡುಮಕ್ಕಳಿಗೆ ಹೆಣ್ಣುಮಕ್ಕಳಾದರೆ, ಅವರನ್ನು ದೇವದಾಸಿ ಬಿಡುತ್ತೇನೆ ಎಂದು ಹರಕೆ ಹೊತ್ತ ಕಾರಣಕ್ಕೆ, ಅವಳು ಸತ್ತು ಹೋದ ಮೇಲೆ ಅವರ ಮನೆತನಕ್ಕೆ ಹುಟ್ಟಿದ ನಾಲ್ಕು ಹೆಣ್ಣುಮಕ್ಕಳನ್ನು ದೇವದಾಸಿ ಮಾಡಲಾಗುತ್ತದೆ. ಇವರನ್ನೆಲ್ಲ ಮುತ್ತು ಕಟ್ಟಿದ ಮೇಲೆ ಋತುಮತಿಯರಾಗುವವರೆಗೆ ಮನೆಯಲ್ಲಿಟ್ಟುಕೊಂಡು ಮುಂಬಯಿ, ಪುಣೆ, ಸಾಂಗ್ಲಿಗಳಿಗೆ ಲೈಂಗಿಕ ಜೀತಕ್ಕೆ ಇಡುತ್ತಾರೆ. ಅದರಲ್ಲಿ ಛಾಯಾ(ಹೆಸರು ಬದಲಾಯಿಸಲಾಗಿದೆ) ಎಂಬ ಯುವತಿಯ ಪ್ರಕರಣವನ್ನು ಇಲ್ಲಿ ವಿವರಿಸಲಾಗಿದೆ.

**ಛಾಯಾ ಅವರ ಪ್ರಕರಣ** : ಛಾಯಾಳ ಪ್ರಕರಣದಲ್ಲಿ. ದುಡಿಯಲಾಗದೇ ಮದ್ಯಪಾನಿಯಾಗಿ ಅಲೆಯುತ್ತಿದ್ದ ಛಾಯಾಳ ತಂದೆಗೆ, ಹೆಂಡತಿ ಕೂಲಿ ಮಾಡಿ ತಂದದ್ದರಲ್ಲಿಯೇ ಕುಟುಂಬ ನಿರ್ವಹಿಸುವುದು ಮತ್ತು ತನ್ನ ಚಟಗಳನ್ನು ತೀರಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಆಗ ತನ್ನ ತಾಯಿ ಎಂದೋ ಮಾಡಿದ ಹರಕೆ ನೆನಪು ಮಾಡಿಕೊಂಡು, ತನ್ನ ಇರುವ ಒಬ್ಬಳೇ ಮಗಳನ್ನು ಹಣದ ಆಸೆಗಾಗಿ ದೇವದಾಸಿ ಮಾಡಿದ್ದು

ದಟ್ಟವಾಗಿಯೇ ಗೋಚರಿಸುತ್ತದೆ. ಛಾಯಾಳ ತಾಯಿಯ ವಿರೋಧದಲ್ಲೂ ಅವಳಿಗೆ ಮುತ್ತು ಕಟ್ಟಿಸುವ ಕೆಲಸವನ್ನು ತಂದೆ ಮಾಡುತ್ತಾನೆ. ಇದಕ್ಕೆ ಈಗಾಗಲೇ ತನ್ನ ಅಣ್ಣಂದಿರ ಹೆಣ್ಣುಮಕ್ಕಳು ಮತ್ತು ತನ್ನ ಹೆಂಡತಿಯ ಅಕ್ಕ ದೇವದಾಸಿಯರಾಗಿ, ದಂಧೆಯ ಮನೆಗಳಲ್ಲಿದ್ದು, ಗಳಿಸಿ ತರುತ್ತಿರುವುದು ಆತನಿಗೆ ಈ ನಿರ್ಧಾರ ತೆಗೆದುಕೊಳ್ಳಲು ಪ್ರೇರೇಪಿಸುತ್ತವೆ. ಹಾಗೆಯೇ ಪುಟ್ಟ ಮಗಳನ್ನು ಸಾಂಗ್ಲಿಯ ತನ್ನ ಹೆಂಡತಿಯ ಸಂಬಂಧಿಕರ ಲೈಂಗಿಕ ದಂಧೆಯ ಮನೆಯಲ್ಲಿ ಇಟ್ಟು ಬರುತ್ತಾನೆ. ಆದರೆ ಅಲ್ಲಿಂದ ಏನೂ ಲಾಭ ಸಿಗದೆ ಹೋದಾಗ, ಛಾಯಾಳನ್ನು, ತನ್ನ ಅಣ್ಣಂದಿರ ಮಕ್ಕಳು ಘರವಾಲಿಗಳಾಗಿದ್ದ, ಉತ್ತರ ಪ್ರದೇಶದ ಅಲಹಾಬಾದಲ್ಲಿ ಇಟ್ಟು ಬರುತ್ತಾನೆ. ಪುಟ್ಟ ಮಗಳು ೧೮ ವರ್ಷ ಲೈಂಗಿಕ ಜೀತಕ್ಕೆ ನಿಂತದ್ದಕ್ಕೆ ಪ್ರತಿಯಾಗಿ, ಅವಳ ತಂದೆಗೆ ಒಂದಿಷ್ಟು ಸಾರಾಯಿ ಮತ್ತು ಅವಳಿಗೊಂದು ಹೊತ್ತು ಊಟ ಅಷ್ಟೇ. ಅದರ ಜೊತೆಗೆ ಅಮಾನವೀಯವಾದ ಹಿಂಸೆ(ವಿವರಗಳಿಗೆ ನೋಡಿ: ಅನುಬಂಧ ೧೮ ಪ್ರಕರಣ ಅಧ್ಯಯನ ೧).

**೫.೩/೧.೨. ಒಬ್ಬಳೇ ಮಗಳು**

ಬಡತನದ ಬದುಕಿಗೆ ಮಕ್ಕಳೇ ಆಸ್ತಿ. ಅದರಲ್ಲೂ, ಸಾಮಾಜಿಕವಾಗಿ, ಆರ್ಥಿಕವಾಗಿ ಅಂಚಿಗೆ ತಳ್ಳಲ್ಪಟ್ಟಿರುವ ತಳಸಮುದಾಯದ ಕುಟುಂಬಗಳಿಗೆ ಮಕ್ಕಳೇ ಆಧಾರವಾಗಿರುತ್ತಿದ್ದವು. ಗಂಡುಮಕ್ಕಳು ಹುಟ್ಟಿದರೆ, ಸಾಹುಕಾರರ ಮನೆಯಲ್ಲಿ ಜೀತಕ್ಕೆ ಇಡುವುದು, ಹೆಣ್ಣುಮಕ್ಕಳು ಹುಟ್ಟಿದರೆ ದೇವದಾಸಿ ಮಾಡಿ ಲೈಂಗಿಕ ಜೀತಕ್ಕೆ ಇಡುವುದು ವಾಡಿಕೆ. ಅದರಲ್ಲಿ ಒಬ್ಬಳೆ ಹೆಣ್ಣುಮಗಳು ಹುಟ್ಟಿದರೆ, ಅವಳನ್ನು ಮದುವೆ ಮಾಡುತ್ತಲೇ ಇರಲಿಲ್ಲ. ಮನೆಗೆ ಇದ್ದ ಆಸ್ತಿ(ಚೂರು ಪಾರು) ಮನೆಗೇ ಉಳಿಯಬೇಕು ಅನ್ನುವ ಹಂಬಲ ಒಂದು ಕಡೆಯಾದರೆ, ಯಾವ ಆಸ್ತಿ ಇಲ್ಲದಿದ್ದರೂ ಸಹ, ತಂದೆ ತಾಯಿಯರ ಮುಪ್ಪಿನ ಕಾಲದಲ್ಲಿ ಅವರನ್ನು ಆರೈಕೆ ಮಾಡಲು ಯಾರಾದರೂ ಒಬ್ಬರು ಬೇಕು. ಇರುವ ಒಬ್ಬಳನ್ನು ಮದುವೆ ಮಾಡಿಕೊಟ್ಟರೆ, ಅವಳೂ ಹೊರಟು ಹೋದರೆ, ತಾವು ಅನಾಥರಾಗುತ್ತೇವೆಂದು ಮಗಳಿಗೆ ಮುತ್ತು ಕಟ್ಟಿ ಮನೆಯಲ್ಲಿ ಇಟ್ಟುಕೊಳ್ಳುವ ರೂಢಿ ಪರಿಶಿಷ್ಟ ಸಮುದಾಯಗಳಲ್ಲಿ ಇದೆ. ಹಾಗೆಯೇ ಅವಳಿಗೆ ಹುಟ್ಟುವ ಮಕ್ಕಳಿಂದ ತಮ್ಮ ಕುಟುಂಬ ಮುಂದುವರೆಯುತ್ತದೆ ಎಂಬ ಮಹದಾಸೆಯೂ ಇರುತ್ತದೆ. ಅಲ್ಲದೇ ತಾಯಿ ದೇವದಾಸಿ ಇದ್ದು, ಅವಳಿಗೆ ಒಬ್ಬಳೇ ಮಗಳಿದ್ದರಂತೂ, ಅವಳನ್ನು ಯಾವ ಕಾರಣಕ್ಕೂ ಅವಳು ಮದುವೆ ಮಾಡುವುದೇ ಇಲ್ಲ. ದೇವದಾಸಿ ಸಂಪ್ರದಾಯವನ್ನು ಅವಳೇ ಮುಂದುವರೆಸಬೇಕು. ಹೀಗೆ ಅಧ್ಯಯನಕ್ಕೊಳಪಟ್ಟ ಪ್ರಕರಣಗಳಲ್ಲಿ ಶೇಕಡಾ ೮೮ರಷ್ಟು ಮಹಿಳೆಯರನ್ನು ಒಬ್ಬಳೇ ಮಗಳಿರುವ ಕಾರಣಕ್ಕೆ ದೇವದಾಸಿ ಮಾಡಿರುವುದು ಕಂಡುಬರುತ್ತದೆ. ನಂತರ ಅವರನ್ನು ಮಹಾರಾಷ್ಟ್ರದ ಲೈಂಗಿಕ ದಂಧೆಯ ಮನೆಗಳಲ್ಲಿ ಲೈಂಗಿಕ ಜೀತಕ್ಕಿಟ್ಟು ಹಣ ತಂದು ಜೀವನ ನಡೆಸಿರುವುದು ಕಂಡುಬರುತ್ತದೆ. ಹಾಗೆ ದೇವದಾಸಿಯಾಗಿ ಮಿರಜ್ ರೆಡ್‌ಲೈಟ್ ಏರಿಯಾಗೆ ಹೋಗಿದ್ದ ನಿಜವ್ವಳ ಪ್ರಕರಣ ಅಧ್ಯಯನವನ್ನು ಇಲ್ಲಿ ವಿವರಿಸಲಾಗಿದೆ.

**ನಿಜವ್ವ ಪ್ರಕರಣ :** ನಿಜವ್ವ ೬೦ ವರ್ಷದ ದೇವದಾಸಿ ಮಹಿಳೆ. ಇವಳ ತಾಯಿಯೂ ದೇವದಾಸಿ ಇದ್ದಳು. ಇವಳ ತಾಯಿಗೆ ಹುಟ್ಟಿದ ಒಂಬತ್ತು ಮಕ್ಕಳಲ್ಲಿ ಇವಳೊಬ್ಬಳೇ ಉಳಿಯುತ್ತಾಳೆ. ಇವರ

ಪಾಲಿಗೆ ಸ್ವಲ್ಪ ಭೂಮಿ ಇದ್ದು, ಅದಕ್ಕೆ ೨೦ ಜನ ವಾರಸುದಾರರು ಇರುತ್ತಾರೆ. ಆ ಭೂಮಿ ನಿಜವ್ವಳಿಗೆ ಹೋಗಬಾರದು, ತಮಗೇ ಉಳಿಯಬೇಕೆಂದು ಚಿಂತಿಸುತ್ತಾರೆ. ಹಾಗಾಗಿ ನಿಜವ್ವಳ ಮದುವೆ ಮಾಡಿದರೆ, ಅವಳು ಗಂಡನ ಮನೆಗೆ ಹೊರಟು ಹೋಗುತ್ತಾಳೆಂದು ತಾಯಿಯ ಅಣ್ಣ ತಮ್ಮಂದಿರು ನಿಜವ್ವಳ ಮದುವೆಯನ್ನು ಮಾಡಲು ಪ್ರಯತ್ನಿಸುತ್ತಾರೆ. ಆದರೆ ಊರಿನ ಗೌಡ, ಕುಲಕರ್ಣಿ ಮತ್ತು ಹಳಬರು 'ಇರುವ ಮಗಳೊಬ್ಬಳನ್ನ ಮದುವೆ ಮಾಡಿದರೆ, ನಿನ್ನನ್ನು ನೊಡಿಕೊಳ್ಳುವವರು ಯಾರು? ಹಾಗಾಗಿ ಅವಳನ್ನು ದೇವದಾಸಿ ಮಾಡು, ಸರ್ಕಾರದಿಂದ ಅಡಚಣೆ ಬಂದರೆ ನಾವೆಲ್ಲ ನಿಭಾಯಿಸುತ್ತೇವೆ' ಎಂದು ನಿಜವ್ವಳ ತಾಯಿಗೆ, ತಿಳಿಸಿ ಹೇಳುತ್ತಾರೆ. ನಂತರ, ತಾವೇ ದೇವದಾಸಿ ಸಮರ್ಪಣೆಯ ಎಲ್ಲ ಖರ್ಚನ್ನೂ ಕೊಟ್ಟು, ನಿಜವ್ವಳು ದೇವದಾಸಿಯಾಗುವಂತೆ ಮಾಡುತ್ತಾರೆ. ಈ ಪ್ರಕರಣವನ್ನು ಗಮನಿಸಿದರೆ, ಆಸರೆ ಇರದ ಒಬ್ಬಳು ಹೆಣ್ಣು ಮಗಳ ಆಸ್ತಿಗಾಗಿ ಜೊತೆಗಿರುವವರು ಹೋರಾಡಿದರೆ, ಊರಿನ ಮೇಲ್ಜಾತಿಯ ಜನ ಅವರನ್ನು ಸಂತೈಸುವ ನೆಪದಲ್ಲಿ ಸಾಮಾಜಿಕವಾಗಿ ಅವರು ಇನ್ನೂ ಕೆಳಸ್ತರದಲ್ಲಿಯೇ ಉಳಿಯುವಂತೆ ಮಾಡುತ್ತಾರೆ. ಈ ಮೂಲಕ ತಮ್ಮ ಮುಕ್ತ ಲೈಂಗಿಕತೆಗೆ ಒಂದು ಹೆಣ್ಣನ್ನು ಸಜ್ಜು ಗೊಳಿಸುತ್ತಾರೆ. ಅವಳನ್ನು ಮದುವೆ ಮಾಡಬೇಕೆಂದವರ ದೃಷ್ಟಿಕೋನವೂ ಸರಿ ಇಲ್ಲ ಮತ್ತು ಅವಳನ್ನು ದೇವದಾಸಿ ಮಾಡು ಅಂದವರ ದೃಷ್ಟಿಕೋನವೂ ಸರಿ ಇಲ್ಲದ್ದು ಇಲ್ಲಿ ಕಂಡುಬರುತ್ತದೆ. ಈ ವ್ಯವಸ್ಥೆಯು ಮುಗ್ಧ ಮತ್ತು ಅನಕ್ಷರಸ್ಥ ಜನರನ್ನು ಮತ್ತೆ ಮತ್ತೆ ಬಲಿಯಾಗುವಂತೆ ವ್ಯೂಹ ರಚಿಸುತ್ತಲೇ ಇರುತ್ತದೆ. ಈ ರೀತಿಯಾಗಿ ಒಂದು ಹುನ್ನಾರಕ್ಕೆ ಆಹಾರವಾದ, ನಿಜವ್ವ, ಮಿರಜ್ ರೆಡ್‌ಲೈಟ್ ಏರಿಯಾಕ್ಕೆ ಹೋಗಿ ಜೀವನ ನಡೆಸುತ್ತಾಳೆ. ನಂತರ ಒಬ್ಬ ಒಳ್ಳೆಯ ಪಾರ್ಟನರ್ ಸಿಕ್ಕಾಗ, ರೆಡ್‌ಲೈಟ್ ಏರಿಯಾದಿಂದ ಹೊರ ಬಂದು, ಅವನೊಡನೆ ಜೀವನ ನಡೆಸುತ್ತಾಳೆ. ಆ ಸಂಬಂಧದಿಂದ ತನಗೆ ಹುಟ್ಟಿದ ಮಗಳನ್ನೂ ದೇವದಾಸಿ ಮಾಡುತ್ತಾಳೆ. ರೆಡ್‌ಲೈಟ್ ಏರಿಯಾದಲ್ಲಿಯೇ ಕಾಲಕಾಳೆದ ಅವಳು, ದುಶ್ಚಟಗಳಿಂದ ಸಾವನ್ನಪ್ಪುವ ಸ್ಥಿತಿ ಬರುತ್ತದೆ. ಅದರೂ ಸಹ ನಿಜವ್ವ ಜಾಣತನದಿಂದ ಅಷ್ಟಿಷ್ಟು ಆಸ್ತಿಯನ್ನು ಮಾಡಿಕೊಂಡು ಸಧ್ಯಕ್ಕೆ ನೆಮ್ಮದಿಯಿಂದ ಇದ್ದಾಳೆ. ಆದರೆ ಅವಳು ಗಳಿಸಿ ಕಟ್ಟಿದ ಮನೆಯಲ್ಲಿ ಯಾರೋ ಹೆತ್ತ ಬಾಲೆಯರು ಲೈಂಗಿಕ ದಂಧೆಗೆ ನಿಂತು, ಬದುಕನ್ನು ಕಳೆದುಕೊಳ್ಳುತ್ತಿದ್ದಾರೆ (ವಿವರಗಳಿಗೆ ನೋಡಿ. ಅನುಬಂಧ ೧, ಪ್ರಕರಣ ಅಧ್ಯಯನ ೨).

**೫.೩/೧.೩ ಪರಿಸರ**

ಒಂದು ಪರಿಸರವು ವ್ಯಕ್ತಿಯ ಜೀವನವನ್ನು ರೂಪಿಸುವಲ್ಲಿ ಬಹುಮುಖ್ಯವಾದ ಪ್ರಭಾವವನ್ನು ಬೀರಬಲ್ಲುದು. ವ್ಯಕ್ತಿಯ ನೆರೆ ಹೊರೆ, ನಮ್ಮ ಜೊತೆಗೆ ಇರುವ ಸ್ನೇಹಿತರು, ಸಮುದಾಯದ ಜನರು, ಅವರ ರೀತಿ ನೀತಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳು ಅವನ ಜೀವನದಲ್ಲಿ ಮಹತ್ತರ ಬದಲಾವಣೆಯನ್ನು ತರಬಲ್ಲವು. ಅಧ್ಯಯನಕ್ಕೆ ಒಳಪಡಿಸಿದ ದೇವದಾಸಿಯರಾದ ಮಹಿಳೆಯರಲ್ಲಿ ಶೇಕಡಾ ೧೦ರಷ್ಟು ಮಹಿಳೆಯರು ಪರಿಸರದ ಪ್ರಭಾವದಿಂದ ದೇವದಾಸಿಯಾದವರಿದ್ದಾರೆ. ಮನೆಯಲ್ಲಿ ಯಾವುದೇ ತೊಂದರೆ ಇರದಿದ್ದಾಗಲೂ, ದುಡಿಯುವ ಅವಕಾಶಗಳಿದ್ದಾಗಲೂ ಸಹ ಸುತ್ತ ಮುತ್ತಲಿನವರ ಕಲಿಕೆಯ ಮಾತುಗಳಿಂದ, ಒತ್ತಡಗಳಿಂದ, ಅವರ ವೈಭವದ ಜೀವನ ನೋಡುವುದರಿಂದ, ತಾವೂ

ಯಾಕೆ ತಮ್ಮ ಹೆಣ್ಣುಮಕ್ಕಳನ್ನು ದೇವದಾಸಿ ಮಾಡಬಾರದು? ಎಂದು ಚಿಂತಿಸಿ ಹಲವಾರು ಕುಟುಂಬಗಳು ತಮ್ಮ ಮಕ್ಕಳನ್ನು ದೇವದಾಸಿ ಮಾಡಿದ್ದಾರೆ. ಹಾಗೆ ಮಾಡಿದವರನ್ನು ಪುಣೆ, ಮುಂಬಯಿ, ಗೋವಾದ ರೆಡ್‌ಲೈಟ್ ಏರಿಯಾಗಳವರೆಗೂ ಸಾಗಾಣಿಕೆ ಮಾಡಿದ್ದಾರೆ. ಅವರಲ್ಲಿ ಶೃತಿ ಇವರ ಪ್ರಕರಣ ಅಧ್ಯಯನವನ್ನು ಇಲ್ಲಿ ವಿವರಿಸಲಾಗಿದೆ.

**ಶೃತಿ ಪ್ರಕರಣ** : ಶೃತಿಯ ತಾಯಿ ದೇವದಾಸಿಯಾಗಿದ್ದವರು. ಅವರೂ ಸಹ ಮುಂಬೈ, ಗೋವಾ ಎಲ್ಲ ಕಡೆಗೂ ಲೈಂಗಿಕ ಜೀತಕ್ಕೆ ಇದ್ದು ಬಂದವರೇ. ತಮಗೆ ಹುಟ್ಟಿದ ಎರಡೂ ಹೆಣ್ಣುಮಕ್ಕಳನ್ನು ಮದುವೆ ಮಾಡ ಬೇಕೆಂಬುದೇ ಇವರ ವಿಚಾರವಾಗಿತ್ತು. ಹಾಗೆಯೇ ದೊಡ್ಡವಳ ಮದುವೆ ಮಾಡಿರುತ್ತಾರೆ. ಶೃತಿಗೆ ಶಾಲೆಗೆ ಹೋಗುವುದೆಂದರೆ ತುಂಬಾ ಇಷ್ಟವಾಗಿತ್ತು. ಆದರೂ ತಾಯಿ ಶಾಲೆ ಬಿಡಿಸಿ ಮದುವೆ ಗೊತ್ತು ಮಾಡುತ್ತಾಳೆ. ಇನ್ನೇನು ಮದುವೆ ಆಗುತ್ತದೆ ಎಂಬ ಹೊತ್ತಿಗೆ, ಪಕ್ಕದ ಮನೆಯ ದೇವದಾಸಿ ಮಹಿಳೆಯರು, 'ಇಕಿನ್ನೂ ಮದುವಿ ಮಾಡಿ ಏನ ಮಾಡ್ತೀ. ನಾಳೆ ನಿನ್ನ ಗಂಡಮಕ್ಕಳ ನಿನ್ನನ್ನು ನೋಡಿಕೊಳ್ಳದಿದ್ರ, ನೀ ಅನಾಥ ಆಗಿ ಹೊಕ್ಕೀ. ಇಕಿನ್ನ ಮದುವಿ ಮಾಡಬ್ಯಾಡ. ಮುತ್ತುಕಟ್ಟಿ ಮನ್ಯಾಗ ಇಟ್ಟುಕೋ', ಎಂದು ಮುಂದಿನ ಜೀವನದ ಕುರಿತು ಹೆದರಿಸುತ್ತಾರೆ. ಅವರ ಮಾತೇ ಸರಿ ಅನ್ನಿಸಿದ, ಶೃತಿಯ ತಾಯಿ, ಈಗಾಗಲೇ ಗೊತ್ತು ಮಾಡಿದ್ದ ಮದುವೆಯನ್ನು ಮುರಿದು, ಶೃತಿಯನ್ನು ದೇವದಾಸಿ ಮಾಡುತ್ತಾಳೆ. ಹಾಗೆ ದೇವದಾಸಿಯಾದ ಪುಟ್ಟ ಶೃತಿ ಲೈಂಗಿಕ ಜೀತದ ಜಗತ್ತಿನಲ್ಲಿ ತನ್ನ ಬದುಕು ಕಟ್ಟಿಕೊಳ್ಳಲು ಪಟ್ಟ ಪಾಡು ಅಷ್ಟಿಷ್ಟಲ್ಲ(ವಿವರಗಳಿಗೆ ನೋಡಿ. ಅನುಬಂಧ ೧, ಪ್ರಕರಣ ೩).

**೫.೩/೧.೪ ಬಡತನ ಮತ್ತು ಅನಿಯಂತ್ರಿತ ಸಂತಾನೋತ್ಪತ್ತಿ**

ಭಾರತದಲ್ಲಿ ಕುಟುಂಬ ಯೋಜನಾ ೧೯೫೬ಕ್ಕಿಂತ ಮೊದಲು ಕುಟುಂಬ ನಿಯಂತ್ರಣಕ್ಕೆ ಯಾವುದೇ ರೀತಿಯ ಯೋಜನೆಗಳು, ಪರಿಹಾರೋಪಾಯಗಳು ಇರಲಿಲ್ಲ. ಅದು ಬಂದ ನಂತರವೂ ಸಹ ವ್ಯಾಪಕವಾದ ಪ್ರಚಾರವು ಸಿಗಲಿಲ್ಲ. ಅಲ್ಲದೇ ಜನಸಂಖ್ಯಾ ನಿಯಂತ್ರಣಕ್ಕಾಗಿ ಸರ್ಕಾರದಿಂದ ನಡೆದ ಒತ್ತಾಯದ ಸಂತಾನಹರಣ ಚಿಕಿತ್ಸೆಗಳಿಗೆ ಜನರು ಸಹಕಾರ ನೀಡಲಿಲ್ಲ. ಒಟ್ಟಿನಲ್ಲಿ ಒಂದು ಕುಟುಂಬಕ್ಕೆ ಕನಿಷ್ಟ ೫ ರಿಂದ ೧೦-೧೨ ಮಕ್ಕಳು ಸಹಜವಾಗಿ ಇರುತ್ತಿದ್ದರು. ಉತ್ತರ ಕರ್ನಾಟಕದಲ್ಲಿ ಈಗಲೂ ಬರಗಾಲಗಳ ಹಾವಳಿ ನಿಂತಿಲ್ಲ. ಇದರಿಂದ ಕೃಷಿ ಕೂಲಿಯನ್ನು ನಂಬಿಕೊಂಡಿದ್ದ ಜನಕ್ಕೆ, ಸಿಗುತ್ತಿದ್ದ ಕಡಿಮೆ ಆದಾಯದಿಂದ ಜೀವನ ನಿರ್ವಹಣೆ ಕಷ್ಟವಾಗುತ್ತಿತ್ತು. ಹಾಗಾಗಿ ಹೆಣ್ಣುಮಕ್ಕಳನ್ನು ದೇವದಾಸಿ ಮಾಡುವುದೇ ಒಂದು ಆಸರೆಯಾದಂತಾಗಿ, ಬಡತನ ನಿರ್ವಹಣೆಗಾಗಿ, ತಮ್ಮ ಹೆಣ್ಣುಮಕ್ಕಳನ್ನು ದೇವದಾಸಿ ಮಾಡಿ ಲೈಂಗಿಕ ದಂಧೆಯ ಮನೆಯಲ್ಲಿ ಲೈಂಗಿಕ ಜೀತಕ್ಕೆ ಇಡುತ್ತಿದ್ದರು. ಅಧ್ಯಯನಕ್ಕೆ ಒಳಪಡಿಸಿದ ಒಟ್ಟು ದೇವದಾಸಿ ಮಹಿಳೆಯರಲ್ಲಿ ಶೇಕಡಾ ೩೦ರಷ್ಟು ಮಹಿಳೆಯರು ಬಡತನದ ಕಾರಣಕ್ಕಾಗಿಯೇ ದೇವದಾಸಿ ಮಾಡಲ್ಪಟ್ಟು, ರೆಡ್‌ಲೈಟ್ ಏರಿಯಾಗಳಲ್ಲಿ ನೋವನುಂಡು, ತಮ್ಮ ಅವಲಂಬಿತರ ಬದುಕನ್ನು ಕಟ್ಟಲು ತಮ್ಮ ಬದುಕನ್ನು ಜೀತಕ್ಕಿಟ್ಟು ಬದುಕಿದ್ದಾರೆ. ಎಷ್ಟೊ ಮಹಿಳೆಯರಿಗೆ ಇದರಲ್ಲಿ ಯಶ ಸಿಕ್ಕರೆ ಎಷ್ಟೋ ಮಹಿಳೆಯರು ಪ್ರಸ್ತುತ ಊಟಕ್ಕೂ ಗತಿ ಇಲ್ಲದಂತಾಗಿದ್ದಾರೆ. ಇವುಗಳಲ್ಲಿ ಶ್ರೀದೇವಿ ಮತ್ತು ಜಲಜ ಇವರ ಪ್ರಕರಣ ಅಧ್ಯಯನಗಳನ್ನು ಇಲ್ಲಿ ವಿವರಿಸಲಾಗಿದೆ.

**ಶ್ರೀದೇವಿ ಮತ್ತು ಜಲಜ ಪ್ರಕರಣಗಳು :** ಎರಡೂ ಪ್ರಕರಣಗಳಲ್ಲಿ ತಂದೆ ತಾಯಿಗೆ ಹೆಚ್ಚು ಮಕ್ಕಳಿರುವ, ಭೂರಹಿತ ಕುಟುಂಬಗಳಾಗಿವೆ. ಆದಾಯಕ್ಕಾಗಿ ಕೃಷಿ ಕೂಲಿಯನ್ನೇ ನಂಬಿಕೊಂಡಿದ್ದವು. ಶ್ರೀದೇವಿ ಮನೆಯಲ್ಲಿ ಒಬ್ಬಳೆ ಮಗಳಿದ್ದು, ಮೂರು ಜನ ಅಣ್ಣ ತಮ್ಮಂದಿರು. ದುಡಿಯಲು ಶಕ್ತಿ ಇದ್ದರೂ ಕೆಲಸವಿರಲಿಲ್ಲ. ಹಾಗಾಗಿ ಊರು ಬಿಟ್ಟು ಹೋಗಬೇಕಾದ ಸಂದರ್ಭಗಳು ಬಂದಾಗ, ಮನೆಯವರು, ಶ್ರೀದೇವಿಯನ್ನೇ ದೇವದಾಸಿ ಮಾಡಿ ಕಳಿಸುವುದು ಸೂಕ್ತ ಎಂದು ದೇವದಾಸಿ ಮಾಡುತ್ತಾರೆ. ಹೀಗೆ ದೇವದಾಸಿಯಾದ ಶ್ರೀದೇವಿ ೧೨ ವರ್ಷಗಳವರೆಗೆ ದಂಧೆಯ ಮನೆಯಲ್ಲಿದ್ದು, ಪೊಲೀಸರಿಂದ ತಪ್ಪಿಸಿಕೊಳ್ಳಲು ಕರಾಡ, ಸೋಲ್ಲಾಪೂರ, ಪುಣೆಗಳಿಗೆ ಓಡಾಡುತ್ತಲೇ ಇದ್ದಳು.

ಹಾಗೆಯೇ ಜಲಜಳ ಪ್ರಕರಣದಲ್ಲಿ ಇವಳೇ ದೊಡ್ಡವಳು. ಮನೆ ತುಂಬಾ ಮಕ್ಕಳು. ಇವಳ ತಂದೆ ಕಟ್ಟಿಗೆ ಒಡೆಯುವ ಕೆಲಸ ಮಾಡುತ್ತಿರುತ್ತಾರೆ. ಅದರಿಂದ ಬರುತ್ತಿದ್ದ ಆದಾಯ ಯಾವುದಕ್ಕೂ ಸಾಕಾಗುತ್ತಿರಲಿಲ್ಲ. ಹಾಗಾಗಿ ಜಲಜಳನ್ನು ದೇವದಾಸಿ ಮಾಡುತ್ತಾರೆ. ಜಲಜ ಊರಲ್ಲಿಯೇ ಒಬ್ಬನನ್ನು ನೋಡಿಕೊಂಡು ಜೀವನ ಮಾಡುತ್ತಿರಬೇಕಾದರೆ, ಆತ ಕೊಡುತ್ತಿದ್ದ ಹಣವಾಗಲೀ, ಕಾಳು ಕಡಿಯಾಗಲೀ ಯಾವುದಕ್ಕೂ ಸಾಕಾಗುತ್ತಿರಲಿಲ್ಲ. ಮತ್ತು ಆತ ಅದನ್ನೂ ಸರಿಯಾಗಿ ಕೊಡುತ್ತಿರಲಿಲ್ಲ. ಹಾಗಾಗಿ ಮನೆಯ ಕಷ್ಟ ನೋಡಲಾಗದೆ ಇದ್ದೊಬ್ಬ ೯ ತಿಂಗಳ ಮಗಳನ್ನು ಕರೆದುಕೊಂಡು ಮುಂಬಯಿಗೆ ಹೋಗುತ್ತಾಳೆ. ಅದೇ ರೀತಿ ಐರಾವತಿ ಪ್ರಕರಣದಲ್ಲಿ, ಇವರ ಊರಿನ ಸಮೀಪ ಯಾವುದೇ ರೈತರ ಹೊಲಗಳು ಇರಲಿಲ್ಲ. ಕೆಲಸ ಮಾಡಲು ಯಾವುದೇ ಅವಕಾಶಗಳು ಇರಲಿಲ್ಲ. ಹಾಗಾಗಿ ಇವಳನ್ನು ಇವಳ ಅಕ್ಕನನ್ನು ದೇವದಾಸಿ ಮಾಡಿ ಮುಂಬಯಿಗೆ ಕಳಿಸುತ್ತಾರೆ. ಹೆತ್ತ ಮಕ್ಕಳನ್ನು ಎಲ್ಲೋ ಬಿಟ್ಟು, ತಾವೆಲ್ಲೋ ಇದ್ದು ಅವಲಂಬಿತರಿಗಾಗಿ ಇವರು ದುಡಿದ ಪರಿ ಸಂಘರ್ಷಮಯವಾದುದು(ವಿವರಗಳಿಗಾಗಿ ನೋಡಿ, ಅನುಬಂಧ-೧, ಪ್ರಕರಣ ಸಂಖ್ಯೆ ೪ ಮತ್ತು ೫).

**೫.೩.೧.೫ ತಾಯಿಯ ದುಡಿತ**

ತಂದೆ ತಾಯಿ ಇರುವ ಕುಟುಂಬದಲ್ಲಿ ಮಕ್ಕಳು ಸುರಕ್ಷಿತವಾಗಿರುತ್ತವೆ. ಬಡತನದ ಕುಟುಂಬಗಳಲ್ಲಿ ದುಡಿಯುವವಳು ತಾಯಿಯೊಬ್ಬಳೇ ಆದಾಗ ಆ ಕುಟುಂಬ ಆರ್ಥಿಕವಾಗಿ ಬಹಳ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ. ಅದರಲ್ಲೂ ಸಾಮಾಜಿಕವಾಗಿ ಕಾಡುತ್ತಿರುವಂತಹ ದೇವದಾಸಿ ಪಿಡುಗು, ತಂದೆಯ ಅನಾರೋಗ್ಯ, ಕೆಲವು ಪ್ರಕರಣಗಳಲ್ಲಿ ತಂದೆಯ ಮದ್ಯಪಾನ ಇವುಗಳಿಂದ ಕುಟುಂಬ ಮತ್ತಷ್ಟೂ ಹಿಂದುಳಿಯುವ ಮತ್ತು ಎಲ್ಲ ಆಯಾಮ(ಸಾಮಾಜಿಕ. ಆರ್ಥಿಕ. ಆರೋಗ್ಯ) ಗಳಿಂದಲೂ ತೊಂದರೆಯನ್ನು ಅನುಭವಿಸುವ ಹಂತಕ್ಕೆ ಬರುತ್ತದೆ. ಅಂತಹ ಸಂದರ್ಭಗಳಲ್ಲಿ ಮನೆಯ ಎಲ್ಲ ಜವಾಬ್ದಾರಿಯನ್ನೂ ಆ ಕುಟುಂಬದ ತಾಯಿಯೊಬ್ಬಳೇ ವಹಿಸಿಕೊಳ್ಳಬೇಕಾಗುತ್ತದೆ. ಅಂತ ಸಂದರ್ಭಗಳಲ್ಲಿ. ತಾಯಿಯೊಬ್ಬಳಿಗೆ ಮನೆ ನಿರ್ವಹಿಸುವುದು ಅಸಾಧ್ಯವಾದಾಗ. ಮನೆಯಲ್ಲಿ ಹೆಣ್ಣುಮಕ್ಕಳಿದ್ದರೆ. ಅವರನ್ನೇ ದೇವದಾಸಿ ಮಾಡಿ ಗಳಿಸಲು ಕಳಿಸುವ ದಾರಿಯಲ್ಲಿ ಬಹುತೇಕರು ಇದ್ದಾರೆ. ಅಧ್ಯಯನಕ್ಕೆ ಒಳಪಟ್ಟ. ದೇವದಾಸಿ ಮಹಿಳೆಯರಲ್ಲಿ. ಅಂತವರು ಶೇಕಡಾ ೨೦ರಷ್ಟು ಮಹಿಳೆಯರು ಕಂಡುಬಂದರು. ಅವರಲ್ಲಿ

ಮಹಾರಾಷ್ಟ್ರದ ಲೈಂಗಿಕ ದಂಧೆಯ ಮನೆಗಳಿಗೆ ಜೀತಕ್ಕೆ ಹೋಗಿದ್ದ ಮೀನಾ, ಸುಜಾತಾ ಮತ್ತು ನೀತು ಈ ಮೂರು ಮಹಿಳೆಯರ ಪ್ರಕರಣಗಳನ್ನು ವಿವರಿಸಲಾಗಿದೆ.

**ಮೀನಾ, ಸುಜಾತಾ ಮತ್ತು ನೀತು ಪ್ರಕರಣಗಳು :** ಮೀನಾಳ ಪ್ರಕರಣದಲ್ಲಿ ತಂದೆ ಅಶಕ್ತನಾಗಿದ್ದು, ತಾಯಿಯೊಬ್ಬಳೆ ದುಡಿಯುತ್ತಿದ್ದಳು. ಮೀನಾಳ ಅತ್ತೆಯು(ತಂದೆಯ ಸಹೋದರಿ) ದೇವದಾಸಿ ಇದ್ದಳು. ಅವಳು ಮೀನಾಳನ್ನು ತಂದೆಯ ಜೊತೆಗೆ ಇರಲಿ, ಎಂದು ಮೀನಾಳ ತಾಯಿ ಕೆಲಸಕ್ಕೆ ಹೋದ ಸಮಯದಲ್ಲಿ ಇವಳಿಗೆ ಮುತ್ತು ಕಟ್ಟಿಸಿ ದೇವದಾಸಿ ಮಾಡಿದ್ದಾಳೆ.

ಸುಜಾತಾಳ ತಂದೆ ಕೊಂಬು ಊದುತ್ತಿದ್ದ. ಅದರಿಂದ ನಿಗದಿತ ಕೂಲಿಯಾಗಲೀ ಆದಾಯವಾಗಲೀ ಇರಲಿಲ್ಲ. ಹಾಗಾಗಿ ಇಡೀ ತುಂಬಿದ ಸಂಸಾರವನ್ನು ತಾಯಿಯೇ ನಡೆಸಬೇಕಿತ್ತು. ಆದ್ದರಿಂದ ಕುಟುಂಬದ ಬಡತನ ಕಳೆಯಲೆಂದು ಸುಜಾತಾ ಮತ್ತು ಅವಳ ತಂಗಿಯನ್ನು, ದೇವದಾಸಿ ಮಾಡಿ ಪುಣೆಯಲ್ಲಿ ಲೈಂಗಿಕ ಜೀತಕ್ಕಾಗಿ ಇಟ್ಟಿರುತ್ತಾರೆ. ಈ ಸಂದರ್ಭದಲ್ಲಿ ಸುಜಾತಾ ಎಚ್ ಐ ವಿ ಸೋಂಕಿತೆಯಾಗಿ ಮರಳಿ ಊರಿಗೆ ಬಂದಾಗ, ಅವಳ ತಂದೆ, 'ನಿನಗೇನಾಗಿದೆ, ಆರಾಮಾಗಿಯೇ ಇದ್ದಿ, ಮತ್ತೆ ದಂಧೆಗೆ ಹೋಗು' ಎಂದು ಕಳಿಸಿದ್ದು ಅವರ ದುಸ್ಥಿತಿ ಮತ್ತು ಬೇಜವಾಬ್ದಾರಿಯನ್ನು ತೋರಿಸುತ್ತದೆ.

ನೀತುಳ ತಂದೆ ಶ್ರಮ ಜೀವಿಯಾಗಿದ್ದು, ಒಳ್ಳೆಯ ಕೆಲಸ ಮಾಡುತ್ತಿರುತ್ತಾನೆ. ಆದರೆ ಕೆಲಸ ಮಾಡುತ್ತಿದ್ದವನಿಗೆ ಅನಾರೋಗ್ಯ ಉಂಟಾಗಿ, ತಾಯಿಯೊಬ್ಬಳೇ ದುಡಿಯಬೇಕಾದ ಸ್ಥಿತಿ ಎದುರಾಗುತ್ತದೆ. ಆಗ ಪುಟ್ಟ ನೀತುವಿನ ಮೇಲೆ ಮನೆಯ ಎಲ್ಲ ಜವಾಬ್ದಾರಿಯನ್ನು ಹಾಕಿ, ದೇವದಾಸಿ ಮಾಡಿ ಥಾಣೆಯ ಬೀವಂಡಿಗೆ ಕಳಿಸುತ್ತಾರೆ. ಮೂರು ಪ್ರಕರಣಗಳಲ್ಲಿ, ಕೆಲವರು ಸೋತು ಹೋಗಿದ್ದಾರೆ. ಒಬ್ಬಳು ಇನ್ನೂ ವಯಸ್ಸು ಚಿಕ್ಕದಿರುವುದರಿಂದ, ತಂದೆ ತಾಯಿಯನ್ನು ಸಾಕಲು ಕೆಲವು ದಿನ ಊರಲ್ಲಿ, ಕೆಲವು ದಿನ ಬೀವಂಡಿಯಲ್ಲಿ ಇರುತ್ತಾ ಕಾಲ ಕಳೆಯುತ್ತಿದ್ದಾಳೆ(ವಿವರಗಳಿಗೆ ನೋಡಿ, ಅನುಬಂಧ-೧, ಪ್ರಕರಣ ೬, ೭ ಮತ್ತು ೮).

**೫.೩/೧.೬. ಕೌಟುಂಬಿಕ ಸಂಬಂಧಗಳಲ್ಲಿಯ ಬಿಕ್ಕಟ್ಟು**

ಕುಟುಂಬವು ಸಮಾಜದ ಬಹು ಮುಖ್ಯ ಘಟಕ. ಅಲ್ಲಿ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ಬಂಧು-ಬಳಗ ಎಲ್ಲವೂ ಸೇರಿಕೊಂಡಿರುತ್ತದೆ. ಮಕ್ಕಳ ಜೀವನದಲ್ಲಿ ತಂದೆ ತಾಯಿಯರ ಸಂಬಂಧವು ಧನಾತ್ಮಕ ಬದಲಾವಣೆಗಳನ್ನು ತರುತ್ತದೆ. ಆದರೆ ತಂದೆ ತಾಯಿಯ ಮಧ್ಯ ಸೌಹಾರ್ದತೆ ಇರದೇ, ಸದಾ ಜಗಳ, ಮನಸ್ತಾಪ ಮಾಡಿಕೊಳ್ಳುತ್ತಿದ್ದರೆ ಅದು ಬೆಳೆಯುವ ಮಕ್ಕಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ. ಅಂತಹ ಸಂಬಂಧಗಳಿಂದ ಕೆಲವು ಮಕ್ಕಳು ಅನಪೇಕ್ಷಿತ ಸಮಸ್ಯೆಗಳಲ್ಲಿ ಸಿಲುಕಿಕೊಳ್ಳುತ್ತಾರೆ. ಹಾಗೆ ಅಧ್ಯಯನಕ್ಕೊಳಗಾದ ದೇವದಾಸಿಯರಲ್ಲಿ ಶೇಕಡಾ ೮ರಷ್ಟು ಯುವತಿಯರು ತಂದೆ ತಾಯಿಗಳ ಮಧ್ಯ ಉಂಟಾದ ಬಿರುಕಿನ ಪರಿಣಾಮವಾಗಿ ದೇವದಾಸಿಗಳಾಗಿರುವ ಸ್ಥಿತಿಯಲ್ಲಿದ್ದಾರೆ. ಈ ಸಂದರ್ಭದಲ್ಲಿ ಅವರಲ್ಲಿ ಮಲ್ಲಿಕಾಳನ್ನು ಅವಳ ತಂದೆಯೇ ಲೈಂಗಿಕ ಜೀತಕ್ಕೆ ಇಟ್ಟು ಬಂದಿದ್ದಾರೆ.

ಜಯಶ್ರಿ ತಾನಾಗಿಯೇ ಮನೆ ಬಿಟ್ಟು ಹೋಗಿ ಲೈಂಗಿಕ ದಂಧೆಗೆ ನಿಲ್ಲುತ್ತಾಳೆ. ಅವರಿಬ್ಬರ ಪ್ರಕರಣಗಳನ್ನು ಇಲ್ಲಿ ವಿವರಿಸಲಾಗಿದೆ.

**ಮಲ್ಲಿಕಾ ಮತ್ತು ಜಯಶ್ರೀ ಪ್ರಕರಣಗಳು :** ಮಲ್ಲಿಕಾ ಮತ್ತು ಜಯಶ್ರೀ ಇವರ ಎರಡೂ ಪ್ರಕರಣಗಳನ್ನು ಗಮನಿಸಿದಾಗ, ಅವರ ತಂದೆ ತಾಯಿಗಳ ನಡುವೆ ನಡೆದ ಭಿನ್ನಾಭಿಪ್ರಾಯಗಳು, ಮನಸ್ತಾಪ, ಜಗಳಗಳಿಂದಾಗಿ ಇಂದು ಇವರು ಪರಿತಪಿಸುವಂತಾಗಿದೆ ಎನ್ನಬಹುದು. ಮಲ್ಲಿಕಾಳ ಪ್ರಕರಣದಲ್ಲಿ ಅವಳ ತಂದೆ ಪಕ್ಕದ ಊರಿನ ದೇವದಾಸಿ ಮಹಿಳೆಯೊಂದಿಗೆ ಲೈಂಗಿಕ ಸಂಬಂಧವಿಟ್ಟುಕೊಂಡಿದ್ದಕ್ಕಾಗಿ, ಇವಳ ತಾಯಿ, ತಂದೆಯೊಡನೆ ಮೇಲಿಂದ ಮೇಲೆ ಜಗಳ ಮಾಡುತ್ತಿದ್ದಳು. ಅದನ್ನು ಸರಿ ಮಾಡಿಕೊಳ್ಳದ ತಂದೆ, ಇವಳ ತಾಯಿಯೊಡನೆ ಯಾವಾಗಲೂ ಜಗಳ ಕಾಯುತ್ತಿದ್ದ. ಆಗ ಮಲ್ಲಿಕಾ ಎರಡು ವರ್ಷದವಳು. ಇವಳ ತಂಗಿ ಒಂಬತ್ತು ತಿಂಗಳಿನವಳಿದ್ದಳು. ಒಂದು ಸಾರಿ ಮಲ್ಲಿಕಾಳ ತಂದೆ ತಾಯಿಯ ಜಗಳ ವಿಕೋಪಕ್ಕೆ ಹೋಯಿತು. ಮಲ್ಲಿಕಾಳ ಅಜ್ಜಿ ಮತ್ತು ಅಪ್ಪ ಕೂಡಿ ಇವಳ ತಾಯಿಯನ್ನು ಹೊಡೆದು ಹೊರಗೆ ಹಾಕುತ್ತಾರೆ. ಆಗ ಇವಳ ತಾಯಿ ೫ ತಿಂಗಳ ಗರ್ಭಿಣಿ. ಹತಾಶಳಾದ ಇವಳ ತಾಯಿ, ಎರಡೂ ಹೆಣ್ಣುಮಕ್ಕಳನ್ನು ಬಿಟ್ಟು, ತವರು ಮನೆಗೆ ಹೊರಟು ಹೋಗುತ್ತಾಳೆ. ಅನಾಥರಾದ ಮಕ್ಕಳನ್ನು(ಮಲ್ಲಿಕಾ ಮತ್ತು ಅವಳ ತಂಗಿ) ಅಜ್ಜಿಯೇ ಬೆಳೆಸುತ್ತದೆ. ಋತುಮತಿಯರಾದ ಮೇಲೆ ಅಪ್ಪನ ಕಷ್ಟ ಕಳೆಯಲೆಂದು ಇಬ್ಬರನ್ನೂ ದೇವದಾಸಿ ಮಾಡಿ ಮುಂಬಯಿಯ ಕಾಮಾಟಿಪೂರದಲ್ಲಿ ಲೈಂಗಿಕ ಜೀತಕ್ಕೆ ಬಿಟ್ಟು ಬರುತ್ತಾರೆ. ಒಂದು ವೇಳೆ ಇವರ ತಾಯಿ ಇದ್ದಿದ್ದರೆ ಮಕ್ಕಳನ್ನು ಹೀಗೆ ಬೀದಿಗೆ ಬೀಳುವಂತೆ ಮಾಡುತ್ತಿರಲಿಲ್ಲ ಅನ್ನಿಸುತ್ತದೆ.

ಜಯಶ್ರೀ ಪ್ರಕರಣದಲ್ಲಿ, ಜಯಶ್ರೀಯ ತಾಯಿ ತನ್ನ ಗಂಡನೊಡನೆ ಬಾಳದೇ ಜಯಶ್ರೀಯ ತಂದೆ ಅನ್ನಿಸಿಕೊಂಡ ಎರಡನೇ ವ್ಯಕ್ತಿಯ ಜೊತೆಗೆ ಬಂದಿರುತ್ತಾಳೆ. ಆ ತಂದೆಗೆ ಈಗಾಗಲೇ ಒಬ್ಬಳು ಹೆಂಡತಿ ಇದ್ದು, ಈತನ ಮದ್ಯಪಾನ, ಜಗಳಕ್ಕೆ ಬೇಸತ್ತು ಮನೆ ಬಿಟ್ಟು ಹೋಗಿರುತ್ತಾಳೆ. ತನ್ನ ಎರಡನೇ ಹೆಂಡತಿಯ ಎರಡೂ ಮಕ್ಕಳನ್ನು (ಜಯಶ್ರೀ ಮತ್ತು ಅವಳ ತಂಗಿ) ಜಯಶ್ರೀಯ ಈಗಿನ ತಂದೆ ತನ್ನ ಮಕ್ಕಳಂತೆಯೇ ನೋಡಿಕೊಳ್ಳುತ್ತಿರುತ್ತಾನೆ. ಆದರೆ ಜಯಶ್ರೀಯ ತಾಯಿ ಅನಾರೋಗ್ಯದಿಂದ ಸತ್ತು ಹೋಗುತ್ತಾಳೆ. ಇವಳ ತಂದೆ ಯಾವಾಗಲೂ ಕುಡಿದುಕೊಂಡು, ಇವರಿಬ್ಬರ ಜವಾಬ್ದಾರಿಯನ್ನೇ ಮರೆಯುತ್ತಾನೆ. ಜಯಶ್ರೀ ಮತ್ತು ಅವಳ ತಂಗಿ ಊಟಕ್ಕೂ ಗತಿ ಇಲ್ಲದೇ ಮನೆ ಮನೆ ತಿರುಗಿ ತಿನ್ನುವಂತಾಗುತ್ತದೆ. ಒಂದು ದಿನ ಜಯಶ್ರೀ, ತಂದೆಯೊಡನೆ ಜಗಳವಾಡಿ (೧೨ ವರ್ಷದವಳಿದ್ದಾಗ) ಅವನ ಜೇಬಿನಿಂದಲೆ ಹಣ ತೆಗೆದುಕೊಂಡು ಮಹಾರಾಷ್ಟ್ರದ ಕರಾಡಕ್ಕೆ ಬರುತ್ತಾಳೆ. ಅವಳಿಗೆ ಊರಲ್ಲಿ ಬಹಳ ಹೆಣ್ಣುಮಕ್ಕಳು ಕರಾಡಕ್ಕೆ ಹೋಗುವುದು ಗೊತ್ತಿತ್ತು. ಅದೇ ಮಾಹಿತಿಯ ಮೇಲೆ ಕರಾಡಕ್ಕೆ ಹೋದ ಜಯಶ್ರೀ ಲೈಂಗಿಕ ದಂಧೆಗೆ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಹಾಗೆ ಕೆಲವು ದಿನಗಳ ನಂತರ ತನ್ನ ತಂಗಿಯನ್ನೂ ಕರೆಸಿಕೊಳ್ಳುತ್ತಾಳೆ. ಆದಾದ ಒಂದು ವರ್ಷಕ್ಕೆ ಮುತ್ತು ಕಟ್ಟಿಕೊಂಡು ದೇವದಾಸಿಯ ರಾಗುತ್ತಾರೆ. ಹೀಗೆ ದೇವದಾಸಿಯರಾಗುವಾಗ ಅವರನ್ನು ಸಮುದಾಯದವರು ಒಪ್ಪಿಕೊಳ್ಳುವುದಿಲ್ಲ.

ಸಮುದಾಯದ ದೈವಕ್ಕೆ ಮತ್ತು ದೇವದಾಸಿಯರಿಗೆ ದಂಡ ಕಟ್ಟಿ ಮುತ್ತು ಕಟ್ಟಿಸಿಕೊಂಡು ತಮ್ಮನ್ನು ಅವರ ಸಮುದಾಯದೊಳಗೆ ಒಬ್ಬರೆಂದು ಗುರುತಿಸುವಂತೆ ಮಾಡಿಕೊಳ್ಳುತ್ತಾರೆ. ಇಷ್ಟೆಲ್ಲ ಅವಮಾನ ನೋವುಗಳನ್ನು ತಮ್ಮ ಚಿಕ್ಕ ವಯಸ್ಸಿನಲ್ಲಿ ಅನುಭವಿಸಿ, ಬದುಕಲು ಮಾಡಿದ ಹೋರಾಟಗಳು ಅವರನ್ನು ನೋವಲ್ಲೂ ನಗುವಂತೆ ಗಟ್ಟಿಗೊಳಿಸಿವೆ(ವಿವರಗಳಿಗೆ ನೋಡಿ ಅನುಬಂಧ–೧, ಪ್ರಕರಣ ೯ ಮತ್ತು ೧೦).

**೫.೩/೧.೭. ವಿವಾಹ ಪೂರ್ವದಲ್ಲಿ ನಡೆದ ಲೈಂಗಿಕ ದೌರ್ಜನ್ಯ**

ತಳವರ್ಗದ ಸಮುದಾಯಗಳ ಹೆಣ್ಣುಮಕ್ಕಳನ್ನು ಉಚ್ಚ ಜಾತಿಯ ಯುವಕರು ಪ್ರೀತಿಸಿ ಮದುವೆಯಾಗುವೆನೆಂದು ನಂಬಿಸಿ ಆ ಹೆಣ್ಣುಮಕ್ಕಳ ಜೊತೆ ದೈಹಿಕ ಸಂಬಂಧ ಬೆಳೆಸುವ ಉದಾಹರಣೆಗಳು ನಮಗೆ ಸಾಕಷ್ಟು ಕಂಡುಬರುತ್ತವೆ. ಚಿಕ್ಕ ವಯಸ್ಸಿನ ಹುಡುಗಿಯರು ಹದಿಹರೆಯದ ಚಂಚಲತೆಗೂ ಒಳಗಾಗಿರುತ್ತಾರೆ. ಆ ಸಂದರ್ಭದಲ್ಲಿ ಅವರಿಗೆ ಒಳ್ಳೆಯ ಮಾರ್ಗದರ್ಶನ ಸಿಕ್ಕರೆ ಅವರು ಗಂಡಾಂತರಗಳಿಂದ ಮುಕ್ತವಾಗುತ್ತಾರೆ. ಇಲ್ಲದಿದ್ದರೆ ಸಮಸ್ಯೆಗಳನ್ನು ಜೀವನ ಪೂರ್ತಿ ಅವರು ಎದುರಿಸಬೇಕಾಗುತ್ತದೆ. ಅಧ್ಯಯನಕ್ಕೊಳಪಟ್ಟ ದೇವದಾಸಿ ಮಹಿಳೆಯರಲ್ಲಿ ಶೇಕಡಾ ೧೦ರಷ್ಟು ಮಹಿಳೆಯರು ವಿವಾಹಪೂರ್ವ ಲೈಂಗಿಕ ದೌರ್ಜನ್ಯಗಳಿಂದಲೇ ದೇವದಾಸಿಗಳಾಗಿ ಸಮರ್ಪಣೆಗೊಳ್ಳಬೇಕಾದ ಸಂದಿಗ್ಧತೆಗೆ ಗುರಿಯಾಗಿದ್ದಾರೆ. ಹೀಗೆ ಸಮಸ್ಯೆಗೆ ಒಳಗಾದ ಮಾಧವಿ ಎಂಬುವರ ಪ್ರಕರಣವನ್ನು ಇಲ್ಲಿ ವಿವರಿಸಲಾಗಿದೆ.

**ಮಾಧವಿ ಪ್ರಕರಣ :** ಮಾಧವಿ ೨೫ ವಯಸ್ಸಿನ ಯುವತಿ. ಪರಿಶಿಷ್ಟ ಜಾತಿಯವರಾದರೂ ಸಹ ಮನೆಯಲ್ಲಿ ಉಳುಮೆಗೆ ಯೋಗ್ಯ ಭೂಮಿ ಇದೆ. ಇವರ ತಂದೆ, ಅಣ್ಣಂದಿರು ಕೃಷಿ ಮಾಡುತ್ತಿದ್ದಾರೆ. ಮಾಧವಿ ಓದಿದವಳೇನಲ್ಲ. ಹದಿ ಹರೆಯದ ಚಂಚಲತೆಗೆ ಸಿಕ್ಕು, ಉಚ್ಚ ಜಾತಿಯ ಹುಡುಗನನ್ನು ಪ್ರೀತಿಸಿ, ಆತನೊಂದಿಗೆ ದೈಹಿಕ ಸಂಪರ್ಕವನ್ನೂ ಇರಿಸಿಕೊಳ್ಳುತ್ತಾಳೆ. ಇದು ಎರಡೂ ಮನೆಯವರಿಗೆ ಗೊತ್ತಾಗಿ, ಇವರನ್ನು ಬೇರೆ ಬೇರೆ ಮಾಡುತ್ತಾರೆ. ಕೊನೆಗೆ ನೈತಿಕವಾಗಿ ತನ್ನತನವನ್ನು ಕಳೆದುಕೊಂಡವಳನ್ನು ಯಾರು ಮದುವೆಯಾಗಬೇಕು. ಮದುವೆ ಆದರೂ ಸಹ ಮುಂದೆ ಅವರಿಗೆ ಗೊತ್ತಾದರೆ ಇವಳ ಜೀವನ ಹಾಳು ಎಂದುಕೊಂಡು, ಸಮುದಾಯದ ದೈವದವರಿಗೆ ದಂಡ ಕಟ್ಟಿ ಮಾಧವಿಯನ್ನು ದೇವದಾಸಿ ಮಾಡುತ್ತಾರೆ. ಹಾಗೆ ದೇವದಾಸಿಯಾದ ಮಾಧವಿ, ಊರಿನ ಇತರೆ ದೇವದಾಸಿ ಹೆಣ್ಣುಮಕ್ಕಳು ಸಾಂಗಲಿ ಮಿರಜ್ ಹೋಗುವುದು ನೋಡಿ ಇವಳೂ ಸಾಂಗಲಿಗೆ ಹೋಗುತ್ತಾಳೆ. ಆದರೆ ಅಲ್ಲಿ ಹೊಂದಾಣಿಕೆಯಾಗದೇ ಮರಳಿ ಊರಿಗೆ ಬರುತ್ತಾಳೆ(ವಿವರಗಳಿಗೆ ನೋಡಿ. ಅನುಬಂದ–೧, ಪ್ರಕರಣ ೧೧).

**೫.೩/೨. ಇತರೆ ಒತ್ತಡಕ್ಕೆ ಒಳಗಾದವರು**

ಅಧ್ಯಯನಕ್ಕೆ ಒಳಪಡಿಸಿದ ಲೈಂಗಿಕ ಜೀತಕ್ಕೆ ಒಳಪಟ್ಟ ಒಟ್ಟು ೬೦ ಮಹಿಳೆಯರಲ್ಲಿ ಶೇಕಡಾ ೧೬.೬೬ರಷ್ಟು ಮಹಿಳೆಯರು ದೇವದಾಸಿಯರಲ್ಲದ ಮಹಿಳೆಯರು ಇದ್ದಾರೆ. ಇವರಲ್ಲಿ ಶೇಕಡಾ ೧೨ರಷ್ಟು ಮಹಿಳೆಯರು ಬಾಲ್ಯವಿವಾಹಕ್ಕೆ ಒಳಪಟ್ಟವರು, ಶೇಕಡಾ ೪ರಷ್ಟು ಸಾಗಾಣಿಕೆಗೆ ಒಳಪಟ್ಟವರು, ಶೇಕಡಾ ೪ರಷ್ಟು ಲೈಂಗಿಕ ಆಸಕ್ತಿಯಿಂದ ಲೈಂಗಿಕ ಜೀತಕ್ಕೆ ಒಳಪಟ್ಟವರಾಗಿದ್ದಾರೆ.

ಹೀಗೆ ಮೇಲೆ ತಿಳಿಸಿದ ಹಲವು ಕಾರಣಗಳಿಂದ ಲೈಂಗಿಕ ಜೀತಕ್ಕೆ ಬಲಿಯಾದ ಮಹಿಳೆಯರ ಪ್ರಕರಣಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**೫.೩/೨.೧ ಬಾಲ್ಯವಿವಾಹ**

ಬಾಲ್ಯವಿವಾಹವು ಒಂದು ಸಾಮಾಜಿಕ ಪಿಡುಗು ಆಗಿದೆ. ಹಲವಾರು ಪ್ರತಿಬಂಧಕೋಪಾಯಗಳು ಕಾನೂನುಗಳು ಅನುಷ್ಠಾನಗೊಂಡರೂ ಸಹ, ಹೆತ್ತವರ ಇಚ್ಛಾಶಕ್ತಿಯ ಕೊರತೆಯಿಂದಾಗಿ ಇನ್ನೂ ಗಣನೀಯ ಪ್ರಮಾಣದಲ್ಲಿ ಬಾಲಕಿಯರು ಬಾಲ್ಯವಿವಾಹಕ್ಕೆ ಗುರಿಯಾಗುತ್ತಿದ್ದಾರೆ. ಇದರ ಪ್ರಮಾಣವು ತಳ ಸಮುದಾಯಗಳಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ. ಬಾಲ್ಯವಿವಾಹಕ್ಕೆ ಒಳಗಾದ ಹೆಣ್ಣುಮಕ್ಕಳಲ್ಲಿ ಗಂಡ, ಸಂಸಾರ, ಮಕ್ಕಳು, ಮನೆ ಎಂಬುದರ ಕುರಿತು ಅರಿವು, ಆಸಕ್ತಿ ಇರದ ಮಕ್ಕಳನ್ನು ಮದುವೆ ಮಾಡಲಾಗಿರುತ್ತದೆ. ಆಗ ಅವರಿಗೆ ಇನ್ನೂ ಆಡುವ ವಯಸ್ಸು. ಗಂಡನ ಮನೆಯಲ್ಲಿಯ ಎಡಬಿಡದ ಕೆಲಸಗಳು, ತನಗಿಂತ ೧೦-೧೫ ವರ್ಷ ದೊಡ್ಡವನಾದ ಗಂಡ, ಹಿಂಸೆ ಅನ್ನಿಸುವ ಆತನ ಲೈಂಗಿಕ ಆಸಕ್ತಿಗಳು ಮಕ್ಕಳನ್ನು ಆ ವ್ಯವಸ್ಥೆ ಬಿಟ್ಟು ಹೊರ ಹೋಗಲು ದಾರಿ ಹುಡುಕುವಂತೆ ಪ್ರೇರೇಪಿಸುತ್ತವೆ. ಅಲ್ಲದೇ ಆದದ್ದಾಗಲಿ ಎಂದು ಹೊಂದಿಕೊಂಡು ಹೋಗಲು ಪ್ರಯತ್ನಿಸಿದ ಮಕ್ಕಳಿಗೆ ಮುದುಕ ಗಂಡ ತನ್ನ ವಯಸ್ಸಿಗನುಗುಣವಾದ ಹೆಣ್ಣಿನೊಡನೆ ಅನೈತಿಕ ಸಂಬಂಧ ಹೊಂದಿದಾಗ ಇವಳು ತಿರಸ್ಕಾರಕ್ಕೆ ಒಳಗಾಗುತ್ತಾಳೆ. ಮತ್ತೆ ಹಲವು ಸಂದರ್ಭದಲ್ಲಿ ಈಕೆಗಿಂತ ವಯಸ್ಸಿನಲ್ಲಿ ಹಿರಿಯನಾದ ಗಂಡ ಏನೋ ರೋಗಕ್ಕೆ ತುತ್ತಾಗಿ, ಅಪಘಾತಕ್ಕೆ ತುತ್ತಾಗಿ ಸತ್ತು ಹೋದಾಗ, ಇವಳು ಅವನ ಮಕ್ಕಳಿಗೆ ವಿಧವೆ ತಾಯಿಯಾಗಿರುತ್ತಾಳೆ. ಆಗ ಇವಳ ವಯಸ್ಸು, ೧೨-೧೩ರ ಆಸು ಪಾಸು. ಇಂತ ಮಕ್ಕಳು ಸಹಿಸಲಸಾಧ್ಯವಾದ ಮನೆಯಲ್ಲಿನ ಕಟ್ಟು ಪಾಡುಗಳು, ಎದುರಿಸಲು ಸಾಧ್ಯವಾಗದ ಆರ್ಥಿಕ ಮುಗ್ಗಟ್ಟುಗಳು, ಅದುಮಿಡಲಾಗದ ತಮ್ಮದೇ ದೇಹದ ಭಾವನೆಗಳು, ಆಸೆಗಳು ಆ ವ್ಯವಸ್ಥೆಯನ್ನೂ ತೊರೆದು ಮುಕ್ತಳಾಗಲು ಹವಣಿಸುವಂತೆ ಮಾಡುತ್ತವೆ. ಇಂತ ಮಕ್ಕಳಿಗೆ ವೇಶ್ಯಾಗೃಹಗಳಲ್ಲಿ ದೊರೆಯುವ ತಾತ್ಕಾಲಿಕ ಆರ್ಥಿಕ ಸೌಲಭ್ಯಗಳು, ಮುಕ್ತ ಲೈಂಗಿಕತೆ ನೆಮ್ಮದಿಯನ್ನು ನೀಡುತ್ತದೆ. ಹಾಗಾಗಿ ಬಾಲ್ಯವಿವಾಹಕ್ಕೆ ಒಳಪಟ್ಟ ಇವರನ್ನು ಯಾರೂ ಸಾಗಾಣಿಕೆ ಮಾಡಿರುವುದಿಲ್ಲ. ಆದರೆ ಪರಿಸ್ಥಿತಿಯ ಕೈಗೊಂಬೆಯಾಗಿ ಇವರೇ ಲೈಂಗಿಕ ಜೀತಕ್ಕೆ, ಲೈಂಗಿಕ ದಂಧೆಗೆ ಬಂದು ನಿಲ್ಲುತ್ತಾರೆ. ಹೀಗೆ ಬಾಲ್ಯ ವಿವಾಹಕ್ಕೆ ಒಳಗಾಗಿ ಲೈಂಗಿಕ ದಂಧೆಗೆ ಬಂದ ಸುಮಿತ್ರಾ ಮತ್ತು ಸುಂದರಿಯರ ಪ್ರಕರಣ ಅಧ್ಯಯನಗಳನ್ನು ವಿವರಿಸಲಾಗಿದೆ.

**ಸುಮಿತ್ರಾ ಮತ್ತು ಸುಂದರಿ ಪ್ರಕರಣಗಳು** : ಸುಮಿತ್ರಾ ಮತ್ತು ಸುಂದರಿಯರ ಎರಡೂ ಪ್ರಕರಣಗಳು ತುಂಬಾ ಸಂಕೀರ್ಣವಾದ ಸ್ವರೂಪವನ್ನು ಹೊಂದಿವೆ. ಸುಮಿತ್ರಳ ಪ್ರಕರಣದಲ್ಲಿ, ಬಹಳ ಮಕ್ಕಳಿರುವ ಕುಟುಂಬದಲ್ಲಿ ಇವಳು ದೊಡ್ಡ ಮಗಳು. ಒಂದು ಹರಿದ ಸೀರೆಯಲ್ಲಿ ೪ ಭಾಗ ಮಾಡಿ, ೪ ಮಕ್ಕಳು ಅದನ್ನು ಸುತ್ತಿಕೊಂಡು ದಿನಗಳೆಯುತ್ತಿದ್ದ ಬದುಕು. ತಂದೆಯ ಕಣ್ಣಿನ ದೃಷ್ಟಿ ಸರಿ ಇರಲಿಲ್ಲ. ಹಾಗಾಗಿ ಹೆಣ್ಣುಮಕ್ಕಳಿಗೆ ಕೊಡುತ್ತಿದ್ದ ೪೦ ಪೈಸೆ ಕೂಲಿಯನ್ನು ಆತನಿಗೂ ಕೊಡುತ್ತಿದ್ದರು. ಮನೆಯ ಈ ಕಿತ್ತು

ತಿನ್ನುವ ಬಡತನದಲ್ಲಿ, ೧೧ ವರ್ಷ ದವಳಿರುವಾಗಲೇ ಪಕ್ಕದ ಹಳ್ಳಿಯ ಯುವಕನೊಂದಿಗೆ ಸುಮಿತ್ರಳ ಮದುವೆಯಾಗುತ್ತದೆ. ಅವಳ ಗಂಡ ಕೆಲಸಕ್ಕೆಂದು ಹಳ್ಳಿಯಲ್ಲಿ ತಿರುಗುವಾಗ, ಗಂಡ ಬಿಟ್ಟ ಒಬ್ಬಳು ಮಹಿಳೆ ಇವನ ಜೊತೆಯಾಗುತ್ತಾಳೆ. ಆಕೆಯನ್ನು ಈತ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಅವಳೊಂದಿಗೆ ಮದುವೆಯನ್ನೂ ಆಗುತ್ತಾನೆ. ವಯಸ್ಸಿನಲ್ಲಿ ಚಿಕ್ಕವಳಾದ ಸುಮಿತ್ರಳಿಗೆ, ವಯಸ್ಸಿನಲ್ಲಿ ದೊಡ್ಡವನಾಗಿದ್ದ ಗಂಡನ ಈ ರೀತಿಗೆ, ಪ್ರತಿರೋಧ ಒಡ್ಡುವಷ್ಟು ಅಥವಾ ಅವನು ಬೇರೆಯವರ ಕಡೆಗೆ ಹೋಗದಂತೆ ಮಾಡುವ, ಆಕರ್ಷಿಸುವ ಹೆಂಡತಿಗಿರಬೇಕಾದ ಯಾವ ಗುಣಗಳೂ ಸುಮಿತ್ರಳಲ್ಲಿ ಇರಲಿಲ್ಲ. ಯಾಕೆಂದರೆ ಅವಳಿನ್ನೂ ಆಡುವ ಬಾಲೆಯಾಗಿದ್ದಳು. ಆದರೂ ಇವಳಿಗೆ ಅರ್ಥವಾಗುತ್ತಿತ್ತು. ಆದರೆ ವಿರೋಧಿಸುವ ಧೈರ್ಯ ಇರಲಿಲ್ಲ. ಕೊನೆಗೆ ಇವಳ ಗಂಡ ಎರಡನೆಯ ಹೆಂಡತಿಯೊಡನೆ ಹೊರಟು ಹೋದಾಗ, 'ಹರೆಯದ ಹುಡುಗಿಯನ್ನು ಕಾಯುವ ಜವಾಬ್ದಾರಿ ತಮಗ್ಯಾಕೆ' ಎಂದು ಸುಮಿತ್ರಳ ಅತ್ತೆ ಮಾವ, ಸುಮಿತ್ರಳನ್ನು ತವರು ಮನೆಗೆ ಸಾಗ ಹಾಕುತ್ತಾರೆ. ತವರು ಮನೆಯಲ್ಲಿ ತಾಯಿಯ ಹೆರಿಗೆ ಬಾಣಂತನಗಳ ಮಧ್ಯ, ಎಲ್ಲರ ಹೊಟ್ಟೆ ತುಂಬಿಸಲು, ಕೂಲಿಗೆ ಹೋಗಬೇಕಾದ ಅನಿವಾರ್ಯತೆ ಇರುತ್ತದೆ. ಹಾಗೆ ಕೆಲಸಕ್ಕೆ ಹೋಗುವಾಗ, ಸುತ್ತ ಮುತ್ತಲಿನ, ಹಳ್ಳಿಯ ಕೆಟ್ಟ ಜನರು, ಸುಂದರವಾದ, ಗಂಡನನ್ನು ಬಿಟ್ಟು ಬಂದ, ಸುಮಿತ್ರಳನ್ನು ಲೈಂಗಿಕವಾಗಿ ಬಳಸಿಕೊಳ್ಳಲು ಹಿಂಸೆ ನೀಡತೊಡಗುತ್ತಾರೆ. ಜಾತಿಯಿಂದ ತಳದಲ್ಲಿರುವ, ತಿನ್ನಲು ಕೂಳಿಲ್ಲದವರ, ಅಶಕ್ತ ತಂದೆಯ ಮಗಳನ್ನು ಅಲ್ಲಿ ರಕ್ಷಿಸುವವರು ಯಾರೂ ಇರಲಿಲ್ಲ. ತಾಯಿ ಬಾಣಂತನ ಮುಗಿಸಿ ಏಳುವುದನ್ನೇ ಕಾಯ್ದು, ಸುಮಿತ್ರಾ, ಯಾರಿಗೂ ಹೇಳದೇ ಮುಂಬಯಿಗೆ ಹೊರಟಿದ್ದ, ದೇವದಾಸಿಯೊಬ್ಬಳ ಜೊತೆಗೆ ಲೈಂಗಿಕ ದಂಧೆಗೆ ಹೊರಟು ಹೋಗುತ್ತಾಳೆ. ಹೀಗೆ ಹೊರಟವಳಿಗೆ, ಅವಳದೇ ದೇಹದ ಲೈಂಗಿಕ ತುಮುಲಗಳು, ಕುಟುಂಬದ ಬಡತನ, ಸಮುದಾಯದ ಕಾಟಗಳು ಅವಳ ಈ ನಿರ್ಧಾರವನ್ನು ಗಟ್ಟಿ ಮಾಡಿರುತ್ತವೆ.

ಸುಂದರಿಯ ಪ್ರಕರಣದಲ್ಲಿ, ಮೂರ್ನಾಲ್ಕು ಸಮಸ್ಯೆಗಳು ಸೇರಿಕೊಂಡು ಹೊಸೆದಂತಾಗಿದೆ. ತಂದೆ ಮದ್ಯಪಾನಿಯಾಗಿದ್ದು, ಕುಟುಂಬದ ಹೊರಗೆ ಮತ್ತೊಬ್ಬ ಮಹಿಳೆಯೊಂದಿಗೆ ಸಂಬಂಧವನ್ನು ಹೊಂದಿದ್ದ. ಈ ಚಟಗಳಿಂದಾಗಿ, ಪುರಸಭೆಯಲ್ಲಿ ಕೆಲಸ ಮಾಡುತ್ತಿದ್ದರೂ, ಮನೆ ನಿಭಾಯಿಸಲು ಸಾಧ್ಯವಾಗುತ್ತಿರಲಿಲ್ಲ. ಇವಳ ತಾಯಿಯೂ ಕೂಲಿಗೆ ಹೋಗುತ್ತಿದ್ದಳು. ಸುಂದರಿ ೧೧ ವರ್ಷದವಳಿರುವಾಗಲೇ ಆಕೆಯ ಸಂಬಂಧಿಯೊಬ್ಬನೊಡನೆ ಇವಳ ಮದುವೆ ಗೊತ್ತು ಮಾಡುತ್ತಾರೆ. ಆದರೆ ಮದುವೆಯಾಗಬೇಕಾದ ಯುವಕ ಏನೋ ಅಪರಾಧ ಮಾಡಿ ಜೈಲಿಗೆ ಹೋಗುತ್ತಾನೆ. ಜೈಲಿಗೆ ಹೋದವನನ್ನು ಏನು ಕಾಯುವುದೆಂದು, ಇವಳನ್ನು ಪಕ್ಕದ ಹಳ್ಳಿಯ ವ್ಯಕ್ತಿಯೊಂದಿಗೆ ಮದುವೆ ಮಾಡುತ್ತಾರೆ. ಆತ ಇವಳಿಗಿಂತ ವಯಸ್ಸಲ್ಲಿ ತುಂಬಾ ದೊಡ್ಡವನಿದ್ದ. ಆತನಿಗೆ ಸುಂದರಿಯ ಮೇಲೆ ತುಂಬಾ ಸಂಶಯ. ಅದಕ್ಕೆ ಸರಿಯಾಗಿ ಜೈಲಿನಿಂದ ಹೊರ ಬಂದಿದ್ದ ಈಕೆಯ ಸಂಬಂಧಿ, ಇವಳನ್ನು ನೋಡಲು, ಇವಳ ಗಂಡನ ಮನೆಯ ಹತ್ತಿರ ಹೋಗಿ ನಿಲ್ಲುತ್ತಿದ್ದ. ವಯಸ್ಸಿನಲ್ಲಿ ದೊಡ್ಡವನಿದ್ದ ಸುಂದರಿಯ ಗಂಡ, ಇವಳ ಮೇಲೆ ಸಂಶಯ ಮಾಡುತ್ತಾ ಅವಳನ್ನು ಹೊಡೆಯುತ್ತಿದ್ದ ಮತ್ತು ಆತ ತನ್ನ ವಯಸ್ಸಿಗೆ ಸರಿ ಹೋಗುವಂತಹ ಒಬ್ಬಳು ಗಂಡ ಬಿಟ್ಟ ಲಿಂಗಾಯತ ಹೆಣ್ಣುಮಗಳನ್ನು ಮನೆಯಲ್ಲಿ ತಂದಿಟ್ಟುಕೊಂಡಿದ್ದ.

ಅವಳ ಜೊತೆಗೇ ಆತನ ದಿನಗಳಿದ್ದವು. ಹೆಂಡತಿಯಾಗಿ ಆತ ಇವಳನ್ನು ಹೊಡೆಯುವುದು, ಹೆಚ್ಚು ಹೆಚ್ಚು ಕೆಲಸ ಮಾಡಿಸುವುದು ಮಾಡುತ್ತಾ, ಹಿಂಸೆ ಮಾಡತೊಡಗಿದ್ದ. ಪುಟ್ಟ ಹುಡುಗಿ ಸುಂದರಿ ಬೇಸತ್ತು ತಂದೆಯನ್ನು ಕರೆಸಿಕೊಂಡು ತವರು ಮನೆಗೆ ಬರುತ್ತಾಳೆ. ತವರಿಗೆ ಬಂದ ಇವಳನ್ನು ಮೊದಲು ಮದುವೆಯಾಗಬೇಕೆಂದಿದ್ದ ಸಂಬಂಧಿ ಯುವಕ ಇವಳೊಂದಿಗೆ ಸಲುಗೆಯಿಂದ ಇದ್ದು, ಇವಳನ್ನು ಲೈಂಗಿಕವಾಗಿ ಬಳಸಿಕೊಳ್ಳತೊಡಗುತ್ತಾನೆ. ಇದು ಮನೆಯವರಿಗೆ ಗೊತ್ತಾಗಿ ದೊಡ್ಡ ಗಲಾಟೆ ನಡೆದು, ಅವನ ಮನೆಯವರು ಅವನಿಗೆ ಬೇರೆ ಮದುವೆ ಮಾಡುತ್ತಾರೆ. ಮತ್ತೆ ಒಂಟಿಯಾದ ಸುಂದರಿ, ಮುಂಬಯಲಿ ಲೈಂಗಿಕ ದಂಧೆ ಮಾಡುತ್ತಿದ್ದ ಇವಳ ಗೆಳತಿಯ ಅಕ್ಕನ ಜೊತೆಗೆ ಸೇರಿ ತಾನೂ ಮುಂಬಯಿಗೆ ಬಂದು ಸೇರುತ್ತಾಳೆ. ಇದಕ್ಕೆ, ಮಗಳು ಎಲ್ಲಾದರೂ ಬದುಕಿರಲಿ, ಎಂದು ತಾಯಿಯೂ ಸಹ ಬೆಂಬಲ ನೀಡಿರುತ್ತಾಳೆ. ಸುಮಿತ್ರಳಿಗೆ ಮುಂಬಯಲಿ, ತೊಂದರೆಯಾಗಿ, ಮತ್ತೆ ಊರಿಗೆ ಬಂದು, ಅಲ್ಲಿಂದ ಉತ್ತರ ಪ್ರದೇಶದ ಅಲಹಾಬಾದ್‌ಗೆ ಹೋಗಿರುತ್ತಾಳೆ. ಅಲ್ಲಿ ದಂಧೆಯ ತಂತ್ರಗಳನ್ನು ಅರ್ಥ ಮಾಡಿಕೊಂಡು ತನ್ನ ತಂಗಿಯನ್ನೂ ಕರೆದುಕೊಂಡು ಹೋಗಿ, ಅವಳನ್ನು ಉತ್ತರ ಪ್ರದೇಶದ ಪದ್ಧತಿಯಂತೆ ತವಾಯಫ್ ಮಾಡುತ್ತಾಳೆ. ಊರಿಗೆ ತಂದು ಮುತ್ತನ್ನೂ ಕಟ್ಟಿಸುತ್ತಾಳೆ. (ವಿವರಗಳಿಗೆ ನೋಡಿ. ಅನುಬಂಧ-೧, ಪ್ರಕರಣ ೧೨ ಮತ್ತು ೧೩).

**೫.೩/೨.೨. ಸಾಗಾಣಿಕೆ**

ದೇವದಾಸಿ ಪದ್ಧತಿಗೆ ಒಳಪಡಿಸುವುದು, ಬಾಲ್ಯವಿವಾಹ ಮಾಡುವುದು ನಂತರ ಅವರನ್ನು ಲೈಂಗಿಕ ಜೀತಕ್ಕೆ ಇಡುವುದು, ಇವು ತಂದೆ ತಾಯಿಗಳಿಗೆ ಗೊತ್ತಿದ್ದ ಪ್ರಕರಣಗಳೇ ಆಗಿರುತ್ತಿದ್ದವು. ಅದರೆ ಕೆಲವು ಪ್ರಕರಣಗಳಲ್ಲಿ ಊರಲ್ಲಿ ತಿರುಗುತ್ತಿದ್ದ ತಲೆಹಿಡುಕರು, ಸಂಬಂಧಿಕರ ಗಂಡುಮಕ್ಕಳು, ಹೆಣ್ಣುಮಕ್ಕಳನ್ನು ಪ್ರೀತಿಸುವ ನಾಟಕವಾಡಿ, ಕೆಲಸ ಕೊಡಿಸುವ ಭರವಸೆ ನೀಡಿ ಕರೆದೊಯ್ದು, ಲೈಂಗಿಕ ಗಂಧೆಯ ಮನೆಗಳಿಗೆ ಮಾರಾಟ ಮಾಡುತ್ತಿದ್ದ ಪ್ರಕರಣಗಳೂ ಇವೆ. ಕೆಲವು ಯುವತಿಯರು ಹೇಳುವಂತೆ, ಮುಂಬಯಲಿ ಘರವಾಲಿಗಳಾಗಿರುವ(ಸ್ವಂತ ಅಥವಾ ಬಾಡಿಗೆ) ಮಹಿಳೆಯರ ತಮ್ಮಂದಿರು, ಗಂಡು ಮಕ್ಕಳು ಊರಲ್ಲಿ ತಲೆ ಹಿಡುಕರಾಗಿ ಕೆಲಸ ಮಾಡುತ್ತಿರುತ್ತಾರೆ. ಅವರು ಸುತ್ತ ಮುತ್ತ ಹಳ್ಳಿಗಳಲ್ಲಿಯೂ ತಿರುಗಾಡುತ್ತಾ, ಹೆಣ್ಣುಮಕ್ಕಳಿದ್ದು, ಸಮಸ್ಯೆ ಇರುವ ಮನೆಗಳನ್ನು ಗಮನಿಸುತ್ತಾ, ಅವರಿಗೆ ಒಂದಿಷ್ಟು ಹಣ ನೀಡಿ, ಅವರ ಹೆಣ್ಣುಮಕ್ಕಳನ್ನು ಸಾಗಿಸಿಕೊಂಡು ಹೋಗುತ್ತಾರೆ. ಕೆಲವು ಪ್ರಕರಣಗಳಲ್ಲಿ ಹುಡುಗಿಯರನ್ನೇ ನೇರವಾಗಿ ಘುಸಲಾಯಿಸಿ ಓಡಿಸಿಕೊಂಡು ಬಂದು ದಂಧೆಯ ಮನೆಗಳನ್ನು ಸೇರಿಸಿದ್ದಿದೆ. ಗ್ರಾಮೀಣ ಭಾಗದಲ್ಲಿ, ಚಿಕ್ಕ ಹುಡುಗಿಯರು ದನಗಳನ್ನು ಆಡುಗಳನ್ನು ಮೇಯಿಸುವಾಗ, ಅವರಿಗೆ ಜಾತ್ರೆ ತೋರಿಸುವ, ಆಟಿಕೆಗಳನ್ನು ಕೊಡಿಸುವ, ಸಿನೆಮಾ ತೋರಿಸುವ, ಹೊಸ ಬಟ್ಟೆ ಕೊಡಿಸುವ ಆಸೆಗಳನ್ನು ತೋರಿಸಿ ಕರೆದೊಯ್ದು, ಲೈಂಗಿಕ ದಂಧೆಯ ಮನೆಗಳಿಗೆ ಮಾರಾಟ ಮಾಡಿದ ಪ್ರಕರಣಗಳೂ ಕಂಡು ಬರುತ್ತವೆ. ಅಧ್ಯಯನಕ್ಕೆ ಒಳಪಟ್ಟ ದೇವದಾಸಿಯರಲ್ಲದವರಲ್ಲಿ, ಶೇಕಡಾ ೪ರಷ್ಟು ಹೀಗೆ ಸಾಗಾಣಿಕೆಯಾದ ಪ್ರಕರಣಗಳು ಕಂಡುಬರುತ್ತಿವೆ. ಅದರಲ್ಲಿ ತಮ್ಮ ಹಳ್ಳಿಯಿಂದ

ಮಲತಾಯಿಯ ತವರು ಮನೆಗೆ ಹೋದ ಕಿಶೋರಿ ಬಾಲಕಿಯನ್ನು, ಸಾಗಾಣಿಕೆ ಮಾಡಿ, ಮುಂಬಯಿಯಲ್ಲಿ ಮಾರಾಟಕ್ಕೊಳಪಟ್ಟ ಸರಸೂ ಎನ್ನುವ ಮಹಿಳೆಯ ಪ್ರಕರಣವನ್ನು ಇಲ್ಲಿ ವಿವರಿಸಲಾಗಿದೆ.

**ಸರಸೂ ಪ್ರಕರಣ** : ಸರಸು ಈಗ ೬೫ ವರ್ಷದ ಮಹಿಳೆ. ಮನೆಯಲ್ಲಿ ಇವಳ ಅಕ್ಕ ದೇವದಾಸಿಯಾಗಿದ್ದಳು. ಇವಳ ತಂದೆಗೆ ಇವಳ ತಾಯಿಯನ್ನೂ ಸೇರಿಸಿ ಮೂವರು ಹೆಂಡತಿಯರು. ಎರಡನೆ ಹೆಂಡತಿಯಾಗಿದ್ದ ಇವಳ ತಾಯಿ ಸತ್ತು ಹೋಗಿದ್ದಳು. ತಂದೆಯ ಮೂರನೇ ಹೆಂಡತಿ ಅಂದರೆ ಸರಸೂನ ಮಲತಾಯಿ ಹೆರಿಗೆಗೆಂದು ತನ್ನ ತವರಿಗೆ ಹೋಗುವಾಗ, ೧೨ ವರ್ಷದ ಸರಸೂಳನ್ನು ತನ್ನ ಸಹಾಯಕ್ಕೆಂದು ಕರೆದುಕೊಂಡು ಹೋಗುತ್ತಾಳೆ. ಆ ಊರಿನಲ್ಲಿ ವ್ಯಾಪಾರಕ್ಕೆಂದು ಬರುತ್ತಿದ್ದವನೊಬ್ಬ, ಇವಳನ್ನು ನೋಡಿ, ಸಲುಗೆ ಬೆಳೆಸಿಕೊಳ್ಳುತ್ತಾನೆ. ಆತ ಇವಳ ತಲೆಯಲ್ಲಿ ನೂರಾರು ಆಸೆ ಕನಸು ತುಂಬಿ, ಅಲ್ಲಿಂದ ಓಡಿಸಿಕೊಂಡು ಹೋಗುವಲ್ಲಿ ಸಫಲನಾಗುತ್ತಾನೆ. ಆಸೆಗಳನ್ನು ಕಟ್ಟಿಕೊಂಡು ಅವನ ಹಿಂದೆ ಮುಂಬಯಿಗೆ ಬಂದ ಸರಸೂಳನ್ನು ಆತ ಘರವಾಲಿಯೊಬ್ಬಳಿಗೆ ಮಾರಿ ಪರಾರಿಯಾಗುತ್ತಾನೆ. ಆತನ ಮೋಸದಿಂದಾಗಿ ಸರಸೂ ಲೈಂಗಿಕ ಜೀತಕ್ಕೆ ನಿಲ್ಲುತ್ತಾಳೆ. ಹೀಗೆ ಉಳಿದ ಸರಸೂ ಪಠಾನ್‌ನೊಬ್ಬನೊಂದಿಗೆ ಮದುವೆ ಮಾಡಿಕೊಂಡು, ಮೂರು ವರ್ಷ ಪಾಕಿಸ್ತಾನಕ್ಕೂ ಹೋಗಿ ಇದ್ದು ಬರುತ್ತಾಳೆ. ಈ ಎಲ್ಲ ಸಾಗಾಣಿಕೆ ಪಯಣದಲ್ಲಿ ಅವಳು ಪಟ್ಟ ನೋವು, ಸಂತಸಗಳಿಗೆ ಕಡಿಮೆ ಇಲ್ಲ. ಆದರೆ ಕೊನೆಯಲ್ಲಿ ಯಾವುದೂ ಉಳಿಯದೇ ನಿಟ್ಟುಸಿರೊಂದೇ ಸಂಗಾತಿಯಾಗಿದೆ(ವಿವರಗಳಿಗೆ ನೊಡಿ, ಅನುಬಂಧ-೧, ಪ್ರಕರಣ ೧೪).

**೫.೩/೨.೩. ಲೈಂಗಿಕ ಆಸಕ್ತಿ**

ಅಧ್ಯಯನಕ್ಕೆ ಒಳಪಡಿಸಿದ ದೇವದಾಸಿಯರಲ್ಲದ ಒಟ್ಟು ಮಹಿಳೆಯರಲ್ಲಿ ಶೇಕಡಾ ೪ರಷ್ಟು ಮಹಿಳೆಯರು, ತಮ್ಮ ಲೈಂಗಿಕ ಆಸಕ್ತಿಯಿಂದ ರೆಡ್‌ಲೈಟ್ ಏರಿಯಾಗಳಿಗೆ ಹೋದವರಾಗಿದ್ದಾರೆ. ಲೈಂಗಿಕ ಆಸಕ್ತಿಗೂ ಲೈಂಗಿಕ ಜೀತಕ್ಕೂ ಬಹಳ ವ್ಯತ್ಯಾಸವಿದೆ. ಲೈಂಗಿಕ ಆಸಕ್ತಿ ಇದ್ದವರನ್ನು ಯಾರೂ ಲೈಂಗಿಕ ದಂಧೆಗೆ ತಳ್ಳಿರುವುದಿಲ್ಲ. ಅವರು ತಮ್ಮ ಇಷ್ಟಕ್ಕೆ ತಾವೇ ಬಂದವರಾಗಿರುತ್ತಾರೆ. ಕೆಲವರಿಗೆ ಗಂಡ, ಮಕ್ಕಳು ಎಲ್ಲವೂ ಇದ್ದೂ ಸಹ, ಅತಿಯಾದ ಲೈಂಗಿಕ ಆಸಕ್ತಿ ಈ ರೀತಿ ಅನ್ಯ ದಾರಿ ಹಿಡಿಯುವಂತೆ ಪ್ರೇರೇಪಿಸುತ್ತದೆ. ಕೆಲವು ಸಂದರ್ಭಗಳಲ್ಲಿ, ಚಿಕ್ಕ ವಯಸ್ಸಿನಲ್ಲಿ ವಿಧವೆಯರಾದವರು, ಗಂಡ ಬಿಟ್ಟವರು ಸಾಮಾಜಿಕವಾಗಿ ಉನ್ನತ ಶ್ರೇಣಿಯಲ್ಲಿ ಬದುಕುತ್ತಿರುವಾಗ ಲೈಂಗಿಕ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಬೇರೆ ದಾರಿ ಸಿಗದೇ ಈ ರೀತಿಯಾಗಿ ರೆಡ್‌ಲೈಟ್ ಏರಿಯಾಗಳ ಮೊರೆ ಹೋದದ್ದಿದೆ. ಅಲ್ಲಿ ಅವರಿಗೆ ಆದಾಯಕ್ಕಿಂತಲೂ ಅವರ ಸ್ವ ಸಂತೋಷ ಮುಖ್ಯವಾಗಿರುತ್ತದೆ. ಇಂತವರಿಗೆ ಲೈಂಗಿಕ ದಂಧೆ ಮಾಡಿ, ಅವಲಂಬಿತರ ಜೀವನ ರೂಪಿಸುವ ಉದ್ದೇಶಗಳು ಇರುವುದಿಲ್ಲ. ಹಾಗಾಗಿ ಇವರನ್ನು ಲೈಂಗಿಕ ಜೀತಕ್ಕೆ ಬಂದವರೆಂದು ಇಲ್ಲಿ ಕರೆಯಲು ಆಗುವುದಿಲ್ಲ. ಆದರೆ ಅಪ್ರಾಪ್ತ ವಯಸ್ಸಿನಲ್ಲಿ ಇವರು, ರೆಡ್‌ಲೈಟ್ ಏರಿಯಾಗಳಿಗೆ ಬಂದವರಾದ್ದರಿಂದ ಇವರ ಪ್ರಕರಣಗಳನ್ನೂ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಇಂತ ಬಾಲೆಯರು, ತಮ್ಮ ಜೀವನದ ಬೆಳವಣಿಗೆಯ ಹಂತದಲ್ಲಿ, ಮಾನಸಿಕ ಒತ್ತಡಗಳಿಗೆ ಬಲಿಯಾದ, ಸರಿಯಾದ ಮಾರ್ಗದರ್ಶನ, ಮಾದರಿಯಿಲ್ಲದ ಸಂಸಾರ ಮತ್ತು ಪರಿಸರದಲ್ಲಿ ಬೆಳೆದವ ರಾಗಿರುತ್ತಾರೆಂಬುದು ಕಂಡು ಬರುತ್ತದೆ. ಇವರಿಗೆ ಇರುವುದು ಮೇಲ್ನೋಟಕ್ಕೆ ಲೈಂಗಿಕ ಆಸಕ್ತಿ ಅನ್ನಿಸಿದರೂ ಅವರು ಮನೊ ಸಾಮಾಜಿಕ ಸಮಸ್ಯೆಯಿಂದ ಬಳಲುತ್ತಿರುತ್ತಾರೆಂದು ಅಧ್ಯಯನಗಳು ಮತ್ತು ಪ್ರಕರಣ ಅಧ್ಯಯನಗಳು ತಿಳಿಸುತ್ತವೆ. ಮನೋ ಸಾಮಾಜಿಕ ಕಾರ್ಯದಲ್ಲಿ ಇದನ್ನು 'ಪ್ಲೆಸರ್ ಸೀಕಿಂಗ್ ಬಿಹೇವಿಯರ್'(ಸುಖವನ್ನು ಬೆನ್ನತ್ತಿ ಹೋಗುವ ನಡತೆ) ಅಂತಲೂ ಕರೆಯಲಾಗುತ್ತದೆ. ಇಂತ ಕೆಲವು ಪ್ರಕರಣಗಳಲ್ಲಿ ತಾವು ನಿರೀಕ್ಷಿಸಿದ ಗುಣ ಸ್ವಭಾವಗಳು, ಲೈಂಗಿಕ ಇಚ್ಛೆಗಳು ಈಡೇರದೇ ಹೋದರೂ ಸಹ ಬಾಲೆಯರು ಲೈಂಗಿಕ ದಂಧೆಗೆ ಹೋದ ಸಂದರ್ಭಗಳು ಇವೆ. ಇದನ್ನು ಅಂತ ಎರಡು ಪ್ರಕರಣಗಳ ಮೂಲಕ ಇಲ್ಲಿ ವಿವರಿಸಲಾಗಿದೆ. ಈ ಎರಡೂ ಪ್ರಕರಣಗಳು ಜಾತಿಯಿಂದ ಪರಿಶಿಷ್ಟ ಪಂಗಡ ಮತ್ತು ಕುರುಬ ಜಾತಿಗೆ ಸೇರಿದ ಮಹಿಳೆಯರ ಪ್ರಕರಣಗಳಾಗಿವೆ.

**ಸುರೇಖಾ ಪ್ರಕರಣ :** ಸುರೇಖಾ ಪ್ರಕರಣದಲ್ಲಿ ಅವಳನ್ನು ಚಿಕ್ಕ ವಯಸ್ಸಿಗೆ ಮದುವೆ ಮಾಡುತ್ತಾರೆ. ೧೬-೧೭ ವಯಸ್ಸಿನ ಒಳಗೆ ಅವಳಿಗೆ ಮೂರು ಮಕ್ಕಳಾಗಿರುತ್ತವೆ. ಗಂಡ ಮನೆ ಸಂಸಾರ ಚೆನ್ನಾಗಿಯೇ ಇರುತ್ತದೆ. ಆದರೆ ಬಡತನದಿಂದಾಗಿ ಮನೆಯಲ್ಲಿ ಉತ್ತಮ ಸ್ಥಿತಿ ಇರುವುದಿಲ್ಲ. ಆದರೆ ಸಂಭಾಳಿಸಬಹುದಿತ್ತು. ಇಂತ ಸಂದರ್ಭದಲ್ಲಿ ಕೂಲಿ ಕೆಲಸಕ್ಕೆ ಹೋದಾಗ ಇವಳ ಮನಸ್ಥಿತಿ ಇರುವಂತಹ ಕೆಲವು ಯುವತಿಯರ ಪರಿಚಯವಾಗುತ್ತದೆ. ಇವರಿಗೆಲ್ಲ ಲೈಂಗಿಕ ವಿಷಯಗಳಲ್ಲಿ ಆಸಕ್ತಿ ಇದ್ದು, ಬೇರೆ ಊರಿಗೆ ಹೋದರೆ ನಾವು ಮಜವಾಗಿರಬಹುದು ಎಂದು, ಮಕ್ಕಳು ಗಂಡ ಎಲ್ಲವನ್ನೂ ಬಿಟ್ಟು ರೆಡ್‌ಲೈಟ್ ಏರಿಯಾಗೆ ಹೋಗಿ ನಿಲ್ಲುತ್ತಾಳೆ. ಪ್ರಸ್ತುತ ಸುರೇಖಾಳ ವಯಸ್ಸು ೪೫ ದಾಟಿದೆ. ಆದರೂ ಅವಳಿಗೆ ಲೈಂಗಿಕ ವಿಷಯದ ಕುರಿತು ಆಸಕ್ತಿ ಕಡಿಮೆ ಆಗಿಲ್ಲ. ಊರಿಗೆ ಬಂದರೂ ಈಗಲೂ ಅದೇ ದಂಧೆಯನ್ನು ಮಾಡುತ್ತಾಳೆ.(ವಿವರಗಳಿಗೆ ನೊಡಿ, ಅನುಬಂಧ-೧, ಪ್ರಕರಣ ೧೫).

### ೫.೪. ಶೋಷಣೆ ಮತ್ತು ದೌರ್ಜನ್ಯದ ಜಗತ್ತು

ಅಪ್ರಾಪ್ತ ವಯಸ್ಸಿನಲ್ಲಿ ದೇವದಾಸಿಯರನ್ನಾಗಿಸಿ, ಬಾಲ್ಯ ವಿವಾಹ ಮಾಡಿ, ಇವರನ್ನು ಕುಟುಂಬದಿಂದ ಸಮಾಜದಿಂದ ಅಂಚಿಗೆ ಇಡಲಾಗಿತ್ತು. ಹೀಗೆ ತಮ್ಮ ಅವಲಂಬಿತರ ಬದುಕನ್ನು ಕಟ್ಟುವ ದೆಸೆಯಿಂದ, ತಮ್ಮ ಬದುಕನ್ನೇ ಕಳೆದುಕೊಳ್ಳುತ್ತಿದ್ದ ಇವರ ದಿನಗಳು ಅಲ್ಲಿ ಹೇಗಿದ್ದವು? ಎಂಬುದನ್ನು ಅವರ ಪ್ರಕರಣ ಅಧ್ಯಯನದ ಹಿನ್ನೆಲೆಯಲ್ಲಿ ಅರ್ಥೈಸಿಕೊಂಡು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಂತವೇ ಕೆಲವು ವಿಷಯಗಳನ್ನು ಮೂರನೇ ಅಧ್ಯಾಯದಲ್ಲಿ ಪ್ರಕರಣಗಳೇ ಮಾತನಾಡಿದ್ದನ್ನು ದಾಖಲಿಸಲಾಗಿದೆ. ಆದರೆ ಲೈಂಗಿಕ ದಂಧೆಯ ಮನೆಗಳಲ್ಲಿ ಮಹಿಳೆಯರಿಗೆ ಮುಕ್ತವಾಗಿ ಮಾತನಾಡುವ ಸ್ವಾತಂತ್ರ್ಯವಾಗಲೀ, ಸಮಯವಾಗಲೀ ಇರುತ್ತಿರಲಿಲ್ಲ. ಅಂಥ ಸಂದರ್ಭದಲ್ಲಿ ಅವರು ಲೈಂಗಿಕ ಜೀತದಲ್ಲಿ ಇದ್ದಾಗಿನ ಘಟನೆಗಳನ್ನು ವಿವರಿಸುವಾಗ ಎಷ್ಟೋ ವಿಷಯಗಳು ಬಿಟ್ಟು ಹೋಗಿರುವ ಸಾಧ್ಯತೆಗಳು ಇದ್ದವು. ಅಂತ ಕೆಲವು ವಿಷಯಗಳನ್ನು, ತಮ್ಮ ಬದುಕಿನ ನೋವುಗಳನ್ನು ಮಹಿಳೆಯರು ಇಲ್ಲಿ ಹಂಚಿಕೊಂಡಿದ್ದಾರೆ. ಹಾಗಾಗಿ ಅವರ ಆ ಸಿಹಿ ಕಹಿ ಅನುಭವಗಳನ್ನು ಇಲ್ಲಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

## ೫.೪/೧. ಅಸಹಾಯಕತೆ

ಜಗತ್ತಿನಲ್ಲಿ ಮಗು ಮತ್ತು ಮಹಿಳೆಯರು ಅತ್ಯಂತ ಅಸಹಾಯಕ(ವಲ್ನರೆಬಲ್-ವ್ಯೆಯಾಬಲ್ ಟು ಇಂಜುರಿ) ಸ್ಥಿತಿಯಲ್ಲಿ ಇರುವಂತವರು. ಅಂತದ್ದರಲ್ಲಿ ತಳಸಮುದಾಯದ ಬಾಲೆಯರು ಇನ್ನೂ ಅಸಹಾಯಕರು ಮತ್ತು ಹುಟ್ಟುತ್ತಲೇ ಅನೇಕ ಗಂಡಾಂತರ ಪರಿಸ್ಥಿತಿಗೆ ಒಳಪಡುವಂತವರು. ಬಹುತೇಕ ಬಾಲೆಯರು ಹೆತ್ತವರಿಂದಲೇ ಗಂಡಾಂತರಕ್ಕೆ ಒಳಪಡುತ್ತಿರುತ್ತಾರೆ. ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಲ್ಲಿ ಎಲ್ಲರೂ ಅಸಹಾಯಕ ಪರಿಸ್ಥಿತಿಯನ್ನು ಎದುರಿಸಿದವರೇ. ಕ್ಷಮಾಳ ಪ್ರಕರಣದಲ್ಲಿ, ಮಾನಸಿಕ ಅಸ್ವಸ್ಥಳಾದ ಮಗಳನ್ನು ಹಣದ ಆಸೆಗಾಗಿ ಕ್ಷಮಾಳ ತಾಯಿ ಪುಣೆಯ ಲೈಂಗಿಕ ದಂಧೆಯ ಮನೆಯಲ್ಲಿ ಲೈಂಗಿಕ ಜೀತಕ್ಕಿಟ್ಟು(ಮಾರಾಟ ಮಾಡಿ) ಬರುತ್ತಾಳೆ. ಹಾಗೆ ಇಟ್ಟು ಬಂದ ಕ್ಷಮಾ ಹೇಗಿದ್ದಾಳೆ? ಎಂದು ಒಂದು ದಿನವೂ ಹೋಗಿ ನೋಡಲಿಲ್ಲ. ಸ್ವಸ್ಥರಾಗಿದ್ದವರನ್ನೇ ಬಿಡದ ಘರವಾಲಿಗಳು, ಗಿರಾಕಿಗಳು, ಕ್ಷಮಾಳನ್ನು ಮನಸೋ ಇಚ್ಛೆ ಬಳಸಿಕೊಳ್ಳುತ್ತಾರೆ. ಆಗುವ ನೋವನ್ನು ಹೇಳಲು ಬುದ್ಧಿ ಇಲ್ಲ. ತಿಳಿದಿದ್ದರೂ ಯಾರಿಗೆ ಹೇಳಬಹುದಿತ್ತು. ಕ್ಷಮಾ ತಾಯಿಯಿಂದಲೇ ಇಂತ ಪರಿಸ್ಥಿತಿಗೆ ಅಸಹಾಯಕಳಾಗಿ ಬಂದು ನಿಂತಿದ್ದಳು.

ಮಲ್ಲಿಕಾಳ ಪ್ರಕರಣದಲ್ಲಿ ಹೆತ್ತ ತಂದೆ ದೇವದಾಸಿ ಮಾಡಿ, ಜೀತಕ್ಕಿಟ್ಟು ಹೋದಾಗ, ಅವಳಿಗೆ ಆ ಪರಿಸರಕ್ಕೆ ಹೊಂದಿಕೊಳ್ಳಲು ಆಗುವುದೇ ಇಲ್ಲ. ಘರವಾಲಿ ಹತ್ತಿರದ ಸಂಬಂಧಿ ಆದ್ದರಿಂದ ಇವಳ ಮೇಲೆ ಒತ್ತಡ ಇರಲಿಲ್ಲ. ಹಾಗೆ ತಿಂದುಂಡು ಓಡಾಡುತ್ತಿದ್ದವಳಿಗೆ ಮಲಗಲು ಜಾಗವಿರಲಿಲ್ಲ. ಗಿರಾಕಿಗಳು ಹುಡುಗಿಯರ ಜೊತೆ ಮಲಗಿರುತ್ತಿದ್ದ ಮಂಚದ ಕೆಳಗೆ ಇವಳನ್ನು ಮಲಗಿಸುತ್ತಿದ್ದರು. ಪುಟ್ಟ ಮನಸ್ಸಿನ ಮಲ್ಲಿಕಾ ಕಣ್ಣಿಗೆ ಬಟ್ಟೆ ಕಟ್ಟಿಕೊಂಡರೂ ನಿದ್ರೆ ಬಾರದ ಸ್ಥಿತಿಯಲ್ಲಿ ಹೊತ್ತುಗಳೆಯುತ್ತಿದ್ದಳು. ಮಲಗಲು ಒಳ್ಳೆಯ ವ್ಯವಸ್ಥೆ ಬೇಕೆಂದರೆ, ಅವಳು ಗಿರಾಕಿಗಳೊಂದಿಗೆ ಮಲಗಬೇಕಿತ್ತು.

ದಂಧೆಗೆ ಹೋದಾಗ ಜಲಜಗೆ ೯ ತಿಂಗಳ ಹೆಣ್ಣು ಮಗಳು. ಇನ್ನೂ ಎದೆ ಹಾಲು ಕುಡಿಯುತ್ತಿತ್ತು. ಹಾಲು ಕುಡಿಯುವ ಹಸುಳೆಯನ್ನು ಬೇರೆ ಮಾಡುವುದಾದರೂ ಹೇಗೆ? ಒಂದು ವರ್ಷ ಇಟ್ಟುಕೊಂಡು ನಂತರ ತಾಯಿ ಹತ್ತಿರ ಕಳಿಸಬೇಕೆಂದು ಮಗಳನ್ನು ತನ್ನ ಹತ್ತಿರವೇ ಇಟ್ಟುಕೊಂಡಿದ್ದಳು ಜಲಜ. ಗಿರಾಕಿಗಳು ಬಂದಾಗ, ಮಗಳನ್ನು ಜೊತೆಗಿರುವ ಹುಡುಗಿಯರ ಕೈಯಲ್ಲಿ, ಮತ್ಯಾರದೋ ಕೈಯಲ್ಲಿ ಕೊಟ್ಟು ಹೋಗುತ್ತಿದ್ದಳು. ಅಂಥ ಸಂದರ್ಭದಲ್ಲಿ ಗಿರಾಕಿಗಳು ಕೊಡುವ ಹಿಂಸೆಗೆ ಎದೆ ನೋವು ಬರುತ್ತಿತ್ತು. ಮಗಳು ಕುಡಿವ ಹಾಲು ಚಿಮ್ಮಿ ಹೋಗುತ್ತಿತ್ತು. ಮತ್ತೊಬ್ಬ ಗಿರಾಕಿ ಬರುವುದರೊಳಗೆ ಹಾಲು ಹಿಂಡಿ ಚರಂಡಿಗೆ ಚೆಲ್ಲಿ ಹೋಗುತ್ತಿದ್ದಳು. ಹಸಿದ ಮಗು ಜೀವ ಹಿಂಡುವಂತೆ ಅಳುತ್ತಿತ್ತು. ಗೆಳತಿಯರು ಕೊಟ್ಟ ಸಲಹೆಯ ಮೇರೆಗೆ ಹತ್ತಿ ತುಂಬಿ ಮಾಡಿದ ದಪ್ಪನೆಯ ಬ್ರಾ(ಒಳ ಉಡುಪು) ಉಪಯೋಗಿಸಲು ಪ್ರಾರಂಭಿಸಿದ ಮೇಲೆ, ಆ ತೊಂದರೆ ಏನೊ ನಿಂತಿತು ಆದರೆ, ಜಲಜಳ ಒಂದು ಸ್ತನವೇ ಕರಗಿ ಹೋಯಿತು. ಮುಂದೆ ಎರಡು ಮಕ್ಕಳಾದರೂ ಅವುಗಳಿಗೆ ಹೊಟ್ಟೆ ತುಂಬ ಎದೆ ಹಾಲು ಕೊಡಲಾಗದ ಅಸಹಾಯಕ ದಿನಗಳನ್ನು ಜಲಜ ಕಳೆದಿದ್ದಳು.

ಛಾಯಾ ಮತ್ತು ಗೆಳತಿಯರು ಹಲವಾರು ಸಾರಿ ಪೊಲೀಸರ ಕೈಗೆ ಸಿಕ್ಕು ಜೈಲು ಪಾಲಾದಾಗಿದ್ದರು. ಒಂದು ಸಾರಿ ೪-೫ ದಿನ ಜೈಲಿನಲ್ಲಿಯೇ ಇರಬೇಕಾದ ಸಂದರ್ಭ ಬಂದಾಗ ಜೈಲಿನಲ್ಲಿ ಆವರಿಗೆ ಊಟ ಕೊಟ್ಟು ಚೆನ್ನಾಗಿ ನೋಡಿಕೊಂಡಿದ್ದರು. ಅದಕ್ಕೆ ಘರವಾಲಿ ಕಡೆಗೆ ಬೈಸಿಕೊಂಡು, ಹೊಡೆಸಿಕೊಂಡು, ಊಟವಿಲ್ಲದೇ ಸಾಯುವುದಕ್ಕಿಂತ ಕಾಟ ಕೊಡದೇ ಊಟ ಕೊಡುವ ಜೈಲೇ ಎಷ್ಟೋ ಉತ್ತಮ ಎಂದು ಅವರು ಮಾತನಾಡಿಕೊಳ್ಳುವ ಮಾತಿನಲ್ಲಿ ಅವರ ಅಸಹಾಯಕತೆ ಯಾರಿಗೂ ಕೇಳದು. ಹುಡುಗಿಯರ ದೇಹವು ಚೆನ್ನಾಗಿರುವ ೧೮-೧೯ ವರ್ಷಗಳವರೆಗೆ ದಂಧೆಯ ಮನೆಯಲ್ಲಿ ಮುಚ್ಚಿಟ್ಟುಕೊಂಡು ದಂಧೆ ಮಾಡಿಸಿದ ಘರವಾಲಿ, ಇವಳಿಂದ ಇನ್ನೇನಾಗುವುದು ಎಂದ ಕೂಡಲೇ ಬೀದಿಗೆ ತಳ್ಳುತ್ತಾಳೆ. ಆಗ ಬೀದಿಗೆ ಬಿದ್ದ ಇವರು ಊರಿಗೂ ಹೋಗುವಂತಿಲ್ಲ, ಬೀದಿಯಲ್ಲಿಯೂ ಇರುವಂತಿಲ್ಲ. ಮತ್ತೆ ತನ್ನನ್ನು ಇಟ್ಟುಕೊಳ್ಳುವಂತಹ ಹೊಸ ಘರವಾಲಿಯನ್ನು ಅಸಹಾಯಕರಾಗಿ ಹುಡುಕಿಕೊಳ್ಳಲೇ ಬೇಕಾದ ಪರಿಸ್ಥಿತಿಯಲ್ಲಿ ಈ ಮಹಿಳೆಯರು ದಿನವನ್ನು ಕಳೆದಿದ್ದಾರೆ.

ಎಚ್ ಐ ವಿ/ ಏಡ್ಸ್ ಬರಬಾರದೆಂದು ಮುಂಜಾಗ್ರತೆಗಾಗಿ ಹುಡುಗಿಯರು ಕಾಂಡೋಮ್‌ನ್ನು ಬಳಸುತ್ತಿದ್ದರು. ಆದರೆ ನಡುವೆ ಒಬ್ಬೊಬ್ಬ ಗಿರಾಕಿ ಕಾಂಡೋಮ್ ಇಲ್ಲದೇ ಹುಡುಗಿಯರೊಂದಿಗೆ ಇರಬೇಕೆಂದು ಬಯಸಿ, ಘರವಾಲಿಗೆ ಹೆಚ್ಚು ಹಣ ನೀಡಿ ಬಂದಿರುತ್ತಿದ್ದ. ಅವನ ಜೊತೆ ಮಲಗಿದರೆ ತನಗೆ ರೋಗ ಬಂದು ಬಿಟ್ಟರೆ ಎಂಬ ಆತಂಕ, ಮಲಗದಿದ್ದರೆ ಘರವಾಲಿ ಕಡೆಯಿಂದ ಹೊಡೆತ. ಊಟವನ್ನೇ ಕೊಡುತ್ತಿರಲಿಲ್ಲ. ಕೆಲವು ಗಿರಾಕಿಗಳು ತಮಗೆ ಖುಷಿಯಾಗಿದ್ದರೆ, ಕೊಟ್ಟಿರುತ್ತಿದ್ದ ಭಕ್ಷೀಸ(ಟಿಪ್ಸ್)ನ್ನು ಛಾಯಾ ಘರವಾಲಿಗೆ ಗೊತ್ತಾಗದಂತೆ ಮುಚ್ಚಿಟ್ಟುಕೊಂಡಿರುತ್ತಿದ್ದಳು. ಹೀಗೆ ಕಾಂಡೋಮ್ ಇಲ್ಲದೇ ತನ್ನ ಜೊತೆ ಮಲಗಲು ಬಂದ ಗಿರಾಕಿಗಳಿಗೆ ಛಾಯಾ, ತನ್ನನ್ನು ಮುಟ್ಟದಿರುವಂತೆ, ಆ ಕೂಡಿಟ್ಟ ಬಕ್ಷೀಸು ಕೊಟ್ಟು ಕಳಿಸುತ್ತಿದ್ದಳು. ಇದೆಂತಹ ದರಿದ್ರ ಅಸಹಾಯಕತೆ.

ಹಣದ ಆಸೆಗಾಗಿ ಘರವಾಲಿ ಕಳಿಸುತ್ತಿದ್ದ, ೧೦-೨೦ ಗಿರಾಕಿಗಳು, ಅವುಗಳು ಕೊಡುವ ಹಿಂಸೆಯಿಂದ ಮುಟ್ಟ ದೇಹ ನಲುಗಿ ಹೋಗಿರುತ್ತಿತ್ತು. ಅಂತದ್ದರಲ್ಲಿ ಮತ್ತೆ ಗಿರಾಕಿಗಳು ಬಂದರೆ, ಇಂಥವಳೇ ಬೇಕು ಅಂದರೆ, ಬಾಯಿ ಮುಚ್ಚಿಕೊಂಡು ಮಲಗಬೇಕಾದ ಸ್ಥಿತಿಯಲ್ಲಿ ದಿನಗಳನ್ನು ಕಳೆದು ಬಂದ ನೋವನ್ನು ಎಲ್ಲ ಪ್ರಕರಣಗಳೂ ಬಿಚ್ಚಿಡುತ್ತವೆ. ಸುಜಾತಾ ಎಚ್ ಐ ವಿ ಆಗಿ ಚಿಕಿತ್ಸೆ ತೆಗೆದುಕೊಳ್ಳುತ್ತಾ ಮನೆಯಲ್ಲಿ ಇದ್ದರೆ, ಹೆತ್ತ ತಂದೆ, 'ನಿನಗೇನು ಆಗಿದೆ, ಚೆನ್ನಾಗಿಯೆ ಇದ್ದಿಯಾ, ಆ ಗುಳಿಗಿ ಬೀಸಾಕಿ, ದಂಧೆಗೆ ಹೋಗು' ಎಂದು ಮರಳಿ ದಂಧೆಯ ಮನೆಗೆ ಕಳಿಸಿದರೆ, ಅವಳೇನು ಮಾಡಲು ಸಾಧ್ಯವಿತ್ತು. ಹೊಟ್ಟೆಯಲ್ಲಿ ಕೂಸನ್ನು ಇಟ್ಟುಕೊಂಡು, ೬ ತಿಂಗಳವರೆಗೆ ದಂಧೆ ಮಾಡಬೇಕಾದ ಸುಂದರಿ, ಯಾರೋ ಕದ್ದು ತಂದು ಮಾರಿ ಹೋದ ನಂತರ ಹುಡುಕಿಕೊಂಡು ಬಂದ ತಂದೆಗೆ, 'ತನ್ನದೆಲ್ಲ ಮುಗಿದೇ ಹೋಗಿದೆ, ಊರಿಗೆ ಬಂದಾದ್ರೂ ಏನು ಮಾಡವುದು' ಎಂದು ಅಲ್ಲಿಯೇ ಉಳಿದ ಸರಸೂ, ದೇವದಾಸಿ ಮಾಡಿದ ಮೇಲೆ ಮುಂಬಯಿಗೆ ಹೋಗಿ, ಮೈ ಮಾರಿ ಗಳಿಸಿ ತಂದ ಹಣದಲ್ಲಿ, ತನ್ನ ಕೇರಿಯ ಸಮಾಜಕ್ಕೆ, ಊಟ ಮಾಡಿಸಿರುವ ಅಂಜನವ್ವ, ಸಾಯುವರೆಗೆ ನಿನ್ನನ್ನು

ನೋಡಿಕೊಳ್ಳುತ್ತೇನೆಂದು, ನಾಲ್ಕು ಮಕ್ಕಳನ್ನು ಹಡೆದು, ಇವಳನ್ನೂ ಮತ್ತು ಮಕ್ಕಳನ್ನೂ ಮುಂಬಯಿಯ ಬೀದಿಯಲ್ಲಿ ತಳ್ಳಿ ಹೋದಾಗ ಅಸಹಾಯಕತೆಯಲ್ಲಿ ನಿಂತಿದ್ದ ಮಮತಾ, ಇವರೆಲ್ಲ ಏನು ಮಾಡಲು ಸಾಧ್ಯವಿತ್ತು?

### ೫.೪/೨. ಹಿಂಸೆ

ಲೈಂಗಿಕ ದಂಧೆಯ ಮನೆಗಳಲ್ಲಿ ಬಾಲೆಯರು ಅನುಭವಿಸಿದ ಹಿಂಸೆಗಳು ಅಮಾನುಷವಾದವುಗಳಾಗಿವೆ. ಮಲ್ಲಿಕಾಳ ಪ್ರಕರಣ ಗಮನಿಸಿದಾಗ, ಅವಳು ಅಲ್ಲಿ ಮಕ್ಕಳು ಅನುಭವಿಸುತ್ತಿದ್ದಂತಹ ಹಿಂಸೆಗಳನ್ನು ನೋಡಿಯೇ ಹೆದರಿದ್ದಳು.(ನೋಡಿ, ಅನುಬಂಧ–೧, ಪ್ರಕರಣ ೯), ಗಲ್ಲಿಯಲ್ಲಿ ತಿರುಗಾಡುವ ಗುಂಡಾಗಳು(ಘರವಾಲಿಗಳ ಮಕ್ಕಳೂ ಇರುತ್ತಿದ್ದರು) ಇವರ ಮೇಲೆ ಲೈಂಗಿಕ ಹಲ್ಲೆ ನಡೆಸುತ್ತಿದ್ದರು. ಇವರು ಸಹಕಾರ ನೀಡದೇ ಹೋದರೆ ಚಾಕುವಿನಿಂದ ಇರಿಯುವುದು, ಹೊಡೆಯುವುದು ಮಾಡುತ್ತಿದ್ದರು. ಒಂದು ಹುಡುಗಿಯನ್ನು ಒಬ್ಬ ಗಿರಾಕಿ ತುಂಬಾ ಇಷ್ಟ ಪಟ್ಟು, ದಂಧೆ ಬಿಡಿಸಿ ತನ್ನ ಮನೆಗೆ ಕರೆದುಕೊಂಡು ಹೋಗಿದ್ದ. ಅವಳಿಗೆ ಅಲ್ಲಿ ಹೊಂದಾಣಿಕೆ ಆಗದೇ ಅವನನ್ನು ಬಿಟ್ಟು ಮರಳಿ ದಂಧೆಯ ಮನೆಗೇ ಬಂದಿರುತ್ತಾಳೆ. ಒಂದು ದಿನ ಗೆಳತಿಯರೊಂದಿಗೆ ಆ ಹುಡುಗಿ ತಾನಿರುವ ಮನೆಯ ಮುಂದೆ ಕುಳಿತುಕೊಂಡಿದ್ದಳು. ಆಗ ಅವಳನ್ನು ತನ್ನ ಊರಿಗೆ ಕರೆದುಕೊಂಡು ಹೋಗಿದ್ದ ವ್ಯಕ್ತಿ, ರಭಸದಿಂದ ಬಂದವನೇ, ಬ್ಲೇಡಿನಿಂದ ಆಕೆಯ ಕುತ್ತಿಗೆ ಕೊಯ್ದು, ಹೊರಟು ಹೋಗಿದ್ದ. ಹುಡುಗಿ ಉಳಿಯಲೇ ಇಲ್ಲ(ಕಾಮಾಟಿಪುರಕ್ಕೆ ಕ್ಷೇತ್ರಕಾರ್ಯ ಮಾಡಲು ಹೋದ ಹಿಂದಿನ ದಿನ ನಡೆದಿತ್ತು. ಅಲ್ಲಿಯ ಹುಡುಗಿಯರು ಈ ವಿಷಯ ವಿವರಿಸಿದರು). ಪೊಲೀಸರು ರಕ್ಷಣಾ ಕಾರ್ಯಾಚರಣೆ ನಡೆಸಿದ ಸಂದರ್ಭದಲ್ಲಿ, ಬಾಲೆಯರನ್ನು ಪೊಲೀಸರಿಗೆ ಸಿಗದಂತೆ, ನೀರು ತುಂಬುವ ಬ್ಯಾರೆಲ್ಲಗಳಲ್ಲಿ ಹಾಕಿ ಮುಚ್ಚಿಡುತ್ತಿದ್ದರು. ಒಂದೊಂದು ಬ್ಯಾರೆಲ್ಲಗಳಲ್ಲಿ ಒಂದೊಂದು ಸಾರಿ ಮೂರು ಮೂರು ಹುಡುಗಿಯರನ್ನೂ ಸಹ ತುಂಬುತ್ತಿದ್ದರು. ಪೊಲೀಸರು ಅಲ್ಲಿಂದ ಬೇಗ ಹೋಗದಿರುವ ಸಂದರ್ಭಗಳಲ್ಲಿ, ಹುಡುಗಿಯರು ಉಸಿರುಗಟ್ಟಿ ಸತ್ತು ಹೋಗಿದ್ದನ್ನೂ ಸಹ ಕಂಡಿದ್ದ ಕುರಿತು ಜೋರಾಬಾಯಿ ಹೇಳುತ್ತಾರೆ.

### ೫.೪/೩. ಮೋಸ

ಬಹುತೇಕ ಪ್ರಕರಣ ಅಧ್ಯಯನಗಳು ತಿಳಿಸುವಂತೆ ಲೈಂಗಿಕ ದಂಧೆಯಲ್ಲಿ ಮಹಿಳೆಯರು ಬಹಳ ಮೋಸಕ್ಕೆ ಒಳಗಾಗುತ್ತಾರೆಂದು ತಿಳಿದುಬರುತ್ತದೆ. ಹುಡುಗಿಯರನ್ನು ಜೀತಕ್ಕೆ ಇಟ್ಟು ಹೋಗುವ ತಂದೆ ತಾಯಿಗಳ ಕೈಯಲ್ಲಿ ಅಷ್ಟೋ ಇಷ್ಟೋ ಇಟ್ಟು, ಅವರಿಗೆ ಸಾರಾಯಿ ಕುಡಿಸಿ, ಒಂದು ಪಂಚೆ, ಅಂಗಿ ಮತ್ತು ತಾಯಿಗೊಂದು ಸೀರೆ ಕೊಟ್ಟು ಕಳಿಸಿದರೆ ಮುಗಿಯಿತು. ಮುಂದೆ ಹುಡುಗಿಯರು ಗಳಿಸುವುದೆಲ್ಲ ಘರವಾಲಿಗೇ ಸೇರುತ್ತದೆ. ತಂದೆ ತಾಯಿಗೆ ಕೊಟ್ಟು ಕಳಿಸುವ ಹಣವನ್ನು ಹುಡುಗಿಯರ ಮೇಲಿನ ಸಾಲ ಎಂದು ತಿಳಿಯುವ ಇವರು, ಅಂದಿನಿಂದಲೇ, ಅದಕ್ಕೆ ಬಡ್ಡಿ, ಚಕ್ರಬಡ್ಡಿ ಆಕರಿಸಲು ಪ್ರಾರಂಭಿಸುತ್ತಾರೆ. ಹಾಗಾಗಿ ಆ ಹುಡುಗಿ ೧೦–೧೫ ವರ್ಷ ಕಳೆದರೂ ಸಹ ಆ ಸಾಲ ಮುಗಿಯುವುದಿಲ್ಲ. ದಂಧೆಯ ಸಮಯದಲ್ಲಿ ಹುಡುಗಿಯನ್ನೇನಾದರೂ ಪೊಲೀಸರು ಹಿಡಿದುಕೊಂಡು ಹೋದರೆ, ಪೊಲೀಸರಿಗೆ

ದಂಡ ಕಟ್ಟಿಯೋ ಲಂಚ ಕಟ್ಟಿಯೋ ಕರೆದುಕೊಂಡು ಬಂದಿದ್ದರ ಖರ್ಚನ್ನು ಹುಡುಗಿಯೆ ಕೊಡಬೇಕಾಗುತ್ತದೆ. ಅದಕ್ಕೆ ಮತ್ತೆ ಬಡ್ಡಿ ಸೇರಿಸುವ ಇವರು ಆ ಹುಡುಗಿಯು ಗಲ್ಲಿಯನ್ನು ಬಿಟ್ಟು ಮೇಲೇಳದಂತೆ ಮಾಡುತ್ತಾರೆ.

ಲೈಂಗಿಕ ದಂಧೆಯಲ್ಲಿರುವ ಹೆಚ್ಚು ಹುಡುಗಿಯರಿಗೆ ಅವರ ಸಂಬಂಧಿಕರಿಂದಲೂ ಸಹ ಮೋಸವಾಗುತ್ತದೆ. ದೇವದಾಸಿಯರಿದ್ದ ಕೆಲವು ಕುಟುಂಬಗಳಿಂದ ೩-೪ ಹುಡುಗಿಯರು ಒಬ್ಬರ ಹಿಂದೆ ಒಬ್ಬರು ಬಂದು ಬಿಟ್ಟಿರುತ್ತಾರೆ. ಹೀಗಿರುವಾಗ ತಂಗಿಯರು ತಾವು ಗಳಿಸಿದ್ದನ್ನು ದೊಡ್ಡ ಅಕ್ಕನ ಹತ್ತಿರವೇ ಕೊಟ್ಟಿರುತ್ತಾರೆ. ಆ ಹಣದಿಂದ ಅವಳು ಆಸ್ತಿ ಖರೀದಿಸಿದರೆ ಅದು ಅವಳ ಹೆಸರಲ್ಲಿ ಮಾತ್ರ ಇರುವಂತೆ ಮಾಡಿರುತ್ತಾಳೆ. ಇವರಿಗೆ ಅಕ್ಷರ ಜ್ಞಾನ ಇರದೇ ಇರುವುದರಿಂದ ಕಾಗದ ಪತ್ರಗಳು ಸಹ ಅರ್ಥವಾಗುವುದಿಲ್ಲ. ಕೊನೆಗೆ ಆಕೆ ಸತ್ತು ಹೋದಾಗ ಆ ಆಸ್ತಿಗೆ ಏನೂ ಸಂಬಂಧವಿರದ ಅಣ್ಣ ತಮ್ಮಂದಿರು, ಅವರ ಹೆಂಡತಿ ಮಕ್ಕಳು ತಾವೂ ಪಾಲುದಾರರು ಎಂದು ಬಂದು ಕುಳಿತು ಕೊಳ್ಳುತ್ತಾರೆ. ಈ ಮಹಿಳೆಯರಿಗೆ ನ್ಯಾಯ ಕೊಡಿಸಲು ಅಲ್ಲಿ ಯಾರೂ ಬರುವುದಿಲ್ಲವೆಂದು ಆ ನೋವನ್ನು ಅನುಭವಿಸಿದ ಐರಾವತಿ ಹೇಳುತ್ತಾಳೆ.

**೫.೪/೪. ಯಜಮಾನಿಕೆ**

ಲೈಂಗಿಕ ದಂಧೆಯು ಅಪರಾಧವೆಂದು ಕಾನೂನುಗಳು ಹೇಳುತ್ತವೆ. ಇದನ್ನೆ ಪಾಲಿಸುವ ನೆಪದಲ್ಲಿ ಪೊಲೀಸರು, ತಮ್ಮ ಅಧಿಕಾರದಿಂದ ಮಹಿಳೆಯರನ್ನು ಬಂಧಿಸುತ್ತಾರೆ. ಆದರೆ ಅವರನ್ನು ರಕ್ಷಿಸುವ, ಪುನರ್ವಸತಿ ಒದಗಿಸುವ ಉದ್ದೇಶ ಇವರಿಗೆ ಇದ್ದಂತಿರುವುದಿಲ್ಲ. ಯಾಕೆಂದರೆ ಹಾಗೆ ಹಿಡಿದವರು ಘರವಾಲಿಯ ಹತ್ತಿರ ದುಡ್ಡು ಕಟ್ಟಿಸಿಕೊಂಡು ಮಹಿಳೆಯರನ್ನು ಬಿಟ್ಟು ಬಿಡುತ್ತಾರೆ. ಅಲ್ಲದೆ ಪೊಲೀಸರು ಹಾಗೆ ಕಾಟ ಕೊಡಬಾರದೆಂದು, ಪ್ರತಿ ತಿಂಗಳೂ ಘರವಾಲಿಗಳು ಹಫ್ತಾ ಕೊಡುತ್ತಾರ. ಆದರೂ ಪೊಲೀಸರು ಹಣಕ್ಕಾಗಿ ಹುಡುಗಿಯರನ್ನು ಬಂಧಿಸುವ ನಾಟಕ ಮಾಡುವುದನ್ನು ಬಿಡುವುದಿಲ್ಲ. ಸುಮಿತ್ರಾಳ ಗಂಡ ಅವಳು ಮನೆಯಲ್ಲಿದ್ದಾಗ, ಬೇರೆಯವಳೊಡನೆ ಹೊರಟು ಹೋಗಿದ್ದವನು, ಇವಳು ತವರಿಗೆ ಬಂದು, ತವರಿನ ಕಷ್ಟ ನೋಡಲಾಗದೇ ಮುಂಬಯಿಗೆ ಬಂದಾಗ, ಅದು ಅವನಿಗೆ ಗೊತ್ತಾಗಿ ಅವಳನ್ನು ಹುಡುಕಿಕೊಂಡು ದಂಧೆಯ ಮನೆಗೇ ಬರುತ್ತಾನೆ. ಗಂಡನೆಂಬ ಅಧಿಕಾರದಿಂದ ಘರವಾಲಿಯ ಹತ್ತಿರ ಅವಳನ್ನು ತನ್ನ ಜೊತೆಗೆ ಕಳಿಸಬೇಕೆಂದು ಜಗಳ ಮಾಡುತ್ತಾನೆ. ಘರವಾಲಿ ಕಳಿಸುವುದಿಲ್ಲ ಎಂದಾಗ, ತಾನು ಅವಳ ಗಂಡನಿದ್ದು, ತಾವು ಮೋಸ ಮಾಡಿ ಅವಳನ್ನು ತಂದಿದ್ದೀರೆಂದು ಪೊಲೀಸ್ ಕಂಪ್ಲೇಂಟ್ ಕೊಡುವುದಾಗಿ ಹೆದರಿಸಿ, ಘರವಾಲಿಯ ಕಡೆಯಿಂದ, ೬೦೦ ರೂಪಾಯಿ ತೆಗೆದುಕೊಂಡು, ಒಂದು ಹಾಳೆಯ ಮೇಲೆ ಸಹಿ ಮಾಡಿ ಬರುತ್ತಾನೆ. ಆ ೬೦೦ ರೂಪಾಯಿಗೆ ಸುಮಿತ್ರಾ ಎರಡು ವರ್ಷ ಲೈಂಗಿಕ ದಂಧೆ ಮಾಡಬೇಕಾಗುತ್ತದೆ. ಹೀಗೆ ಲೈಂಗಿಕ ದಂಧೆಯ ಹುಡುಗಿಯರನ್ನು ಅವಳಲ್ಲಿದ್ದ ಹಣವನ್ನು ಕಬಳಿಸಲು ಪೊಲೀಸರು, ಗಂಡ ಎಲ್ಲರೂ ಪ್ರಯತ್ನಿಸುತ್ತಲೇ ಇರುತ್ತಾರೆ.

ಹೀಗೆ ಲೈಂಗಿಕ ಜೀತದಿಂದ ಮುಕ್ತಗೊಂಡು, ಲೈಂಗಿಕ ದಂಧೆಯಲ್ಲಿದ್ದಾಗ, ಯಾರೂ ಇವರನ್ನು ಯಾವ ಹಂತದಲ್ಲಿಯೂ ರಕ್ಷಿಸಲಿಲ್ಲ. ಬದಲಿಗೆ ಅವರು ಈ ಮಹಿಳೆಯರು ಲೈಂಗಿಕ ಜೀತದಲ್ಲಿ, ದಂಧೆಯಲ್ಲಿ ಇರುವುದರಿಂದ ತಮಗೆಷ್ಟು ಲಾಭ ಎಂದು ಹಿಂಸಿಸುತ್ತಲೇ ನಡೆದರು. ಅಂತ ಜೀವನ ನಡೆಸಿದ ಮಹಿಳೆಯರು, ಅಲ್ಲಿಯ ಬದುಕಿನ ಯಾವುದೋ ಗಳಿಗೆಯಲ್ಲಿ ಹೊರ ಬಂದಿದ್ದಾರೆ. ಹಾಗೆ ಹೊರ ಬರಲು ಕಾರಣವಾದ ಅಂಶಗಳು ಯಾವುವು ಮತ್ತು ಪ್ರಸ್ತುತ ಅವರ ಬದುಕು ಹೇಗಿದೆ, ಎಂಬುದನ್ನು ಅವರ ಪ್ರಕರಣ ಅಧ್ಯಯನಗಳ ಹಿನ್ನೆಲೆಯಲ್ಲಿ ಮುಂದಿನ ಅಧ್ಯಾಯದಲ್ಲಿ ತಿಳಿಯಲು ಪ್ರಯತ್ನಿಸಲಾಗಿದೆ.

## ಅಧ್ಯಾಯ ಆರು

# ಲೈಂಗಿಕ ದಂಧೆಯಿಂದ ಹೊರಬಂದವರ ಪ್ರಸ್ತುತ ಬದುಕು

### ೬.೧. ಪ್ರಸ್ತಾವನೆ

ಲೈಂಗಿಕ ಜೀತಕ್ಕೆ ಒಳಗಾಗಿ ಮರಳಿ ಊರಿಗೆ ಬಂದವರ, ಲೈಂಗಿಕ ದಂಧೆ ಮಾಡಿ ಮರಳಿ ಊರಿಗೆ ಬಂದವರ, ಪೂರ್ವಸ್ಥಿತಿ ಮತ್ತು ಅವರು ಅಲ್ಲಿ ಅನುಭವಿಸಿದ ದೌರ್ಜನ್ಯವನ್ನು ಈ ಹಿಂದಿನ ಅಧ್ಯಾಯದಲ್ಲಿ ಪ್ರಕರಣ ಅಧ್ಯಯನಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಅದೇ ಮಹಿಳೆಯರು ಲೈಂಗಿಕ ಜೀತದಿಂದ, ಲೈಂಗಿಕ ದಂಧೆಯಿಂದ ಮರಳಿ ಊರಿಗೆ ಬರಲು ಕಾರಣಗಳು ಏನು ಎಂಬುದನ್ನು ಸಮಾಜಕಾರ್ಯ ಮತ್ತು ಸಮಾಜಶಾಸ್ತ್ರೀಯ ನೆಲೆಯಲ್ಲಿ ಅರ್ಥೈಸಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

### ೬.೨. ಲೈಂಗಿಕ ಜೀತ/ದಂಧೆಯಿಂದ ಹೊರ ಬರಲು ಕಾರಣಗಳು




ಮೂಲ: ಕ್ಷೇತ್ರಕಾರ್ಯದ ಮಾಹಿತಿಯಿಂದ.

ಅಧ್ಯಯನಕ್ಕೆ ಒಳಪಡಿಸಿದ ಮೂವತ್ತು ಮಹಿಳೆಯರಲ್ಲಿ ಶೇಕಡಾ ೨೦ರಷ್ಟು ಮಹಿಳೆಯರು ಕೌಟುಂಬಿಕ ಕಾರಣಗಳಿಂದಾಗಿ, ಶೇಕಡಾ ೧೭ರಷ್ಟು ಮಹಿಳೆಯರು ಪಾರ್ಟನರ್ ಸಂಬಂಧಿ, ಶೇಕಡಾ ೧೨ರಷ್ಟು ಮಹಿಳೆಯರು ಗಿರಾಕಿಗಳ ಕೊರತೆಯಿಂದಾಗಿ, ಶೇಕಡಾ ೧೦ರಷ್ಟು ಎಚ್.ಐ.ವಿ/ಏಡ್ಸ್ ತಗುಲಿ ಮತ್ತು ಶೇಕಡಾ ೫ರಷ್ಟು ಮಹಿಳೆಯರು ಎಚ್.ಐ.ವಿ ತಗುಲುವ ಅಂಜಿಕೆಯಿಂದ, ಶೇಕಡಾ ೧೦ರಷ್ಟು ಸ್ವಂತ ನಿರ್ಧಾರದಿಂದ, ಶೇಕಡಾ ೮ರಷ್ಟು ಮಹಿಳೆಯರು ಊರಲ್ಲಿಯೇ ದಂಧೆ ಮಾಡಬಹುದೆಂಬ ಭರವಸೆಯಿಂದ, ಶೇಕಡಾ ೫ರಷ್ಟು ಮಹಿಳೆಯರು ವಯಸ್ಸು ಹೆಚ್ಚಾಗಿದ್ದರಿಂದ, ಶೇಕಡಾ ೫ರಷ್ಟು ಪೊಲೀಸ್ ರೇಡ್‌ಗಳಿಗೆ ಹೆದರಿ ಮತ್ತು ಬೇಸತ್ತು, ಶೇಕಡಾ ೩ರಷ್ಟು ಮಕ್ಕಳಿಗೆ ತಿಳಿಯಬಾರದೆಂದು, ಶೇಕಡಾ ೨ರಷ್ಟು ಹೊಂದಾಣಿಕೆ ಆಗದೇ, ಶೇಕಡಾ ೨ರಷ್ಟು ಅನಾರೋಗ್ಯ ಮತ್ತು ಶೇಕಡಾ ೧ರಷ್ಟು ಮಹಿಳೆಯರು ಸಮುದಾಯದ ಕಾರ್ಯಕರ್ತರ ಪ್ರೇರಣೆಯಿಂದ ಲೈಂಗಿಕ ದಂಧೆಯನ್ನು ಬಿಟ್ಟು ಮರಳಿ ಉರಿಗೆ ಬಂದಿದ್ದಾರೆ.

**೬.೨/೧. ಕೌಟುಂಬಿಕ**

ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಲ್ಲಿ, ಶೇಕಡಾ ೨೦ರಷ್ಟು ಮಹಿಳೆಯರು ತಮ್ಮ ಕೌಟುಂಬಿಕ ಸಮಸ್ಯೆಗಳಿಂದಾಗಿ ಮರಳಿ ಊರಿಗೆ ಬಂದವರಾಗಿದ್ದಾರೆ. ತಂದೆ ಸಾವನ್ನಪ್ಪಿ, ತಾಯಿ ಒಬ್ಬಳೇ ಆದಾಗ. ಅಣ್ಣ-ತಮ್ಮಂದಿರು ಸತ್ತು ಹೋಗಿ ಮನೆಯಲ್ಲಿ ವಯಸ್ಸಾದ ತಂದೆ ತಾಯಿಯನ್ನು ನೋಡಿ ಕೊಳ್ಳಲು ಮರಳಿ ಬಂದವರಿದ್ದಾರೆ. ಕೆಲವರು ಕೇರಿಯ ಜನ ತಮ್ಮ ಮಕ್ಕಳನ್ನು ಕಳಿಸುತ್ತಿದ್ದಾಗ ಅವರನ್ನು ನೋಡಿ ಕಳಸಿದವರು, ಮುಂದೆ ಅದು ಬೇಡವೆನ್ನಿಸಿ ಮಕ್ಕಳನ್ನು ಕರೆದುಕೊಂಡು ಬಂದವರಿದ್ದಾರೆ. ಇಂತಹ ಕಾರಣಗಳಿಗಾಗಿ ಮರಳಿ ಊರಿಗೆ ಬಂದ ಕೆಲವು ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು, ಇನ್ನೂ ಮರಳಿ ಲೈಂಗಿಕ ದಂಧೆಗೆ ಹೋಗುವ ನಿರೀಕ್ಷೆಯಲ್ಲಿ ಇದ್ದಾರೆ.

**೬.೨/೨. ಪಾರ್ಟನರ್**

ರೆಡ್‌ಲೈಟ್ ಏರಿಯಾಗಳಲ್ಲಿ ದಂಧೆಯ ಮಹಿಳೆಯರನ್ನು ಶೋಷಿಸುವ ಮತ್ತೊಂದು ವರ್ಗವೆಂದರೆ ಪಾರ್ಟನರ್ ಗಳು. ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಲ್ಲಿ ಅತೀ ಹೆಚ್ಚು ಸಂಖ್ಯೆಯ ಮಹಿಳೆಯರು ತಮ್ಮ ಕೌಟುಂಬಿಕ ಕಾರಣಗಳಿಗಾಗಿ ಮರಳಿ ಬಂದಿದ್ದರೆ, ಅದರ ನಂತರ ಶೇಕಡಾ ೧೭ರಷ್ಟು ಮಹಿಳೆಯರು ಪಾರ್ಟನರ್‌ಗಳಿಗೆ ಸಂಬಂಧಿಸಿದ ಕಾರಣಗಳಿಗಾಗಿ ಮರಳಿ ಬಂದಿದ್ದಾರೆ. ಪಾರ್ಟನರ್ ಅಂದರೆ ಯುವತಿಯನ್ನು ಖಾಯಂ ಆಗಿ ಇಟ್ಟುಕೊಂಡಿರುವ ಒಬ್ಬ ಗಿರಾಕಿ. ಈತ ಅವಳ ಖರ್ಚು, ಆಗು ಹೋಗುಗಳನ್ನೆಲ್ಲ ನೋಡಿಕೊಳ್ಳುತ್ತಿರುತ್ತಾನೆ.

ಪಾರ್ಟನರ್‌ಗಳಲ್ಲಿ ಎರಡು ವಿಧ. ಒಬ್ಬ ಪಾರ್ಟನರ್. ಬೇರೆ ರಾಜ್ಯದವನಾದ್ದು(ಹೆಚ್ಚಾಗಿ ಉತ್ತರ ಪ್ರದೇಶ, ಜಾರ್ಖಂಡ್, ಬಿಹಾರ, ಮಧ್ಯ ಪ್ರದೇಶ). ಆತನಿಗೆ ಅವನ ಊರಲ್ಲಿ ಅವನದೇ ಕುಟುಂಬ ಇರುತ್ತದೆ. ಆತ ಇಲ್ಲಿಗೆ ಕೆಲಸಕ್ಕೆಂದು ವಲಸೆ ಬಂದು, ಯಾವುದೋ ಕಂಪನಿಯಲ್ಲಿ ಕಾರ್ಮಿಕನಾಗಿ ದುಡಿಯುತ್ತಿರುತ್ತಾನೆ. ಆತನಿಗೆ ಸಿಗುವ ಸಂಬಳದಲ್ಲಿ ಆತನು ತನ್ನ ಕುಟುಂಬವನ್ನು ಕರೆದು ತಂದು,

ಅಧ್ಯಯನಕ್ಕೆ ಒಳಪಡಿಸಿದ ಮೂವತ್ತು ಮಹಿಳೆಯರಲ್ಲಿ ಶೇಕಡಾ ೨೦ರಷ್ಟು ಮಹಿಳೆಯರು ಕೌಟುಂಬಿಕ ಕಾರಣಗಳಿಂದಾಗಿ, ಶೇಕಡಾ ೧೭ರಷ್ಟು ಮಹಿಳೆಯರು ಪಾರ್ಟನರ್ ಸಂಬಂಧಿ, ಶೇಕಡಾ ೧೩ರಷ್ಟು ಮಹಿಳೆಯರು ಗಿರಾಕಿಗಳ ಕೊರತೆಯಿಂದಾಗಿ, ಶೇಕಡಾ ೧೦ರಷ್ಟು ಎಚ್.ಐ.ವಿ/ಏಡ್ಸ್ ತಗುಲಿ ಮತ್ತು ಶೇಕಡಾ ೫ರಷ್ಟು ಮಹಿಳೆಯರು ಎಚ್.ಐ.ವಿ ತಗುಲುವ ಅಂಜಿಕೆಯಿಂದ, ಶೇಕಡಾ ೧೦ರಷ್ಟು ಸ್ವಂತ ನಿರ್ಧಾರದಿಂದ, ಶೇಕಡಾ ೮ರಷ್ಟು ಮಹಿಳೆಯರು ಊರಲ್ಲಿಯೇ ದಂಧೆ ಮಾಡಬಹುದೆಂಬ ಭರವಸೆಯಿಂದ, ಶೇಕಡಾ ೫ರಷ್ಟು ಮಹಿಳೆಯರು ವಯಸ್ಸು ಹೆಚ್ಚಾಗಿದ್ದರಿಂದ, ಶೇಕಡಾ ೫ರಷ್ಟು ಪೊಲೀಸ್ ರೇಡ್‌ಗಳಿಗೆ ಹೆದರಿ ಮತ್ತು ಬೇಸತ್ತು, ಶೇಕಡಾ ೩ರಷ್ಟು ಮಕ್ಕಳಿಗೆ ತಿಳಿಯಬಾರದೆಂದು, ಶೇಕಡಾ ೨ರಷ್ಟು ಹೊಂದಾಣಿಕೆ ಆಗದೇ, ಶೇಕಡಾ ೨ರಷ್ಟು ಅನಾರೋಗ್ಯ ಮತ್ತು ಶೇಕಡಾ ೧ರಷ್ಟು ಮಹಿಳೆಯರು ಸಮುದಾಯದ ಕಾರ್ಯಕರ್ತರ ಪ್ರೇರಣೆಯಿಂದ ಲೈಂಗಿಕ ದಂಧೆಯನ್ನು ಬಿಟ್ಟು ಮರಳಿ ಉರಿಗೆ ಬಂದಿದ್ದಾರೆ.

**೬.೨/೧. ಕೌಟುಂಬಿಕ**

ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಲ್ಲಿ, ಶೇಕಡಾ ೨೦ರಷ್ಟು ಮಹಿಳೆಯರು ತಮ್ಮ ಕೌಟುಂಬಿಕ ಸಮಸ್ಯೆಗಳಿಂದಾಗಿ ಮರಳಿ ಊರಿಗೆ ಬಂದವರಾಗಿದ್ದಾರೆ. ತಂದೆ ಸಾವನ್ನಪ್ಪಿ, ತಾಯಿ ಒಬ್ಬಳೇ ಆದಾಗ. ಅಣ್ಣ-ತಮ್ಮಂದಿರು ಸತ್ತು ಹೋಗಿ ಮನೆಯಲ್ಲಿ ವಯಸ್ಸಾದ ತಂದೆ ತಾಯಿಯನ್ನು ನೋಡಿ ಕೊಳ್ಳಲು ಮರಳಿ ಬಂದವರಿದ್ದಾರೆ. ಕೆಲವರು ಕೇರಿಯ ಜನ ತಮ್ಮ ಮಕ್ಕಳನ್ನು ಕಳಿಸುತ್ತಿದ್ದಾಗ ಅವರನ್ನು ನೋಡಿ ಕಳಸಿದವರು, ಮುಂದೆ ಅದು ಬೇಡವೆನ್ನಿಸಿ ಮಕ್ಕಳನ್ನು ಕರೆದುಕೊಂಡು ಬಂದವರಿದ್ದಾರೆ. ಇಂತಹ ಕಾರಣಗಳಿಗಾಗಿ ಮರಳಿ ಊರಿಗೆ ಬಂದ ಕೆಲವು ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು, ಇನ್ನೂ ಮರಳಿ ಲೈಂಗಿಕ ದಂಧೆಗೆ ಹೋಗುವ ನಿರೀಕ್ಷೆಯಲ್ಲಿ ಇದ್ದಾರೆ.

**೬.೨/೨. ಪಾರ್ಟನರ್**

ರೆಡ್‌ಲೈಟ್ ಏರಿಯಾಗಳಲ್ಲಿ ದಂಧೆಯ ಮಹಿಳೆಯರನ್ನು ಶೋಷಿಸುವ ಮತ್ತೊಂದು ವರ್ಗವೆಂದರೆ ಪಾರ್ಟನರ್ ಗಳು. ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರಲ್ಲಿ ಅತೀ ಹೆಚ್ಚು ಸಂಖ್ಯೆಯ ಮಹಿಳೆಯರು ತಮ್ಮ ಕೌಟುಂಬಿಕ ಕಾರಣಗಳಿಗಾಗಿ ಮರಳಿ ಬಂದಿದ್ದರೆ, ಅದರ ನಂತರ ಶೇಕಡಾ ೧೭ರಷ್ಟು ಮಹಿಳೆಯರು ಪಾರ್ಟನರ್‌ಗಳಿಗೆ ಸಂಬಂಧಿಸಿದ ಕಾರಣಗಳಿಗಾಗಿ ಮರಳಿ ಬಂದಿದ್ದಾರೆ. ಪಾರ್ಟನರ್ ಅಂದರೆ ಯುವತಿಯನ್ನು ಖಾಯಂ ಆಗಿ ಇಟ್ಟುಕೊಂಡಿರುವ ಒಬ್ಬ ಗಿರಾಕಿ. ಈತ ಅವಳ ಖರ್ಚು, ಆಗು ಹೋಗುಗಳನ್ನೆಲ್ಲ ನೋಡಿಕೊಳ್ಳುತ್ತಿರುತ್ತಾನೆ.

ಪಾರ್ಟನರ್‌ಗಳಲ್ಲಿ ಎರಡು ವಿಧ. ಒಬ್ಬ ಪಾರ್ಟನರ್, ಬೇರೆ ರಾಜ್ಯದವನಾಗಿದ್ದು(ಹೆಚ್ಚಾಗಿ ಉತ್ತರ ಪ್ರದೇಶ, ಜಾರ್ಖಂಡ್, ಬಿಹಾರ, ಮಧ್ಯ ಪ್ರದೇಶ). ಆತನಿಗೆ ಅವನ ಊರಲ್ಲಿ ಅವನದೇ ಕುಟುಂಬ ಇರುತ್ತದೆ. ಆತ ಇಲ್ಲಿಗೆ ಕೆಲಸಕ್ಕೆಂದು ವಲಸೆ ಬಂದು, ಯಾವುದೋ ಕಂಪನಿಯಲ್ಲಿ ಕಾರ್ಮಿಕನಾಗಿ ದುಡಿಯುತ್ತಿರುತ್ತಾನೆ. ಆತನಿಗೆ ಸಿಗುವ ಸಂಬಳದಲ್ಲಿ ಆತನು ತನ್ನ ಕುಟುಂಬವನ್ನು ಕರೆದು ತಂದು,

ಪೋಷಿಸಲು ಆತನಿಗೆ ಸಾಧ್ಯವಿರುವುದಿಲ್ಲ. ಆತನೊಬ್ಬನಿಗೇ ಒಂದೇ ರೂಮಿನ ಮನೆ ಮಾಡಿಕೊಳ್ಳುವಷ್ಟು ಅವರಲ್ಲಿ ಆರ್ಥಿಕ ಶಕ್ತಿ ಇರುವುದಿಲ್ಲ. ಇಂತವರು ೫-೬ ಜನ ಸೇರಿ ಒಂದು ಗುಡಿಸಲನ್ನು ಬಾಡಿಗೆಗೆ ಹಿಡಿದು ಅಲ್ಲಿಯೇ ವಾಸಿಸುತ್ತಿರುತ್ತಾರೆ. ಅದಕ್ಕೆ ೧೦-೨೦ ಸಾವಿರ ಬಾಡಿಗೆ ಮತ್ತು ಕಡಿಮೆ ಅಂದರೂ ೫೦ ಸಾವಿರ ಡೆಪಾಸಿಟ್ ಇಡಬೇಕು. ಇದನ್ನೂ ಮಾಡಲು ಸಾಧ್ಯವಿಲ್ಲದವರು, ಲೈಂಗಿಕ ದಂಧೆ ಮಾಡುವ ಹುಡುಗಿಯರೊಂದಿಗೆ ಸ್ನೇಹ ಬೆಳಸಿಕೊಂಡು ಒಂದು ದಂಧೆಯ ಮನೆ(ಒಂದು ಸಿಂಗಲ್ ಕಾಟನಷ್ಟು ಅಳತೆಯ)ಯನ್ನು ಬಾಡಿಗೆ ಹಿಡಿದು ಅವಳೊಂದಿಗೆ ವಾಸ ಮಾಡುತ್ತಾನೆ. ಅವನಿಗೆ ಇರಲು ಮನೆಯೂ ಆಯಿತು, ಜೊತೆಗೆ ಲೈಂಗಿಕ ಸುಖ ನೀಡಲು ಸಂಗಾತಿಯೂ ಆದಳು. ಇಂತವರು ಯುವತಿಯರ ಹಳೆಯ ಗಿರಾಕಿಗಳಾಗಿದ್ದು, ಖಾಯಂ ಆಗಿ ಅವಳ ಹತ್ತಿರವೇ ಹೋಗುತ್ತಿರುತ್ತಾರೆ. ಅವಳ ಮನೆಯ ಬಾಡಿಗೆ, ರೇಶನ್‌ನ್ನು ಆವರೇ ತಂದು ಕೊಡುತ್ತಾರೆ. ಇಂತ ಪಾರ್ಟನರ್‌ಗಳು ಅವಳು ದಂಧೆ ಮಾಡುವುದನ್ನು ಇಷ್ಟ ಪಡುವುದಿಲ್ಲ. ಇಂತವರು ಬಹಳ ಕಡಿಮೆ ಮತ್ತು ಇಂಥವರಿಂದ ಹುಡುಗಿಯರಿಗೆ ಸಮಸ್ಯೆಯೂ ಕಡಿಮೆ.

ಎರಡನೆಯ ವಿಧದ ಪಾರ್ಟನರ್‌ಗಳು, ಮುಂಬಯಿಯಲ್ಲಿಯೇ ಹುಟ್ಟಿ ಮುಂಬಯಿಯಲ್ಲಿಯೇ ಬೆಳೆದವರಾಗಿರುತ್ತಾರೆ. ಇವರು ನೋಡಲು ಚೆನ್ನಾಗಿದ್ದು, ಫ್ಯಾಶನೇಬಲ್ ಆಗಿರುತ್ತಾರೆ. ೧೯-೨೦ ವರ್ಷದ ಹುಡುಗಿಯರು ಇವರ ಮಾತುಗಳಿಗೆ ಮರುಳಾಗಿ, ಪ್ರೀತಿ ಪ್ರೇಮ ಎಂದು ಬೆನ್ನುಹತ್ತುತ್ತಾರೆ. ಆತ ಇವಳನ್ನು ಮದುವೆಯಾಗುವುದಾಗಿ ನಂಬಿಸಿ, ಅವಳು ಕೂಡಿಟ್ಟಿರುವ ಹಣವನ್ನೆಲ್ಲ, ಹಾಳು ಮಾಡಿ, ಆಕೆಗೊಂದು ಕೂಸು ಕೊಟ್ಟು, ಹೋದವನು ಬರುವುದೇ ಇಲ್ಲ. ಆಕೆ ಮತ್ತೆ ಅದೇ ಹಳೆಯ ದಂಧೆಯ ಮನೆಯ ಬಾಗಿಲಿಗೆ ಬಂದು ನಿಲ್ಲುತ್ತಾಳೆ.

ಮೂರನೇಯ ವಿಧದ ಪಾರ್ಟನರ್‌ಗಳು ಇವರೂ ಮುಂಬಯಿಯಲ್ಲಿಯೇ ಬೆಳೆದು ದೊಡ್ಡವರಾಗಿ ರುತ್ತಾರೆ. ಇವರಲ್ಲಿ ದಂಧೆಯ ಮಹಿಳೆಯರ ಮಕ್ಕಳು, ಘರವಾಲಿಗಳ ಮಕ್ಕಳು, ಅನಾಥ ಮಕ್ಕಳು ಸೇರಿರುತ್ತಾರೆ. ಇವರ ತಾಯಿ ಇವರನ್ನು ಹೆತ್ತು ಸತ್ತು ಹೋದಾಗ, ಗಲ್ಲಿಯಲ್ಲಿ ಅವರಿವರ ಕೆಲಸ ಮಾಡಿ, ಸಿಕ್ಕಿದ್ದನ್ನು ತಿನ್ನುತ್ತಾ ಬೆಳೆದ ಮಕ್ಕಳು ಈ ವಿಧದ ಪಾರ್ಟನರ್‌ಗಳಾಗಿರುತ್ತಾರೆ. ಇವರು ತಮ್ಮ ೭-೮ ವರ್ಷಕ್ಕೆ ಕಳ್ಳತನ, ಕೆಟ್ಟ ಚಟಗಳನ್ನು ಕಲಿತಿರುತ್ತಾರೆ. ಇವರ ಜೊತೆಗೆ ಹಳ್ಳಿಗಳಿಂದ, ಬೇರೆ ರಾಜ್ಯಗಳಿಂದ, ಅನಾಥರಾದ, ಬಡವರ ಮನೆಯ ಗಂಡುಮಕ್ಕಳನ್ನು ಕದ್ದು ತಂದು ಸ್ಲಂಗಳಲ್ಲಿ ಮಾರಾಟ ಮಾಡಿದ ಹುಡುಗರೂ ಸೇರಿಕೊಂಡಿರುತ್ತಾರೆ. ಸ್ಲಂಗಳಲ್ಲಿ ನಡೆಯುವ ಉದ್ಯಮಗಳಿಗೆ ಇಂತ ಮಕ್ಕಳು ಬಾಲಕಾರ್ಮಿಕರಾಗಿ ದುಡಿಯುತ್ತಾ, ೧೦-೧೫ ವರ್ಷ ಬಂಧನದಲ್ಲಿಯೇ ಕಾಲ ಕಳೆದಿರುತ್ತಾರೆ. ಇಂತ ಮಕ್ಕಳು ಅಲ್ಲಿಂದ ತಪ್ಪಿಸಿಕೊಂಡು ಬರುವ ದಾರಿಯನ್ನೇ ಹುಡುಕುವ ಸಂದರ್ಭ ದಲ್ಲಿ, ಅವರನ್ನು ಬಹು ಬೇಗ ಆಕರ್ಷಿಸುವುದೆಂದರೆ ರೆಡ್‌ಲೈಟ್ ಏರಿಯಾ. ಕೈಯಲ್ಲಿ ಇಷ್ಟ ಅಲ್ಪ ಸ್ವಲ್ಪ ಹಣ ಖರ್ಚು ಮಾಡಿ ಲೈಂಗಿಕ ದಂಧೆಯ ಹುಡುಗಿಯರ ಸಹವಾಸ ಮಾಡಿರುತ್ತಾರೆ. ಅದರೆ ದುಡ್ಡಿದ್ದರೆ ಮಾತ್ರ ಅವಳ ಹತ್ತಿರ ಜಾಗ ಎಂದು ಅರ್ಥವಾದಾಗ, ಚಿಕ್ಕ ಪುಟ್ಟ ಕೆಲಸ, ಅದು

ಸಿಗದಿದ್ದರೆ ಕಳ್ಳತನ, ಏನು ಸಿಕ್ಕರೂ ಮಾಡಲು ತಯಾರಾಗಿರುತ್ತಾರೆ. ಜೊತೆಗೆ ಕುಡಿತ, ಮಾದಕ ದ್ರವ್ಯಗಳ ಚಟ ಇವರಿಗೆ ಹಣಕ್ಕಾಗಿ ಹುಚ್ಚರನ್ನಾಗಿ ಮಾಡಿರುತ್ತವೆ. ಇಂಥವರು ದಂಧೆಯ ಮನೆಯ ಹುಡುಗಿಯರನ್ನು ಪ್ರೀತಿಸಿ, ಅಲ್ಲಿಂದ ಹೊರತರುತ್ತಾರೆ. ಅವರನ್ನು ಮದುವೆಯಾಗಿ ಅಥವಾ ಹಾಗೆಯೇ ಖಾಯಂ ಪಾರ್ಟನರ್‌ಗಳಾಗುತ್ತಾರೆ. ಇವರು ಅವಳಿಗೆ ಎರಡು ದಿನ ದುಡಿದು ತಂದು ಹಾಕುವ ಹೊತ್ತಿಗೆ ಎಲ್ಲವೂ ಅವಳಿಗೆ ಅರ್ಥವಾಗಿರುತ್ತದೆ. ಅವಳ ಲೈಂಗಿಕ ದಂಧೆ ಇಂತವರನ್ನು ಇಟ್ಟುಕೊಂಡೇ ಮುಂದುವರೆಯುತ್ತದೆ. ಆಕೆಗೆ ಈತ ಗಿರಾಕಿಗಳನ್ನು ತಂದುಕೊಡುವ ಪಿಂಪ್(ತಲೆಹಿಡುಕ)ನಾಗುತ್ತಾನೆ. ಹೆಂಡತಿಯನ್ನು ಇವರು ಹಣ ತಂದು ಕೊಡುವ ಮಶೀನ್(ಕ್ವಿಕ್ & ಈಸೀ ಮನಿ ಮಶಿನ್) ಎಂದು ಕರೆಯುತ್ತಾರೆ. ಇವರು ಇಟ್ಟುಕೊಂಡ ಹೆಂಡತಿ ಕೆಲಸ ದಂಧೆ ಮಾಡದೇ ಹೋದರೆ ಆಕೆಯನ್ನು ಹೊಡೆಯುವುದು ಹಿಂಸಿಸುವುದು ಮಾಡುತ್ತಾರೆ. ಒಂದೊಂದು ಸಾರೆ ಅವಳೊಡನೆ ತಾವು ಸಂಬಂಧ ಮಾಡಬೇಕೆಂದೆನಿಸಿದ ಸಮಯದಲ್ಲಿ ಅವಳು ಯಾರೋ ಗಿರಾಕಿಗಳೊಡನೆ ಇದ್ದರೆ, ಆಗಲೂ ಇವರು ಅವಳನ್ನು ಹೊಡೆಯುತ್ತಾರೆ.

ನಾಲ್ಕನೇಯ ವಿಧದ ಪಾರ್ಟನರ್‌ಗಳು ಊರ ಕಡೆಯ ಗುಂಡಾಗಳಾಗಿದ್ದು, ಚೆನ್ನಾಗಿರೋ ಹುಡುಗಿಯರು ಸಿಕ್ಕರೆ ಅವರನ್ನು ಊರ ಕಡೆಗೆ ಕರೆದುಕೊಂಡು ಬಂದು ಅವರನ್ನು ಖಾಯಂ ಆಗಿ ಇಟ್ಟುಕೊಳ್ಳುತ್ತಾರೆ. ಈ ರೀತಿಯ ಪಾರ್ಟನರ್‌ಗಳಿಂದಾಗಿ ಮಹಿಳೆಯರು ದಂಧೆ ಬಿಟ್ಟು ಊರು ಸೇರಿಕೊಂಡಿದ್ದಾರೆ. ಹುಡುಗಿಯರ ಈ ರೀತಿಯ ಸ್ವಭಾವದ ಕುರಿತು, ೬೫ ವರ್ಷದ ಮುಧೋಳದ ಘರವಾಲಿ ಮಹಿಳೆಯೊಬ್ಬರು ಹೇಳುವಂತೆ, *"ಕರ್ನಾಟಕದ ಹುಡುಗಿಯರಿಗೆ ಪ್ರೀತಿ ಪ್ರೇಮದ ಹುಚ್ಚು ಜಾಸ್ತಿ. ಗಳಸಾಕ ಬಂದವರು ಗಳಸೋದ ಬಿಟ್ಟು ಗರತೇರಾಗಾಕ ಹೊಕ್ಕಾರ. ದಂಧಾದ ಗಲ್ಸ್ಯಾಗ ಎಂದರ ಗಂಡ ಸಿಗಾಕ ಸಾಧ್ಯ ಐತಿ. ಅಂವಾ ದುಡಿಲಾರದ ಲಫಂಗ ಇರ್ತಾನ. ನಾಕ ದಿನಾ ಈಕಿಗೆ ಕೊಟ್ಟಂಗ ಮಾಡಿ, ಆಮ್ಯಾಲೆ ಅವನ ಗಿರಾಕಿ ತರಾಕ ಚಾಲು ಮಾಡ್ತಾನ. ಮುಂದ ಇಕಿ ಗಳಿಸಿದ್ದಕ್ಕ ಅವನ ಮಾಲೀಕ. ಇಕೀ ಅವಾ ಹೇಳಿದಂಗ ಕೇಳದಿದ್ದರ ಹೊಡಿಯೂದು, ಬೈಯೂದು ಮಾಡ್ತಾನ. ಒಂದೊಂದು ಸಾರ್ತಿ ಜೀವ ಉಳಿಸಿಕೊಳ್ಳಾಕ ಎಲ್ಲೆಲ್ಲಿರ ಹೋಗಿ ಅಡಗಿಕೊಂತಾವ್ರ"*. ಈ ರೀತಿ ಹುಡುಗಿಯರು ಪಾರ್ಟನರ್‌ಗಳ ಬೆನ್ನು ಹತ್ತಿ ದುಸ್ಥಿತಿಗೆ ಬಂದವರ ಕುರಿತು ಅವರು ಮಾತನಾಡುತ್ತಾರೆ.

**೬.೨/೩. ಗಿರಾಕಿಗಳ ಕೊರತೆ**

ಅಧ್ಯಯನಕ್ಕೆ ಒಳಗಾದ ಒಟ್ಟು ಪ್ರಕರಣಗಳ ಅಧ್ಯಯನಗಳಲ್ಲಿ ಶೇಕಡಾ ೧೦ರಷ್ಟು ಮಹಿಳೆಯರು ಗಿರಾಕಿಗಳ ಕೊರತೆಯಿಂದ ಮರಳಿ ಊರಿಗೆ ಬಂದಿರುವುದಾಗಿ ತಿಳಿಸಿದರು. ಜಮಖಂಡಿಯ ಶಶಿಕಲಾಳ ಕುಟುಂಬದಲ್ಲಿ ೮ ಮಂದಿ ಹೆಣ್ಣುಮಕ್ಕಳು. ಮೂವರನ್ನು ಮದುವೆ ಮಾಡಿ ಕೊಡಲಾಗಿದೆ. ಇವಳನ್ನು ಸೇರಿಸಿ ಐವರನ್ನು ದೇವದಾಸಿ ಮಾಡಿ ಕೊಡಲಾಗಿತ್ತು. ಈ ಐವರೂ ಅಕ್ಕ ತಂಗಿಯರನ್ನೂ ಪುಣೆಯ ಶುಕ್ರವಾರ ಪೇಟೆಯ ದಾನಕ್ಕಿಯಲ್ಲಿ ಲೈಂಗಿಕ ದಂಧೆಗಾಗಿ ಇಟ್ಟಿದ್ದರು. ಮೊದಲು ಹೋಗಿದ್ದ ಶಶಿಕಲಾಳ ಅಕ್ಕ, ನಾಲ್ಕೂ ತಂಗಿಯರು ದಂಧೆಗೆ ಬರುತ್ತಲೇ, ತಾನೆ ಒಂದು ದೊಡ್ಡ ಮನೆಯನ್ನು

ಬಾಡಿಗೆ ಹಿಡಿದು, ತಂಗಿಯರನ್ನು ಮತ್ತು ಜೊತೆಗೆ ೧೦-೧೨ ಹುಡುಗಿಯರನ್ನು ಇಟ್ಟುಕೊಂಡು ದಂಧೆ ನಡೆಸತೊಡಗಿದ್ದಳು. ಆದರೆ ಈಗ ಶಶಿಕಲಾಳನ್ನು ಬಿಟ್ಟು ಉಳಿದ ನಾಲ್ವರೂ ಎಚ್.ಐ.ವಿ. ಯಿಂದ ಸತ್ತು ಹೋಗಿದ್ದಾರೆ. ಇದರಿಂದ ಹುಡುಗಿಯರು ಬರುವುದು ಕಡಿಮೆಯಾಗಿದೆ. ೧೦-೨೦ ಹುಡುಗಿಯರು ಇರುವ ಮನೆಯಲ್ಲಿ ೩-೪ ಹುಡುಗಿಯರು ಇದ್ದರು. ಹುಡುಗಿಯರು ಕಡಿಮೆಯಾದಂತೆ ಗಿರಾಕಿಗಳೂ ಕಡಿಮೆಯಾಗಿದ್ದರು. ಇದರಿಂದ ಆದಾಯ ಕಡಿಮೆಯಾಗಿ, ಬಾಡಿಗೆ ಕೊಡುವುದು, ಪೊಲೀಸರಿಗೆ ಹಫ್ತಾ ಕೊಡುವುದು ಅಸಾಧ್ಯವಾಗತೊಡಗಿತು. ಹಾಗಾಗಿ ಅಲ್ಲಿಂದ ಮರಳಿ ಊರಿಗೆ ಬಂದಿದ್ದಾಳೆ. ಘರವಾಲಿಗಳ ಸ್ಥಿತಿ ಹೀಗಾಗಿದ್ದರೆ, ವಯಸ್ಸು ಅಪ್ರಾಪ್ತವಾಗಿದ್ದಾಗ ಗಿರಾಕಿಗಳು ಇದ್ದರು. ಈಗ ನೇಪಾಳ, ಬಾಂಗ್ಲಾ ದೇಶ ಮತ್ತು ಕಲ್ಕತ್ತಾದಿಂದ ಬಹಳ ಚಿಕ್ಕ ವಯಸ್ಸಿನ ಹುಡುಗಿಯರು ಬರುತ್ತಿದ್ದಾರೆ. ಹಾಗಾಗಿ ಇವರನ್ನು ಕೇಳುವವರು ಕಡಿಮೆಯಾಗಿ, ಅಲ್ಲಿ ಇದ್ದು ಏನು ಮಾಡುವುದು ಅಂದುಕೊಂಡು ತಿರುಗಿ ಬಂದಿದ್ದಾರೆ.

ಬಿಜಾಪೂರ ತಾಲೂಕಿನ ಸುಶೀಲಾಳನ್ನು ಅವಳ ತಂದೆ, ಕುಟುಂಬದ ಬಡತನಕ್ಕಾಗಿ ಕಾಮಾಟಿ ಪೂರದ ಘರವಾಲಿಯಿಂದ ೨೦,೦೦೦ ಸಾವಿರ ರೂಪಾಯಿ ಸಾಲ ತೆಗೆದುಕೊಂಡು ಲೈಂಗಿಕ ಜೀತಕ್ಕೆ ಬಿಟ್ಟು ಬಂದಿದ್ದರು. ಸುಶೀಲಾ ಮೊದಮೊದಲು ಸ್ವಲ್ಪ ದಿನ ದಂಧೆ ಮಾಡಿದಳು. ಘರವಾಲಿ ಇವಳಿಗೆ ಮಾಡಿದ ಮೋಸದಿಂದಾಗಿ ೫-೬ ವರ್ಷ ದಂಧೆ ಮಾಡಿದರೂ ಇವಳ ಮೇಲಿನ ಸಾಲ ಮುಗಿಯಲಿಲ್ಲ. ಬದಲಿಗೆ ಊಟ, ಚಹಾ, ಸರಾಯಿ ಎಂದು ದಿನವೂ ಲೆಕ್ಕ ಏರುತ್ತಿತ್ತು. ಸುಶೀಲಾ ವಯಸ್ಸಿನಲ್ಲಿ ಚಿಕ್ಕವಳಿದ್ದರೂ ನೋಡಲು ಅಂಥ ಆಕರ್ಷಣೆಯವಳಲ್ಲ. ಹಾಗಾಗಿ ಗಿರಾಕಿಗಳೂ ಕಡಿಮೆಯೇ ಇದ್ದವು. ಇವಳ ಜೊತೆಗಿದ್ದ ಅದೇ ಊರಿನ ಮಹಿಳೆಯರು, *'ಈಕೆಗೂ ದಂಧೆ ಮಾಡಬೇಕೆಂದು ಆಸಕ್ತಿ ಇರಲಿಲ್ಲ. ಒಬ್ಬನ್ನ ಗೆಳೆಯನ್ನ ಮಾಡಕೊಂಡಿದ್ದಳು. ದಂಧೆ ಮಾಡೋದು ಬಿಟ್ಟು ಅವನ ಜೊತೆ ತಿರುಗಾಡಲು ಹೋಗುತ್ತಿದ್ದಳು. ಅವನ ಜೊತೆ ಚಹಾ ಕುಡಿಯೋದು, ದಾರು ಕುಡಿಯೋದು ಮಾಡ್ಕೋತ ಇರ್ತಿದ್ದಳು. ಗಿರಾಕಿಗಳು ಇಕಿ ತನ್ನ ಗೆಳೆಯನ ಜೊತೆಗೆ ಇರೋದನ್ನು ನೋಡಿ ಇವಳ ಹತ್ತಿರ ಬರುತ್ತಲೇ ಇರಲಿಲ್ಲ'* ಎಂದು ಹೇಳುತ್ತಾರೆ. ಹೀಗಾಗಿ ಸುಶೀಲಾಳ ಸಾಲ ಏರುತ್ತಲೇ ಹೋಯಿತು. ಅದು ಮನೆಯವರಿಗೆ ಗೊತ್ತಾಗಿ, ತಮ್ಮ ಮನೆಯ ಎರಡು ಗಂಡು ಮಕ್ಕಳನ್ನು ಜೀತಕ್ಕಿಟ್ಟು ಹಣ ತಂದು, ಅದನ್ನೇ ಘರವಾಲಿಗೆ ಕೊಟ್ಟು ಸುಶೀಲವ್ವಳನ್ನು ಬಿಡಿಸಿಕೊಂಡು ಹೋಗುತ್ತಾರೆ.

ಸುಂದರಿ ಪ್ರಕರಣದಲ್ಲಿ ಅವಳಿಗೆ ೩೫-೩೬ ವರ್ಷದವರೆಗೂ ದಂಧೆ ಮಾಡಲು ನಿಂತು ಬಂದವಳಾಗಿದ್ದಾಳೆ. ಆದರೆ ಇವಳಿಗೆ ವಯಸ್ಸಾಗಿದ್ದರಿಂದ ಬಂದ ಗಿರಾಕಿಗಳು, ಆಂಟಿ, ಮಾಂಸಿ ಎಂದು ಕರೆಯುತ್ತಿದ್ದರೆಂದು ಸುಂದರಿ ಹೇಳುತ್ತಾಳೆ. ಇವಳ ದೈಹಿಕ ಆಕರ್ಷಣೆ ಕಳೆದುಹೋಗಿತ್ತು. ಹಾಗಾಗಿ ಯಾವ ಗಿರಾಕಿಗಳೂ ಇವಳನ್ನು ಹುಡುಕಿಕೊಂಡು ಬರಲಿಲ್ಲ.

**೬.೨/೪. ಸ್ವಂತ ನಿರ್ಧಾರ**

ಲೈಂಗಿಕ ದಂಧೆಗೆ ಹೋದವರಲ್ಲಿ ಕೆಲವು ಮಹಿಳೆಯರು, ಮನೆಯ ಜನರ ಒತ್ತಾಯವಿಲ್ಲದೇ, ಊರಲ್ಲಿ ದಂಧೆಗೆ ಹೋಗುವ ಮಹಿಳೆಯರನ್ನು ಕಂಡು ಹೋದವರಿದ್ದಾರೆ. ಅವರಿಗೆ ಮೊದ

ಮೊದಲು ಚೆನ್ನಾಗಿಯೆ ಅನ್ನಿಸಿದ್ದು, ನಂತರ ಅದು ಹಿಂಸೆ ಅನ್ನಿಸಲಾರಂಭಿಸಿ, ಇಷ್ಟವಾಗದೇ ಹೊರಗೆ ಬಂದಿದ್ದಾರೆ. ಒಬ್ಬಳು ಯುವತಿ ಹೇಳುವಂತೆ, ಬೆಳಗ್ಗೆ, ಸಂಜೆ, ರಾತ್ರಿ ಯಾವಗಲೂ ಅದೇ ಕೆಲಸ ಮಾಡುತ್ತಿರುವುದು ಮಾನಸಿಕವಾಗಿ ಬಹಳ ಕಿರಿ ಕಿರಿ ಅನ್ನಿಸಿ ಮರಳಿ ಬಂದಿದ್ದಾಳೆ. ಹೀಗೆ ಮರಳಿ ಬಂದವರ ಮನೆಯಲ್ಲಿ ಇವರ ಮೇಲೆ ಯಾವುದೇ ಒತ್ತಡ ಇರಲಿಲ್ಲ. ಅಲ್ಲದೇ ಇವರ ಮೇಲೆ ಯಾವುದೇ ಸಾಲಗಳು ಇರಲಿಲ್ಲ. ಇವರು ಮರಳಿ ಬರುವುದನ್ನು ತಂದೆ ತಾಯಿ ನಿರೀಕ್ಷೆ ಮಾಡುತ್ತಿದ್ದರು ಎಂದು ಇವರು ಹೇಳುತ್ತಾರೆ. ಹಾಗೆಯೇ ಶೇಕಡಾ ೨ರಷ್ಟು ಮಹಿಳೆಯರಿಗೆ ಇವೆ ಕಾರಣಗಳಿಗಾಗಿ ಹೊಂದಾಣಿಕೆ ಆಗದೇ ಮರಳಿ ಬಂದಿದ್ದಾರೆ.

**೬.೨/೫. ಎಚ್.ಐ.ವಿ. ಸೋಂಕು**

ಅಧ್ಯಯನಕ್ಕೆ ಒಳಪಟ್ಟ ಶೇಕಡಾ ೧೦ರಷ್ಟು ಮಹಿಳೆಯರಿಗೆ ಎಚ್.ಐ.ವಿ. ಸೋಂಕು ತಗುಲಿದೆ. ಹಾಗಾಗಿ ಮರಳಿ ಊರಿಗೆ ಬಂದಿದ್ದಾರೆ. ಶೇಕಡಾ ೫ರಷ್ಟು ಮಹಿಳೆಯರು ದಂಧೆಯ ಗಲ್ಲಿಯಲ್ಲಿ ಎಚ್.ಐ.ವಿ. ಸೋಂಕಿನಿಂದಾಗಿ ಹುಡುಗಿಯರು ಸತ್ತಿದ್ದನ್ನು ಈಗಲೂ ಸಾಯುವುದನ್ನು ನೋಡಿ ಹೆದರಿಕೆಯಿಂದ ಮರಳಿ ಊರಿಗೆ ಬಂದಿದ್ದಾರೆ.

**೬.೨/೬ ಊರಲ್ಲಿಯೇ ದಂಧೆ**

ಮುಂಬಯಿಯ ಕಾಮಾಟಿಪುರದಲ್ಲಿ ಕ್ಷೇತ್ರಕಾರ್ಯ ಮಾಡುತ್ತಿದ್ದಾಗ, ಒಂದಿಷ್ಟು ಮಹಿಳೆಯರು ಮತ್ತು ಘರವಾಲಿಗಳು, 'ಮುಂಬಯಲಿ ಕನ್ನಡದ ಹುಡುಗಿಯರು ಕಡಿಮೆಯಾಗುತ್ತಿದ್ದಾರೆ, ಅದಕ್ಕೆ ಅವರು ಊರಿನತ್ತ ಮುಖ ಮಾಡಿರುವುದೂ ಒಂದು ಕಾರಣ' ಎಂದು ಹೇಳಿದ್ದರು. 'ಇಲ್ಲಿಂದ ಹೋಗಿರುವ ಹುಡುಗಿಯರು, ತಮ್ಮ ಸುತ್ತ ಮುತ್ತಲಿನ ಪಟ್ಟಣಗಳಲ್ಲಿ ಮುಂಬಯಿ ಮಾದರಿಯಲ್ಲಿಯೇ ದಂಧೆ ಮಾಡಲು ಪ್ರಾರಂಭಿಸಿದ್ದಾರೆ' ಅಂತಲೂ ಹೇಳಿದ್ದರು. ಅಧ್ಯಯನಕ್ಕೆ ಒಳಪಟ್ಟ ಶೇಕಡಾ ೮ರಷ್ಟು ಮಹಿಳೆಯರು, ಊರಲ್ಲಿಯೇ ದಂಧೆ ಮಾಡಬೇಕೆಂದು ಬಂದವರಾಗಿದ್ದಾರೆ. ಬಿಜಾಪೂರ ಬಸವನಬಾಗೇವಾಡಿ ತಾಲೂಕಿನ ಕೆಲವು ಮಹಿಳೆಯರು, ಮುಂಬಯಲಿ ಪೊಲೀಸ್ ರೇಡ್ ಜಾಸ್ತಿ ಆಗುತ್ತಿವೆ, ಗಳಿಸಿದ ಹಣವೆಲ್ಲ ಅವರಿಗೆ ದಂಡ ಕಟ್ಟಿಯೇ ಖರ್ಚಾಗುತ್ತದೆ. ಇದೇ ದಂಧೆಯನ್ನು ಊರಲ್ಲಿ ಮಾಡಿದರೆ ಹೇಗೆ, ಎಂದು ಆಲೋಚಿಸಿ ಬಂದಿದ್ದಾರೆ. ಬಸವನ ಬಾಗೇವಾಡಿಯ ಆಲಮಟ್ಟಿ ಬಳಿ ಹೆದ್ದಾರಿಗೆ ಹೊಂದಿಕೊಂಡಂತೆ, ಇವರು ಧಾಬಾಗಳನ್ನು ಪ್ರಾರಂಭಿಸಿ, ಅಲ್ಲಿ ಊಟ ಮತ್ತು ಹುಡುಗಿಯರ ವ್ಯವಸ್ಥೆ ಮಾಡಿದ್ದರು. ಮುಂಬಯಿಯಂಥ ಊರಿಗೆ ಹೋಗದ ಹುಡುಗಿಯರು, ಈಗಾಗಲೇ ಮುಂಬಯಲಿ ಇದ್ದು, ಮುಂಬಯಿ ಬೇಡವಾಗಿ ಬಿಟ್ಟು ಬಂದ ಮಹಿಳೆಯರು ಇಲ್ಲಿ ದಂಧೆಗೆ ಮಾಡುತ್ತಿದ್ದರು. ಕೆಲವು ಮಹಿಳೆಯರು ಇಂತಹ ಸ್ಥಳಗಳಲ್ಲಿ ದಂಧೆ ಮಾಡಬಹುದೆಂದು ಬಂದವರಿದ್ದರು. ಇದರಲ್ಲಿ ಈಗ ಕೆಲವು ದಾಬಾಗಳು ಪೋಲೀಸರಿಂದ ಬಂದ್ ಮಾಡಲ್ಪಟ್ಟಿವೆ.

ಕೆಲವು ಮಹಿಳೆಯರು ತಮ್ಮ ಹಳ್ಳಿಗಳಲ್ಲಿಯೇ ತಮ್ಮ ಪಾಲಿಗೆ ಬಂದ ಮನೆಯಲ್ಲಿ ದಂಧೆ ನಡೆಸಿದ್ದಾರೆ. ಅವಿಭಕ್ತ ಕುಟುಂಬ ಹೊಂದಿ, ಚಿಕ್ಕ ಮನೆಗಳಲ್ಲಿ ಇರುವ ಊರಿನ ಕೆಲವು ಯುವತಿಯರು

ಮತ್ತು ಮಹಿಳೆಯರು, ತಮ್ಮ ಮನೆಗಳಲ್ಲಿ ದಂಧೆ ಮಾಡಲು ಸಾಧ್ಯವಾಗದೇ ಇಂತಹ ಮನೆಗಳಲ್ಲಿ ದಂಧೆಗೆ ಬರುತ್ತಿದ್ದಾರೆ. ಕೆಲವಷ್ಟು ಮಹಿಳೆಯರು, ಜಮಖಂಡಿ, ಮುಧೋಳ, ಅಥಣಿ, ಬಿಜಾಪೂರಗಳ ಲಾಡ್ಜ್‌ಗಳಿಗೆ ದಂಧೆ ಮಾಡಲು ಹೋಗುತ್ತಿದ್ದಾರೆ. ಇವರಲ್ಲಿ ಗುರುತಿನ ಚೀಟಿಗಳಿದ್ದು, ಅವುಗಳನ್ನು ತೋರಿಸಿ, ತಮ್ಮ ಹೆಸರಲ್ಲಿ ರೂಮ್‌ಗಳನ್ನು ಬುಕ್ಕ ಮಾಡಿಕೊಳ್ಳುತ್ತಾರೆ. ಅಲ್ಲಿಂದ ಫೋನ ಮೂಲಕ ಗಿರಾಕಿಗಳನ್ನು ಕರೆಸಿಕೊಳ್ಳುತ್ತಾರೆ. ಹೆಚ್ಚಾಗಿ ಇವರು ಬೆಳಗಿನಿಂದ ಸಂಜೆಯವರೆಗೆ ಲೈಂಗಿಕ ದಂಧೆ ಮಾಡಿ ಸಾಯಂಕಾಲ ಮನೆಗೆ ಹೊಗುವ ರೂಢಿ ಇಟ್ಟುಕೊಂಡಿದ್ದಾರೆ. ಇವರಿಗೆ ಪೊಲೀಸರ ಭಯವಿಲ್ಲ. "ಅದನ್ನು ಲಾಡ್ಜ್ ಓನರ್ ನಿಭಾಯಿಸಿಕೊಳ್ಳುತ್ತಾನೆ" ಎಂದು ಹೇಳುತ್ತಾರೆ. ಕೆಲವು ಕಡೆ ಪೊಲೀಸರ ಕೈಗೆ ಸಿಕ್ಕು ಜೈಲು ಪಾಲಾಗಿ ದಂಡ ಕಟ್ಟಿ ಬಂದವರೂ ಇದ್ದಾರೆ.

**೬.೨/೭. ಪೊಲೀಸ್ ರೇಡ್**

ಮುಂಬಯಲಿ ಪೊಲೀಸ್ ರೇಡ್ ಜಾಸ್ತಿ ಆಗಿದ್ದು, ಹುಡುಗಿಯರನ್ನು ದಂಧೆ ಮಾಡಲು ಬಿಡುವುದೇ ಇಲ್ಲ. ಅವರು ಸುಮ್ಮನಿರಬೇಕೆಂದರೆ, ಅವರಿಗೆ ದುಡ್ಡು ಕೊಡಬೇಕು. ವಯಸ್ಸಾದ (೩೦ರ ಮೇಲ್ಪಟ್ಟವರು) ಇವರಿಗೆ ಗಿರಾಕಿಗಳೇ ಕಡಿಮೆ. ಇವರನ್ನು ಗಿರಾಕಿಗಳು ಹುಡುಕಿಕೊಂಡು ಬರುವುದಿಲ್ಲ. ಇವರೇ ಗಿರಾಕಿಗಳನ್ನು ಹುಡಿಕಿಕೊಂಡು ಹೋಗಬೇಕು. ಹಾಗಾಗಿ ಪೊಲೀಸರು ಹಿಡಿದಾಗಲೊಮ್ಮೆ ೧೨೦೦ ರೂಪಾಯಿ ದಂಡ ಕೊಡಬೇಕು. *"ಒಂದೊಂದು ಸಾರೆ ಬೆಳಗ್ಗೆ ಹಿಡಿದವರು ಮತ್ತೆ ಸಂಜೆ ಹಿಡಿದಿರುತ್ತಾರೆ. ಅವರಿಗೆ ದಂಡ ಕೊಡಲು ಮಾಡಿದ ಸಾಲ ತೀರಿಸಲು ದಂಧೆ ಮಾಡಬೇಕು.* ಎಂದು ಮಹಿಳೆಯರು ಹೇಳುತ್ತಾರೆ. ಹಾಗಾಗಿ ಈ ದಂಧೆಯೇ ಬೇಡವೆಂದು ಬಂದವರು ಇದ್ದಾರೆ. ಕೆಲವರು ದಂಧೆಯ ಮನೆಗಳನ್ನು ನಡೆಸುವ ಘರವಾಲಿಗಾಳಾಗಿದ್ದು, ಪೊಲೀಸ್ ರೇಡ್‌ನಲ್ಲಿ ಸಿಕ್ಕು ಅವರ ಮನೆಗಳು ಸೀಸ್ ಆಗಿ, ಇವರನ್ನು ಜೈಲಿಗೆ ಹಾಕಲಾಗಿತ್ತು. ಈಗಲೂ ಕೇಸ್ ನಡೆಯುತ್ತಿವೆ. ಅಂತವರೂ ಸಹ ಮರಳಿ ಊರಿಗೆ ಬಂದಿದ್ದಾರೆ.

**೬.೨/೮. ವಯೋಮಾನ**

ಲೈಂಗಿಕ ಜೀತಕ್ಕೆ ಒಳಪಟ್ಟು, ರೆಡ್‌ಲೈಟ್ ಏರಿಯಾದಲ್ಲಿಯೇ ಇದ್ದು, ವಯಸ್ಸು ಕಳೆದುಕೊಂಡವರು, ದಂಧೆಯ ಮನೆಗಳ ಕಸ ಮುಸುರೆ ಮಾಡಿ ಅಲ್ಲಿಯೇ ಜೀವನ ಸಾಗಿಸಿದ್ದಾರೆ. ಇನ್ನೇನೂ ಮಾಡಲಿಕ್ಕೆ ಆಗುವುದಿಲ್ಲ ಅನ್ನುವ ಶೇಕಡಾ ೫ರಷ್ಟು ಮಹಿಳೆಯರು ಮರಳಿ ಊರಿಗೆ ಬಂದಿದ್ದಾರೆ.

**೬.೨/೯. ಸಮಾಲೋಚನೆ**

ಒಂದೆರಡು ಕೇಸುಗಳಲ್ಲಿ, ಸಮುದಾಯ ಕಾರ್ಯಕರ್ತರು ಲೈಂಗಿಕ ದಂಧೆಗಾಗಿ ಮುಂಬಯಿಗೆ ಹೋಗುತ್ತಿರುವ ಮಹಿಳೆಯರಿಗೆ, ಊರಲ್ಲಿಯೇ ಉಳಿಯುವಂತೆ ಪ್ರೇರೇಪಿಸಿದ್ದಾರೆ. "ಊರಲ್ಲಿಯೇ ಉಳಿದರೆ, ಸರಕಾರದಿಂದ ಸೌಲಭ್ಯ ಕೊಡಿಸಬಹುದು. ಊರು ಬಿಟ್ಟು ಹೋದರೆ ಏನೂ ಮಾಡಲು ಆಗುವುದಿಲ್ಲ" ಎಂದು ತಿಳಿಸಿ ಹೇಳಿ ಮರಳಿ ಹೋಗದಂತೆ ತಡೆದಂತಹ ಕೆಲವು ಮಹಿಳೆಯರು, ಊರಲ್ಲಿಯೆ ಉಳಿದಿದ್ದಾರೆ.

೬.೨/೧೦. ಮಕ್ಕಳಿಗೆ ತಿಳಿಯಬಾರದೆಂದು

ತಮ್ಮ ೧೦-೧೧ನೇ ವಯಸ್ಸಿಗೇ ಲೈಂಗಿಕ ಜೀತಕ್ಕೆ ಇದ್ದು, ಅಲ್ಲಿಯ ಏಳು ಬೀಳುಗಳಿಗೆ ಎದೆಗೊಟ್ಟು ತಮ್ಮ ಬದುಕು ಕಟ್ಟಿಕೊಂಡ ಶೃತಿ ಜಲಜ ಇವರು, ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ. "ಆ ಮಕ್ಕಳಿಗೆ ತಿಳುವಳಿಕೆ ಬಂದು, ತಮ್ಮ ತಾಯಿ ಇಂತವಳಾ" ಎಂದು ಅವರಿಗೆ ಅರ್ಥವಾಗುವ ಮೊದಲು, ಲೈಂಗಿಕ ದಂಧೆಯನ್ನು ಬಿಟ್ಟು ಬಂದು, ಮರಳಿ ಊರು ಸೇರಿದ್ದಾರೆ.

೬.೨/೧೧. ಅನಾರೋಗ್ಯ

ಲೈಂಗಿಕ ದಂಧೆಯ ಮಹಿಳೆಯರಿಗೆ ಕಾಡುವ ಅನಾರೋಗ್ಯ ಸಮಸ್ಯೆಗಳಲ್ಲಿ ಹೆಚ್ಚು ಭೀಕರವಾದುದು ಎಚ್.ಐ.ವಿ. ಸೋಂಕು. ಇವರು ಆ ಗಂಡಾಂತರವನ್ನು ಎದುರಿಸುತ್ತಲೇ ಜೀವನ ನಡೆಸುತ್ತಾರೆ. ದಂಧೆ ಮಾಡುವ ಬಹುತೇಕ ಮಹಿಳೆಯರು ಎಚ್.ಐ.ವಿ.ಸೋಂಕನ್ನು ಎದುರಿಸುತ್ತಿದ್ದಾರೆ. ಕೆಲವರು ಆ ಸೋಂಕನ್ನು ಇಟ್ಟುಕೊಂಡೇ ದಂಧೆ ಮಾಡುತ್ತಿದ್ದಾರೆ. ಇವರಿಗೆ ಲೈಂಗಿಕ ಸಂಬಂಧಿ ರೋಗಗಳೂ ಸಾಕಷ್ಟಿವೆ. ಆದರೂ ಅದಕ್ಕಾಗಿ ಮರಳಿ ಊರಿಗೆ ಬಂದಿಲ್ಲ. ಆದರೆ ಈ ರೋಗದಿಂದ ಇನ್ನು ದಂಧೆ ಮಾಡಲು ಸಾಧ್ಯವೇ ಇಲ್ಲ ಅನ್ನುವಂತಹ ಪರಿಸ್ಥಿತಿಗೆ ಬಂದವರು ಮಾತ್ರ ಮರಳಿ ಊರಿಗೆ ಬಂದಿದ್ದಾರೆ(ಪ್ರಕರಣ ಅಧ್ಯಯನ ೧೨ನ್ನು ನೋಡಿ).

೬.೩. ಪ್ರಸ್ತುತ ಬದುಕು

ಲೈಂಗಿಕತೆ ಎಂಬುದು ಜಗತ್ತಿನ ಎಲ್ಲ ಜೀವ ಜಂತುಗಳ ಒಂದು ಸಹಜ ಬಯಕೆ. ಜಗತ್ತು ಅಂದರೇನು ಅನ್ನುವುದೇ ಗೊತ್ತಿರದ ಬಾಲೆಯರ ದೇಹವನ್ನೇ, ಆ ಲೈಂಗಿಕತೆಯನ್ನು ಪೂರೈಸುವ ಒಂದು ಬಂಡವಾಳವನ್ನಾಗಿ ಮಾಡಿಕೊಂಡು ಬದುಕು ಕಟ್ಟಿಕೊಂಡವರು ಲೆಕ್ಕಕ್ಕೆ ಸಿಗರು. ರಾಜ ಮಹಾರಾಜರಿಂದ ಹಿಡಿದು ಇಂದಿನ ಪೊಲೀಸ್ ಗೂಂಡಾಗಳವರೆಗೂ(ಕೆಲವರನ್ನು ಹೊರತುಪಡಿಸಿ), ಆ ಮಕ್ಕಳ ಮಾಂಸ, ಮಜ್ಜೆ, ರಕ್ತ, ಕಣ್ಣೀರುಗಳ ಮೇಲೆ ತಮ್ಮ ಶಯನ ಸುಖವನ್ನು ಅನುಭವಿಸಿದವರಿದ್ದಾರೆ. ಇಂದಿಗೂ ಅನುಭವಿಸುತ್ತಲೇ ಇದ್ದಾರೆ. ಹಾಗಿದ್ದರೆ ಅವರಿಗೆಲ್ಲ ಸುಖವನ್ನು ಕೊಟ್ಟ ಇವರಿಗೆ ಸಿಕ್ಕಿದ್ದೇನು? ಬದುಕು ಹೇಗಿದೆ? ಎಂಬುದನ್ನು ಪ್ರಕರಣ ಅಧ್ಯಯನಗಳ ಮೂಲಕ ಒಳ ಹೊಕ್ಕು ನೋಡಿದಾಗ ಸಿಕ್ಕ ವಿಚಾರಗಳನ್ನು ಈ ಕೆಳಗೆ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

೬.೩/೧. ಸಾಮಾಜಿಕ ಬದುಕು

ಅಧ್ಯಯನಕ್ಕೆ ಒಳಪಟ್ಟ ಬಹುತೇಕ(ಶೇಕಡಾ ೯೮.೬೬) ಮಹಿಳೆಯರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದಾರೆ. ಪರಿಶಿಷ್ಟರಲ್ಲದ ಸಮಾಜ ಇವರನ್ನು ಇವರ ಮಕ್ಕಳನ್ನು ಮೊದಲು ನೋಡಿಕೊಳ್ಳುತ್ತಿದ್ದ ಮತ್ತು ನಡೆಸಿಕೊಳ್ಳುತ್ತಿದ್ದ ರೀತಿಯಲ್ಲಿ ಮಹತ್ತರ ಬದಲಾವಣೆಯಾಗಿದೆ. ಅದಕ್ಕೆ ಸಂವಿಧಾನ ಕೊಟ್ಟ ಶಕ್ತಿಯೂ ಕಾರಣವಾಗಿದೆ ಎನ್ನಬಹುದು. ಆದರೆ ಲೈಂಗಿಕ ದಂಧೆಯಲ್ಲಿದ್ದು ಬಂದ ಮಹಿಳೆಯರ ಸ್ಥಿತಿ ಅಂದು ಹೇಗಿತ್ತೊ ಇಂದೂ ಹಾಗೆಯೇ ಇದೆ. ಏಕೆಂದರೆ ಅವರಲ್ಲಿ ಅಕ್ಷರ ಇಲ್ಲ. ಅವರ ಉದ್ಯೋಗ ಅದೇ ಮೊದಲಿನ ಕೂಲಿಯೇ ಆಗಿದೆ. ಆದರೆ ಪರಿಶಿಷ್ಟರ ಮನೆಯ, ದೇವದಾಸಿಯರ

ಮನೆಯ ಹೆಣ್ಣುಮಕ್ಕಳನ್ನು ಮತ್ತೆ ದೇವದಾಸಿಯರನ್ನಾಗಿ ಮಾಡುವ ಸಂದರ್ಭದಲ್ಲಿ ತಲೆಹಿಡುಕರಾಗುತ್ತಿದ್ದ ಮೇಲ್ಜಾತಿಯ ಸಮಾಜ ಇಂದು ತನ್ನ ಪಾತ್ರದಿಂದ ಹಿಂದೆ ಸರಿದಿದೆ. ತಮ್ಮ ಮಕ್ಕಳನ್ನು ದೇವದಾಸಿ ಮಾಡುವುದು ಬಿಡುವುದು ಅವರವರ ಮರ್ಜಿಯ ವಿಷಯವಾಗಿದೆ. ಇದಕ್ಕೆ ಕಾರಣ ದಲಿತರ ಮನೆಯ ಮಕ್ಕಳಿಂದು ಶಿಕ್ಷಣದತ್ತ ಮುಖ ಮಾಡುತ್ತಿದ್ದಾರೆ. ಊರು ಸಾಮಾಜಿಕವಾಗಿ ಇವರನ್ನು ತಮ್ಮೊಳಗೆ ಬಿಟ್ಟುಕೊಳ್ಳದಿದ್ದರೂ(ಮನೆ, ಹಬ್ಬ-ಹರಿದಿನಗಳು, ವೈವಾಹಿಕ ಸಂಬಂಧಗಳು, ದೇವಸ್ಥಾನಗಳು ಇತ್ಯಾದಿ) ಶಿಕ್ಷಣ ಮತ್ತು ಜಾಗೃತಿಯು ಅವರ ಮನೆಯೊಳಗೆ ನುಗ್ಗುವಂತಹ ಶಕ್ತಿಯನ್ನು ತುಂಬುತ್ತಿದೆ. ಇದು ಅವರ ಸಮುದಾಯದ ಹೊರಗಿನ ಸ್ಥಿತಿಯಾದರೆ, ಸಮುದಾಯದ ಒಳಗೆ ತುಂಬಾ ಡೋಲಾಯಮಾನವಾದ ಪರಿಸ್ಥಿತಿಯನ್ನು ಇವರು ಎದುರಿಸುತ್ತಿದ್ದಾರೆ.

ಲೈಂಗಿಕ ದಂಧೆಯಿಂದ ಮರಳಿದವರ ಅದರಲ್ಲೂ ದೇವದಾಸಿಯಾಗಿದ್ದವರ ಮಕ್ಕಳ ಮದುವೆಗೆ ಸಂಬಂಧಿಸಿದಂತೆ, ಅವರವರ ಸಮುದಾಯದಲ್ಲೇ ತಾರತಮ್ಯಗಳಿವೆ. ಇದು ಮೊದಲೂ ಇತ್ತು, ಈಗಲೂ ಇದೆ. ಒಬ್ಬ ದೇವದಾಸಿ ಅಥವಾ ಒಬ್ಬಳು ಲೈಂಗಿಕ ಜೀತದವಳ ಮಗಳನ್ನು, ಮತ್ತೊಬ್ಬ ದೇವದಾಸಿ ಅಥವಾ ಲೈಂಗಿಕ ಜೀತದವಳ ಮಗನೇ ಮದುವೆಯಾಗಬೇಕು. ಅವರಿಗೆ ಸಾಮಾನ್ಯವಾಗಿ ತಂದೆ ತಾಯಿ ಇದ್ದ ಕುಟುಂಬದೊಂದಿಗೆ ಸಂಬಂಧ ಮಾಡುವುದು ಸರಳ ಮತ್ತು ಸಾಧ್ಯವಾಗದ ಮಾತಾಗಿದೆ. ಎಲ್ಲೋ ಒಂದೊಂದು ಸಂಬಂಧಗಳು ನಡೆದಿರಬಹುದು ಆದರೆ ಅವೂ ಯಶಸ್ಸನ್ನು ಕಂಡಿದ್ದು ಕಡಿಮೆ. ಬಿಜಾಪೂರದ ಮಹಿಳೆಯೊಬ್ಬರು "*ನನಗೆ ಮೂರು ಹೆಣ್ಣುಮಕ್ಕಳಿವೆ, ಅವುಗಳಿಗೆ ಮದುವೆ ಮಾಡುವುದು ಹೇಗೆ ಅನ್ನುವ ಚಿಂತೆ ಕಾಡುತ್ತಿದೆ. ದೇವದಾಸಿ ಪದ್ಧತಿ ಬೇಡ ಅನ್ನುವ ಮಾತಿನ ಹಿಂದೆಯೇ, ದೇವದಾಸಿಯರಾದ ನಮ್ಮ ಮಕ್ಕಳನ್ನು ಮದುವೆ ಮಾಡಿಕೊಳ್ಳಲು ದೇವದಾಸಿಯರ ಮಕ್ಕಳೇ ಆಗಬೇಕು. ಸಿಗದಿದ್ದರೆ ಏನು ಮಾಡುವುದು. ನಮ್ಮ ಮಕ್ಕಳನ್ನು ದೇವದಾಸಿ ಮಾಡಬೇಕೆ?*" ಎಂದು ಪ್ರಶ್ನಿಸುತ್ತಾರೆ. ಮಿರಜ್‌ನ ಪ್ರೇಮ ನಗರದಲ್ಲಿ ಇನ್ನೂ ಲೈಂಗಿಕ ದಂಧೆಯಲ್ಲಿರುವವರು, "*ಮದುವೆ ಮಾಡಿಕೊಂಡ ನಮ್ಮ ಮಕ್ಕಳು ಸುಖವಾಗಿ ಇಲ್ಲ. ಹಂಗಾಗಿ ನಾವು ಅವರಿಗೆ, ಜೀವನಕ್ಕೆ ಮದುವೆ ಬೇಕೇ ಬೇಕು ಅನ್ನುವ ಪಾಠವನ್ನು ಹೇಳುವುದಿಲ್ಲ. ಅದು ಅವರ ಮರ್ಜಿಯ ಪ್ರಶ್ನೆ. ಅವರಿಗೆ ಇಷ್ಟವಾದರೆ ಆಗಬಹುದು, ಇಲ್ಲದಿದ್ದರೆ ಇಲ್ಲ*" ಎಂದು ಹೇಳುವ ಮಾತುಗಳಲ್ಲಿ ಸಾಮಾಜಿಕವಾಗಿ ಅವರು ಇನ್ನೂ ಅಂಚಿನ ಹೊರಗೇ ನಿಂತು ಮಾತನಾಡಿದಂತೆ ಭಾಸವಾಗುತ್ತದೆ. ಅದರ ಜೊತೆಗೆ ಒಂದು ಬಹುಸೂಕ್ಷ್ಮವೆನಿಸುವ ಆತಂಕ ಕಾಣಿಸುತ್ತದೆ.

ಲೈಂಗಿಕ ದಂಧೆ ಬಿಟ್ಟು ಮಕ್ಕಳು ಮರಿಗಳೊಂದಿಗೆ ಚೆನ್ನಾಗಿರುವ ಮಹಿಳೆಯರು, "*ನಮ್ಮ ಮಕ್ಕಳಿಗೆ, ನಮ್ಮ ತಾಯಿ ಹೀಗೆ ಇದ್ದಳು ಅನ್ನುವುದನ್ನು ನೆನಪಿಸಿಕೊಳ್ಳಲೂ ಇಷ್ಟವಾಗುವುದಿಲ್ಲ*" ಎಂದು ಹೇಳುತ್ತಾರೆ. ಜಮಖಂಡಿಯ ಗ್ರಾಮೀಣ ಭಾಗದಲ್ಲಿ ನಾವು, ಕ್ಷೇತ್ರಕಾರ್ಯ ಮಾಡುವಾಗ, ಕೆಲವು ಗಂಡು ಮಕ್ಕಳು, ಅವರ ತಾಯಿಯ ಹತ್ತಿರ ನಾವು ಸಲ್ಲದ್ದನ್ನು ಕೇಳಿಬಿಡಬಹುದೆಂಬ ಕಾರಣಕ್ಕೆ ಅವರು, ನಾವು ಕುಳಿತ ಜಾಗೆಯಿಂದ ಏಳಲೇ ಇಲ್ಲ. ಅವರ ತಾಯಂದಿರು, ಕಣ್ಣ

ಚಿವುಟ, ಕೈ ಸನ್ನೆ, ಬಾಯಿ ಸನ್ನೆ ಮಾಡಿ ಏನೂ ಕೇಳಬೇಡಿ ಎಂದು ನಮ್ಮನ್ನು ವಿನಂತಿಸಿಕೊಳ್ಳುತ್ತಿದ್ದದ್ದು ಗಂಡುಮಕ್ಕಳಿದ್ದ ಮನೆಗಳಲ್ಲಿ ಸಾಮಾನ್ಯವಾಗಿತ್ತು.

ಬಸವನ ಬಾಗೇವಾಡಿಯ ಲಕ್ಷ್ಮಮ್ಮನಿಗೆ ಎಚ್.ಐ.ವಿ./ಏಡ್ಸ್ ಆಗಿದೆ. ಅವಳ ಮಗ ಈಗ ಓದಿಕೊಂಡು, ಕೇಂದ್ರ ಸರ್ಕಾರದ ನೌಕರಿ ಹಿಡಿದಿದ್ದಾನೆ. ತಾಯಿಯನ್ನು ತುಂಬಾ ಚೆನ್ನಾಗಿ ನೋಡಿ ಕೊಳ್ಳುತ್ತಾನೆ. ಆದರೆ ಆಕೆ ಎಚ್.ಐ.ವಿ. ಸೋಂಕಿಗೆ ಸಂಬಂಧಿಸಿದ ಮಾತ್ರೆಗಳನ್ನು ಸೇವಿಸುತ್ತಿದ್ದರೆ, *"ನಿನಗೇನು ಆಗಿಲ್ಲ. ಆ ಗುಳಿಗಿ ನುಂಗಬ್ಯಾಡ. ಹೊರಗ ಒಗೀ ಅವನ್ನ"* ಅಂತ ಸಿಟ್ಟು ಮಾಡಿಕೊಂಡು ಎದ್ದು ಹೋಗುತ್ತಾನೆಂದು ಲಕ್ಷ್ಮಮ್ಮ ಹೇಳುತ್ತಾರೆ. ಅದಕ್ಕೆ ಲಕ್ಷ್ಮಮ್ಮ, *"ಅವನ ಮದುವೆಯಾದ ಮೇಲೆ ಅವನ ಹೆಣ್ತಿ, ಹೆಂತಾಕಿ ಇರ್ತಾಳೋ ಏನೋ, ನನ್ನಿಂದಾಗಿ ಅವನ ಜೀವನಾ ಹಾಳಾಗೋದು ಬ್ಯಾಡ. ಅವನ ಮದುವಿ ಆಗೋದ್ರಾಗ ನನಗೆ ಸಾವು ಬರಬೇಕು"* ಎಂದು ಬೇಡಿಕೊಳ್ಳುವಲ್ಲಿ, ಸಮಾಜ, ಸಮುದಾಯ ಮತ್ತು ಸ್ವತಃ ಅವರ ಕುಟುಂಬದವರೇ ಅವರನ್ನು ಯಾವ ರೀತಿ ನೋಡಿಕೊಳ್ಳುತ್ತಿರಬಹುದು ಎಂಬುದು ಕಂಡುಬರುತ್ತದೆ.

ಜಮಖಂಡಿ ತಾಲೂಕಿನ ೩೭ ವರ್ಷದ ಸಿಂಧುಳ ತಾಯಿ ಲೈಂಗಿಕ ದಂಧೆಗಾಗಿ ಮುಂಬಯಿಗೆ ಹೋಗಿದ್ದವಳು. ಅಲ್ಲಿ ಕಂಪನಿಯಲ್ಲಿ ಕೆಲಸ ಮಾಡುವ ಒಬ್ಬ ವ್ಯಕ್ತಿ ಅವಳಿಗೆ ಪಾರ್ಟನರ್ ಆಗಿ ಸಿಕ್ಕಿದ್ದ. ಆತ ಇವಳನ್ನು ರೆಡ್‌ಲೈಟ್ ಏರಿಯಾದಲ್ಲಿ ಬಿಡದೇ ಹೊರಗೆ ಸಾಮಾನ್ಯ ಕುಟುಂಬಸ್ಥರು ಇರುವಂತ ಏರಿಯಾದಲ್ಲಿ ಮನೆ ಮಾಡಿ ಇಟ್ಟುಕೊಂಡಿದ್ದ. ಸಿಂಧು ಮತ್ತು ಅವಳ ಇಬ್ಬರೂ ತಮ್ಮಂದಿರು ಅವನಿಗೇ ಹುಟ್ಟಿದ್ದರು. ಸಿಂಧುಳನ್ನು ಅವಳ ತಾಯಿ ಸಂಪ್ರದಾಯಕ್ಕೆ ಜೋತು ಬಿದ್ದು ದೇವದಾಸಿ ಮಾಡಿದ್ದಾಳೆ. ಆದರೂ ಸಿಂಧುಗೆ ರೆಡ್‌ಲೈಟ್ ಏರಿಯಾದ ಪರಿಚಯವೇ ಇಲ್ಲ. ಇವಳು ಹೆಚ್ಚಾಗಿ ತನ್ನ ಅಜ್ಜಿಯ ಹತ್ತಿರ ಊರಲ್ಲಿಯೇ ಇರುತ್ತಿದ್ದಳು. ನಂತರ ೧೦-೧೨ ವರ್ಷಕ್ಕೆ ತಾಯಿಯ ಹತ್ತಿರ ಮುಂಬಯಿಗೆ ಹೋಗಿದ್ದಳು. ಅಲ್ಲಿರುವಾಗ ಸಿಂಧು, ಅವರ ಮನೆಯ ಹತ್ತಿರದಲ್ಲಿಯೇ ಇದ್ದ ಟ್ಯೂಬ್ ಲೈಟ್ ಪ್ಯಾಕ್ಟ್ರಿಗೆ ಕೆಲಸಕ್ಕೆ ಹೊಗಲಾರಂಭಿಸಿದ್ದಳು. ಆ ಕಂಪನಿಯವರು ಆಕೆಗೆ ಒಂದು ದಿನಕ್ಕೆ ೧೨ ರೂಪಾಯಿ ಸಂಬಳ ಕೊಡುತ್ತಿದ್ದರು. ಹೀಗೆ ಜೀವನ ತೆಗೆದವಳು, ಒಬ್ಬರ ಸ್ನೇಹದಿಂದ ಮೂರು ಮಕ್ಕಳನ್ನು ಹೆತ್ತಿದ್ದಾಳೆ. ಈಗ ಊರಲ್ಲಿಯೇ ಇರುತ್ತಾಳೆ. ಅವಳು ಹೇಳುವಂತೆ, "ನಾನು ದಂಧೆಯನ್ನೇ ಮಾಡಿಲ್ಲ. ಆದ್ರ ನಾನು ಮುಂಬಯಿಗೆ ಹೋಗಿ ಬಂದಿದ್ದೆ ಅನ್ನುವ ಕಾರಣಕ್ಕೆ ಇಲ್ಲಿಯವರು, ನನ್ನನ್ನೂ ಅದ ರೀತಿ ನೋಡ್ತಾರ. ನನಗೆ ಏನಾದರೂ ನೆಗಡಿ, ಕೆಮ್ಮು, ಜ್ವರ ಬಂದು ದವಾಖಾನಿಗೆ ಹೋಗಿ ಬಂದು, ಎರಡು ದಿನ ಮಲಗಿದ್ರ, ನನಗ ಏಡ್ಸ್ ಬಂದೈತೇನೋ ಅಂತ ಅನುಮಾನಿಸುತ್ತಾ ನೋಡುತ್ತಾರೆ. ಆಗೆಲ್ಲ ನನಗೆ ಜೋರಗೆ ಕೆಮ್ಮಾಕ ಸೈತ ಹೆದರಿಕಿ ಆಕ್ಕೈತಿ". ಅಂತ ಅನ್ನುತ್ತಾಳೆ ಸಿಂಧು.

### ೬.೩/೨. ಆರ್ಥಿಕ ಬದುಕು




**ಮೂಲ: ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ**

ಅಪ್ರಾಪ್ತ ಬಾಲೆಯರನ್ನು ಲೈಂಗಿಕ ಜೀತದಲ್ಲಿ ಇಡುವುದು, ಲೈಂಗಿಕ ದಂಧೆಗೆ ಹಚ್ಚುವುದು ಬಂಡವಾಳವಿಲ್ಲದೇ ಮಾಡುವ ಒಂದು ಉದ್ಯೋಗವನ್ನಾಗಿ ಭಾವಿಸಿಕೊಂಡಿರುವ ಒಂದು ವಲಯವೇ ಹುಟ್ಟಿಕೊಂಡಿದೆ. ಇಂತ ವಲಯದಲ್ಲಿ ಯಾರದೋ ಬಡತನವನ್ನು ಹೋಗಲಾಡಿಸುವ, ಯಾರದೋ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಈ ಪ್ರಕ್ರಿಯೆಯಲ್ಲಿ ಅಮಾಯಕ ಮಕ್ಕಳು ತಮ್ಮ ಬದುಕನ್ನು ಕಳೆದುಕೊಳ್ಳುತ್ತಿದ್ದಾರೆ. ಆ ಹಿಂಸೆಯ ಜೀವನದಿಂದ ಹೊರಬಂದು, ತಮ್ಮ ಬದುಕನ್ನು ಕಟ್ಟಿಕೊಳ್ಳುವ ಹೋರಾಟದಲ್ಲಿ ಕೆಲವರು ಯಶಸ್ಸನ್ನು ಕಂಡಿದ್ದರೆ, ಬಹುತೇಕರು ಇನ್ನೂ ಹಸಿವನ್ನು ಮೆಟ್ಟಿ ನಿಲ್ಲುವ ಪ್ರಯತ್ನದಲ್ಲಿ ತೊಡಗಿಕೊಂಡಿದ್ದಾರೆ. ಈ ದಿಶೆಯಲ್ಲಿ ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರ ಆರ್ಥಿಕ ಸ್ಥಿತಿ ಹೇಗಿದೆ, ಎಂಬುದನ್ನು ತಿಳಿಯುವ ಪ್ರಯತ್ನವನ್ನು ಅಧ್ಯಯನವು ಮಾಡಿದೆ. ಆ ಪ್ರಕಾರ ಅವರ ಪ್ರಕರಣ ಅಧ್ಯಯನಗಳ ಹಿನ್ನೆಲೆಯಲ್ಲಿ ಅವರ ಪ್ರಸ್ತುತ ಆರ್ಥಿಕ ಸ್ಥಿತಿ ಮತ್ತು ಅವರ ವೃತ್ತಿಯ ಸ್ವರೂಪವನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಅದರಂತೆ ಅತೀ ಹೆಚ್ಚು ಅಂದರೆ ಶೇಕಡಾ ೩೫ ರಷ್ಟು ಮಹಿಳೆಯರ ಆರ್ಥಿಕ ಸ್ಥಿತಿಯು ಚಿಂತಾಜನಕವಾಗಿದೆ. ಅವರು ಹಲವಾರು ವರ್ಷಗಳ ಕಾಲ ಲೈಂಗಿಕ ದಂಧೆಯಲ್ಲಿದ್ದರೂ ಸಹ ಅದರಿಂದ ೧೦ ರೂಪಾಯಿಯಷ್ಟೂ ತಮಗೆ ಲಾಭವಾಗಲಿಲ್ಲ.

ಎಂದು ಹೇಳುವ ಮಹಿಳೆಯರು ಬಹುತೇಕರಿದ್ದಾರೆ. ಈಗ ಅವರನ್ನು ನೋಡಿಕೊಳ್ಳುವವರೂ ಸಹ ಯಾರೂ ಇಲ್ಲವಾಗಿದ್ದು, ಅವರು ತಮ್ಮ ಬದುಕಿಗೆ ಕೂಲಿಯನ್ನು ಆಶ್ರಯಿಸಿಕೊಂಡಿದ್ದಾರೆ. "*ದಂಧಾ ಮನಿ ಬಿಟ್ಟು ಬಂದ ಮ್ಯಾಲ, ಬಿಸಿಲೊಳಗ ಕೂಲಿಗೆ ಹೋಗಬೇಕಾದಾಗ, ಬಾಳ ತ್ರಾಸ ಅನ್ನಿಸ್ತಿತ್ತು. ಬಾಳ ವರ್ಷ ಬಿಸಿಲ ಅನ್ನೂದ ನಾವ ಕಂಡಿದ್ದಿಲ್ಲ. ಈಗ ಊರಾಗ ಬಿಸಲೊಳಗ ದುಡಿಯೂದ ಅಂದ್ರ, ಜೀವ ಬಾಯಿಗೆ ಬಂದಂಗ ಆಗ್ತೈತಿ. ಆದ್ರೂನೂ ನಾವು ದುಡ್ಯಾಕ ಬೇಕು. ಈಗ ರೂಢಿ ಆಗೇತಿ. ಬೆಳಿಗ್ಗೆಯಿಂದ ಸಂಜೀತನಕ ದುಡದ್ರ, ೬೦ ರೂಪಾಯಿಗಳಿಂದ ೧೨೦ ರೂಪಾಯಿವರೆಗೆ ಸಿಗ್ತೈತಿ. ಆದ್ರ ಈ ಕೆಲಸ ವಾರ ಪೂರ್ತಿ ಸಿಗೋದಿಲ್ಲ. ಹಂಗಾಗಿ ಬರುವ ಕೂಲಿಯಿಂದ ಜೀವನ ನಡಸೂದ ಬಾಲ ಕಷ್ಟ. ನಾವು ಮುಂಬಯಿದಾಗ ಇದ್ದಿದ್ದಕ್ಕ ದೇವದಾಸಿ ಪಗಾರಕ್ಕ ಹೆಸರ ಹಚ್ಚಾಕೂ ಆಗಲಿಲ್ಲ. ಬಾಳ ಕಡಿಮೀ ಮಂದೀಗಿ ದೇವದಾಸಿ ಪಗಾರ(ಮಾಶಾಸನ) ಬರ್ತೈತಿ*" ಎಂದು ಮಹಿಳೆಯರು ತಮ್ಮ ಸ್ಥಿತಿಯನ್ನು ವಿವರಿಸುತ್ತಾರೆ.

ಮನೆಯಲ್ಲಿ ಬಡತನ ಕಳೆಯಲೆಂದು ಮೂವರು ಮಕ್ಕಳನ್ನು, ಮತ್ತೆ ಒಬ್ಬಳು ಮೊಮ್ಮಗಳನ್ನು ದೇವದಾಸಿ ಮಾಡಿದ್ದರೂ ಇಂದಿಗೂ ಕುಟುಂಬದ ಆರ್ಥಿಕ ಪರಿಸ್ಥಿತಿ ಹಾಗೆಯೇ ಇದೆ ಏಕೆ? ಎಂದು ಯಮುನಾಳನ್ನು ಕೇಳಿದರೆ, "*ಅಲ್ಲಿ ಹತ್ತೆಂಟು ಗಂಡಸರಿಗೆ ದೇಹ ಕೊಟ್ಟು ಗಳಿಕೆ ಮಾಡಿದ್ದರಾಗ, ಉಳಿಸಿದ್ದನ್ನ ಅಪ್ಪ ಅವ್ವಗ ಕಳಸ್ತಿದ್ಯಾ. ಅವರು ತಿಂದು ತೇಗಿ ಆರಾಮದಿಂದ ಇರ್ತಿದ್ರು. ಹಂಗ ನನ್ನ ಹರೆ ಕಡಿಮಿ ಆದಂಗ ಗಳಸ್ಯಾಡದು ಕಡಿಮಿ ಆತು. ನನಗೂ ಮಕ್ಕಳು ಆದವು, ಸಾಕು ಅಂತ ವಾಪಾಸ್ಸ ಬಂದ್ಯ. ಅಲ್ಲಿಗೆ ಮತ್ತ ಮೊದಲಿನಂಗ ಆತು. ದುಡಿಯೋದು ಒಂದ ದೇಹ. ತಿನ್ನವು ಹತ್ತು ಹನ್ನೊಂದು ದೇಹ. ಅಂದ್ರ ಹೆಂಗಾದೀತು*" ಎಂದು ವಿವರಿಸ್ತಾಳೆ ಯಮುನಾ. ಹೆಣ್ಣುಮಕ್ಕಳನ್ನು, ಅಕ್ಕ-ತಂಗಿಯರನ್ನು ದೇವದಾಸಿಯರನ್ನಾಗಿ ಮಾಡಿ ಅವರು ಗಳಿಸಿ ಕೊಟ್ಟಿದ್ದರಲ್ಲಿ ಐಷಾರಾಮಿ ಜೀವನ ನಡೆಸಿದವರ ಕಥೆಗಳು ಬಹಳ ಸಿಗುತ್ತವೆ. ಅವರ ವಯಸ್ಸು ಹೋದ ಹಾಗೆ, ಹಣ ಕಳಿಸುವುದು ಕಡಿಮೆ ಆದಾಗ, ಮನೆಯ ಮತ್ತೊಬ್ಬ ಹೆಣ್ಣುಮಗಳನ್ನು ದೇವದಾಸಿ ಮಾಡಲು ಮನೆಯವರು ಅಣಿಯಾಗಿರುತ್ತಾರೆ. ಹೀಗಾಗಿ ಮನೆ ಮಂದಿಯೆಲ್ಲ ದಂಧೆ ಮಾಡಲು ನಿಂತಿದ್ದರೂ ಸಹ ಕುಟುಂಬದ ಬಡತನ ಹಗೆ ಉಳಿಯುತ್ತಿತ್ತು. ಅಲ್ಲದೇ ಇವರಲ್ಲಿ ಬಹುತೇಕ ಮಹಿಳೆಯರಿಗೆ ಕುಡಿತದ ಚಟವಿರುವುದರಿಂದ ಬಂದ ಕೂಲಿಯು ಇವರ ಜೀವನಕ್ಕೆ ಸಾಕಾಗುವುದಿಲ್ಲ.

ಲೈಂಗಿಕ ದಂಧೆ ಮಾಡಿ, ಘರವಾಲಿಗಳಾಗಿ, ಚಾಕಚಕ್ಯತೆಯಿಂದ ವ್ಯವಹಾರ ಮಾಡಿ ಹಣ ಉಳಿಸಿದ ಶೇಕಡಾ ೧೦ರಷ್ಟು ಮಹಿಳೆಯರು ಇದ್ದಾರೆ. ಅವರು ಈಗ ಏನೂ ಕೆಲಸ ಮಾಡುವುದಿಲ್ಲ. ಆದರೂ ತಾವು ಚೆನ್ನಾಗಿದ್ದೇವೆ ಎಂದು ಹೇಳುತ್ತಾರೆ. ಇವರಲ್ಲಿ ಕೆಲವು ಮಹಿಳೆಯರು ದಂಧೆಯ ಗಲ್ಲಿಯಲ್ಲಿ ಗಳಿಸುವ ಮನೆಗಳನ್ನು ಹೊಂದಿದ್ದಾರೆ. ಈಗ ಅವುಗಳನ್ನು ಬಾಡಿಗೆ ಕೊಟ್ಟು ಇವರು ಊರಲ್ಲಿ ಇದ್ದಾರೆ. ಅದರಿಂದ ಅವರಿಗೆ ಆದಾಯ ಬರುತ್ತದೆ. ಕೆಲವು ಮಹಿಳೆಯರ ಮಕ್ಕಳು ಉತ್ತಮ ನೌಕರಿಗಳನ್ನು ಪಡೆದುಕೊಂಡಿದ್ದಾರೆ. ಅವರು ಈಗ ತಮ್ಮ ತಾಯಂದಿರನ್ನು ಚೆನ್ನಾಗಿ

ನೋಡಿಕೊಳ್ಳುತ್ತಿದ್ದಾರೆ. ಕೆಲವರು ತಾವು ಗಳಿಸಿದ್ದ ಹಣವನ್ನು ಬ್ಯಾಂಕಲ್ಲಿ ಇಟ್ಟಿದ್ದು, ಅದರಿಂದ ಬರುವ ಬಡ್ಡಿ ಹಣದಿಂದ ಜೀವನ ನಡೆಸಿದ್ದಾರೆ. ಅತೀ ಕಡಿಮೆ ಸಂಖ್ಯೆಯ ಹೆಣ್ಣುಮಕ್ಕಳ ಅಣ್ಣ ತಮ್ಮಂದಿರು ಅವರನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ.

ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಲ್ಲಿ ಶೇಕಡಾ ೧೦ರಷ್ಟು ಮಹಿಳೆ ತಮ್ಮ ಊರುಗಳಲ್ಲಿಯೇ ಇದೇ ದಂಧೆ ಯನ್ನು ತಾವು ಯಾಕೆ ಮಾಡಬಾರದು, ಎಂದು ಊರಿಗೆ ಬಂದು ದಂಧೆಯನ್ನು ಪ್ರಾರಂಭಿಸಿದ್ದಾರೆ. ಇದರಲ್ಲಿ ಎಚ್.ಐ.ವಿ. ಸೋಂಕು ತಗಲುವ ಭಯದಿಂದ, ಪೊಲೀಸ್ ರೇಡ್ ಜಾಸ್ತಿಯಾಗಿ, ಪದೇ ಪದೆ ಪೊಲೀಸರಿಗೆ ದಂಡ ಕಟ್ಟಲಾಗದವರು, ಲಂಚ ಕೊಡಲಾಗದವರು ಹೀಗೆ ಮರಳಿ ಊರಿಗೆ ಬಂದು ಇಲ್ಲಯೇ ಲೈಂಗಿಕ ದಂಧೆ ಪ್ರಾರಂಭಿಸಿದ್ದಾರೆ.

ಬೇರೆ ಏನೂ ಕೆಲಸ ನೀಗದ ಶೇಕಡಾ ೧೦ರಷ್ಟು ಮಹಿಳೆಯರು ಅದೇ ಲೈಂಗಿಕ ದಂಧೆಯಲ್ಲಿ ತಮ್ಮನ್ನು ಮತ್ತೆ ತೊಡಗಿಸಿಕೊಂಡಿದ್ದಾರೆ. ಹೀಗೆ ಬಂದ ಯುವತಿಯರಲ್ಲಿ, ಶೇಕಡಾ ೫ರಷ್ಟು ಯುವತಿಯರು, ಸರ್ಕಾರದಿಂದ ಏನೂ ಸೌಲಭ್ಯಗಳು ಸಿಗದೇ, ಊರಲ್ಲಿ ಇದ್ದು ಏನು ಮಾಡುವುದು, ಎಂದು ಮತ್ತೆ ತಮ್ಮ ದಂಧೆಯ ಮನೆಗಳಿಗೆ ಹೋಗುವ ವಿಚಾರದಲ್ಲಿ ಇದ್ದಾರೆ. ಶೇಕಡಾ ೫ ರಷ್ಟು ಮಹಿಳೆಯರು ಅಂಗಡಿಗಳನ್ನು ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದಾರೆ. ಒಬ್ಬರು ಅಕ್ಕನ ಮಕ್ಕಳನ್ನು ಕರೆದುಕೊಂಡು, ಋತುಮಾನಗಳಿಗೆ ಸಂಬಂಧಿಸಿದಂತೆ, ತಳ್ಳುವ ಗಾಡಿಗಳಲ್ಲಿ ಹಣ್ಣು ತರಕಾರಿ ಮಾರಾಟ ಮಾಡುತ್ತಾರೆ. ಶೇಕಡಾ ೩.೩೩ರಷ್ಟು ಮಹಿಳೆಯರು ತಮ್ಮ ಕಲಾ ಪ್ರತಿಭೆಗಳ ಮೇಲೆ ಜೀವನ ಮಾಡುತ್ತಿದ್ದು, ಒಬ್ಬರು ಕೂಲಿಯನ್ನು ಮಾಡುವುದರೊಂದಿಗೆ ನಾಟಕಗಳಲ್ಲಿಯೂ ಪಾತ್ರವನ್ನು ಮಾಡುತ್ತಾರೆ. ಒಬ್ಬರು ಚೌಡಕಿ ಹಾಡು ಹೇಳುವುದನ್ನು ಕಲಿತು, ತಮ್ಮದೇ ಒಂದು ಮೇಳವನ್ನು ಮಾಡಿಕೊಂಡಿದ್ದಾರೆ. ಅವರೊಂದಿಗೆ ಕಾರ್ಯಕ್ರಮ ನೀಡಲು ಹೋಗುತ್ತಾರೆ. ಅದರಿಂದ ಬರುವ ಆದಾಯವನ್ನು ತಂಡದ ಎಲ್ಲರೂ ಹಂಚಿಕೊಳ್ಳುತ್ತಾರೆ. ಶೇಕಡಾ ೬೬ರಷ್ಟು ಮಹಿಳೆಯರು ಮನೆಗೆಲಸ ಮಾಡುತ್ತಾ, ಕೂಲಿಗೂ ಹೋಗುತ್ತಾ ಅವಕಾಶ ಸಿಕ್ಕಾಗಲೆಲ್ಲ ಲೈಂಗಿಕ ದಂಧೆಯನ್ನೂ ಮಾಡುತ್ತಾರೆ.

ಲೈಂಗಿಕ ಜೀತಕ್ಕೆ ಇದ್ದ ಮಲ್ಲಿಕಾ ಅಲ್ಲಿಯ ಪರಿಸರಕ್ಕೆ ಹೊಂದಿಕೊಳ್ಳಲಾಗದೇ, ಲೈಂಗಿಕ ದಂಧೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವುದೇ ಇಲ್ಲ. ದಂಧೆ ಮಾಡದೇ ಹಾಗೆ ಇದ್ದುದರಿಂದ, ಇವಳ ಊಟ, ವಸತಿ ಮತ್ತೆ ಜೀವನ ನಿರ್ವಹಣೆಯ ಖರ್ಚುಗಳಿಂದಾಗಿ, ಅವಳ ಮೇಲಿನ ಸಾಲ ಏರುತ್ತಾ ಹೋಗುತ್ತದೆ. ಆದ್ದರಿಂದ ಅವಳನ್ನು ಇಟ್ಟುಕೊಂಡಿದ್ದ ಘರವಾಲಿಯು, ಆಕೆಯನ್ನು ಬಿಡಿಸಿಕೊಂಡು ಹೋಗಲು ಅವಳ ತಂದೆಗೆ ತಿಳಿಸುತ್ತಾಳೆ. ಪರ್ಯಾಯ ದಾರಿ ಕಾಣದ ಮಲ್ಲಿಕಾಳ ತಂದೆ, ತಮ್ಮ ಮನೆಯಲ್ಲಿದ್ದ, ರಾಮ ಭೀಮ ಎಂಬ ಎರಡು ಎತ್ತುಗಳನ್ನು ಮಾರಾಟ ಮಾಡಿ, ಮಲ್ಲಿಕಾಳ ಮೇಲಿದ್ದ ಸಾಲವನ್ನು ವಾಪಸು ಮಾಡಿ, ಅವಳನ್ನು ಬಿಡಿಸಿಕೊಂಡು ಬರುತ್ತಾನೆ. ಮನೆಗೆ ಬಂದ ಮಲ್ಲಿಕಾ ಆಲಮಟ್ಟಿ ಡ್ಯಾಮಿನ ಕಟ್ಟಡ ಕಾಮಗಾರಿಯಲ್ಲಿ ಕಾರ್ಮಿಕಳಾಗಿ ದುಡಿದು, ಪೀಯರ್ ವರ್ಕರ್ ಆಗಿ ದುಡಿದು ಇಂದು ಒಂದು ಸಮುದಾಯ ಆಧಾರಿತ ಸಂಸ್ಥೆಯ ಮುಖ್ಯಸ್ಥಳಾಗಿದ್ದಾಳೆ. ಅಲ್ಲಿ ಲೈಂಗಿಕ

ಕಾರ್ಯಕರ್ತೆಯರ ಆರೋಗ್ಯ, ಅವರ ಆರ್ಥಿಕ ಬೆಳವಣಿಗೆಗಾಗಿ ಕೆಲಸ ಮಾಡುತ್ತಿದ್ದಾಳೆ(ನೋಡಿ ಅನುಬಂಧ-೧ ಪ್ರಕರಣ ೧೧).

ಬಾಲ್ಯ ವಿವಾಹಕ್ಕೆ ಒಳಗಾಗಿ, ಗಂಡನಿಂದ ತಿರಸ್ಕೃತಗೊಂಡು ತವರು ಮನೆ ಸೇರಿದ್ದ ಸುಮಿತ್ರಾ, ತವರು ಮನೆಯ ಬಡತನ, ಊರ ಗಂಡಸರ ಕಾಟಕ್ಕೆ ಬೇಸತ್ತು ಮುಂಬಯಿ, ಅಲಹಾಬಾದ್‌ಗಳಿಗೆ ಹೋಗಿ ತನ್ನನ್ನು ಲೈಂಗಿಕ ದಂಧೆಯಲ್ಲಿ ತೊಡಗಿಸಿಕೊಳ್ಳುತ್ತಾಳೆ. ಜೊತೆಗೆ ತಂಗಿ ಶೈಲಾಳನ್ನು ಕರೆದುಕೊಂಡು ಹೋಗಿ, ಒಳ್ಳೆಯ ಆದಾಯವನ್ನೂ ಮಾಡಿಕೊಳ್ಳುತ್ತಾಳೆ. ಊರಲ್ಲಿ ತನ್ನದೇ ಭೂಮಿ ಖರೀದಿಸಿಕೊಂಡು ಈಗ ಮಗನೊಂದಿಗೆ ಅದೇ ಭೂಮಿಯಲ್ಲಿ ಕೃಷಿ ಮಾಡುತ್ತಿದ್ದಾಳೆ(ನೋಡಿ ಅನುಬಂಧ-೧, ಪ್ರಕರಣ ೧೪). ವಯಸ್ಸಾದ ಕೆಲವು ಮಹಿಳೆಯರು(ಶೇಕಡಾ ೩.೩೩) ಹಳ್ಳಿಯಲ್ಲಿ ಎಲ್ಲಮ್ಮ ದೇವರ ಪಡಲಗಿ ಹಿಡಿದುಕೊಂಡು ಜೋಗ ಬೇಡಿ ಜೀವನ ಮಾಡುತ್ತಿದ್ದಾರೆ. "ಮೊದಲಾದ್ರ ಜನರೊಳಗ ಭಯ ಭಕ್ತಿ ಇರ್ತಿತ್ತು. ಆದರೆ ಈಗ ಹಿಂದಿನ ದಿನದ ಮುಸುರಿ ಅನ್ನಾ ಸುದ ಜೋಗಕ್ಕ ಹಾಕ್ತಾರ. ಏನು ಮಾಡೋದು, ನಮ್ಮದೂ ಅನಿವಾರ್ಯ ಪರಿಸ್ಥಿತಿ" ಎಂದು ನಿಟ್ಟುಸಿರಿಡುತ್ತಾಳೆ ನಿಂಗವ್ವ

**೬.೩/೩. ಆರೋಗ್ಯದ ದುಸ್ಥಿತಿ**

ಲೈಂಗಿಕ ದಂಧೆಯಲ್ಲಿರುವ ಬಾಲೆಯರು ಮತ್ತು ಮಹಿಳೆಯರ ಜೀವನ ಯಾವಾಗಲೂ ಆತಂಕದಲ್ಲಿಯೇ ಇರುತ್ತದೆ. ಅಧ್ಯಯನಕ್ಕೆ ಒಳಪಡಿಸಿದವರಲ್ಲಿ ಬಹುತೇಕರು ಎಚ್.ಐ.ವಿ ಮತ್ತು ಲೈಂಗಿಕ ಸಂಬಂಧಿ ರೋಗಗಳಿಂದ ನರಳುತ್ತಾರೆ. ಅದರ ಜೊತೆಗೆ ಅಸ್ತಮಾ ಸಹ ಬಹಳಷ್ಟು ಮಹಿಳೆಯರನ್ನು ಕಾಡುತ್ತದೆ. ಭಾರತದಲ್ಲಿ ೧೯೮೬ರ ಸಂದರ್ಭದಲ್ಲಿ ಕಂಡು ಬಂದ ಎಚ್.ಐ.ವಿ. ಸೋಂಕು, ಮೊತ್ತ ಮೊದಲು ಅತ್ಯಂತ ವ್ಯಾಪಕವಾಗಿ ಆವರಿಸಿದ್ದು ಲೈಂಗಿಕ ಚಟುವಟಿಕೆ ನಡೆಯುವ ವೇಶ್ಯಾಗೃಹಗಳನ್ನು. ಅದರ ಪರಿಣಾಮವಾಗಿ ೨೦೧೦ರ ಅವಧಿಯಲ್ಲಿ ಗಣನೀಯ ಪ್ರಮಾಣದಲ್ಲಿ ಲೈಂಗಿಕ ಜೀತದ, ಲೈಂಗಿಕ ದಂಧೆಯ ಹೆಣ್ಣುಮಕ್ಕಳು ಮತ್ತು ಮಹಿಳೆಯರು ಸಾವನ್ನಪ್ಪಿದರು. ಬಬಲೇಶ್ವರದ ಹಿರಿಯ ದೇವದಾಸಿಯೊಬ್ಬರು ಆ ಕುರಿತು ತಮ್ಮ ಅಭಿಪ್ರಾಯ ಈ ರೀತಿ ವ್ಯಕ್ತ ಪಡಿಸುತ್ತಾರೆ. "ಎಂತೆಂಥ ಚೆಲುವೇರು, ಎಳೀ ಹುಡುಗೇರು ಅದೇನಾತೊ ಗೊತ್ತಿಲ್ಲ. ಒಂದೊರಸದಾಗ ತೆವ್ವಾಗ ಹಾಕಿ ಹುರದಂಗ ಪಟ ಪಟ ಅಂತ ಸತ್ತು ಹೋದ್ರು, ಒಂದಾದ ಕೂಡಲೆ ಒಂದು. ಒಂದಾದ ಕೂಡಲೆ ಒಂದು ಹೆಣ ಸುಟ್ಟು ಬರ್ತಿದ್ವಿ, ಹಂಗಾಗಿ ಹೆದರಿದ ಬಾಳ ಮಂದಿ, ಮುಂಬೈ ಪೂಣಾ ಬಿಟ್ಟು, ಹೊಳ್ಳಿ ಬಂದು ಊರ ಸೇರಕೊಂಡಾರ. ಇಲದಿದ್ದರ ಇವರೆಲ್ಲಿ ಬರ್ತಿದ್ರು." ಹೀಗೆ ಮಹಿಳೆಯರು ವೇಶ್ಯಾಗೃಹ ಬಿಟ್ಟು ಬರಲು ಕಾರಣವಾದ ಸಂಗತಿಯನ್ನು ವಿವರಿಸುವ ಅವರೇ ಮುಂದುವರೆದು, "ಮತ್ತ ಈಗ ಕಾಲ ಬದಲಾಗೇತ್ರಿ, ನಿರೋಧ ವಾಪರಸೋದು ಬಂದ ಮ್ಯಾಲೆ, ಅದಕ್ಕೂ ಹೆದರೂದು ಬಂದ ಮಾಡ್ಯಾರ್ರೀ. ಮತ್ತ ಮೊದಲಿನಂಗ ಸಣ್ಣ ಸಣ್ಣ ಪೋರಿಗಳು ಮುಂಬಯಿ ಸಾಂಗ್ಲಿ, ಕರಾಡ, ಕೊಲ್ಹಾಪೂರ ದಾರಿ ಹಿಡದಾವು." ಎಂದು ಹೇಳುವ ವಿಷಯದ ಹಿಂದೆ ಲೈಂಗಿಕ ಜೀತದ ಭೀಕರತೆ ಹಾಗೂ ಮತ್ತದೇ ದಂಧೆಯ ಹಿಂದೆ ಅಪ್ರಾಪ್ತ ಹೆಣ್ಣುಮಕ್ಕಳು ಸಾಗುತ್ತಿರುವ

ವಿಚಾರಗಳನ್ನು ಕುರಿತು ಅಧ್ಯಯನವು ಆತಂಕ ವ್ಯಕ್ತಪಡಿಸುತ್ತದೆ. ಅಧ್ಯಯನಕ್ಕೊಳಪಟ್ಟ ೫ ಮಹಿಳೆಯರಿಗೆ, ದಂಧೆ ಬಿಟ್ಟು ಬಂದು ಊರಲ್ಲಿಯೇ ಹುಡುಕಿಕೊಂಡ ಪಾರ್ಟನರ್‌ಗಳಿಂದ ಎಚ್.ಐ.ವಿ. ತಗುಲಿಕೊಂಡಿದೆ. ಅಲ್ಲದೇ ಅವರಿಗಿರುವ ಮಧ್ಯಪಾನ, ತಂಬಾಕು ಚಟಗಳು, ಲೈಂಗಿಕ ದಂಧೆಯ ಮಹಿಳೆಯರು ಯಾವಾಗಲೂ ಅನಾರೋಗ್ಯಕರವಾದ ವಿಷಮ ಸ್ಥಿತಿಯಲ್ಲಿಯೇ ಬದುಕು ನಡೆಸುವಂತೆ ಮಾಡುತ್ತವೆ.

**೬.೩/೪. ಮಾನಸಿಕ ಸ್ಥಿತಿ**

ಒಬ್ಬ ವ್ಯಕ್ತಿಯ ಮಾನಸಿಕತೆ ಎಂಬುದು ಅವರ ಜೈವಿಕ, ದೈಹಿಕ, ಭಾವನಾತ್ಮಕ, ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಆಧರಿಸಿದ ಒಂದು ಸಂಕೀರ್ಣ ಸ್ಥಿತಿಯಾಗಿದೆ. ಈ ಅಂಶಗಳಲ್ಲಿ ಒಂದೇ ಅಂಶದಲ್ಲಿ ವ್ಯತ್ಯಾಸವಾದರೂ ಸಹ ಅದು ಅವರ ಮಾನಸಿಕ ಸ್ಥಿತಿಯ ಮೇಲೆ ವ್ಯತಿರಿಕ್ತವಾದ ಪರಿಣಾಮವನ್ನು ಬೀರುತ್ತದೆ. ಈ ದೃಷ್ಟಿಯಲ್ಲಿ ಅಧ್ಯಯನಕ್ಕೆ ಒಳಪಟ್ಟ ಎಲ್ಲ ಮಹಿಳೆಯರ ಮಾನಸಿಕ ಸ್ಥಿತಿಯನ್ನು ಅವಲೋಕಿಸಿದಾಗ ಅದು ಶೋಚನೀಯ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಈ ಎಲ್ಲ ವಿಚಾರಗಳಲ್ಲಿ ಲೈಂಗಿಕ ಜೀತದ ಮಹಿಳೆಯರು, ಸಾಮಾನ್ಯ ಮಹಿಳೆಯರಿಗಿಂತ ವಿಭಿನ್ನವಾಗಿಯೇ ನಿಲ್ಲುತ್ತಾರೆ. ಜೈವಿಕ, ದೈಹಿಕ, ಭಾವನಾತ್ಮಕ, ಸಾಮಾಜಿಕ, ಆರ್ಥಿಕ ವಿಚಾರಗಳಲ್ಲಿ ಬಾಲ್ಯದಿಂದಲೇ ಶೋಷಣೆಗೊಳಗಾದ ಇವರು, ಇತರರೊಂದಿಗೆ ಬೆರೆಯುವಲ್ಲಿ ಸಮಸ್ಯೆಯನ್ನು ಎದುರಿಸುತ್ತಾರೆ. ಹಾಗಾಗಿ ಇವರ ಪುನರ್ವಸತಿಯು ನಿರೀಕ್ಷಿಸಿದಷ್ಟು ಫಲದಾಯಕವಾಗಿಲ್ಲ ಎನ್ನಬಹುದು. ಲೈಂಗಿಕ ದಂಧೆಯ ಮನೆಗಳಿಂದ, ಮರಳಿ ತಮ್ಮ ಮನೆಗಳಿಗೆ ಬಂದ ಯುವತಿಯರಲ್ಲಿ ಶೇಕಡಾ ೫೦ರಷ್ಟು ಯುವತಿಯರು ಮನೆಯ ಸದಸ್ಯರೊಂದಿಗೆ ಹೊಂದಿಕೊಳ್ಳಲಾಗದೇ, ಮತ್ತೆ ಮರಳಿ ಅದೇ ದಂಧೆಗೆ ತಿರುಗಿ ಹೋಗುವ ಆಲೋಚನೆಯಲ್ಲಿದ್ದಾರೆ. ಇದಕ್ಕೆ ಮುಖ್ಯ ಕಾರಣ, ಲೈಂಗಿಕ ಸಂಬಂಧ ಹೊಂದುವುದು ಅವರಿಗೆ ಒಂದು ಚಟವಾಗಿ ಪರಿಣಮಿಸಿದೆ.

ಹತ್ತು ಹನ್ನೊಂದು ವರ್ಷದವರಿದ್ದಾಗಿನಿಂದಲೇ, ದಿನಕ್ಕೆ ೧೦ ರಿಂದ ೨೦ ಗಂಡಸರು, ನಿರಂತರವಾಗಿ ಅವರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಾ ಬಂದಿದ್ದಾರೆ. ಇದು ಸುಮಾರು ೧೦-೧೨ ವರ್ಷ. ಕೆಲವು ಸಂದರ್ಭಗಳಲ್ಲಿ ಅದಕ್ಕಿಂತಲೂ ಹೆಚ್ಚು ದಿನಗಳವರೆಗೆ ನಿರಂತರವಾಗಿ ನಡೆದಿದೆ. ಹಾಗಾಗಿ ಲೈಂಗಿಕ ದಂಧೆಯ ಮಹಿಳೆಯರು ಲೈಂಗಿಕತೆಯ ವ್ಯಸನಿಗಳಾಗುತ್ತಾರೆ. ಅದು ಅವರಿಗೆ ಸುಖ ಕೊಡುತ್ತದೆ ಎಂಬ ವಿಷಯಕ್ಕಲ್ಲ, ಆದರೆ ಅದು ಆ ಹೊತ್ತಿಗೆ ಬೇಕು ಅಷ್ಟೇ. ಇದೂ ಒಂದು ಮಾದಕ ವ್ಯಸನವೇ ಆಗಿರುತ್ತದೆ ಎನ್ನಬಹುದು. ಅಥಣಿ ತಾಲೂಕಿನ ಮುವತ್ತು ವರ್ಷದ ಛಾಯಾ ಹೇಳುವಂತೆ, *"ಎಷ್ಟೋ ಜನ ಹೆಣ್ಣುಮಕ್ಕಳಿಗೆ ದಂಧೆಯ ಜಾಗ ಬ್ಯಾಡ ಅಂತ ಬಂದ್ರೂನೂ ಸಹ, ಮತ್ತ ಹೋಕ್ಕಿ ಹೋಗಾಕ ಅದ ಕಾರಣ ಆಕ್ಕೈತಿ. ತಿಳಿಯದ ವಯಸ್ಸಿನಿಂದ ಅದ ದಂಧೆಯನ್ನು ಮಾಡಿ ಬಂದವ್ರಿಗೆ. ಆದರಿಂದ ದೂರವಿರುವುದು ಬಾಳ ಮುಷ್ಕಿಲ್(ಕಷ್ಟ) ಆಕ್ಕೈತಿ. ಅವರಿಗೆ ಅದೊಂದು ಚಟವೇ ಆಗಿರ್ತೈತಿ. ನನ್ನ ಜೊತೆಗೆ ಒಬ್ಬಳು ಇದ್ದಳು. ಅವಳು ಬಸವಿ ಇದ್ದಳು. ಅವಳಿಗೆ ನಾಳೆ ಅವಳಿಗೆ ಹೆರಿಗೆ ಆಗ್ತೈತಿ ಅಂದ್ರ, ಇವತ್ತು ಗಂಡಸಿನ ಜೊತೆಗಿದ್ದು ಹೋಗಿದ್ದನ್ನ ನಾನು ನೋಡೀನಿ. ಹಂಗನ*

*ಮಗು ಹುಟ್ಟಿ ಹದಿನೈದು ಇಪ್ಪತ್ತು ದಿನಗಳಿಗೇನೇ ಮತ್ತೆ ದಂಧೆಗೆ ಮರಳಿದ್ದನ್ನ ನೋಡೀನಿ. ಈಗ ಅವಳಿಗೆ ವಯಸ್ಸಾಗೇತಿ ಮಕ್ಕಳು ದೊಡ್ಡವರಾಗ್ಯಾರ, ಚುಲೋ ಸಾಲಿ ಕಲ್ತು ನೌಕರಿ ಮಾಡಾಕತ್ಯಾರ. ಈ ದಂಧೆಯ ಜರೂರತಿನೇ(ಅವಶ್ಯಕತೆ) ಆಕೀಗಿ ಇಲ್ಲ. ಆದ್ರೂ ಆಕಿ ಗಳಸು ಜಾಗಾದಾಗ ಇರ್ತಾಳ. ಆಕೀಗೆ ಅದು ಚಟ ಆಗಿ ಬಿಟ್ಟೈತಿ, ಬಿಟ್ಟು ಇರಾಕ ಸಾಧ್ಯನ ಇಲ್ಲ ಅಂತಾಳ".* ಇದು ಅವಳ ಮನೋ ದೈಹಿಕ ಸಮಸ್ಯೆ(ಸೈಕೋ ಸೋಮ್ಯಾಟಿಕ್ ಡಿಸಾರ್ಡರ್). ದಂಧೆಯ ಮನೆಯ ಸಹವಾಸವೇ ಬೇಡವೆಂದು ಮನಸ್ಸು ಗಟ್ಟಿ ಮಾಡಿಕೊಂಡು ಬಂದ ಛಾಯಾಳಿಗೆ, ಮಾನಸಿಕ ಸ್ಥಿಮಿತತೆ ಉಳಿಯದಿರುವ ಕುರಿತು ಹೀಗೆ ಹೇಳಿಕೊಳ್ಳುತ್ತಾಳೆ. *"ನನಗೂ ಆಸೆಗಳದಾವು. ಆ ಕ್ಷಣ, ಆ ಹೊತ್ತು ನೆನಪಾತಂದ್ರ ನೋವಾಕ್ಕೈತಿ. ಅದು ನನಗ ಸುಖ ಅಲ್ಲ ಖರೆ, ಹಂಗಂತ ಬಿಟ್ಟಿರದೂ ಆಗವಲ್ದು. ಬಾಳ ತ್ರಾಸ ಆತಂದ್ರ, ಬಾಳಷ್ಟ ಅಳ್ತನಿ ಅಷ್ಟ. ಇದನ್ನೆಲ್ಲ ಯಾರಿಗೆ ಹೇಳುದು. ಅವ್ವಗ, ಅಣ್ಣಗ ಇಂಥಾದ್ದೆಲ್ಲ ಹೆಂಗ ಹೇಳೂದು. ಇದ ಊರಾಗ ನನಗೂ ಜೊತೀ ಸಿಗ್ತಾರ. ಆದ್ರ ಅವರ್ನ ಮನೀಗಿ ಹೆಂಗ ಕರೀಲಿ. ಮನ್ಯಾಗ ಇರವ ಎರಡ ರೂಮು. ಹಂಗೇನಾದ್ರೂ ನಾನು ಮಾಡಿದ್ರ, ನಮ್ಮ ಅತ್ತಿಗೆ(ಅಣ್ಣನ ಹೆಂಡತಿ), ನನಗ ಈಗ ಕೊಡುವ ಮರ್ಯಾದಿ ಮುಂದೂ ಕೊಡ್ತಾಳನು? ನನ್ನ ನೋಡಿ ಅವಳೂ ಅದ ದಾರಿ ಹಿಡಿದ್ರ.. ಹೀಂಗ ಹತ್ತು ಹಲವು ಯೋಚನೆಗಳು ಬರ್ತಾವು. ದತ್ತಕ ತಗೊಂಡ ಮಗ ಸಣ್ಣವದಾನು. ರಾತ್ರಿ ಕಾಲಮಡೀಲಿಕ್ಕೆ(ಮೂತ್ರಕ್ಕೆ) ಅಂತ ಎದ್ದರೂ ಸಹ, ನನ್ನನ್ನ ಹುಡುಕ್ತಾನ. ಅದಕ್ಕಾಗಿ ನನಗೊಂದು ಸ್ವತಂತ್ರ ರೂಮನ್ನು ಕಟ್ಟಿಸಿಕೊಡಲು ನಮ್ಮವ್ವಗ ಮತ ನಮ್ಮ ತಮ್ಮಗ ಕೇಳಾಕತ್ತೇನಿ. ಆದ್ರ ಅವರು, "ನಿನಗೆ ಏನು ಕಡಿಮಿ ಮಾಡೀವಿ, ಯಾಕ ಬ್ಯಾರೆ ರೂಮ್ ಬೇಕು" ಎಂದು ಪ್ರಶ್ನೆ ಕೇಳ್ತಾರ. ನನಗೇನು ಬೇಕು ಅನ್ನೋದು, ಅವರಿಗೆ ಯಾಕೆ ತಿಳಿಯಂಗಿಲ್ಲ".* ಎಂದು ಛಾಯಾ ತನ್ನ ಅಳಲನ್ನು ತೋಡಿಕೊಳ್ಳುತ್ತಾ, *"ಇದ ದೇಹದ ತಳಮಳದ ಸಲುವಾಗಿ, ಹೆಚ್ಚಿನ ಹೆಣ್ಣುಮಕ್ಕಳು ಮನ್ಯಾಗಿರಾಕ ಇಷ್ಟಪಡಂಗಿಲ್ಲ. ಈಗಲೂ ಎಷ್ಟೋ ಹೆಂಗಸರು ಅದಕ್ಕಾಗಿಯೇ ದಂಧೆ ಮಾಡ್ತಾರ".* ಎಂದು ಛಾಯಾ ವಿವರಿಸುತ್ತಾಳೆ. ಛಾಯಾ ಹೇಳುವ ಈ ಮಾತುಗಳಲ್ಲಿ ಬರೀ ಅವಳ ದೈಹಿಕ ಆಸೆಗಳಷ್ಟೇ ಪ್ರತಿನಿಧಿಸುವುದಿಲ್ಲ. ಭಾವನಾತ್ಮಕವಾದ, ಕೌಟುಂಬಿಕವಾದ, ಸಾಮಾಜಿಕವಾದ ಸೂಕ್ಷ್ಮ ವಿಷಯಗಳು ಕಂಡು ಬರುತ್ತವೆ. ಛಾಯಾ, ತಾನೇನಾದರೂ ತನ್ನ ದೈಹಿಕ ಭಾವನೆಗಳು ಮತ್ತು ಅಗತ್ಯತೆಗಳಿಗೆ ಮನಸ್ಸು ಮಾಡಿದರೆ, ತನ್ನ ಕೌಟುಂಬಿಕ ಸ್ಥಿತಿ ಏನಾಗಬೇಡ, ಎಂದು ಚಿಂತಿಸುವಲ್ಲಿ, ಸಾಮಾಜಿಕತೆ ಅಡಗಿದೆ.

ಇವೆಲ್ಲ ಸಮಸ್ಯೆಗಳ ಮೇಲೆ ಅವರಿಗೆ ಅಂಟಿಕೊಂಡ ಚಟಗಳು ಅವರನ್ನು ಮಾನಸಿಕವಾಗಿ ಜರ್ಜರಿತರನ್ನಾಗಿ ಮಾಡುತ್ತವೆ. ಡ್ರಗ್ಸ್, ಅಲ್ಕೋಹಾಲ್, ಮಟಕಾ ಅವರನ್ನು ರೆಡ್‌ಲೈಟ್ ಏರಿಯಾ ಬಿಟ್ಟು ಬರದಂತೆ ಹಿಡಿದಿಡುತ್ತವೆ. ಊರಿಗೆ ಬಂದಾಗ, ಇವನ್ನೆಲ್ಲ ಅವಳಿಗೆ ಯಾರು ಕೊಡಬೇಕು. ದಂಧೆಯ ಮನೆಯಲ್ಲಿ ಸಿಗುವ ಮುಕ್ತತೆ ಅವರ ಮನೆಗಳಲ್ಲಿ ಅವರಿಗೆ ಸಿಗುವುದಿಲ್ಲ. ಇವಳು ಹರೆಯದವಳಿದ್ದು, ಗಳಿಸಿ ಕೊಡುವ ಸಂದರ್ಭದಲ್ಲಿ, ಇವಳನ್ನು ಹೂವಿನಂತೆ ನೋಡಿಕೊಂಡ ಇವಳ ಅಣ್ಣ ತಮ್ಮಂದಿರು, ಇವಳಿಗೆ ಅಂಟಿಕೊಂಡಿರುವ ಚಟಗಳ ಕಾರಣಕ್ಕೆ ದೂರವಾಗುತ್ತಾರೆ. ಯಾರಿಗಾಗಿ

ತನ್ನ ಬಾಲ್ಯವನ್ನು, ಯೌವನವನ್ನು ತ್ಯಾಗ ಮಾಡಿದ್ದಳೋ, ಅವರೇ ಇಂದು ಇವಳನ್ನು ಇಷ್ಟಪಡುವುದಿಲ್ಲ. ಈ ಮಾನಸಿಕ ನೋವು ಅವಳನ್ನು ಮಾನಸಿಕ ವ್ಯಾಧಿಯತ್ತ ತಳ್ಳುತ್ತದೆ. ಹಾಗಾಗಿ ಲೈಂಗಿಕ ಜೀತದ/ದಂಧೆಯ ಮಹಿಳೆಯರ ಮಾನಸಿಕ ನೋವು ಸಂಕೀರ್ಣವಾದುದು.

ಸಂವಿಧಾನಾತ್ಮಕವಾಗಿ ರಚನೆಗೊಂಡ ಕಾನೂನುಗಳಿಂದ ರಕ್ಷಣೆಯಾಗದ ಬಾಲೆಯರು, ರಕ್ಷಿಸ ಬೇಕಾದವರಿಂದಲೇ ಶೋಷಣೆಗೊಂಡ ಮಹಿಳೆಯರು, ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕೆಂದುಕೊಂಡ ಹಂತದಲ್ಲಿ, ಅವರಿಗೆ ಸಾಮಾಜಿಕವಾದ, ಆರ್ಥಿಕವಾದ ಮತ್ತು ಮಾನಸಿಕವಾದ ನೂರು ತೊಡಕುಗಳು ಅವರನ್ನು ಕಾಡಿವೆ. ಆದರೂ ಬದುಕಲೇಬೇಕು ಎಂದುಕೊಂಡವರು ಬಿಸಿಲು, ಮಳೆ ಲೆಕ್ಕಿಸದೇ ಕೂಲಿ ನಾಲಿ ಮಾಡಿ ಬದುಕುತ್ತಿದ್ದಾರೆ. ಆಗದೆ ಹೋದವರು, ಮತ್ತೆ ಮರಳಿ ದಂಧೆಯ ಮನೆಗೆ ಹೋಗುವ ಕುರಿತು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಎಲ್ಲ ಸಮಸ್ಯೆಗಳನ್ನು ಹೋಗಲಾಡಿಸುವುದಾದರೂ ಹೇಗೆ? ಸರ್ಕಾರ ಅದಕ್ಕೆ ಏನೆಲ್ಲ ಕ್ರಮ ತೆಗೆದುಕೊಂಡಿದೆ, ಎಂಬ ವಿಷಯವನ್ನು ಚರ್ಚಿಸುವ ಅಗತ್ಯವಿದೆ. ಅದನ್ನು ಮುಂದಿನ ಅಧ್ಯಾಯದಲ್ಲಿ ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

## ಅಧ್ಯಾಯ ಏಳು

# ಲೈಂಗಿಕ ಶೋಷಿತರ ಸಾಮಾಜಿಕ ಭದ್ರತೆ ಮತ್ತು ರಕ್ಷಣೆ

### ೭.೧. ಪ್ರಸ್ತಾವನೆ

ಪ್ರಸ್ತುತ ಅಧ್ಯಾಯದಲ್ಲಿ ಮಕ್ಕಳ ಲೈಂಗಿಕ ಜೀತವನ್ನು ತಡೆಗಟ್ಟಲು ಮತ್ತು ಜೀತಕ್ಕೊಳಗಾದವರನ್ನು ರಕ್ಷಿಸಲು ಸರ್ಕಾರ ತಂದಿರುವ ಕಾನೂನುಗಳನ್ನು, ಅದಕ್ಕೆ ಪೂರಕವಾಗಿ ಬಂದ ಯೋಜನೆಗಳು ಹಾಗೂ ಕಾರ್ಯಕ್ರಮಗಳನ್ನು ವಿವರಿಸುವ ಮತ್ತು ಅರ್ಥೈಸುವ ಪ್ರಯತ್ನ ಮಾಡಲಾಗಿದೆ.

### ೭.೨. ಸಂವಿಧಾನ

ಮಾನವ ಹಕ್ಕುಗಳ ಒಡಂಬಡಿಕೆಯ ಘೋಷಣೆಯ ಎಲ್ಲ ಅಂಶಗಳು ಭಾರತದ ಸಂವಿಧಾನಾತ್ಮಕ ಹಕ್ಕುಗಳಲ್ಲಿ ಪ್ರತಿಬಿಂಬಿಸುತ್ತವೆ. ಸಂವಿಧಾನದಲ್ಲಿ ಅಳವಡಿಸಿರುವ ಮೂಲಭೂತ ಹಕ್ಕುಗಳು ಸದಾ ಕಾಲ ಚಲನಶೀಲ ಮತ್ತು ಜೀವಂತಿಕೆಯಿಂದ ಕೂಡಿರುವುದು ಭಾರತದ ಸಂವಿಧಾನದ ವಿಶೇಷತೆ. ಕಾಲ ಕಾಲಕ್ಕೆ ನ್ಯಾಯಾಲಯಗಳು ನೀಡುವ ತೀರ್ಪುಗಳು, ಸಂವಿಧಾನಿಕ ಹಕ್ಕುಗಳ ಪರಿಧಿಯನ್ನು ವಿಸ್ತರಿಸುತ್ತಲೇ ಬಂದಿವೆ. ಮೂಲಭೂತ ಹಕ್ಕುಗಳ ಜೊತೆಗೆ, ಮೂಲಭೂತ ಕರ್ತವ್ಯಗಳು ಮತ್ತು ಮಾರ್ಗದರ್ಶಿ ಸೂತ್ರಗಳನ್ನು ಇಡಿಯಾಗಿ ನೋಡುವ ಸಂವಿಧಾನ, ಮಾನವನ ಹಕ್ಕುಗಳ-ಹೊಣೆಗಳ ಬಗ್ಗೆ ಆದರ್ಶವಾದ ದೃಷ್ಟಿಕೋನ ಮತ್ತು ಗುರಿಯನ್ನು ಹೊಂದಿದೆ. ಅದನ್ನು ನ್ಯಾಯಯುತವಾಗಿ ಜಾರಿಗೊಳಿಸುವ, ಅನುಸರಿಸುವ, ಆಚರಿಸುವ ನೈತಿಕ ಹೊಣೆ ನಮ್ಮದಾಗಿರಬೇಕೆಂಬುದೇ ಸಂವಿಧಾನದ ಪ್ರೀಯಾಂಬಲ್.

ಮಕ್ಕಳು ಮತ್ತು ಮಹಿಳೆಯರು ಪರಂಪರೆ, ನಂಬಿಕೆ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ದೌರ್ಜನ್ಯಕ್ಕೊಳಗಾಗಿದ್ದನ್ನು ಬಹಳ ಸೂಕ್ಷ್ಮವಾಗಿ ಗಮನಿಸಿದ್ದ ನಮ್ಮ ಸಂವಿಧಾನ ರಚನಕಾರರು ಮಕ್ಕಳ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಅನೇಕ ಸಂವಿಧಾನಾತ್ಮಕ ಅವಕಾಶಗಳನ್ನು ಕಲ್ಪಿಸಿದ್ದಾರೆ. ಸಂವಿಧಾನಾತ್ಮಕ ಅವಕಾಶಗಳ ಜೊತೆ ಜೊತೆಗೆ ಮಕ್ಕಳ ಒಟ್ಟಾರೆ ಅಭಿವೃದ್ಧಿಗಾಗಿ ಅನೇಕ ಕಾಯಿದೆಗಳನ್ನು ರೂಪಿಸಿ ಜಾರಿಗೊಳಿಸಲಾಗಿದೆ. ಇವುಗಳನ್ನು ವಿವರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಸಂವಿಧಾನದ ಕಲಂ-೧೪ ಸಮಾನ ನಾಗರಿಕ ಹಕ್ಕಿನ ಅವಕಾಶಗಳನ್ನು ನೀಡಿದರೆ, ಕಲಂ ೧೫ ಯಾವುದೇ ವ್ಯಕ್ತಿಯಿಂದಲೂ ಬೇದ ಭಾವ ಮಾಡಬಾರದು ಎನ್ನುವುದನ್ನು ಸೂಚಿಸುತ್ತದೆ. ವಿಶೇಷವಾಗಿ

ಸಂವಿಧಾನದ ಕಲಂ ೪೫ ಮಕ್ಕಳ ಪಾಲನೆ, ಪೋಷಣೆ, ರಕ್ಷಣೆ ಮತ್ತು ಶೈಕ್ಷಣಿಕ ಅವಕಾಶಗಳನ್ನು ಉಚಿತ ಮತ್ತು ಕಡ್ಡಾಯವಾಗಿ ನೀಡಬೇಕೆಂಬುದನ್ನು ವಿವರಿಸುತ್ತದೆ. ಹಾಗೆಯೇ ಕಲಂ-೨೧ ಜೀವಿಸುವ ಹಕ್ಕನ್ನು ಪ್ರತಿಯೊಬ್ಬರಿಗೂ ಒದಗಿಸುತ್ತದೆ. ಇದನ್ನು ೧೯೯೩ರ ಸುಪ್ರೀಂ ಕೋರ್ಟಿನ ತೀರ್ಪಿನ ಆಧಾರದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಜೀವಿಸುವ ಭಾಗವಾಗಿ-೨೧ಎ ಕೆಳಗಡೆ ಶಿಕ್ಷಣ ಹಕ್ಕು ಕಾಯಿದೆ-೨೦೦೯ ಅರ್ಥೈಸುತ್ತದೆ(ಎಚ್. ಡಿ. ಪ್ರಶಾಂತ್, ೨೦೧೫)[೧]

ಮುಂದುವರೆದು **ಕಲಂ-೨೩** ಮಾನವ ಸಾಗಾಣಿಕೆ ಮತ್ತು ಒತ್ತಾಯದ ದುಡಿಮೆಯನ್ನು ನಿಷೇಧಿಸುತ್ತದೆ. ಮಹಿಳೆ ಮತ್ತು ಮಕ್ಕಳನ್ನು ವಸ್ತುಗಳಂತೆ ಪರಿಗಣಿಸಿ ಅನೈತಿಕವಾಗಿ, ಅಮಾನವೀಯವಾಗಿ ಬಳಸಿಕೊಳ್ಳುವುದನ್ನು ಪ್ರತಿಬಂಧಿಸುವುದು ಜೊತೆಗೆ ಜೀತಪದ್ಧತಿ ನಿಷೇಧ, ಜೀವಕ್ಕೆ ಅಪಾಯಕರವಾದ ಪರಿಸರವಿರುವ ಉದ್ಯೋಗಗಳಲ್ಲಿ ಮಹಿಳೆ ಮಕ್ಕಳನ್ನು ಬಳಸುವುದನ್ನು ಕಾನೂನಿನ ಮೂಲಕ ಪ್ರತಿಬಂಧಿಸುತ್ತದೆ. ಮಕ್ಕಳ ರಕ್ಷಣೆಯನ್ನು ಗಮನದಲ್ಲಿಟ್ಟು ಅಪರಾಧಿಗಳಾದ ಮಕ್ಕಳಿಗೂ ವಿಶೇಷ ಸವಲತ್ತು ನೀಡಿ, ಅವನ್ನು ಸಮಾಜದ ಮುಖ್ಯವಾಹಿನಿಗೆ ತರಲು ಅನೇಕ ಕಾಯಿದೆಗಳನ್ನು, ಕಾರ್ಯಕ್ರಮಗಳನ್ನು ರಚಿಸಲು ನಿರ್ದೇಶನ ನೀಡುತ್ತದೆ. ಹಾಗೆಯೇ **ಕಲಂ-೩೯** ಇದು ಮಕ್ಕಳ ಬಾಲ್ಯಕ್ಕೆ ಅಪಾಯ ತಂದೊಡ್ಡಬಹುದಾದ ಕೆಲಸಗಳಲ್ಲಿ ಮಕ್ಕಳನ್ನು ತೊಡಗಿಸುವಿಕೆ, ಮಕ್ಕಳ ಘನತೆ, ಗೌರವ, ನೈತಿಕ ಮತ್ತು ಭೌತಿಕ ಹಕ್ಕುಗಳನ್ನು ಗೌರವಿಸುವ ಕುರಿತು ವಿವರಿಸುತ್ತದೆ. ಹೀಗೆ ಅನೇಕ ಸಂವಿಧಾನಾತ್ಮಕ ಅವಕಾಶಗಳು ಮಕ್ಕಳ ಹಕ್ಕುಗಳ ಉಲ್ಲಂಘನೆಯಾಗದಂತೆ ನೋಡಿಕೊಳ್ಳುವ ಸಲುವಾಗಿಯೇ ರೂಪಿತವಾಗಿದೆ. ಅವುಗಳು ರೂಪಿತವಾದ ಚರಿತ್ರೆಯನ್ನು ಇಲ್ಲಿ ವಿವರಿಸಿಕೊಳ್ಳಲಾಗಿದೆ.

### ೭.೩. ಶಾಸನಾತ್ಮಕ

ಮಕ್ಕಳನ್ನು ಮತ್ತು ಮಹಿಳೆಯರನ್ನು ಲೈಂಗಿಕ ಶೋಷಣೆಯಿಂದ ರಕ್ಷಿಸುವುದಕ್ಕಾಗಿ ಕಾಲಕಾಲಕ್ಕೆ ಕಾನೂನುಗಳು ರೂಪಿತವಾಗುತ್ತಲೇ ಬಂದಿವೆ. ಅಧ್ಯಯನದ ದೃಷ್ಟಿಯಿಂದ ಅವುಗಳನ್ನು ಸಂವಿಧಾನ ಪೂರ್ವ ಕಾನೂನುಗಳು ಮತ್ತು ಸಂವಿಧಾನ ನಂತರದ ಕಾನೂನುಗಳು ಎಂದು ಎರಡು ಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಭಾರತವು ಮೂಲದಲ್ಲಿ ಅರಸೊತ್ತಿಗೆಗಳಿಂದ ಆಳಲ್ಪಡುತ್ತಿದ್ದ ದೇಶವಾಗಿತ್ತು. ನಂತರ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ಈ ಸಂದರ್ಭದಲ್ಲಿ ಪ್ರಜೆಗಳ ಹಿತವನ್ನು ಕಾಪಾಡುವಲ್ಲಿ ಹಲವಾರು ಕಾನೂನುಗಳು ಸ್ವಾತಂತ್ರ್ಯ ಪೂರ್ವದಲ್ಲಿಯೂ ಜಾರಿಗೊಂಡಿದ್ದವು.

ಭಾರತದ ಇತಿಹಾಸದಲ್ಲಿ ವೇಶ್ಯಾವಾಟಿಕೆಯು ವೇದಕಾಲದಿಂದಲೂ ಇದ್ದ ಕುರಿತು ಉಲ್ಲೇಖಗಳಿವೆ. ಕ್ರಿ ಪೂ. ೩೫೦ರಿಂದ ಕ್ರಿ.ಶ ೧೫೦ರ ಗುಪ್ತರ ಆಳ್ವಿಕೆಯಲ್ಲಿ ಗಣಿಕಾ ಸ್ತ್ರೀಯರೆಂಬ ವೇಶ್ಯೆಯರು ಇದ್ದ ಕುರಿತು ಕೌಟಿಲ್ಯ ತನ್ನ ಕೃತಿ ಅರ್ಥಶಾಸ್ತ್ರದಲ್ಲಿ ಬರೆಯುತ್ತಾನೆ. ಕಾಲಕಾಲಕ್ಕೆ ರಾಜಾಶ್ರಯವನ್ನು ಪಡೆದು ಬೆಳೆದು ಬಂದ ಈ ವ್ಯವಸ್ಥೆಯು ಮೊಗಲ್ ಆಡಳಿತದವರೆಗೂ ನಿರಾತಂಕವಾಗಿ ಸಾಗುತ್ತದೆ. ಕರ್ನಾಟಕದಲ್ಲಿ ಬಸವಣ್ಣ ವೇಶ್ಯಾವಾಟಿಕೆಯನ್ನು ಒಂದು ಸಾಮಾಜಿಕ ಪಿಡುಗು ಎಂದು, ಅದನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸುತ್ತಾನೆ. ಮೊಗಲರ ದೊರೆ ಔರಂಗಜೇಬನು ತನ್ನ ಆಡಳಿತದ ಅವಧಿಯಲ್ಲಿ

ವೇಶ್ಯಾವಾಟಿಕೆಯನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸಿರುವುದು ತಿಳಿಯುತ್ತದೆ. ಔರಂಗಜೇಬ ತನ್ನ ರಾಜ್ಯದಲ್ಲಿದ್ದ ವೇಶ್ಯೆಯರಿಗೆ ಮತ್ತು ದೇವದಾಸಿಯರಿಗೆ ಮದುವೆ ಮಾಡಿಕೊಳ್ಳಬೇಕೆಂದು ಆಜ್ಞೆಯನ್ನು ಹೊರಡಿಸಿದ್ದ. ಇಲ್ಲದಿದ್ದರೆ ಗಡಿಪಾರು ಮಾಡುವ ಹಾಗೆ ಆದೇಶ ಮಾಡಿದ್ದ. ಇವು ವೇಶ್ಯಾವಾಟಿಕೆಯ ನಿರ್ಮೂಲನೆಯಲ್ಲಿ ದೇಶದಲ್ಲಿ ನಡೆದ ಮೊದಲ ಪ್ರಯತ್ನಗಳಾಗಿವೆ. ನಂತರ ೧೮ನೇ ಶತಮಾನದಲ್ಲಿ ಭಾರತಕ್ಕೆ ಬ್ರಿಟಿಷರ ಆಗಮನದಿಂದ ವಸಾಹತು ನಿರ್ಮಾಣವಾದವು. ಅವರ ಜೊತೆಗೆ ಬಂದ ಅವರ ಸೇನೆಯು ಬೀಡು ಬಿಟ್ಟ ಕಡೆಗಳಲ್ಲೆಲ್ಲಾ ದಂಡು(ಕಂಟೋನ್ಮೆಂಟ್) ನಿರ್ಮಾಣವಾದವು. ಬ್ರಿಟಿಷರು ತಮ್ಮ ಸೈನಿಕರ ಲೈಂಗಿಕ ತೃಪ್ತಿಗೋಸ್ಕರ ವೇಶ್ಯಾಗೃಹಗಳನ್ನು ಸ್ಥಾಪಿಸಿದರು. ತಲೆಹಿಡುಕರನ್ನು ಹುಟ್ಟುಹಾಕಿದರು. ಇವರು ಕೊಡುತ್ತಿದ್ದ ಹಣದ ಆಸೆಗಾಗಿ ಮಹಿಳೆಯರನ್ನು ಮತ್ತು ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ತಲೆಹಿಡುಕರು ವೇಶ್ಯಾಗೃಹಗಳಿಗೆ ಸಾಗಾಣಿಕೆ ಮಾಡತೊಡಗಿದರು. ಆಗ ಅಸ್ತಿತ್ವದಲ್ಲಿದ್ದ ಸಮಾಜ ಸುಧಾರಣಾ ಚಳುವಳಿಯ ಒತ್ತಡದಿಂದಾಗಿ, ಭಾರತೀಯ ದಂಡ ಸಂಹಿತೆ ೧೮೬೦ರ ಕಾಯ್ದೆಯು, ವೇಶ್ಯಾವಾಟಿಕೆಯಲ್ಲಿ ಮಹಿಳೆ ಮತ್ತು ಮಕ್ಕಳನ್ನು ತಳ್ಳುವುದು ಮತ್ತು ಪಡೆಯುವುದನ್ನು ನಿಷೇಧಿಸಿತು[೨] (ಜೋಗನ್ ಶಂಕರ್, ೧೯೯೦, ಮನೋರಂಜಿನಿ, ೨೦೦೭, ಕುಸುಮಾ ಶಾನಭಾಗ, ೨೦೦೭).

ಅಪ್ರಾಪ್ತ ಮಕ್ಕಳು ಮತ್ತು ಮಹಿಳೆಯರನ್ನು ಕಾಡುತ್ತಿದ್ದ ದೇವದಾಸಿ ಸಮಸ್ಯೆಯನ್ನು ಹತ್ತಿಕ್ಕುವುದಕ್ಕಾಗಿ ಮೈಸೂರು ಸರ್ಕಾರವು ೧೯೧೦ ಎಪ್ರೀಲ್‌ನಲ್ಲಿ ದೇವದಾಸಿಯರನ್ನು ದೇವಾಲಯಗಳ ಸೇವೆಯಿಂದ ನಿಷೇಧಿಸಿ ಕಾನೂನು ಹೊರಡಿಸಿತು. ಹಾಗೆಯೇ ೧೯೨೭ರ ಹಿಂದೂ ಧಾರ್ಮಿಕ ಮತ್ತು ದಾನದತ್ತಿ ಕಾನೂನು ದೇವಾಲಯಗಳಿಗೆ ಬಾಲಕಿಯರನ್ನು ಅರ್ಪಿಸುವ ರೂಢಿ ಮತ್ತು ಆಚರಣೆ ಶಿಕ್ಷೆಗೆ ಅರ್ಹ ಎಂದು ಸಾರಿತು.

ಭಾರತೀಯ ಇತಿಹಾಸದಲ್ಲಿ ಬಾಲ್ಯವಿವಾಹವು ಬಹು ಹಿಂದಿನಿಂದ ಒಂದು ಸವಾಲಾಗಿ ಬೆಳೆದು ಬಂದಿದೆ. ಹೆಣ್ಣು ಮಗಳನ್ನು ಅವಳ ಯಾವುದೋ ವಯಸ್ಸಿನಲ್ಲಿ ವಿವಾಹ ಬಂಧನಕ್ಕೆ ಒಳಪಡಿಸುವ ಪರಂಪರೆ ಇದ್ದಿತು. ಅವಳು ಋತುಮತಿಯಾದ ನಂತರ ೧೬ ದಿನಗಳ ಒಳಗೆ ತನ್ನ ವೈವಾಹಿಕ ಜೀವನವನ್ನು ಪ್ರಾರಂಭಿಸಬೇಕಾಗುತ್ತಿತ್ತು. ಇದರಿಂದ ಅಮಾಯಕವಾದ ಮತ್ತು ಲೈಂಗಿಕ ಜೀವನ ಪ್ರಾರಂಭಿಸಲು ಅನರ್ಹವಾದ ಹೆಣ್ಣು ಮಗುವಿನ ಮೇಲೆ ಅವಳಿಗಿಂತ ತುಂಬಾ ದೊಡ್ಡವನಾದ(೨೦ ರಿಂದ ३೦ ವರ್ಷ) ಗಂಡನಿಂದ ಲೈಂಗಿಕ ಅತ್ಯಾಚಾರಗಳಾಗಿ ಆ ಹೆಣ್ಣು ಮಗು ಮರಣವನ್ನಪ್ಪುವ ಸ್ಥಿತಿ ಬರುತ್ತಿದ್ದವು. ಅಲ್ಲದೆ ಅವಳ ಇಚ್ಛೆಗೆ ವಿರುದ್ಧವಾದ ಎಷ್ಟೋ ಪ್ರಕರಣಗಳು ನಡೆಯುತ್ತಿದ್ದವು (೧೮೯೦ರ ಫಿಲೋಮನಿದಾಸ್ ಮತ್ತು ಹರಿ ಮೈಥಿಕ ಪ್ರಕರಣ ಹಾಗೂ ರಕ್ಮಾ ಬಾಯಿ ಮತ್ತು ದಾದಾಜಿ ಮೆಕಾಜಿ ಪ್ರಕರಣಗಳು). ಹೆಣ್ಣುಮಕ್ಕಳು ಮತ್ತು ಮಹಿಳೆಯರ ಮೇಲಾಗುವ ಲೈಂಗಿಕ ಹಿಂಸೆಯನ್ನು ದೌರ್ಜನ್ಯವನ್ನು ತಡೆಗಟ್ಟುವ ಅನಿವಾರ್ಯತೆಯನ್ನು ಕಂಡುಕೊಂಡ ಸಮಾಜ ಸುಧಾರಕರಾದ ಮಲಬಾರಿ, ರಾನಡೆ, ಈಶ್ವರ್‌ಚಂದ್ರ ವಿದ್ಯಾಸಾಗರ್, ಬಾಲಗಂಗಾಧರ್ ತಿಲಕ್ ಮೊದಲಾದವರು ಬಾಲ್ಯವಿವಾಹದ ವಿರುದ್ಧ ಆಂದೋಲನವನ್ನು ಪ್ರಾರಂಭಿಸಿದರು. "ಬಾಲ್ಯವಿವಾಹ ಮಹಿಳೆಯ ಆರೋಗ್ಯವನ್ನು

ಹಾಳು ಮಾಡುತ್ತದಷ್ಟೇ ಅಲ್ಲದೇ ಆ ಮೂಲಕ, ಒಟ್ಟಾರೆಯಾಗಿ ರಾಷ್ಟ್ರದ ಆರೋಗ್ಯಕ್ಕೆ ಹಾನಿಯುಂಟು ಮಾಡುತ್ತದೆ" ಎಂಬುದು ಈಶ್ವರ್ ಚಂದ್ರ ವಿದ್ಯಾಸಾಗರ್ ಅವರ ಅಭಿಪ್ರಾಯವಾಗಿತ್ತು. ಅಲ್ಲದೇ, ಭಾರತೀಯ ಸಾಮಾಜಿಕ ಬಂಧವನ್ನು ದುರ್ಬಲಗೊಳಿಸುವುದಕ್ಕೆ ಇದೇ ಕಾರಣವೆಂದು ಮೊದಲಿನಿಂದಲೂ ಅವರು ವಾದ ಮಾಡುತ್ತಲೇ ಬಂದಿದ್ದರು. ಈ ಆಂದೋಲನದ ಪರಿಣಾಮವಾಗಿ ಈಗಾಗಲೇ ಭಾರತೀಯ ದಂಡ ಸಂಹಿತೆಯ ಅಡಿಯಲ್ಲಿ ಇದ್ದ ನೀತಿ ನಿಯಮಗಳಿಗೆ ತಿದ್ದುಪಡಿ ತಂದು ೧೯೨೯ರ ಬಾಲ್ಯವಿವಾಹ ನಿಷೇಧ ಕಾಯಿದೆಯನ್ನು ಜಾರಿಗೊಳಿಸಲಾಯಿತು(ಗೀತಾ ಕೃಷ್ಣ ಮೂರ್ತಿ, ೨೦೦೯).[೩]

ಕಾಲಕಾಲಕ್ಕೆ ಬದಲಾವಣೆಗೊಳಪಡುತ್ತಾ ಬಂದ ಬಾಲ್ಯವಿವಾಹ(ನಿಷೇಧ) ಕಾಯಿದೆಯು, ಬಾಲ್ಯವಿವಾಹವೆಂಬುದು ಮಗುವಿನ ಮಾನವ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಅಲ್ಲದೇ ಮಗುವಿನ ಆರೋಗ್ಯದ ಮೇಲೆ ಅತೀವ ಪ್ರತಿಕೂಲ ಪರಿಣಾಮ ಬೀರುತ್ತದೆ. ಇದು ಮಗುವಿನ ಬಾಲ್ಯದ ಮತ್ತು ಹದಿಹರೆಯದ ಹಕ್ಕಿನ ನಿರಾಕರಣೆಯಾಗುತ್ತದೆ. ಮಗುವಿನ ವೈಯಕ್ತಿಕ ಸ್ವಾತಂತ್ರ್ಯ ಹರಣ ಮಾಡುವುದರ ಜೊತೆಗೆ ಅದರ ವ್ಯಕ್ತಿತ್ವ ವಿಕಸನಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ. ಮಗುವನ್ನು ಬಾಲ್ಯವಿವಾಹವು ಶೈಕ್ಷಣಿಕ ಅವಕಾಶದಿಂದ ವಂಚಿತರನ್ನಾಗಿ ಮಾಡಿ, ಮಗುವಿನ ದೈಹಿಕ, ಮಾನಸಿಕ ಹಾಗೂ ಭಾವನಾತ್ಮಕ ಬೆಳವಣಿಗೆಯ ಮೇಲೆ ಸರಿಪಡಿಸಲಾರದಷ್ಟು ಹಾನಿಯನ್ನು ಉಂಟುಮಾಡುತ್ತದೆ. ಹಾಗಾಗಿ ೧೯೨೯ರ ಬಾಲ್ಯವಿವಾಹ ನಿಷೇಧ ಕಾಯಿದೆಯಲ್ಲಿದ್ದ ಕೆಲವು ನ್ಯೂನ್ಯತೆಗಳನ್ನು ಹೋಗಲಾಡಿಸಿ, ೨೦೦೬ರಲ್ಲಿ ಬಾಲ್ಯವಿವಾಹ ನಿಷೇಧ ಕಾಯಿದೆಯನ್ನು ಪುನರ್ ತಿದ್ದುಪಡಿ ಮಾಡಿ ರೂಪಿಸಲಾಯಿತು. ಈ ಕಾಯಿದೆಯ ಪ್ರಕಾರ ವಿವಾಹವಾಗಬೇಕಾದರೆ ಗಂಡಿಗೆ ೨೧ ವರ್ಷ ಮತ್ತು ಹೆಣ್ಣಿಗೆ ೧೮ ವರ್ಷಗಳಾಗಿರಲೇಬೇಕು. ಇದನ್ನು ಮುರಿಯುವವರು ಮತ್ತು ಸಹಕರಿಸುವ ಎಲ್ಲರೂ ಅಪರಾಧಿಗಳು ಮತ್ತು ಶಿಕ್ಷೆಗೆ ಅರ್ಹರು.

ಮಕ್ಕಳು ಮತ್ತು ಮಹಿಳೆಯರನ್ನು ರಕ್ಷಿಸುವ ಉದ್ದೇಶದಿಂದ ೧೯೫೬ರಲ್ಲಿ ಜಾರಿಗೊಂಡ **ಅನೈತಿಕ ಸಾಗಾಣಿಕೆ (ನಿಷೇಧ) ಕಾಯಿದೆಯು** ಇಂದಿಗೂ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಇದೇ ಕಾಯಿದೆಗೆ ೧೯೮೬ರಲ್ಲಿ ತಿದ್ದುಪಡಿಗೊಳಿಸಿ "ಅನೈತಿಕ ಸಾಗಾಣಿಕೆ (ತಡೆಗಟ್ಟುವಿಕೆ) ಕಾಯಿದೆ"(ಪಿ ಐ ಟಿ ಎ) ಎಂದು ಕರೆಯಲಾಯಿತು. ಎಸ್ ಐ ಟಿ ಕಾಯಿದೆಗೂ ಪಿ ಐ ಟಿ ಕಾಯಿದೆಗೂ ಅಷ್ಟೇನೂ ವ್ಯತ್ಯಾಸಗಳಿಲ್ಲ. ಆದರೂ ೧೯೮೬ರಲ್ಲಿ ಎಸ್ ಆಯ್ ಟಿ ಕಾಯಿದೆಗೆ ತಿದ್ದುಪಡಿ ತಂದ ಪ್ರಕಾರ, ಮೊದಲನೆಯದಾಗಿ ಎಸ್ ಐ ಟಿ ಕಾಯಿದೆಯಲ್ಲಿ, 'ಮಹಿಳೆ ಮತ್ತು ಮಕ್ಕಳ' ಎಂದು ಇದ್ದದ್ದನ್ನು ಪಿ ಐ ಟಿ ಕಾಯಿದೆಯಲ್ಲಿ, 'ಪರ್ಸನ್ಸ್' ವ್ಯಕ್ತಿಗಳು ಎಂದು ತಿದ್ದುಪಡಿಯಾಯಿತು. ಅಂದರೆ ಹೆಣ್ಣುಮಕ್ಕಳಿಗಷ್ಟೇ ಮೀಸಲಾಗಿದ್ದ ಕಾನೂನು, ಪುರುಷರು, ಹಿಜಡಾಗಳು ಎಲ್ಲರನ್ನೂ ಒಳಗೊಂಡಿತು. ಎಸ್ ಐ ಟಿ ಕಾಯಿದೆಯಲ್ಲಿ, 'ಪ್ರಾಸ್ಟಿಟ್ಯೂಟ್' –ವೇಶ್ಯೆ ಎಂಬ ಪದವು, "*The act of a female offering her body for promiscuous sexual intercourse for hire, wheather in money or kind* ▯ ಒಬ್ಬ ಮಹಿಳೆ ತನ್ನ ದೇಹವನ್ನು ಹಣ ಅಥವಾ ಯಾವುದೇ ವಸ್ತುವಿಗೆ, ಲೈಂಗಿಕ ಸಂಯೋಗಕ್ಕಾಗಿ, ನೀಡಿದರೆ ಅವಳನ್ನು ವೇಶ್ಯೆ ಎಂದು ಅರ್ಥೈಸಲಾಗುತ್ತಿತ್ತು. ಆದರೆ ಪಿ ಐ ಟಿ ಕಾಯಿದೆಯಲ್ಲಿ ಅದು,

"The *sexual exploitation or abuse of persons for commercial purposes*". ವ್ಯವಹಾರದ ಉದ್ದೇಶಕ್ಕಾಗಿ ಯಾವುದೋ ಒಬ್ಬ ವ್ಯಕ್ತಿಯನ್ನು ಲೈಂಗಿಕವಾಗಿ ಶೋಷಿಸುವ ಅಥವಾ ದೌರ್ಜನ್ಯವೆಸಗುವುದು ವೇಶ್ಯಾವಾಟಿಕೆಯಾಗಿದೆ ಎಂದು ಅರ್ಥೈಸಲಾಗುತ್ತದೆ. ಹಾಗೆಯೇ ಲೈಂಗಿಕ ದಂಧೆಗೆ ಒಳಗಾದವರನ್ನು ಅಪರಾಧಿ ಎಂದು ಪರಿಗಣಿಸದೇ, ಅವರನ್ನು ಈ ಸ್ಥಿತಿಗೆ ಬರಲು ಕಾರಣರಾದ, ಘರವಾಲಿಗಳು, ತಲೆಹಿಡುಕರು(ದಲಾಲ), ಮನೆಯನ್ನು ಬಾಡಿಗೆ ಕೊಟ್ಟವರನ್ನು ಮತ್ತು ಇವರ ಗಳಿಕೆಯ ಮೇಲೆ ಬದುಕುವವರನ್ನು ಅಪರಾಧಿಗಳೆಂದು ಶಿಕ್ಷಿಸುತ್ತದೆ. ೨೦೦೬ರ ಮಸೂದೆಯಲ್ಲಿ ವೇಶ್ಯೆಯಾದವಳನ್ನು ಶಿಕ್ಷಿಸುವುದಲ್ಲ, ಅದಕ್ಕೆ ಕಾರಣಕರ್ತರಾದವರನ್ನು ಶಿಕ್ಷಿಸಬೇಕು ಎಂದು ಹೇಳುತ್ತದೆ. ದಂಧೆಗೆ ಒಳಗಾದವರನ್ನು ಶೋಷಿತರು ಸಂತ್ರಸ್ಥರು ಎಂದು ಗುರುತಿಸಲಾಗುತ್ತಿದ್ದು, ಅವರಿಗೆ ಪುನರ್ವಸತಿ ಕಲ್ಪಿಸಲು ಸೂಚಿಸುತ್ತದೆ.

ದೇವದಾಸಿ ಪದ್ಧತಿಯ ಆಚರಣೆಯಿಂದಾಗಿ ಸಾವಿರಾರು ಮಕ್ಕಳು ಮತ್ತು ಮಹಿಳೆಯರು ದೇವರ ಹೆಸರಿನಲ್ಲಿ, ಸಾಂಪ್ರದಾಯಿಕವಾದ ಲೈಂಗಿಕ ದಂಧೆಯನ್ನು ಮಾಡುತ್ತಿದ್ದರು. ಕೌಟುಂಬಿಕ ಒತ್ತಡಗಳು ಮತ್ತು ಪರಿಸ್ಥಿತಿಗಳು ಇವರನ್ನು ಹೀಗೆ ಮಾಡಿಸುತ್ತಿದ್ದವು. ಜೋಗನ್ ಶಂಕರ್ ಅವರು ತಮ್ಮ ದೇವದಾಸಿ ಸಂಪ್ರದಾಯ ಪುಸ್ತಕದಲ್ಲಿ ಉಲ್ಲೇಖಿಸುವಂತೆ, ಸಾಮಾನ್ಯ ವೇಶ್ಯಾವಾಟಿಕೆಯ ಮೇಲೆ ಹಲವಾರು ಅಧ್ಯಯನಗಳು ನಡೆದಿವೆ. ಆದರೆ ದೇವದಾಸಿ ಸಮಸ್ಯೆಯ ಮೇಲೆ ಅಂತ ಯಾವ ಆಳವಾದ ಅಧ್ಯಯನಗಳು ನಡೆದಿರಲಿಲ್ಲ. ೧೯೮೧ರಲ್ಲಿ ಬೆಂಗಳೂರಿನ 'ಸಂಯುಕ್ತ ಮಹಿಳಾ ವೇದಿಕೆ' (ಜಾಯಿಂಟ್ ವುಮೆನ್ಸ್ ಪ್ರೋಗ್ರಾಮ್) ಎಂಬ ಸ್ವಯಂ ಸೇವಾ ಸಂಸ್ಥೆಯೊಂದು ಅಧ್ಯಯನ ನಡೆಸಿತು. ಈ ಸಂಸ್ಥೆಯು ತಾನು ನಡೆಸಿದ ಸಮೀಕ್ಷೆಯ ವರದಿಯನ್ನು ಕರ್ನಾಟಕ ಸರ್ಕಾರಕ್ಕೆ ಸಲ್ಲಿಸಿತು. ಇದರಿಂದಾಗಿ ಸಮಸ್ಯೆಯ ತೀವ್ರತೆಯನ್ನು ಅರ್ಥಮಾಡಿಕೊಂಡ ಸರ್ಕಾರವು ತಾನೂ ಸಹ ದೇವದಾಸಿ ಮಹಿಳೆಯರ ಸ್ಥಿತಿಗತಿಯ ಕುರಿತು ಒಂದು ಅಧ್ಯಯನವನ್ನು ಕೈಗೊಂಡಿತು. ಪರಿಣಾಮವಾಗಿ ೧೯೮೨ರಲ್ಲಿ ಕರ್ನಾಟಕ ದೇವದಾಸಿ(ಸಮರ್ಪಣೆ ಮತ್ತು ನಿಷೇಧ) ಕಾಯಿದೆಯನ್ನು ಜಾರಿಗೊಳಿಸಿತು. ಇದು ೧೯೮೪ರಿಂದ ತನ್ನ ಕೆಲಸವನ್ನು ಪ್ರಾರಂಭಿಸಿತು.[೪]

ಕಾಯಿದೆಯ ಪ್ರಕಾರ ಯಾವುದೇ ದೇವತೆಗೆ, ದೇವಸ್ಥಾನಕ್ಕೆ ಮಹಿಳೆಯರನ್ನು ಮತ್ತು ಬಾಲಕಿಯರನ್ನು ದೇವದಾಸಿಯಾಗಿ ಸಮರ್ಪಿಸುವುದನ್ನು ನಿಷೇಧಿಸಲಾಯಿತು. ಯಾರಾದರೂ ಕಾನೂನಿನ ಅರಿವಿದ್ದೂ ಅಥವಾ ಇಲ್ಲದೆಯೂ ಬಾಲಕಿಯರನ್ನು ಮಹಿಳೆಯರನ್ನು ಸಮರ್ಪಿಸಿದರೆ ಅಥವಾ ಸಮರ್ಪಿಸಲು ಪ್ರತ್ಯಕ್ಷವಾಗಿ ಇಲ್ಲವೇ ಪರೋಕ್ಷವಾಗಿ ಸಹಕಾರ ನೀಡಿದರೆ ಅಂತವರಿಗೆ ಜೈಲುವಾಸ ಮತ್ತು ದಂಡದ ಶಿಕ್ಷೆಯನ್ನು ಕಾಯಿದೆಯು ಹೇಳುತ್ತದೆ. ದೇವದಾಸಿಯಾಗಿ ಸಮರ್ಪಿತವಾಗಿದ್ದ ಮಹಿಳೆಗೆ/ಬಾಲಕಿಗೆ ಪುನರ್ವಸತಿ ಕಲ್ಪಿಸಬೇಕೆಂದು ವಿವರಿಸಲಾಗಿದೆ. ಪುನರ್ವಸತಿ ಕಾರ್ಯಕ್ರಮಗಳು ಪ್ರಸ್ತುತ ಸಮಾಜ ಕಲ್ಯಾಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಗಳಿಂದ ಪುನರ್ವಸತಿ ಕಾರ್ಯಕ್ರಮಗಳು ಮತ್ತು ಯೋಜನೆಗಳು ಜಾರಿಯಲ್ಲಿವೆ.

ಸಂಕಷ್ಟದಲ್ಲಿರುವ ಮಕ್ಕಳ ಪಾಲನೆ ಮತ್ತು ಪೋಷಣೆಗಾಗಿ ೧೯೮೬ರಲ್ಲಿ ಬಾಲ ನ್ಯಾಯ ಕಾಯಿದೆಯನ್ನು ಜಾರಿಗೆ ತರಲಾಯಿತು. ಸಂಯುಕ್ತ ರಾಷ್ಟ್ರ ಸಂಸ್ಥೆಯು ತನ್ನ ಸಾಮಾನ್ಯ ಸಭೆಯಲ್ಲಿ, ೧೯೮೯ರ ನವೆಂಬರ್ ೨೦ರಂದು ಮಕ್ಕಳ ಹಕ್ಕುಗಳ ಮೇಲೆ ಒಡಂಬಡಿಕೆಯನ್ನು ಅಂಗೀಕರಿಸಿತು. ಭಾರತವು ಈ ಒಡಂಬಡಿಕೆಗಳಿಗೆ ಒಪ್ಪಿಕೊಂಡು ೧೯೯೨ ಡಿಸೆಂಬರ್ ೧೧ರಂದು ಒಡಂಬಡಿಕೆಯನ್ನು ಒಪ್ಪಿಕೊಂಡಿದೆ. ಈ ಒಡಂಬಡಿಕೆಯು ಬಲಿಪಶುವಾದ ಮಕ್ಕಳನ್ನು ಸಾಧ್ಯವಾದಷ್ಟು ಮಟ್ಟಿಗೆ, ನ್ಯಾಯಿಕ ವ್ಯವಹಾರಗಳಿಗೆ ಗುರಿಪಡಿಸದೆ ಸಾಮಾಜಿಕ ಜೀವನದಲ್ಲಿ ಪುನಃ ಒಂದಾಗಿ ಬೆರೆಯುವಂತೆ(ರೀ ಇಂಟಿಗ್ರೇಶನ್) ಮಾಡುವುದಕ್ಕೆ ಒತ್ತು ನೀಡಿರುವುದರಿಂದ, ಈ ಮೇಲಿನ ಎಲ್ಲ ಅಂಶಗಳನ್ನು ಪರಿಗಣಿಸಿ ಬಾಲ ನ್ಯಾಯ(ಮಕ್ಕಳ ಪಾಲನೆ ಮತ್ತು ಪೋಷಣೆ) ಕಾಯಿದೆ ೨೦೦೦ ಎಂದು ಕರೆಯಲಾಗಿದೆ. ಕಾನೂನಿನ ಜೊತೆ ಸಂಘರ್ಷವಿರುವ ಮಕ್ಕಳ ಪಾಲನೆ ಮತ್ತು ರಕ್ಷಣೆಯ ಅವಶ್ಯಕತೆ ಕುರಿತು ಈ ಕಾಯಿದೆಯಲ್ಲಿ ತಿದ್ದುಪಡಿ ಮಾಡಲಾಗಿದೆ. ಮಕ್ಕಳ ಅತ್ಯುತ್ತಮ ಹಿತಾಸಕ್ತಿಗಳನ್ನು ಕಾಯ್ದುಕೊಂಡು, ನ್ಯಾಯ ನಿರ್ಣಯ ಮತ್ತು ನ್ಯಾಯ ವಿಲೇವಾರಿ ಮಾಡುವಲ್ಲಿ ಮಕ್ಕಳ ಜೊತೆಗೆ ಸ್ನೇಹಪರ ಮನೋಭಾವ ಅಳವಡಿಸಿಕೊಳ್ಳಬೇಕೆಂದು ತಿದ್ದುಪಡಿ ಮಾಡಲಾಗಿದೆ. ಹಾಗೆಯೇ ಅಂತಹ ಮಕ್ಕಳಿಗೆ ಪುನರ್ವಸತಿ ಕಲ್ಪಿಸಬೇಕೆಂದು ಈ ಕಾನೂನು ನಿರ್ದೇಶನ ನೀಡುತ್ತದೆ.

ಪ್ರಸ್ತುತ ಮಕ್ಕಳ ಮೇಲಾಗುತ್ತಿರುವ ಅತಿಯಾದ ಲೈಂಗಿಕ ದೌರ್ಜನ್ಯಗಳಿಂದ ಮಕ್ಕಳನ್ನು ರಕ್ಷಿಸಲು ೨೦೧೨ರಲ್ಲಿ **ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣಾ ಅಧಿನಿಯಮ ಮತ್ತು ನಿಯಮಗಳು-೨೦೧೨ (ಪೋಕ್ಸೋ ಆ್ಯಕ್ಟ ಮತ್ತು ರೂಲ್ಸ್-೨೦೧೨)**ನ್ನು ಜಾರಿಗೊಳಿಸಲಾಯಿತು. ಮಗುವಿನ ಮೇಲಾಗುವ ಲೈಂಗಿಕ ದೌರ್ಜನ್ಯಗಳಿಗೆ ಶಿಕ್ಷೆಯನ್ನು ವಿಧಿಸುವ ಹಂತಗಳನ್ನು ಈ ಕಾಯಿದೆ ಹೇಳುತ್ತದೆ. ಇಲ್ಲಿ ವಿಧಿಸಲಾಗಿರುವ ಶಿಕ್ಷೆಗಳು ಮಗುವಿನ ಮೇಲೆ ನಡೆಯುವ ಲೈಂಗಿಕ ದೌರ್ಜನ್ಯಗಳ ಸ್ವರೂಪದ ಆಧಾರದ ಮೇಲೆ ನಿಗದಿಪಡಿಲ್ಪಟ್ಟಿವೆ.

ಪೋಸ್ಕೋ ಆ್ಯಕ್ಟ ಮತ್ತು ರೂಲ್ಸ್-೨೦೧೨ ಎಂದು ಕರೆಯಲಾಗುತ್ತದೆ. ಇದರ ಪ್ರಕಾರ ಮಗು ಎಂದರೆ ೧೮ ವರ್ಷ ಪೂರ್ಣಗೊಳಿಸಿರದ ವ್ಯಕ್ತಿಯಾಗಿದೆ. ಈ ಪ್ರಕಾರ, ಯಾವುದೇ ವ್ಯಕ್ತಿ ಮಗುವನ್ನು ಯಾವುದೇ ರೀತಿಯಿಂದ ಪ್ರಚೋದಿಸುವುದು ಮಗುವಿನ ಮೇಲಿನ ದೌರ್ಜನ್ಯ(ಪೆನೆಟ್ರೇಟಿವ್ ಸೆಕ್ಷುವಲ್ ಅಸಲ್ಟ್) ಎಂದೆನಿಸುತ್ತದೆ(ಕಲಂ ೩), ಮಗುವಿನ ಮೇಲೆ ಬಲಾತ್ಕಾರಯುತವಾಗಿ ಲೈಂಗಿಕ ದೌರ್ಜನ್ಯ ಎಸಗಿದರೆ ಬಲಾತ್ಕಾರಯುತ ಲೈಂಗಿಕ ಹಲ್ಲೆ(ಅಗ್ರವೇಟೆಡ್ ಪೆನೆಟ್ರೇಟಿವ್ ಸೆಕ್ಷುವಲ್ ಅಸಲ್ಟ್) ಎಂದೆನಿಸುತ್ತದೆ (ಕಲಂ ೫), ಲೈಂಗಿಕ ಉದ್ದೇಶದಿಂದ ಮಗುವಿನ ದೇಹದ ನಾನಾ ಭಾಗಗಳನ್ನು ಮುಟ್ಟುವುದು ಹಾಗೂ ಮುಟ್ಟುವಂತೆ ಪ್ರೇರೇಪಿಸುವುದು ಲೈಂಗಿಕ ದೌರ್ಜನ್ಯ(ಸೆಕ್ಷುವಲ್ ಅಸಲ್ಟ್) ಎಂದೆನಿಸುತ್ತದೆ(ಕಲಂ ೭), ಯಾವುದೇ ವ್ಯಕ್ತಿ ಮಗುವಿನ ಮೇಲೆ ತೀವ್ರ ಸ್ವರೂಪದ ಲೈಂಗಿಕ ಹಲ್ಲೆ(ಅಗ್ರವೇಟೆಡ್ ಸೆಕ್ಷುವಲ್ ಅಸಲ್ಟ್) ಎಂದೆನಿಸುವುದು (ಕಲಂ ೯), ಯಾವುದೇ ವ್ಯಕ್ತಿ ಮಗುವಿಗೆ ಲೈಂಗಿಕ ಕಿರುಕುಳ (ಸೆಕ್ಷುವಲ್ ಹೆರ್ಯಾಸ್ಮೆಂಟ್) ನೀಡಿದಲ್ಲಿ(ಕಲಂ ೧೧), ಮಗುವನ್ನು ಯಾವುದೇ ರೀತಿಯ ಅಶ್ಲೀಲ ಚಿತ್ರಗಳ

ರಚನೆಗಾಗಿ ಬಳಸಿಕೊಂಡಲ್ಲಿ (ಕಲಂ ೧೩), ಯಾವುದೇ ಮಗುವಿನ ಅಶ್ಲೀಲ ಚಿತ್ರಗಳನ್ನು ಸಂಗ್ರಹಿಸಿದಲ್ಲಿ (ಕಲಂ ೧೫), ಮಗುವನ್ನು ಸಾಗಾಣಿಕೆ (ಚೈಲ್ಡ್ ಟ್ರ್ಯಾಫಿಕಿಂಗ್) ಮಾಡಲು ಪ್ರತಿನಿಧಿಯಾಗಿ ಭಾಗವಹಿಸಿದಲ್ಲಿ ಹಾಗೂ ಯಾವುದೇ ವ್ಯಕ್ತಿಯು ಲಾಭಕ್ಕಾಗಿ ಇನ್ನೊಂದು ವ್ಯಕ್ತಿಯ ಜೊತೆಗ ಭಾಗಿಯಾದರೂ (ಕಲಂ ೧೬) ಅಪರಾಧಗಳಾಗುತ್ತವೆ. ಈ ಎಲ್ಲ ಅಪರಾಧಗಳಿಗೆ ಮೂರು ವರ್ಷಗಳಿಂದ ೧೦ ವರ್ಷಗಳವರೆಗೆ ಅಜೀವ, ಜೀವಾವಧಿ ಕಾರಾಗೃಹ ಶಿಕ್ಷೆಗಳು ಮತ್ತು ದಂಡ ವಿಧಿಸಲಾಗುವುದು ಎಂದು ಪೋಕ್ಸೋ ಕಾಯಿದೆ ಹೇಳುತ್ತದೆ.

ಲೈಂಗಿಕ ಅಪರಾಧ ಘಟಿಸಿದ ೨೪ ಘಂಟೆಗಳಲ್ಲಿ ವಿಶೇಷ ಪೊಲೀಸರಿಗೆ ಅಥವಾ ಸ್ಥಳೀಯ ಪೊಲೀಸ್ ಠಾಣೆಗೆ ಮಾಹಿತಿ ನೀಡುವ(ಕಲಂ ೧೯), ಹತ್ತಿರದ ಆಸ್ಪತ್ರೆಗೆ ಸೇರಿಸುವ, ಹೆಣ್ಣು ಮಗುವಾದಲ್ಲಿ ಮಹಿಳಾ ವೈದ್ಯರೇ ತಪಾಸಣೆ ಮಾಡುವ, ಇಂತ ಮಕ್ಕಳ ವರದಿಯನ್ನು ಮಾಧ್ಯಮಗಳ ಮೂಲಕ, ಛಾಯಾಚಿತ್ರಗಳ ಮೂಲಕ ಈ ವಿಷಯವನ್ನು ವರದಿ ಮಾಡದಂತೆ ಈ ಕಾಯಿದೆ ತಿಳಿಸುತ್ತದೆ. ಒಂದು ವೇಳೆ ಮಗುವಿಗೆ ತುರ್ತು ಪರಿಹಾರ ಅಥವಾ ಸುಧಾರಣೆ ಅಗತ್ಯ ಎಂದು ಕಂಡು ಬಂದರೆ, ಮಗುವಿನ ಪರವಾಗಿ ಅರ್ಜಿ ಸಲ್ಲಿಸಿ ವಿಶೇಷ ನ್ಯಾಯಾಲಯದಿಂದ ಮಧ್ಯಂತರ ಪರಿಹಾರ ಪಡೆದುಕೊಳ್ಳಬಹುದು(ನಿಯಮ ೭) ಎಂದು ಪೋಸ್ಕೋ ಕಾಯಿದೆಯು ನಿರ್ದೇಶಿಸುತ್ತದೆ. ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣಾ ಅಧಿನಿಯಮ ಮತ್ತು ನಿಯಮಗಳು-೨೦೧೨ (ಪೋಕ್ಸೋ ಆ್ಯಕ್ಟ ಮತ್ತು ರೂಲ್ಸ್-೨೦೧೨) ಇದು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳುವಂತೆ ನಿಗಾವಹಿಸುವ ಜವಾಬ್ದಾರಿಯನ್ನು ಆಯಾ ರಾಜ್ಯಗಳ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗವು ಹೊಂದಿರುತ್ತದೆ (ಕಲಂ ೪೪).

ಇವುಗಳಲ್ಲದೇ ಮಕ್ಕಳನ್ನು ರಕ್ಷಿಸುವ, ಅವರ ಉಳಿವು, ಆರೋಗ್ಯ ಮತ್ತು ಪೌಷ್ಟಿಕತೆ, ಶಿಕ್ಷಣ ಮತ್ತು ಅಭಿವೃದ್ಧಿಗಾಗಿ **೨೦೧೩ರಲ್ಲಿ ಮಕ್ಕಳ ರಾಷ್ಟ್ರೀಯ ನೀತಿ**ಯನ್ನು ರೂಪಿಸಲಾಗಿದೆ. ಅದರ ೪.೫ನೇ ವಿಭಾಗವು ಶಿಕ್ಷಣ ಮತ್ತು ಅಭಿವೃದ್ಧಿಯ ಕುರಿತು ಹೇಳುತ್ತಿದ್ದು, ಅದರಲ್ಲಿ, ೫ನೇಯ ಅಂಶವು, ಶಾಲೆಯಿಂದ ಹೊರಗಿರುವ ಮಕ್ಕಳಾದ ಬಾಲಕಾರ್ಮಿಕರು, ವಲಸೆ ಕುಟುಂಬದ ಮಕ್ಕಳು, ಸಾಗಾಣೆಗೊಳಗಾದ ಮಕ್ಕಳು, ವಲಸೆ ಕಾರ್ಮಿಕರ ಮಕ್ಕಳು, ಬೀದಿಯ ಮೇಲೆ ವಾಸಿಸುವ ಮಕ್ಕಳು, ಮದ್ಯಪಾನ ಮತ್ತು ಮಾದಕ ವಸ್ತುಗಳಿಗೆ ಬಲಿಯಾದ ಮಕ್ಕಳು, ಗಲಭೆ ಪೀಡಿತ ಪ್ರದೇಶದ ಮಕ್ಕಳು, ಅನಾಥರು, ಅಂಗವಿಕಲತೆ ಇರುವ (ದೈಹಿಕ ಮತ್ತು ಮಾನಸಿಕ) ಮಕ್ಕಳು, ಮದುವೆಗೆ ಈಡಾದ ಮಕ್ಕಳು, ಮಲ ಹೊರುವ ಕಾಯಕದಲ್ಲಿರುವ ಸಮುದಾಯದ ಮಕ್ಕಳು, ವ್ಯಾಪಾರೀ ಲೈಂಗಿಕ/ ವೇಶ್ಯಾವೃತ್ತಿಯಲ್ಲಿರುವವರ ಮಕ್ಕಳು, ಕಾರಾಗೃಹದಲ್ಲಿ ಬಂಧಿತರಾಗಿರುವವರ ಮಕ್ಕಳು ಇತ್ಯಾದಿಗಳನ್ನು ಪತ್ತೆ ಹಚ್ಚಿ, ರಕ್ಷಿಸಿ, ಪುನರ್ವಸತಿಗೊಳಿಸುವುದು ಮತ್ತು ಶಿಕ್ಷಣದ ಹಕ್ಕನ್ನು ಖಾತರಿಗೊಳಿಸುವುದರ ಕುರಿತು ಹೇಳುತ್ತದೆ.

ಇದೇ ನೀತಿಯ ೪.೯ನೇ ಭಾಗವು, ಆರ್ಥಿಕ ಶೋಷಣೆ ಮತ್ತು ಲೈಂಗಿಕ ಶೋಷಣೆಗೆ ಗುರಿಯಾಗುವ, ಪರಿತ್ಯಜಿಸುವ, ಪ್ರತ್ಯೇಕಿಸುವ, ಅಪಹರಣಕ್ಕೀಡಾಗುವ, ಯಾವುದೇ ಉದ್ದೇಶಕ್ಕಾಗಿ ಮತ್ತು ಯಾವುದೇ ವಿಧವಾದ ಮಾರಾಟ ಮತ್ತು ಸಾಗಾಣೆಗೆ ಬಲಿಯಾಗುವ, ಅಶ್ಲೀಲ ಚಿತ್ರ, ಮದ್ಯಪಾನ ಮತ್ತು ಮಾದಕ ವಸ್ತು ಅಥವಾ ಯಾವುದೇ ಚಟುವಟಿಕೆಗಳಿಗಾಗಿ ಈಡಾಗಿ ಇನ್ನಾರೋ ಅವರಿಂದ ಉಪಯೋಗ ಪಡೆಯುವ ಅಥವಾ ಮಕ್ಕಳ ವ್ಯಕ್ತಿತ್ವಕ್ಕೆ ಧಕ್ಕೆಯನ್ನುಂಟು ಮಾಡುವ ಅಥವಾ ಮಕ್ಕಳ ಬೆಳವಣಿಗೆಗೆ ತೊಂದರೆ ಉಂಟು ಮಾಡುವುದೇ ಇತ್ಯಾದಿ ಸೇರಿದಂತೆ ಎಲ್ಲಾ ವಿಧವಾದ ದೌರ್ಜನ್ಯ ಮತ್ತು ದುರುಪಯೋಗ, ಹಾನಿ, ನಿರ್ಲಕ್ಷ್ಯ, ಅಗೌರವ, ತಾರತಮ್ಯ, ನಿರಾಕರಣೆ, ಶೋಷಣೆಗಳ ವಿರುದ್ಧ ಎಲ್ಲಾ ಮಕ್ಕಳನ್ನು ಸರ್ಕಾರವು ರಕ್ಷಿಸುತ್ತದೆ ಎಂದು ವಿವರಿಸುತ್ತದೆ.

**೭.೪. ಒಡಂಬಡಿಕೆಗಳು**

ಮಕ್ಕಳು ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಅನೇಕ ಬಗೆಯ ಆಡಳಿತಾತ್ಮಕ ಚರ್ಚೆಗಳು ಎರಡನೆ ಮಹಾಯುದ್ಧದ ನಂತರ ಹೆಚ್ಚು ನಡೆಯಲು ಪ್ರಾರಂಭಿಸಿ ೧೯೪೪ರಲ್ಲಿ ನಡೆದ ಬ್ರಿಟನ್ ವುಡ್ ಸಮಾವೇಶವು ಮೊದಲನೇ ಮತ್ತು ಎರಡನೇ ಮಹಾಯುದ್ಧದಲ್ಲಿ ನಡೆದ ಮಾನವ ಹಾನಿಯನ್ನು ವಿಶ್ಲೇಷಣೆಗೆ ಒಳಪಡಿಸಿರುತ್ತದೆ. ಆ ಮೂಲಕ ಪ್ರಾಪಂಚಿಕವಾಗಿ ಅಭಿವೃದ್ಧಿ ಮತ್ತು ಮಾನವ ರಕ್ಷಣೆ ಕುರಿತು ಚರ್ಚೆಗಳು ಪ್ರಾರಂಭವಾಗುತ್ತವೆ. ೧೯೪೮ ಡಿಸೆಂಬರ್‌ನಲ್ಲಿ ನಡೆದ ಸಮಾವೇಶದಲ್ಲಿ ಮಾನವ ಹಕ್ಕುಗಳ ಒಡಂಬಡಿಕೆಗಳಿಗೆ ಬಹುತೇಕ ಎಲ್ಲ ರಾಷ್ಟ್ರಗಳು ಸಹಿ ಹಾಕುತ್ತವೆ. ಆ ಮೂಲಕ ಮಕ್ಕಳು ಮತ್ತು ಮಹಿಳೆಯರ ರಕ್ಷಣೆ ಕುರಿತಂತೆ ಹೊಸ ಆಯಾಮ ಗರಿಗಟ್ಟಲು ಪ್ರಾರಂಭಿಸುತ್ತದೆ. ಅದರಲ್ಲಿ ಮಹಿಳೆಯರು ಮತ್ತು ಮಕ್ಕಳನ್ನು ಅನೈತಿಕ ವ್ಯವಹಾರಗಳಿಗೆ ಸಾಗಾಣಿಕೆ ಮಾಡುವ ಮತ್ತು ಅವರ ಮೇಲಿನ ಶೋಷಣೆಯನ್ನು ತಪ್ಪಿಸುವುದಕ್ಕಾಗಿ ನಡೆದ ಕೆಲವು ಒಡಂಬಡಿಕೆಗಳನ್ನು ಇಲ್ಲಿ ವಿವರಿಸಲಾಗಿದೆ.

ಮಹಿಳೆ ಮತ್ತು ಮಕ್ಕಳನ್ನು (ಬಾಲಕಿಯರ) ಅನೈತಿಕ ವ್ಯವಹಾರಕ್ಕಾಗಿ ಸಾಗಾಣಿಕೆ ಮಾಡುವುದನ್ನು ದಮನ ಮಾಡುವುದಕ್ಕಾಗಿ ನ್ಯೂಯಾರ್ಕ್ ನಗರದಲ್ಲಿ ಅಂತರಾಷ್ಟ್ರೀಯ ಸಮಾವೇಶವು ನಡೆಯಿತು. ಆ ಸಮಾವೇಶದ ಒಡಂಬಡಿಕೆಗೆ ಭಾರತವು ೧೯೫೦ ಮೇ ೯ರಂದು ಸಹಿ ಹಾಕಿತು. ಇದರ ಪರಿಣಾಮವಾಗಿಯೇ ಭಾರತವು ೧೯೫೬ರಲ್ಲಿ ಮಹಿಳೆ ಮತ್ತು ಮಕ್ಕಳ (ಬಾಲೆ)ನ್ನು ಅನೈತಿಕ ಸಾಗಾಣಿಕೆ ದಮನ ಕಾಯಿದೆ(ಎಸ್ ಆಯ್ ಟಿ ಎ)ಯನ್ನು ಜಾರಿಗೊಳಿಸಿತು(ಎಸ್ ಆರ್ ಮೈಸೇಣಿ.೨೦೦೨)."

ವಿಶ್ವಸಂಸ್ಥೆಯ ಸಾಮಾನ್ಯ ಸಭೆಯು ಮಹಿಳೆಯರ ವಿರುದ್ಧ ಎಲ್ಲಾ ರೀತಿಯ ತಾರತಮ್ಯಗಳನ್ನು ತೊಡೆದು ಹಾಕುವುದಕ್ಕಾಗಿ ೧೯೭೯ರಲ್ಲಿ ಅಂತರಾಷ್ಟ್ರೀಯ ಒಡಂಬಡಿಕೆಯನ್ನು ಅಂಗೀಕರಿಸಿತು. ಭಾರತವು ೧೯೮೦ರಲ್ಲಿ ಇದಕ್ಕೆ ಒಪ್ಪಿಗೆ ಸೂಚಿಸಿ ಸಹಿ ಹಾಕಿ ೯–೭–೧೯೯೩ರಲ್ಲಿ ಈ ಒಡಂಬಡಿಕೆಯ ಆಶಯಗಳ ಜಾರಿಗೆ ಅನುಮೋದನೆ ನೀಡಿದೆ. ಈ ಒಡಂಬಡಿಕೆಯು ಮಹಿಳೆಯರ ಹಕ್ಕುಗಳ ಮಸೂದೆಯಾಗಿದ್ದು, ಮಹಿಳೆಯು ಪುರುಷರಂತೆ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ನಾಗರಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಸಮಾನತೆ ಸಾಧಿಸುವುದನ್ನು ಈ ಒಡಂಬಡಿಕೆಯು ಉತ್ತೇಜಿಸುತ್ತದೆ.

ಮಕ್ಕಳು ತಮ್ಮ ಬಾಲ್ಯದ ೧೮ ವರ್ಷಗಳನ್ನು ಯಾವುದೇ ಒತ್ತಡ ಶೋಷಣೆಗಳಿಲ್ಲದೇ ಅರ್ಥಪೂರ್ಣವಾಗಿ ಬದುಕುಬೇಕೆಂಬ ಉದ್ದೇಶದಿಂದ ೧೯೮೯ರಲ್ಲಿ ವಿಶ್ವಸಂಸ್ಥೆಯು ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ತನ್ನ ಸಾಮಾನ್ಯ ಸಭೆಯಲ್ಲಿ ಮಂಡಿಸಿತು. ಆ ಪ್ರಕಾರ ಎಲ್ಲ ರಾಷ್ಟ್ರಗಳೂ ಒಪ್ಪಿಕೊಂಡಿವೆ. ಭಾರತವೂ ಸಹ ಈ ಒಡಂಬಡಿಕೆಗೆ ಒಪ್ಪಿಕೊಂಡು ಡಿಸೆಂಬರ್ ೧೧, ೧೯೯೨ರಲ್ಲಿ ಸಹಿ ಹಾಕಿದೆ. ಈ ಒಡಂಬಡಿಕೆಯಲ್ಲಿ ಪ್ರಮುಖವಾಗಿ, ಬದುಕುವ ಹಕ್ಕು, ರಕ್ಷಣೆಯ ಹಕ್ಕು, ಅಭಿವೃದ್ಧಿ ಹೊಂದುವ ಹಕ್ಕು ಮತ್ತು ಭಾಗವಹಿಸುವ ಹಕ್ಕು ಎಂಬ ನಾಲ್ಕು ಹಕ್ಕುಗಳಿವೆ. ಮಕ್ಕಳ ಹಕ್ಕುಗಳ ಈ ಒಡಂಬಡಿಕೆಯನ್ನು ೫೪ ಪರಿಚ್ಛೇದಗಳು ಮತ್ತು ೧೦ ಭಾಗಗಳಲ್ಲಿ ವಿಂಗಡಿಸಲಾಗಿದೆ. ಈ ಒಡಂಬಡಿಕೆಗೆ ಒಪ್ಪಿಕೊಂಡು ಸಹಿ ಹಾಕಿದ ಭಾರತವು, ಒಂಡಬಡಿಕೆಯಲ್ಲಿ ತಿಳಿಸಿದ ಎಲ್ಲ ವಿಷಯಗಳನ್ನು ಅಳವಡಿಸಿಕೊಂಡು, ಈಗಾಗಲೇ ಅಸ್ತಿತ್ವದಲ್ಲಿದ್ದ ಬಾಲನ್ಯಾಯ ಕಾಯಿದೆ ೧೯೮೬ ಇದನ್ನು, ಬಾಲ ನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ ೨೦೦೦ ಎಂದು ತಿದ್ದುಪಡಿ ತರುತ್ತದೆ.

**೭.೫. ಕಾರ್ಯಕ್ರಮಗಳು ಮತ್ತು ಯೋಜನೆಗಳು**

ಮಕ್ಕಳ ಲೈಂಗಿಕ ಶೋಷಣೆ ಮತ್ತು ಲೈಂಗಿಕ ಜೀತವನ್ನು ನಿರ್ಬಂಧಿಸಿ, ಮಕ್ಕಳನ್ನು ರಕ್ಷಿಸಿ, ಪುನರ್ವಸತಿಗೊಳಿಸಲು ಮತ್ತು ಪುನರ್ನೆಲೆಗೊಳಿಸುವ ಆಶಯದಿಂದ ಸರ್ಕಾರಗಳು ಅನೇಕ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ರೂಪಿಸಿವೆ.

ಮಹಿಳೆ ಮತ್ತು ಮಕ್ಕಳನ್ನು ಸಾಗಣಿಕೆ ಹಾಗೂ ಬಾಜಾರಿ ಲೈಂಗಿಕ ದಂಧೆಗೆ ಬಲಿಯಾಗದಂತೆ ತಡೆಯಲು, ಬಲಿಯಾದವರನ್ನು ರಕ್ಷಿಸಲು, ಪುನರ್ವಸತಿಗೊಳಿಸಲು ಮತ್ತು ಪುನರ್ನೆಲೆಗೊಳಿಸಲು ಬಹು ಆಯಾಮದ ಪ್ರಯತ್ನವು (ಮಲ್ಟಿ-ಸೆಕ್ಟರಲ್ ಅಪ್ರೋಚ್) ಬೇಕೆಂದು ಯೋಜನಾಕಾರರು ಒಪ್ಪಿಕೊಳ್ಳುತ್ತಾರೆ. ಬಹುತೇಕ ಮಹಿಳೆಯರು ಮತ್ತು ಮಕ್ಕಳು, ಅಭಿವೃದ್ಧಿಯ ದುಸ್ಥಿತಿಯಿಂದಾಗಿಯೇ, ಲೈಂಗಿಕ ಶೋಷಣೆ ಮತ್ತು ಜೀತದ ಸ್ಥಿತಿಗೆ ಒಳಗಾಗುತ್ತಾರೆಂದು ಬಹಳಷ್ಟು ಅಧ್ಯಯನಗಳು ಹೇಳುತ್ತವೆ. ಹಾಗಾಗಿ ಸರ್ಕಾರಗಳು ಬಡತನ ರೇಖೆಗಿಂತ ಕೆಳಮಟ್ಟದಲ್ಲಿ ಜೀವಿಸುತ್ತಿರುವ, ಗ್ರಾಮೀಣ ಪ್ರದೇಶಗಳ ಮತ್ತು ನಗರ ಪ್ರದೇಶಗಳ ಕೊಳಚೆ ಪ್ರದೇಶಗಳ ಜನರ ಬಡತನವನ್ನು ನಿರ್ಮೂಲನಗೊಳಿಸುವುದಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ.

ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಸಹಯೋಗದಲ್ಲಿ, **ಸ್ವರ್ಣ ಜಯಂತಿ ಗ್ರಾಮೀಣ** ಮತ್ತು **ಶಹರಿ ರೋಜಗಾರ ಯೋಜನೆ, ಉದ್ಯೋಗ ಖಾತರಿ ಯೋಜನೆ, ಆಹಾರಕ್ಕಾಗಿ ಕೆಲಸ, ಸ್ವಯಂ ಉದ್ಯೋಗ ತರಬೇತಿ ಮತ್ತು ಕಿರುಸಾಲ ಯೋಜನೆಗಳು** ಜಾರಿಯಲ್ಲಿವೆ. **ಆಹಾರ ಮತ್ತು ನಾಗರಿಕ ಪೂರೈಕೆಗಳ** ಮಂತ್ರಾಲಯವು, ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಅನುಕೂಲವಾಗುವ ದರದಲ್ಲಿ ಆಹಾರ ಧಾನ್ಯಗಳನ್ನು ದೇಶದಾದ್ಯಂತ ಪೂರೈಸಲು ಪ್ರಯತ್ನ ಮಾಡುತ್ತಿದೆ.

ಬಾಲ ಕಾರ್ಮಿಕ, ಬಾಲ್ಯ ವಿವಾಹ, ಲೈಂಗಿಕ ಶೋಷಣೆ, ಲೈಂಗಿಕ ಜೀತದಂತಹ ವಿಷಮ ಪರಿಸ್ಥಿತಿಗಳಿಂದ ಮಕ್ಕಳನ್ನು (ಗಂಡು ಮತ್ತು ಹೆಣ್ಣು) ಕಾಪಾಡಿಕೊಳ್ಳುವುದಕ್ಕಾಗಿ **ಸಮಗ್ರ ಶಿಶು ಅಭಿವೃದ್ಧಿ**

**ಯೋಜನೆ( ಐಸಿಡಿಎಸ್)** ಯು ಜಾರಿಯಲ್ಲಿದೆ. ಈ ಮೂಲಕ ದೇಶದ ೦-೬ ವಯೋಮಾನದ ಎಲ್ಲ ಮಕ್ಕಳಿಗೂ ಪೌಷ್ಟಿಕ ಆಹಾರ, ಚುಚ್ಚು ಮದ್ದು ಮತ್ತು ಶಾಲಾ ಪೂರ್ವ ಚಟುವಟಿಕೆಗಳು ನಡೆಯುತ್ತಿವೆ.

೧೪ ವರ್ಷದ ಎಲ್ಲ ಮಕ್ಕಳಿಗೂ ಕಡ್ಡಾಯವಾದ ಶಿಕ್ಷಣವನ್ನು ಒದಗಿಸಲು ಸರ್ಕಾರವು ಬದ್ಧವಾಗಿದ್ದು, ಸರ್ವ ಶಿಕ್ಷಣ ಅಭಿಯಾನದ ಮೂಲಕ ಈ ಉದ್ದೇಶವನ್ನು ಅನುಷ್ಠಾನಗೊಳಿಸುತ್ತಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮೂಲಕ ವಿಶೇಷವಾಗಿ ಹೆಣ್ಣುಮಕ್ಕಳಿಗಾಗಿ, **ಬಾಲಿಕಾ ಸಮೃದ್ಧಿ ಯೋಜನೆ** ಮತ್ತು **ಕಿಶೋರಿ ಶಕ್ತಿ ಯೋಜನೆ**ಯು ಜಾರಿಯಲ್ಲಿದ್ದು ಇದರಿಂದ ಹೆಣ್ಣುಮಕ್ಕಳ ಬದುಕುಳಿಯುವಿಕೆ, ಶಿಕ್ಷಣ ಮತ್ತು ಸಶಕ್ತೀಕರಣಕ್ಕೆ ಸಹಾಯವಾಗಿದೆ.

ಇವುಗಳಲ್ಲದೇ ಮಹಿಳೆ ಮತ್ತು ಹೆಣ್ಣುಮಕ್ಕಳ ಸಾಗಾಣಿಕೆಯನ್ನು ತಡೆಗಟ್ಟುವ ದಿಶೆಯಲ್ಲಿ, ವಿಷಮ ಸ್ಥಿತಿಯಲ್ಲಿರುವ ಮಹಿಳೆ ಮತ್ತು ಮಕ್ಕಳಿಗಾಗಿ ಸ್ವಾಧಾರ ಮತ್ತು ಉಜ್ವಲಾ ಯೋಜನೆಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದಲ್ಲಿ ಅನುಷ್ಠಾನಗೊಳಿಸಲಾಗಿದೆ.

**ಸ್ವಾಧಾರ :** ಈ ಯೋಜನೆಯ ಅಡಿಯಲ್ಲಿ ರಕ್ಷಿತಗೊಂಡ ಸಂತ್ರಸ್ಥರಿಗೆ ಆಶ್ರಯ, ಸಮಾಲೋಚನೆ, ವೈದ್ಯಕೀಯ ಸಹಾಯ ಮತ್ತು ವೃತ್ತಿ ತರಬೇತಿಗಳನ್ನು ನೀಡಲಾಗುತ್ತಿದೆ. ಸಂತ್ರಸ್ಥರ ಪುನರ್ವಸತಿ ಮತ್ತು ಪುನರ್ನೆಲೆಗಾಗಿ ಸಮಗ್ರವಾದ ಪೋಷಣೆಯನ್ನು ಒದಗಿಸುವಂತಹ ಯೋಜನೆಗಳನ್ನು ಎಲ್ಲ ಜಿಲ್ಲೆಗಳಲ್ಲಿಯೂ ಪ್ರಾರಂಭಿಸಲಾಗಿದೆ. ಇದಕ್ಕಾಗಿ ಸರ್ಕಾರೇತರ ಸಂಸ್ಥೆಗಳಿಗೆ ಅನುದಾನವನ್ನು ನೀಡಲಾಗುತ್ತಿದ್ದು, ಇವು ಮಹಿಳೆ ಮತ್ತು ಮಕ್ಕಳನ್ನು ಅನೈತಿಕ ವ್ಯವಹಾರಗಳಿಗೆ ಸಾಗಾಣಿಕೆಯಾಗುವುದನ್ನು ತಡೆಗಟ್ಟುವಲ್ಲಿ ಮತ್ತು ಬಲಿಯಾದವರನ್ನು ರಕ್ಷಿಸಿ ಪುನರ್ವಸತಿಗೊಳಿಸುವಲ್ಲಿ ಕಾರ್ಯ ನಿರ್ವಹಿಸುತ್ತಿವೆ.

**ಉಜ್ವಲಾ :** ಹೆಣ್ಣುಮಕ್ಕಳ ಮತ್ತು ಮಹಿಳೆಯರು ಸಾಗಾಣಿಕೆಗೆ ಒಳಗಾಗದಂತೆ ತಡೆಗಟ್ಟುವುದು ಈ ಯೋಜನೆಯ ಆಶಯವಾಗಿದೆ. ಲೈಂಗಿಕ ದೌರ್ಜನ್ಯಕ್ಕೆ ಒಳಪಟ್ಟವರನ್ನು ರಕ್ಷಿಸಿ, ಪುನರ್ವಸತಿ ಮತ್ತು ಪುನರ್ನೆಲೆಗೊಳಿಸುವ ದಿಕ್ಕಿನಲ್ಲಿ ಈ ಕಾರ್ಯಕ್ರಮ ಜಾರಿಗೆ ಬಂದಿದೆ. ಶೋಷಣೆಗೊಳಗಾದವರಿಗೆ ಅಗತ್ಯವಾಗಿ ಬೇಕಾದ ಮೂಲ ಸೌಲಭ್ಯಗಳನ್ನು ನೀಡಿ, ಅವರನ್ನು ಪುನರ್ನೆಲೆಗೊಳಿಸುವ ದೃಷ್ಟಿಯಿಂದ ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಈ ಯೋಜನೆಯ ಮೂಲಕ ನೀಡಲಾಗುತ್ತಿದೆ. ಇದಕ್ಕೆ ಬೆಂಬಲವಾಗಿ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಗಳಿಗೆ, ಕೇಂದ್ರ ಸರಕಾರ ಅನುದಾನ ಸೇರಿದಂತೆ ಅನೇಕ ರೀತಿಯ ಬೆಂಬಲವನ್ನು ನೀಡುತ್ತಿದೆ. ಈ ಕಾರ್ಯಕ್ರಮದ ಜೊತೆಗೆ ದೌರ್ಜನ್ಯಕ್ಕೊಳಗಾದ ಮಹಿಳೆಯರಿಗೆ ಮತ್ತು ಮಕ್ಕಳಿಗಾಗಿ ಅಲ್ಪ ಕಾಲಿಕ (ಶಾರ್ಟ ಸ್ಟೇ ಹೋಮ್) ವಸತಿ ಗೃಹಗಳನ್ನು ಕಲ್ಪಿಸಲಾಗುತ್ತಿದೆ. ಇದರ ಜೊತೆ ಜೊತೆಗೆ ವೃತ್ತಿ ನಿರತ ಮಹಿಳೆಯರಿಗಾಗಿ ವಸತಿ ಗೃಹಗಳನ್ನು ಕಲ್ಪಿಸಲಾಗುತ್ತಿದೆ.

**ಸಾಂತ್ವನ :** ಇದು ರಾಜ್ಯ ಸರ್ಕಾರದ ಯೋಜನೆಯಾಗಿದೆ. ನೊಂದ ಮತ್ತು ಶೋಷಣೆಗೊಳಗಾದ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯ ನೀಡುವ ಆಶಯ ಹೊಂದಿದೆ. ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ತಾತ್ಕಾಲಿಕ ಆಶ್ರಯ, ರಕ್ಷಣೆ, ಉಚಿತ ಕಾನೂನು ಸಲಹೆ, ಆರ್ಥಿಕ ಪರಿಹಾರ ನೀಡುವುದರ ಜೊತೆಗೆ,

ವಿವಿಧ ಕೌಶಲ್ಯಗಳ ತರಬೇತಿ ನೀಡಿ ಆರ್ಥಿಕವಾಗಿ ಸಬಲರನ್ನಾಗಿ ಮಾಡುವುದು ಈ ಯೋಜನೆಯ ಉದ್ದೇಶವಾಗಿದೆ. ಸ್ವಯಂ ಸೇವಾ ಸಂಸ್ಥೆಗಳ ಸಹಯೋಗದಲ್ಲಿ, ಕರ್ನಾಟಕ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿಯೂ ಸಾಂತ್ವನ ಕೇಂದ್ರಗಳನ್ನು ತೆರೆಯಲಾಗಿದ್ದು, ಎಲ್ಲ ಕೇಂದ್ರಗಳಲ್ಲಿಯೂ ಮಹಿಳಾ ಸಹಾಯ ವಾಣಿ ಲಭ್ಯವಿದೆ. ಇಲ್ಲಿ ಬೆಳಿಗ್ಗೆ ೮ರಿಂದ ರಾತ್ರಿ ೮ರವರೆಗೆ ೧೦೯೧ ಮೂಲಕ ದೂರು ಸ್ವೀಕರಿಸಲಾಗುತ್ತದೆ.

**ಸ್ತ್ರೀ ಶಕ್ತಿ ಯೋಜನೆ:** ಈ ಯೋಜನೆಯಲ್ಲಿ ಮಹಿಳೆಯರಿಗಾಗಿ ಸ್ವ ಸಹಾಯ ಸಂಘಗಳನ್ನು ರಚಿಸಲಾಗುತ್ತದೆ. ಇವು ಮಹಿಳೆಯರಲ್ಲಿ ಉಳಿತಾಯ ಮನೋಭಾವನೆಯನ್ನು ಹೆಚ್ಚಿಸುವುದರ ಜೊತೆಗೆ ಆರ್ಥಿಕವಾಗಿ ಸಬಲರಾಗಲು ತರಬೇತಿಗಳನ್ನು ನೀಡಿ ವೈಯಕ್ತಿಕ ಮತ್ತು ಗುಂಪು ಚಟುವಟಿಕೆಗಳನ್ನು ಪ್ರಾರಂಭಿಸಲು ಸಹಾಯ ಮತ್ತು ಮಾರ್ಗದರ್ಶನ ನೀಡಲಾಗುತ್ತದೆ.

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ:** ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯು ಈ ನಿಗಮದ ಆಶಯವಾಗಿದೆ. ಅರ್ಹ ಮಹಿಳೆಯರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳನ್ನು ಪ್ರಾರಂಭಿಸಲು ಎಲ್ಲ ರೀತಿಯ ಮಾರ್ಗದರ್ಶನ, ತಾಂತ್ರಿಕ ಸಹಾಯ, ಆರ್ಥಿಕ ಸಹಾಯ ಧನ ಮತ್ತು ಸಾಲ ಸೌಲಭ್ಯಗಳನ್ನು ನೀಡುವ ಉದ್ದೇಶಗಳನ್ನು ಹೊಂದಿದೆ. ಈ ಉದ್ದೇಶಗಳ ಈಡೇರಿಕೆಗಾಗಿ ಹಲವಾರು ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಅದರಲ್ಲಿ ದೇವದಾಸಿ ಪುನರ್ವಸತಿ ಯೋಜನೆ ಮತ್ತು ದೇವದಾಸಿ ಮಾಶಾಸನ ಯೋಜನೆಗಳು ನಮ್ಮ ಅಧ್ಯಯನಕ್ಕೆ ಮುಖ್ಯವಾಗುತ್ತವೆ.

ದೇವದಾಸಿ ಪುನರ್ವಸತಿ ಯೋಜನೆಯಲ್ಲಿ ದೇವದಾಸಿ ಪದ್ಧತಿಯ ವಿರುದ್ಧ ವ್ಯಾಪಕ ಪ್ರಚಾರ, ಜನಾಂದೋಲನ, ಮಾಜಿ ದೇವದಾಸಿಯರ ಸ್ವಸಹಾಯ ಸಂಘಗಳ ರಚನೆ, ಅರಿವು ಜಾಗೃತಿ ಶಿಬಿರ, ಆರೋಗ್ಯ ತಪಾಸಣೆ, ಮುಂತಾದ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ. ಆದಾಯ ಉತ್ಪನ್ನಕರ ಚಟುವಟಿಕೆಗಳಿಗಾಗಿ ಬ್ಯಾಂಕ್ ಗಳಿಂದ ೨೦,೦೦೦ ಸಾವಿರ ರೂಪಾಯಿಗಳವರೆಗೆ ಸಾಲ ಸೌಲಭ್ಯ ಮತ್ತು ಆ ಸಾಲದ ಶೇಕಡಾ ೫೦ರಷ್ಟು ನಿಗಮದಿಂದ ಸಹಾಯಧನವಾಗಿ ಮಂಜೂರು ಮಾಡಲಾಗುತ್ತದೆ.

ಮಾಜಿ ದೇವದಾಸಿಯರಿಗೆ (೪೫ ವಯಸ್ಸು ಮೀರಿದವರಿಗೆ) ವಸತಿ ಸೌಲಭ್ಯ, ನಿವೇಶನವಿರದ ಮಹಿಳೆಯರಿಗೆ, ಅವರಿರುವ ಊರಿನಲ್ಲಿ ಗಾವಠಾಣಾ ಜಾಗವಿದ್ದರೆ ಅದರಲ್ಲಿ ನಿವೇಶನ ಒದಗಿಸಲಾಗುತ್ತದೆ. ಟೆನನ್ಸಿಯಲ್ಲಿ ಹೊಲಗಳಿದ್ದರೆ, ಅದರಲ್ಲಿ ದೇವದಾಸಿ ಮಹಿಳೆಯರಿಗೆ ೨ ಎಕರೆ ಜಮೀನು ಕೊಟ್ಟ ಉದಾಹರಣೆಗಳು ಇವೆ. ಇದಲ್ಲದೇ ಅವರಿಗೆ ಮಾಶಾಸನ ಕೊಡುವ ಯೋಜನೆ ಇದ್ದು, ಅದರಲ್ಲಿ ಪ್ರತಿ ತಿಂಗಳು ೧೦೦೦ ರೂಪಾಯಿ ಮಾಶಾಸನ ದೊರೆಯುತ್ತದೆ.

**ಸಮಗ್ರ ಶಿಶು ಸಂರಕ್ಷಣಾ ಯೋಜನೆ (ಐ.ಸಿ.ಪಿ.ಎಸ್):** ಮಗುವಿನ ಹಿತಾಸಕ್ತಿಯ ಆಧಾರದ ಮೇಲೆ ಮಕ್ಕಳ ಹಕ್ಕುಗಳನ್ನು ರಕ್ಷಿಸುವುದು ಈ ಯೋಜನೆಯ ಆಶಯವಾಗಿದೆ. ಮಗುವಿಗೆ ಸಂಬಂಧಿಸಿದ ಸೇವೆಗಳು ಮತ್ತು ಅವುಗಳನ್ನು ಪಡೆಯುವ ದಾರಿಯನ್ನು ಉತ್ತಮಗೊಳಿಸುವುದು, ಮಕ್ಕಳ ಹಕ್ಕುಗಳಿಗೆ ಸಂಬಂಧಿಸಿದಂತೆ, ಸಾರ್ವಜನಿಕರಲ್ಲಿ ಜಾಗೃತಿಯನ್ನು ಹೆಚ್ಚಿಸುವುದು, ಮಕ್ಕಳ ರಕ್ಷಣೆಯ ಕುರಿತಾದ

ಜವಾಬ್ದಾರಿಗಳನ್ನು ಸ್ಪಷ್ಟವಾಗಿ ನಿರೂಪಿಸುವುದು ಮತ್ತು ಅವು ಪಾರದರ್ಶಕವಾಗಿರುವಂತೆ ನೋಡಿಕೊಳ್ಳುವುದು, ವಿವಿಧ ವಿಷಮ ಸ್ಥಿತಿಗಳನ್ನು ಎದುರಿಸುತ್ತಿರುವ ಮಕ್ಕಳಿಗಾಗಿ ಸರ್ಕಾರದ ಮಟ್ಟದಲ್ಲಿ ರಚನಾತ್ಮಕ ಕಾರ್ಯಗಳನ್ನು ಸ್ಥಾಪಿಸುವುದು ಈ ಯೋಜನೆಯ ಮುಖ್ಯ ಉದ್ದೇಶಗಳಾಗಿವೆ.

ಹಾಗೆಯೇ ಹೆಣ್ಣುಮಕ್ಕಳನ್ನು ರಕ್ಷಿಸುವ ದಿಶೆಯಲ್ಲಿ, ಹದಿ ಹರೆಯದ ಹೆಣ್ಣುಮಕ್ಕಳಿಗೆ ಪೌಷ್ಟಿಕ ಆಹಾರ, ಭಾಗ್ಯಲಕ್ಷ್ಮಿ, ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳಿಗೆ ಹಾಜರಾತಿ ಶಿಷ್ಯವೇತನ, ಕಾಳಜಿ ಮತ್ತು ರಕ್ಷಣೆಯ ಅಗತ್ಯ ಇರುವ ಮಕ್ಕಳಿಗೆ ಕಲ್ಯಾಣ ಯೋಜನೆ, ಮಹಿಳೆ ಮತ್ತು ಮಕ್ಕಳ ಸಾಗಾಣಿಕೆಯನ್ನು ನಿರ್ಬಂಧಿಸುವುದು, ವಿಷಮ ಪರಿಸ್ಥಿತಿಯಲ್ಲಿರುವ ಮಕ್ಕಳಿಗೆ ಆರ್ಥಿಕ ಸಹಾಯಧನ, ಆರ್ಥಿಕವಾಗಿ ತೊಂದರೆಯಲ್ಲಿರುವ ಗ್ರಾಮೀಣ ಭಾಗದ ಹೆಣ್ಣುಮಕ್ಕಳ ಶಿಕ್ಷಣ ಮತ್ತು ಉನ್ನತ ವ್ಯಾಸಂಗಕ್ಕಾಗಿ ವಸತಿ ಗೃಹಗಳಲ್ಲಿ ಆಶ್ರಯ ಪಡೆಯಲು ಸಹಾಯಧನ ಯೋಜನೆ, ಅನಾಥ ವಿಧವೆಯರು ಮತ್ತು ದೇವದಾಸಿಯರ ಮದುವೆಗಳಿಗಾಗಿ ಆರ್ಥಿಕ ಸಹಾಯಧನ, ಸಾಮಾಜಿಕ ಪಿಡುಗುಗಳನ್ನು ನಿವಾರಿಸುವ ಕೇಂದ್ರ, ಕರ್ನಾಟಕ ಮಹಿಳಾ ಅಭಿವೃದ್ಧಿ ಯೋಜನೆ, ವೃತ್ತಿ ತರಬೇತಿ ಪಡೆಯಲು ಮಹಿಳೆಯರಿಗೆ ಸಹಾಯಧನ ನೀಡುವ ಯೋಜನೆ ಮತ್ತು "ಸ್ಥೈರ್ಯ" ಯೋಜನೆಯಡಿ ದೌರ್ಜನ್ಯಕ್ಕೊಳಗಾದ(ಅತ್ಯಾಚಾರ, ಸಾಮೂಹಿಕ ಅತ್ಯಾಚಾರ, ತೀವ್ರತರ ಅತ್ಯಾಚಾರ ಮತ್ತು ಆಸಿಡ್ ದಾಳಿಗೆ ಒಳಗಾದ ಮಹಿಳೆಯರಿಗೆ ಆರ್ಥಿಕ ಪರಿಹಾರ/ಮರಣ ಪರಿಹಾರ/ ನೀಡಲಾಗುತ್ತದೆ.

**೭.೬. ಸುತ್ತೋಲೆಗಳು**

ಸಂವಿಧಾನದ ಆಶಯದಂತೆ ಮಕ್ಕಳು ಮತ್ತು ಮಹಿಳೆಯರ ಅನೈತಿಕ ಸಾಗಾಣಿಕೆ ಮತ್ತು ಲೈಂಗಿಕ ಶೋಷಣೆಯಿಂದ ರಕ್ಷಣೆ ಮಾಡಲು ಸರ್ಕಾರವು ತನ್ನ ವಿವಿಧ ಇಲಾಖೆಗಳಿಗೆ ಸುತ್ತೋಲೆಗಳನ್ನು ಹೊರಡಿಸಿದೆ ಮತ್ತು ಕಾವಲು ಸಮಿತಿಗಳನ್ನು ರಚಿಸಿದೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು** ಪ್ರತಿ ವರ್ಷ ನವೆಂಬರ್ ೧೩ ರಿಂದ ೩೦ರವರೆಗೆ ಮಕ್ಕಳ ಹಕ್ಕುಗಳ ಸಪ್ತಾಹವನ್ನು ಹಮ್ಮಿಕೊಂಡು, ಗ್ರಾಮಸ್ಥರು, ಪಾಲಕರು, ಜನ ಪ್ರತಿನಿಧಿಗಳು, ಅಧಿಕಾರಿಗಳನ್ನೊಳಗೊಂಡ ಮಕ್ಕಳ ಗ್ರಾಮಸಭೆಗಳನ್ನು ಏರ್ಪಡಿಸುವಂತೆ ತಿಳಿಸಲಾಗಿದೆ. ಇದರಲ್ಲಿ ಮಕ್ಕಳ ಅನೈತಿಕ ಸಾಗಾಟವನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕ್ರಮಗಳ ಕುರಿತು, ಗ್ರಾಮದ ೬ ವರ್ಷದ ಒಳಗಿನ ಎಲ್ಲ ಮಕ್ಕಳು ಅಂಗನವಾಡಿಗೆ ಬರುತ್ತಿರುವ ಕುರಿತು, ಶಾಲೆಗೆ ಹೋಗಬೇಕಾದ ಮಕ್ಕಳು ನಿರಂತರವಾಗಿ ಶಾಲೆಗೆ ಹೋಗುತ್ತಿರುವ ಕುರಿತು, ಮಧ್ಯದಲ್ಲಿ ಬಿಟ್ಟಿದ್ದರೆ, ಅವರನ್ನು ಮರಳಿ ಶಾಲೆಗೆ ಸೇರಿಸಲು ಮನ ಒಲಿಸುವ ಕುರಿತು, ಊರಿನಲ್ಲಿ ೧೦ನೇ ತರಗತಿ ತೇರ್ಗಡೆಯಾದ ಮಕ್ಕಳು ಪದವಿ ಪೂರ್ವ ಕಾಲೇಜುಗಳಿಗೆ ಹೋಗುತ್ತಿರುವ ಕುರಿತು, ಮಧ್ಯದಲ್ಲಿ ಬಿಟ್ಟಿದ್ದರೆ, ಅದಕ್ಕೆ ಕಾರಣವನ್ನು ಕಂಡುಕೊಳ್ಳುವ ಕುರಿತು ಮೇಲ್ವಿಚಾರಣೆ ಮಾಡಿ ಸೂಕ್ತ ಕ್ರಮ ಕೈಗೊಳ್ಳುವಂತೆ ಸುತ್ತೋಲೆ ಹೊರಡಿಸಲಾಗಿದೆ. ಹಾಗೆಯೇ ಗ್ರಾಮಪಂಚಾಯತಿಯ ವಾರ್ಡ ಸಭೆಗಳಲ್ಲಿ ಬಾಲ್ಯ ವಿವಾಹದಂತಹ ಅನಿಷ್ಟ ಪಿಡುಗಿನ ಕುರಿತು ಚರ್ಚಿಸಿ ಅದನ್ನು ತಡೆಗಟ್ಟಲು ಕ್ರಮ ವಹಿಸಲು ತಿಳಿಸಲಾಗಿದೆ.

**ರಾಜ್ಯ ಪೊಲೀಸ್ ಇಲಾಖೆಯು** ಲೈಂಗಿಕ ಅಪರಾಧಗಳಿಂದ ಮಕ್ಕಳ ಸಂರಕ್ಷಣಾ ಕಾಯಿದೆ ೨೦೧೨ ಇದನ್ನು ಕಟ್ಟು ನಿಟ್ಟಾಗಿ ಜಾರಿಗೊಳಿಸುವ ಕುರಿತು, ಮಾನವ ಕಳ್ಳ ಸಾಗಾಣಿಕೆ ನಿಷೇಧ ಘಟಕಗಳು ಲೈಂಗಿಕ ಕಾರ್ಯಕರ್ತೆಯರು ಹಾಗೂ ಅವರ ಮಕ್ಕಳಿಗೆ, ಅವರದೇ(ಲೈಂಗಿಕ ಕಾರ್ಯಕರ್ತೆಯರ) ಕುಟುಂಬಗಳಿಂದ, ಸಾಮಾಜಿಕ ಸದಸ್ಯರಿಂದ, ಸ್ಥಳೀಯ ಪೊಲೀಸರಿಂದ ಯಾವುದೇ ಕಿರುಕುಳ/ತೊಂದರೆಯಾಗದಂತೆ ರಕ್ಷಣೆ ನೀಡಬೇಕೆಂದು ಸೂಚಿಸಲಾಗಿದೆ. ಹಾಗೆಯೇ ಮಕ್ಕಳ ವಿಶೇಷ ಪೊಲೀಸ್ ಘಟಕವನ್ನು ರಚಿಸುವ ಕುರಿತು, ಮಹಿಳೆಯರ ಮತ್ತು ಮಕ್ಕಳ ಸಾಗಾಣಿಕೆ ತಡೆ ಕುರಿತು ಹಾಗೂ ಮಾನವ ಸಾಗಾಣಿಯ ವಿರುದ್ಧ ಕ್ರಮ ಜರುಗಿಸುವ ಕುರಿತು ಸುತ್ತೋಲೆಗಳನ್ನು ಹೊರಡಿಸಲಾಗಿದೆ.

**ಸಾರ್ವಜನಿಕ ಶಿಕ್ಷಣ ಇಲಾಖೆಯು** ರಾಜ್ಯದ ಎಲ್ಲಾ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಮೇಲೆ ಲೈಂಗಿಕ ಕಿರುಕುಳ/ಅತ್ಯಾಚಾರ ಹಾಗೂ ದೈಹಿಕ ಹಿಂಸೆ ನಡೆಯುತ್ತಿರುವುದನ್ನು ತಡೆಗಟ್ಟುವ ಕುರಿತು ತ್ರಿಸದಸ್ಯ ಸಮಿತಿಯ ಮೂಲಕ ಪರಿಶೀಲಿಸಿ ಕ್ರಮ ಕೈಗೊಳ್ಳುವ ಕುರಿತು ತಿಳಿಸಲಾಗಿದೆ. ಅನೇಕ ಮಕ್ಕಳು, ಶಾಲೆಯ ಅಹಿತಕರ ವಾತಾವರಣ, ಶಿಕ್ಷಕರ ನಕಾರಾತ್ಮಕ ಮನೋಭಾವ, ಮಕ್ಕಳನ್ನು ದೈಹಿಕವಾಗಿ ಹಿಂಸೆ ನೀಡಿರುವುದನ್ನು ನಿಷೇಧಿಸಿ ಸುತ್ತೋಲೆ ಹೊರಡಿಸಲಾಗಿದೆ. ೬ ರಿಂದ ೧೪ ವಯೋಮಿತಿಯ ಎಲ್ಲಾ ಮಕ್ಕಳಿಗೆ ೧ ರಿಂದ ೮ನೇ ತರಗತಿಯವರೆಗೆ ನೆರೆಹೊರೆಯ ಶಾಲೆಯಲ್ಲಿ ಸಮಾನ ಗುಣಮಟ್ಟದ ಶಿಕ್ಷಣ ಒದಗಿಸಬೇಕಾಗಿದ್ದು, ಶಾಲೆಗೆ ದಾಖಲಾಗದ ಎಲ್ಲಾ ಮಕ್ಕಳನ್ನು ವಿವಿಧ ಕಾರ್ಯತಂತ್ರಗಳ ಮೂಲಕ ದಾಖಲು ಮಾಡುವುದರ ಜೊತೆಗೆ, ದಾಖಲಾದ ಮಕ್ಕಳು ಯಾವ ಕಾರಣದಿಂದಲೂ ಶಾಲೆಯಿಂದ ಹೊರಗುಳಿಯದಂತೆ, ನಿರಂತರವಾಗಿ ಶಾಲೆಗೆ ಹಾಜರಾಗಿ, ಗುಣಮಟ್ಟದ ಶಿಕ್ಷಣ ಪಡೆಯುವುದನ್ನು ಖಾತರಿ ಪಡಿಸಿಕೊಳ್ಳಬೇಕೆಂದು ತಿಳಿಸಲಾಗಿದೆ.

ಕಾರ್ಮಿಕ ಇಲಾಖೆಯು ಬಾಲ ಕಾರ್ಮಿಕ ನಿಷೇಧ ಕಾಯಿದೆಯನ್ನು ಕಟ್ಟು ನಿಟ್ಟಾಗಿ ಪಾಲಿಸುವ ಕುರಿತು, ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಸತಿ ನಿಲಯಗಳಲ್ಲಿ ಬಿಡುಗಡೆಗೊಂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಾಲಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ಒದಗಿಸುವುದು ಮತ್ತು ಇಲಾಖೆಯು ಹಮ್ಮಿಕೊಂಡ 'ಬಡತನ ನಿರ್ಮೂಲನಾ ಯೋಜನಾ' ಕಾರ್ಯಕ್ರಮಗಳ ಅಡಿಯಲ್ಲಿ ಸೌಲಭ್ಯಗಳನ್ನು ಒದಗಿಸುವ ಕುರಿತು ತಿಳಿಸಲಾಗಿದೆ.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು** ಮಹಿಳೆಯರ ಮತ್ತು ಮಕ್ಕಳ ಸಾಗಣೆಯನ್ನು ತಡೆಗಟ್ಟಲು ಮತ್ತು ಸಾಗಣೆಗೊಳಗಾದ ಮಹಿಳೆಯರ ರಕ್ಷಣೆ ಮತ್ತು ಪುನರ್ವಸತಿ ಕಲ್ಪಿಸುವ ಸಲುವಾಗಿ ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಕಾವಲು ಸಮಿತಿಗಳನ್ನು ರಚಿಸಬೇಕೆಂದು ೩೦-೫-೨೦೦೫ರಲ್ಲಿ ಸರ್ಕಾರವು ಆದೇಶ ಹೊರಡಿಸಿದೆ. **ಜಿಲ್ಲಾ ಮಟ್ಟದ ಕಾವಲು ಸಮಿತಿಯಲ್ಲಿ** ಜಿಲ್ಲಾಧಿಕಾರಿಗಳು ಅಧ್ಯಕ್ಷರು ಮತ್ತು ಜಿಲ್ಲಾ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯಲ್ಲಿ ಒಟ್ಟು ೧೦ ಜನ ಸದಸ್ಯರಾಗಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ,

೧. ಮಹಿಳೆಯರ ಮತ್ತು ಮಕ್ಕಳ ಸಾಗಣೆಗೆ ಮುಖ್ಯ ಕಾರಣಗಳು, ಸಮಸ್ಯೆಯ ತೀವ್ರತೆಯನ್ನು ಗುರುತಿಸಿ ಇದರ ವಿರುದ್ಧ ಅರಿವು ಮೂಡಿಸಲು ಸ್ವ-ಸಹಾಯ ಗುಂಪು, ಯುವ ಸಂಘಟನೆ, ಚಲನಚಿತ್ರ ಹಾಗೂ ಪತ್ರಿಕೆಗಳ ಮೂಲಕ ಅರಿವು ಮೂಡಿಸುವುದು ೨. ತಾಲ್ಲೂಕು ಮತ್ತು ಗ್ರಾಮ ಮಟ್ಟದ ಸಾಗಣೆ ವಿರುದ್ಧ ಕ್ರಿಯಾ ಯೋಜನೆ ತಯಾರಿಸುವಲ್ಲಿ ಪರಿಗಣಿಸಬೇಕಾಗಿರುವ ಮುಖ್ಯ ವಿಷಯಗಳನ್ನು ಗುರುತಿಸುವುದು ೩. ಜಿಲ್ಲಾಮಟ್ಟದಲ್ಲಿ ಮಹಿಳೆಯರ ಮತ್ತು ಮಕ್ಕಳ ಸಾಗಣೆ ತಡೆಗಟ್ಟಲು ಕಾವಲು ಪಡೆ ನೇಮಿಸುವುದಲ್ಲದೇ ಸೂಕ್ಷ್ಮ ಪ್ರದೇಶ ಗುರುತಿಸುವುದು ೪. ಸಾಗಾಣಿಕೆಗೆ ಒಳಪಟ್ಟವರಿಗೆ ವಸತಿಯನ್ನೊದಗಿಸಿ, ಶಿಕ್ಷಣವನ್ನೊದಗಿಸಿ ಅವರನ್ನು ಮುಖ್ಯವಾಹಿನಿಗೆ ತರುವುದು ೫. ಸಾಗಣೆ ಗೊಳಪಟ್ಟವರನ್ನು ಮತ್ತೆ ಕುಟುಂಬದೊಡನೆ ಸೇರಿಸಿ, ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ವೃತ್ತಿ ತರಬೇತಿಗೆ ನೆರವು ನೀಡುವುದು ೬. ಸಾಗಾಣಿಕೆದಾರರನ್ನು ಕಾನೂನು ಶಿಕ್ಷೆಗೆ ಒಳಪಡಿಸುವುದು. ಸಾಗಾಣಿಕೆಗೊಳಗಾದ ನಿರ್ಗತಿಕ ಮಕ್ಕಳಿಗೆ, ಜಿಲ್ಲಾಮಟ್ಟದಲ್ಲಿ ಅನುಪಾಲನಾ ಗೃಹಗಳಲ್ಲಿ ಅವಕಾಶ ಕಲ್ಪಿಸಿ ಕೊಡುವುದು ೭. ತಾಲ್ಲೂಕು ಮತ್ತು ಗ್ರಾಮ ಮಟ್ಟದ ಸಮಿತಿಗಳಿಗೆ ಸಲಹೆಗಳನ್ನು ನೀಡುವುದು ಜಿಲ್ಲಾ ಮಟ್ಟದ ಕಾವಲು ಸಮಿತಿಯ ಕರ್ತವ್ಯಗಳಾಗಿವೆ.

**ತಾಲ್ಲೂಕು ಮಟ್ಟದ ಕಾವಲು ಸಮಿತಿಗೆ** ತಾಲ್ಲೂಕು ಪಂಚಾಯತಿ ಕಾರ್ಯನಿರ್ವಹಣಾಧಿಕಾರಿ ಅಧ್ಯಕ್ಷರಾಗಿ ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯಲ್ಲಿ ಒಟ್ಟು ೧೧ ಜನ ಸದ್ಯರಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ, ೧. ಗ್ರಾಮ ಮತ್ತು ಹೋಬಳಿ ಮಟ್ಟಗಳಲ್ಲಿ ಮಕ್ಕಳ ಮಾಹಿತಿಯನ್ನು ಇಟ್ಟುಕೊಳ್ಳುವುದು ೨. ಗ್ರಾಮ ಮಟ್ಟದ ಸಮಿತಿ ಸದಸ್ಯರನ್ನು ತಾಲ್ಲೂಕು ಮಟ್ಟದಲ್ಲಿ ನಡೆಯುವ ಪ್ರಚಾರಾಂದೋಲನದಲ್ಲಿ ತೊಡಗಿಸಿಕೊಳ್ಳುವುದು ೩. ತಾಲ್ಲೂಕು ಮಟ್ಟದಲ್ಲಿ ಮಹಿಳೆಯರು ಮತ್ತು ಮಕ್ಕಳ ಸಾಗಣೆ ವಿರುದ್ಧ ಪ್ರಕರಣಗಳು ದಾಖಲಾದ ಕುರಿತು ಮತ್ತು ಆ ಸಂಬಂಧಿಸಿ ಕ್ರಮ ಕೈಗೊಂಡಿರುವ ಕುರಿತು ಪರಿಶೀಲಿಸುವುದು ೪. ಸಾರಿಗೆ ಸಂಪರ್ಕ ಕೇಂದ್ರಗಳಾದ ಬಸ್ ನಿಲ್ದಾಣ ಮತ್ತು ರೇಲ್ವೆ ನಿಲ್ದಾಣಗಳಲ್ಲಿ ನಡೆಯುವ ಸಾಗಣೆ ಕುರಿತು ಗಮನ ಹರಿಸುವುದು ೫. ಸಾಗಣೆಗೊಳಪಟ್ಟ ಮಕ್ಕಳ ನೆರವಿಗಾಗಿ ಪೊಲೀಸ್ ನೆರವಿನೊಂದಿಗೆ ತಾಲ್ಲೂಕು ವ್ಯಾಪ್ತಿಯಲ್ಲಿ ಸಹಾಯವಾಣಿ ಪ್ರಾರಂಭಿಸಿ, ಶೋಷಣೆಗೊಳಗಾದ ಮಕ್ಕಳಿಗೆ ಸಹಾಯ ಕಲ್ಪಿಸುವುದು ೬. ಸಾಗಣೆ ವಿರುದ್ಧ ಕಾರ್ಯ ನಿರ್ವಹಿಸಲು ಕಾವಲು ಪಡೆ ರಚಿಸಬೇಕು ೭. ಪಂಚಾಯ್ತಿ ಹಂತಗಳಲ್ಲಿ ಸಾಗಣೆ ವಿರುದ್ಧ ಕ್ರಮಕ್ಕಾಗಿ ಕ್ರಿಯಾ ಯೋಜನೆ ರೂಪಿಸುವುದು ೮. ಸ್ಥಳೀಯ ಸ್ವಯಂ ಸೇವಾ ಸಂಸ್ಥೆಗಳ ಸಹಾಯದಿಂದ ಸಾಗಣೆಗೊಳಪಟ್ಟಿರುವ/ ಕಾಣೆಯಾದ ಮಕ್ಕಳ ಬಗ್ಗೆ ಕ್ರಮಬದ್ಧವಾದ ಮಾಹಿತಿ ಇರಿಸುವುದು.

**ಗ್ರಾಮ ಮಟ್ಟದ ಕಾವಲು ಸಮಿತಿಗೆ** ಗ್ರಾಮ ಪಂಚಾಯತಿ ಅಧ್ಯಕ್ಷರು ಅಧ್ಯಕ್ಷರಾಗಿ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಮೇಲ್ವಿಚಾರಕಿಯರು ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಮಿತಿಯಲ್ಲಿ ಒಟ್ಟು ಏಳು ಜನ ಸದಸ್ಯರಿರುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ,

೧. ಗ್ರಾಮ ಪಂಚಾಯ್ತಿ ಮಟ್ಟದಲ್ಲಿಯ ೧೮ ವರ್ಷದೊಳಗಿನ ಮಕ್ಕಳ ಎಲ್ಲಾ ಮಾಹಿತಿಯನ್ನು ಲಭ್ಯವಿರಿಸಬೇಕು ೨. ಶಾಲೆಗೂ ಪಂಚಾಯ್ತಿಗೂ ಮಾಹಿತಿ ಹಂಚಿಕೆ ವ್ಯವಸ್ಥೆ ಕಲ್ಪಿಸುವಲ್ಲಿ ಸಹಕರಿಸಬೇಕು. ಕಛೇರಿ, ಶಾಲೆ, ಪೊಲೀಸು, ಅಂಗನವಾಡಿ, ಮಹಿಳಾ ಸ್ವಸಹಾಯ ಸಂಘಗಳ ಗ್ರಾಮದ ಮಕ್ಕಳ ಆಗು ಹೋಗುಗಳ ಕುರಿತು ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಬೇಕು ೩. ಮಾರಾಟ ಮತ್ತು ಸಾಗಾಣೆಗೊಳಗಾದ ಮಹಿಳೆಯರ ಮತ್ತು ಮಕ್ಕಳ ರಕ್ಷಣೆ ಮತ್ತು ಇವರಿಗೆ ಹಾಗೂ ಅವರ ಕುಟುಂಬಗಳಿಗೆ ಆರ್ಥಿಕ, ನೈತಿಕ, ಸಾಮಾಜಿಕ, ವೈದ್ಯಕೀಯ ಹಾಗೂ ಶೈಕ್ಷಣಿಕ ಸಹಾಯವನ್ನು ನೀಡಬಲ್ಲವರನ್ನು ಗುರುತಿಸುವುದು ೪. ಸಮುದಾಯದ ಎಲ್ಲರ ಭಾಗವಹಿಸುವಿಕೆಯೊಂದಿಗೆ ಸಾಗಣೆಯನ್ನು ನಿಷೇಧಿಸುವಲ್ಲಿ ಉಸ್ತುವಾರಿ ಮಾಡುವುದು ೫. ಮಕ್ಕಳ ಸಾಗಣೆ ವಿರುದ್ಧ ಶಾಲೆಗಳಲ್ಲಿ ಮಕ್ಕಳಿಗೆ ಅರಿವು ಮೂಡಿಸಬೇಕು. ಅಂಗನವಾಡಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುವ, ಕಾರ್ಯಕರ್ತೆಯರಿಗೂ ಮತ್ತು ಸಹಾಯಕಿಯರಿಗೂ ಸಹ ಮಕ್ಕಳ ಸಾಗಣೆ ವಿರುದ್ಧ ಕೈಗೊಳ್ಳಬಹುದಾದ ಎಚ್ಚರಗಳ ಬಗ್ಗೆ ಅರಿವು ಮೂಡಿಸಬೇಕು ೬. 'ಹೊಸ' ವ್ಯಕ್ತಿಗಳು ಗ್ರಾಮಕ್ಕೆ ಆಗಮಿಸಿದ ಬಗ್ಗೆ ದಾಖಲೆ ಇಡಬೇಕು ೭ ಗ್ರಾಮದಿಂದ ಕಾಣೆಯಾದ ಮಹಿಳೆಯರ ಮತ್ತು ಮಕ್ಕಳ ದಾಖಲೆ ಇಡಬೇಕು.

ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಮಟ್ಟದ ಸಮಿತಿಯು ತಪ್ಪದೇ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ತಾಲೂಕು ಮಟ್ಟದ ಸಮಿತಿಯು ಮಹಿಳೆಯರ ಮತ್ತು ಮಕ್ಕಳ ಸಾಗಣೆ ತಡೆಗಟ್ಟಲು ಕೈಗೊಂಡಿರುವ ಕ್ರಮಗಳ ಬಗ್ಗೆ ವಿಮರ್ಶಿಸತಕ್ಕದ್ದು. ಸದರಿ ಸಮಿತಿಯು ತ್ರೈಮಾಸಿಕ ಸಭೆಯನ್ನು ಕಾಲಕಾಲಕ್ಕೆ ನಡೆಸುವುದು ಸದಸ್ಯ ಕಾರ್ಯದರ್ಶಿಗಳ ಜವಾಬ್ದಾರಿಯಾಗಿರುತ್ತದೆ.

ಜಿಲ್ಲಾ ಮಟ್ಟದ ಸಮಿತಿಯು ಎಲ್ಲಾ ತಾಲ್ಲೂಕುಗಳಲ್ಲೂ ಮಕ್ಕಳ ಸಹಯವಾಣಿ ಕೇಂದ್ರಗಳನ್ನು ಪ್ರಾರಂಭಿಸುವಂತೆ, ಪ್ರೇರೇಪಿಸುವುದಲ್ಲದೇ, ಆರು ತಿಂಗಳಿಗೊಮ್ಮೆ ಮಕ್ಕಳ ಸಾಗಾಣಿಕೆಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ರಾಜ್ಯ ಮಟ್ಟದ ಸಮಿತಿಗೆ ವರದಿ ಮಾಡತಕ್ಕದ್ದು ಎಂದು ಆದೇಶಿಸಲಾಗಿದೆ. ರಾಜ್ಯ ಮಟ್ಟದ ಸಲಹಾ ಸಮಿತಿಯು ಆರು ತಿಂಗಳಿಗೊಮ್ಮೆ ಸಭೆ ಸೇರಿ ಈ ಬಗ್ಗೆ ತೆಗೆದುಕೊಂಡಿರುವ ಕ್ರಮಗಳ ಬಗ್ಗೆ ವಿಮರ್ಶೆ ಮಾಡಿ ಸೂಕ್ತ ಸಲಹೆ ನೀಡಬೇಕೆಂದು ತಿಳಿಸಲಾಗಿದೆ(ನಮ್ಮೆಲ್ಲರ ಹೊಣೆ, ೨೦೧೫).

**೭.೭. ಸರ್ಕಾರೇತರ ಸಂಸ್ಥೆಗಳು (ಎನ್.ಜಿ.ಓ)**

ಸರ್ಕಾರೇತರ ಸಂಸ್ಥೆಗಳು ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಬೆಳೆದು ಬಂದ ಸ್ವತಂತ್ರ ಮತ್ತು ಕಾನೂನುಬದ್ಧ ವ್ಯವಸ್ಥೆಯಾಗಿದೆ. ಇವುಗಳನ್ನು ಎನ್.ಜಿ.ಓ (ನಾನ್ ಗವರ್ನಮೆಂಟ್ ಆರ್ಗನೈಜೇಶನ್) ಎಂತಲೂ ಕರೆಯಲಾಗುತ್ತದೆ. ಸಮಾಜ ಸೇವೆಯ ಉದ್ದೇಶವನ್ನು ಹೊಂದಿರುವ ಈ ಸಂಸ್ಥೆಗಳಿಗೆ ಯಾವುದೇ ಲಾಭ ಗಳಿಕೆಯ ಉದ್ದೇಶವಿರುವುದಿಲ್ಲ. ಹಾಗಾಗಿ ಕೆಲವು ದೇಶಗಳಲ್ಲಿ ಎನ್.ಪಿ.ಓ (ನಾನ್ ಪ್ರಾಫಿಟ್ ಆರ್ಗನೈಜೇಶನ್) ಅಂತಲೂ ಕರೆಯುತ್ತಾರೆ. ಇವು ಸಂಪೂರ್ಣ ಖಾಸಗಿ ಸಂಸ್ಥೆಗಳಾಗಿದ್ದು, ಸಮಾಜದ ಸಮಗ್ರ ಅಭಿವೃದ್ಧಿಗಾಗಿ ಕೆಲಸ ಮಾಡುತ್ತವೆ. ಹಣಕಾಸಿನ ವ್ಯವಹಾರವಿರುವುದರಿಂದ

ಇವುಗಳ ಕೆಲಸ ಪಾರದರ್ಶಕವಾಗಿ, ನ್ಯಾಯಯುತವಾಗಿರಲೆಂದು ಎನ್.ಜಿ.ಓ.ಗಳನ್ನು ಕಾನೂನುಬದ್ಧಗೊಳಿಸಲಾಗಿದೆ. ಇದಕ್ಕಾಗಿ ಆಯಾ ರಾಜ್ಯಗಳಲ್ಲಿ ನೊಂದಣಿ ಕಾಯಿದೆಯು ಜಾರಿಯಲ್ಲಿದೆ. ೧೯೬೦ರಲ್ಲಿ ಕರ್ನಾಟಕ ಸಂಘ ಸಂಸ್ಥೆಗಳ ನೊಂದಣಿ ಕಾಯಿದೆಯನ್ನು ಜಾರಿಗೊಳಿಸಲಾಗಿದೆ. ಈ ಕೆಲಸಕ್ಕಾಗಿ ಅವಶ್ಯವಿರುವ ಹಣಕಾಸನ್ನು ದಾನಿಗಳಿಂದ ಸಂಗ್ರಹಿಸಲಾಗುತ್ತದೆ. ಸರ್ಕಾರಗಳೂ ಸಹ ತಮ್ಮ ಕೆಲವು ಯೋಜನೆಗಳನ್ನು ಅನುಷ್ಠಾನ ಮಾಡಲು ಸರ್ಕಾರೇತರ ಸಂಸ್ಥೆಗಳಿಗೆ ಅನುದಾನ ಒದಗಿಸುತ್ತವೆ. ಉತ್ತಮ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳು ವಿದೇಶಗಳಿಂದಲೂ ನಿಧಿಯನ್ನು ಪಡೆಯುತ್ತವೆ. ಇದಕ್ಕಾಗಿ, ಫಾರೆನ್ ಕಾಂಟ್ರಿಬ್ಯೂಶನ್ ರೆಗ್ಯೂಲೇಶನ್ ಆ್ಯಕ್ಟ್(ಎಫ್.ಸಿ.ಆರ್.ಎ) ಜಾರಿಯಲ್ಲಿದ್ದು, ವಿದೇಶದಿಂದ ನಿಧಿಯನ್ನು ಪಡೆಯುವ ಸಂಸ್ಥೆಯು ಈ ಕಾಯ್ದೆಯ ಅಡಿಯಲ್ಲಿ ನೋಂದಣಿಯಾಗುವುದು ಅವಶ್ಯವಾಗಿರುತ್ತದೆ. ಈ ಸಂಸ್ಥೆಗಳಿಗೆ ಅವಶ್ಯವಿರುವ ವೃತ್ತಿ ಪರ ಸಮಾಜಕಾರ್ಯಕರ್ತರನ್ನು ವಿಶ್ವವಿದ್ಯಾಲಯಗಳು, 'ಸಮಾಜ ಕಾರ್ಯ' ವಿಷಯದ ಅಡಿಯಲ್ಲಿ ವೈಜ್ಞಾನಿಕವಾಗಿ ತರಬೇತಿ ನೀಡುತ್ತಿವೆ.

ದೇಶದಾದ್ಯಂತ ಮಕ್ಕಳ ರಕ್ಷಣೆಗಾಗಿ ಹಲವಾರು ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಅವುಗಳಲ್ಲಿ ಹೈದ್ರಾಬಾದ್‌ನ ಪ್ರಜ್ವಲಾ, ಮುಂಬಯಿಯ ಪ್ರೇರಣಾ ಮತ್ತು ರೆಸ್ಕ್ಯೂ ಫೌಂಡೇಶನ್, ಕರ್ನಾಟಕದ ವಿಮೋಚನಾ ಸಂಘ, ಅಥಣಿ ಮತ್ತು ಒಡನಾಡಿ ಸೇವಾ ಸಂಸ್ಥೆ, ಮೈಸೂರು ಇವುಗಳನ್ನು ಹೆಸರಿಸಬಹುದು.

ಸಂವಿಧಾನದ ಆಶಯದಂತೆ ಸರ್ಕಾರ, ನಾಗರೀಕ ಸಮಾನ ಕಾಯಿದೆಗಳು, ನೀತಿಗಳು, ನಿಯಮಗಳು, ಕಾರ್ಯಕ್ರಮಗಳು, ಯೋಜನೆಗಳು ರೂಪಗೊಂಡಿದ್ದರೂ, ಇಂದು ಸಾವಿರಾರು ಮಕ್ಕಳು ಅಸುರಕ್ಷಿತರಾಗಿ ಬದುಕುತ್ತಿರುವುದು ಹಲವು ಅಧ್ಯಯನಗಳಿಂದ ಕಂಡು ಬರುತ್ತದೆ. ಬಹಳಷ್ಟು ಜನರಿಗೆ ತಮ್ಮ ರಕ್ಷಣೆಯ ಬಗ್ಗೆ ಇರುವ ಸೌಲಭ್ಯಗಳ ಅರಿವೂ ಸಹ ಇಲ್ಲ. ಎಷ್ಟೋ ಜನ ಬಡವರು ಪಂಚಾಯತಿಯ ಮೆಟ್ಟಿಲನ್ನೂ ಸಹ ಹತ್ತಿಲ್ಲ. ಮನೆಗಳಿಲ್ಲದ ಶೇಕಡಾ ೫೦ರಷ್ಟು ಜನರು ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಎಷ್ಟೋ ಜನರಿಗೆ ಗುಡಿಸಲುಗಳೂ ಸಹ ಇಲ್ಲ. ಭಾರತದಲ್ಲಿ ಶೇಕಡಾ ೭೦ರಷ್ಟು ಮನೆಗಳಲ್ಲಿ ಶೌಚಾಲಯಗಳಿಲ್ಲ. ಸ್ನಾನ ಗೃಹಗಳಿಲ್ಲದ ಮನೆಗಳಲ್ಲಿ ಬಹಳಷ್ಟು ಸಂಖ್ಯೆಯ ಜನರು, ನಾಲ್ಕು ಕೋಲುಗಳನ್ನು ಇಟ್ಟು, ಅದಕ್ಕೆ ಹರಿದ ಸೀರೆ ಸಿಕ್ಕಿಸಿ, ಮರೆ ಮಾಡಿಕೊಂಡು ಸ್ನಾನ ಮಾಡುತ್ತಾರೆ. ಪುಂಡ ಪೋಕರು ೧೦-೧೧ ವರ್ಷದ ಬಾಲೆಯರನ್ನು ಹೇರ್ ಪಿನ್, ಹೇರ್ ಬ್ಯಾಂಡ್, ರಬ್ಬರು, ಮೊಬೈಲುಗಳ ಆಸೆ ತೋರಿಸಿ ಸಾಗಿಸಿಕೊಂಡು ಹೋಗಿ ಲೈಂಗಿಕ ದಂಧೆಯ ಮನೆಗಳಿಗೆ ಮಾರಿ ಬಂದು, ಊರಲ್ಲಿ ಗೂಳಿಯಂತೆ ತಿರುಗುವುದನ್ನು ನಾವು ಎಲ್ಲರೂ ನೋಡುತ್ತಿದ್ದೇವೆ.

ಅಂಗನವಾಡಿಗಳ, ಶಾಲೆಗಳ, ಬಿಸಿಯೂಟದ ಹಾಜರಿ ಪುಸ್ತಕದಲ್ಲಿ ಹಾಜರಿರುವ ಮಕ್ಕಳು, ಯಾರದೋ ಮನೆಯಲ್ಲಿ ಮುಸುರೆ ತಿಕ್ಕುವ, ಇನ್ನಾರದೋ ಹೊಲದಲ್ಲಿ ಕಸ ಕೀಳುವ ಕೆಲಸ ಮಾಡುತ್ತಿದ್ದಾರೆ. ಮನೆ ಮನೆಗಳಲ್ಲಿ, ರಸ್ತೆಗಳಲ್ಲಿ, ಓಣಿಗಳಲ್ಲಿ ನಮ್ಮ ನಡುವೆಯೇ ಇದ್ದೂ ಕಾಣದಂತಿರುವ ತಲೆಹಿಡುಕರು ಇಂತ ಮಕ್ಕಳನ್ನೇ ಹುಡುಕಿಕೊಂಡು ಅಲೆಯುತ್ತಿರುತ್ತಾರೆ. ಅಂತವರ ಕಣ್ಣಿಗೆ ಇಂತ ಮಕ್ಕಳೇನಾದರೂ ಬಿದ್ದರೆ, ಅವರು ಸಾಗಿಸಿಕೊಂಡು ಹೋಗುವುದು ದಂಧೆಯ ಮನೆಗಳಿಗೇನೇ.

*ಬಿಜಾಪೂರ ಜಿಲ್ಲೆಯ ಮಹಿಳೆಯೊಬ್ಬರು ಚಿಕ್ಕ ವಯಸ್ಸಿನಲ್ಲಿಯೇ ಲೈಂಗಿಕ ಜೀತಕ್ಕೆ ಒಳಗಾದವರು. ಲೈಂಗಿಕ ಜೀತದಲ್ಲಿರುವಾಗಲೇ ಮದ್ಯಪಾನ ಚಟಕ್ಕೆ ಅಂಟಿಕೊಂಡಿದ್ದರು. ಅದೇ ದಂಧೆಯಲ್ಲಿ ಮುಂದುವರೆದ ಅವರಿಗೆ, ಒಬ್ಬಳು ಹೆಣ್ಣು ಮಗಳು ಜನಿಸುತ್ತಾಳೆ. ಆ ಮಗುವಿನ ಜೊತೆಗೆ ಒಬ್ಬಳು ಘರವಾಲಿಯ ಮನೆಯಲ್ಲಿ ಇವಳು ಆಶ್ರಯ ಪಡೆದಿರುತ್ತಾಳೆ. ದಿನಗಳು ಕಳೆದಂತೆ ಇವಳ ಮದ್ಯಪಾನ ಚಟ ಹೆಚ್ಚುತ್ತಲೇ ಹೋಗುತ್ತದೆ. ಒಂದು ಸಾರೆ ಕುಡಿಯಲು ಹಣ ದೊರೆಯದೆ ಹೋದಾಗ, ತನ್ನ ೧೦ ವರ್ಷದ ಮಗಳನ್ನು, ಮಿರಜ್‌ನ ಘರವಾಲಿಯೊಬ್ಬಳಿಗೆ ಎಂಟು ಸಾವಿರ ರೂಪಾಯಿಗಳಿಗೆ ಮಾರಾಟ ಮಾಡುತ್ತಾಳೆ. ಮುಂದೆ ಕೆಲವೇ ದಿನಗಳಲ್ಲಿ ಅನಾರೋಗ್ಯದಿಂದ ಇವಳು ಮರಣ ಹೊಂದುತ್ತಾಳೆ. ಇದನ್ನೆಲ್ಲ ನೋಡುತ್ತಿದ್ದ ಕೇರಿಯ ಯುವಕನೊಬ್ಬ, ಇವಳ ಮರಣದ ನಂತರ (ಮಾರಾಟ ಮಾಡಿದ ೪-೫ ತಿಂಗಳಿನಲ್ಲಿ) ಮಾರಾಟ ಮಾಡಲಾಗಿದ್ದ ಆ ಹುಡುಗಿಯನ್ನು ಮಿರಜ್‌ನ ಘರವಾಲಿಯಿಂದ ಬಿಡಿಸಿಕೊಂಡು ಬಂದು ಬಿಜಾಪೂರದ ಸ್ವಯಂ ಸೇವಾ ಸಂಸ್ಥೆಯೊಂದರ ಸಹಾಯದಿಂದ, ಸರಕಾರಿ ಬಾಲಕಿಯರ ಬಾಲ ಮಂದಿರದಲ್ಲಿ ಆಶ್ರಯ ಕೊಡಿಸುತ್ತಾನೆ.*

*ಎಂಟನೆ ತರಗತಿಯವರೆಗೆ ಅಲ್ಲಿಯೇ ಇದ್ದು ಓದಿಕೊಂಡ ಬಾಲೆಗೆ, ನಂತರ ಬಾಲ ಮಂದಿರದಲ್ಲಿ ಹೊಂದಾಣಿಕೆಯ ಸಮಸ್ಯೆಯುಂಟಾಗಿ ಸಿಬ್ಬಂದಿಯ ಜೊತೆಗೆ, ಜೊತೆಗಿದ್ದ ಹುಡುಗಿಯರ ಜೊತೆಗೆ ಜಗಳಗಳಾಗುತ್ತಿರುತ್ತವೆ. ಇದರಿಂದ ಬಾಲಕಿಗೆ ಸಮಾಲೋಚನೆ ಮಾಡಿ ಸಮಸ್ಯೆ ಬಗೆಹರಿಸಬೇಕಾದ ವ್ಯವಸ್ಥೆಯು, ಅವಳನ್ನು ಬೆಂಗಳೂರಿನ ಬಾಲಕಿಯರ ಬಾಲ ಮಂದಿರಕ್ಕೆ, ಅಲ್ಲಿಂದ, ಗುಲ್ಬರ್ಗ ಹೀಗೆ ನಾಲ್ಕೈದು ಕೇಂದ್ರಗಳಲ್ಲಿ ಅಲೆದಾಡಿಸುತ್ತಾರೆ. ಇದರಿಂದ ಬೇಸತ್ತ ಬಾಲಕಿಯು ಒಂದು ದಿನ ಗುಲ್ಬರ್ಗಾದ ಬಾಲ ಮಂದಿರದಿಂದ, ಇನ್ನೊಬ್ಬಳು ಬಾಲೆಯನ್ನು ಜೊತೆಗೂಡಿಸಿಕೊಂಡು ಅಲ್ಲಿಂದ ತಪ್ಪಿಸಿಕೊಂಡು ಹೊರ ಬರುತ್ತಾಳೆ. ಅಲ್ಲಿಂದ ನೇರ ರೇಲ್ವೆ ನಿಲ್ದಾಣಕ್ಕೆ ಬಂದು, ಬಿಜಾಪೂರದ ಟ್ರೇನಿಗಾಗಿ ಕಾಯುತ್ತಾ ಕುಳಿತ ಇವರ ಹತ್ತಿರ ಒಂದು ರೂಪಾಯಿಯೂ ಇರುವುದಿಲ್ಲ. ಇವರ ಅದೃಷ್ಟಕ್ಕೆ ಒಳ್ಳೆಯ ವ್ಯಕ್ತಿಯೊಬ್ಬ ಇವರಿಗೆ ಸಿಕ್ಕು, ಟ್ರೇನ್ ಟಿಕೇಟ್ ತೆಗೆಸಿ, ಬಿಜಾಪೂರದ ಟ್ರೇನ್ ಹತ್ತಿಸುತ್ತಾರೆ. ಬಿಜಾಪೂರದ ಕೊರೆವ ಚಳಿಯ ಬೆಳಗಿನಲಿ ಗೆಳತಿಯೊಂದಿಗೆ ಬಂದು, ರಕ್ಷಣೆಗಾಗಿ ಬಾಗಿಲು ತಟ್ಟಿದ್ದು, ಇವಳಿಗೆ ಮತ್ತು ಇವಳ ತಾಯಿಗೆ ಈ ಮೊದಲು ಆಶ್ರಯ ಕೊಟ್ಟಿದ್ದ, ಅದೇ ವೃದ್ಧ ಘರವಾಲಿಯ ದಂಧೆಯ ಮನೆಗೆ.*

ಮೇಲಿನ ಈ ಪ್ರಕರಣ ಉದಾಹರಣೆಗಾಗಿ ಮಾತ್ರ, ಇಂತಹ ಅನೇಕ ಪ್ರಕರಣಗಳನ್ನು ಗಮನಿಸಿದಾಗ ಸಂವಿಧಾನ, ಕಾಯಿದೆ, ಕಾನೂನುಗಳು, ನೀತಿ, ನಿಯಮಗಳು, ಇಲಾಖೆಗಳು, ಕಾವಲು ಸಮಿತಿಗಳು, ಮಕ್ಕಳ ರಕ್ಷಣಾ ಘಟಕಗಳು, ಸ್ವಯಂ ಸೇವಾ ಸಂಸ್ಥೆಗಳು ಏನು ಮಾಡುತ್ತಿವೆ? ಇಂತ ಪ್ರಕರಣಗಳು ನಮ್ಮ ನಡುವೆ ಅದೆಷ್ಟೋ ಇವೆ.

ಹಾಗಂತ ಸರಕಾರ, ನಾಗರೀಕ ಸಮಾಜ ಕೆಲಸ ಮಾಡುತ್ತಿಲ್ಲ ಅಂತಲ್ಲ. ಆದರೆ ಅವುಗಳ ಕಾರ್ಯ ವೈಖರಿ ಮತ್ತು ಬದ್ಧತೆಯ ಕುರಿತು ಭರವಸೆ ಇಲ್ಲ. ಅವರು ರಕ್ಷಿಸಿದ ಪ್ರಕರಣಗಳು ಬಹಳ ಕಡಿಮೆ. ಅದನ್ನು ನಾವು ಈ ಅಧ್ಯಯನದ ಈ ಮೊದಲಿನ ಎಲ್ಲ ಅಧ್ಯಾಯಗಳಲ್ಲಿ ಕಂಡುಕೊಂಡಿದ್ದೇವೆ. ಹಾಗಾದರೆ ಆ ರಕ್ಷಿಸಿದ ಬೆರಳೆಣಿಕೆಯಷ್ಟು ಮಕ್ಕಳ ಪುನರ್ವಸತಿ ಹೇಗಿದೆ? ಪುನಸ್ಥೆಲೆ ಹೇಗಿದೆ? ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸುವ ಮತ್ತು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

## ಉಲ್ಲೇಖಿತ ಗ್ರಂಥಗಳು


೧. ಪ್ರಶಾಂತ್ ಎಚ್.ಡಿ., (೨೦೧೬), ಹಕ್ಕಿಲ್ಲ ಹಕ್ಕಿನ ಪ್ರತೀಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು. ೨

೨. ಗೀತಾ ಕೃಷ್ಣಮೂರ್ತಿ (೨೦೦೯), ಮಹಿಳಾ ಹಕ್ಕುಗಳು, ಮಾನವ ಹಕ್ಕುಗಳ ನೆಲೆಯಲ್ಲಿ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೧೩೭-೧೪೧

೩. Jogan Shankar, (1990), Devadasi Cult: A Sociological Analysis, Ashish Publishing House, New Delhi. P.27

೪. ಕರಪತ್ರ (೨೦೧೨), ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ಆಯೋಗ, ಬೆಂಗಳೂರು

೫. ಮೈನೇನಿ, ಎಸ್. ಆರ್., (೨೦೦೨), ವುಮೆನ್ ಆ್ಯಂಡ್ ಲಾ, ಏಶಿಯಾ ಲಾ ಹೌಸ್, ಹೈದ್ರಾಬಾದ್,

೬. ನಮ್ಮೆಲ್ಲರ ಹೊಣೆ (೨೦೧೫), ಕರ್ನಾಟಕ ಸರಕಾರ ಮತ್ತು ಯುನಿಸೆಫ್ ಹೈದ್ರಾಬಾದ್

೭. ಶಾಲಿನಿ ರಜನೀಶ್ (೨೦೦೮), ನಡೆಮುಂದೆ, ಸ್ವಪ್ನ ಬುಕ್ ಹೌಸ್, ಬೆಂಗಳೂರ

೮. ಕುಸುಮಾ ಶಾನಭಾಗ (೨೦೦೭), ಕಾಯದ ಕಾರ್ಪಣ್ಯ, ಹೇಮಾಂಶು ಪ್ರಕಾಶನ, ಮಂಗಳೂರು

೯. ಭಾರತ ಸರ್ಕಾರ (೧೯೯೪), ಮಕ್ಕಳ ಹಕ್ಕುಗಳ ಒಡಂಬಡಿಕೆ

೧೦. ಗವರ್ನಮೆಂಟ್ ಆಫ್ ಇಂಡಿಯಾ, (೨೦೦೪), ಟ್ರ್ಯಾಫಿಕಿಂಗ್ ಆಫ್ ವುಮೆನ್ ಆ್ಯಂಡ್ ಚಿಲ್ಡ್ರನ್ ಇನ್ ಇಂಡಿಯಾ

೧೧. ನ್ಯಾಶನಲ್ ಲೀಗಲ್ ಅಥಾರಿಟಿ, (೨೦೦೫), ದೇವದಾಸಿ, ತಿರುಪತಿ, ಆಂಧ್ರ ಪ್ರದೇಶ

೧೨. ಮಕ್ಕಳಿಗಾಗಿ ರಾಷ್ಟ್ರೀಯ ನೀತಿ, (೨೦೧೩), ಚೈಲ್ಡ್ ರೈಟ್ಸ್ ಟ್ರಸ್ಟ್, ಬೆಂಗಳೂರು

## ಅಧ್ಯಾಯ ಎಂಟು

# ಪುನರ್ವಸತಿ ಪುನರ್ನೆಲೆ–ಸವಾಲುಗಳು

### ೮.೧. ಪ್ರಸ್ತಾವನೆ

'ಮಕ್ಕಳು' ಅಂದರೆ ಅತೀ ಮುಗ್ಧ ಮತ್ತು ಅಸಹಾಯಕ(ವಲ್ನರೇಬಲ್) ಜೀವಿಗಳು. ಅದರಲ್ಲಿಯೇ ವಿಶೇಷವಾಗಿ ಹೆಣ್ಣುಮಕ್ಕಳು ಇನ್ನೂ ಅಸಹಾಯಕರು. ರಾಷ್ಟ್ರಕವಿ ರವೀಂದ್ರನಾಥ ಟ್ಯಾಗೋರ್ ಅವರು, "ಭಗವಂತ ಮಾನವನ ಬಗ್ಗೆ ಇನ್ನೂ ನಿರಾಶೆಯಾಗಿಲ್ಲ ಎಂಬ ಸಂದೇಶವನ್ನು ಜನಿಸುವ ಪ್ರತಿ ಮಗುವೂ ಹೊತ್ತು ತರುತ್ತದೆ"( Every child comes with a message of God that he is not yet discouraged of mankind)[1] ಎಂದು ಹೇಳುತ್ತಾರೆ. ಹಾಗೆಯೇ ಚಿಲಿ ದೇಶದ ನೋಬೆಲ್ ಪ್ರಶಸ್ತಿ ವಿಜೇತ ಗ್ಯಾಬ್ರಿಯೆಲಾ ಮಿಸ್ಟ್ರೆಲ್ ಅವರು, "ಮಗು ದಾರಿ ಕಾಯಲಾರದು. ಅದರ ಎಲುಬಿನ ಬೆಳವಣಿಗೆ, ರಕ್ತ ಶೇಖರಣೆ ಮತ್ತು ಬೌದ್ಧಿಕ ವಿಕಾಸದ ಸಮಯದಲ್ಲಿ ಅದು ಆಗಲೇಬೇಕು. ಅದಕ್ಕಾಗಿ ಮಕ್ಕಳಿಗೆ ನಾವು ನಾಳೆ ಎನ್ನಲಾಗದು. ಅದರ ಹೆಸರೇ 'ಇಂದು', (The child cannot wait. Right now is the time his bones are being formed, his blood is being made and his senses are being developed. To him :we can not answer tomorrow. His neme is 'TODAY'-Gabriela Mistrel, a Chilean Nobel Laureate)[2] ಎಂದು ಹೇಳುತ್ತಾರೆ. ಈ ಮಾತನ್ನು ಕೇಳುವಾಗ ಭಾರತದಂತಹ ಜಾತೀಯ ರಾಷ್ಟ್ರದಲ್ಲಿ ಅದೆಷ್ಟು ಮಕ್ಕಳು, ಅದೆಷ್ಟು ವಿಭಿನ್ನವಾದ, ಭೀಕರವಾದ ಸನ್ನಿವೇಶಗಳಲ್ಲಿ ಬದುಕುತ್ತಿದ್ದಾರೋ. ಅಂತವರಿಗೆ 'ನಾಳೆ' ಎಂಬುದಲ್ಲ, ಅದೆಷ್ಟೋ ಮಕ್ಕಳಿಗೆ 'ಇಂದು' ಎಂಬುದೂ ಇಲ್ಲ. ಭವಿಷ್ಯ ಅಂದರೇನು ಎಂದು ಗೊತ್ತೇ ಇರದ ಅಲಕ್ಷಿತ ಸಮುದಾಯದ ಲಕ್ಷಾಂತರ ಮಕ್ಕಳು ಬೀದಿ ಬದಿಯಲ್ಲಿ, ಸ್ಲಂಗಳಲ್ಲಿ, ಹೋಟೇಲ್‌ಗಳಲ್ಲಿ, ಗ್ಯಾರೇಜ್‌ಗಳಲ್ಲಿ, ಬಾರ್‌ಗಳಲ್ಲಿ, ವೇಶ್ಯಾಗೃಹಗಳಲ್ಲಿ, ರೆಡ್‌ಲೈಟ್ ಏರಿಯಾಗಳಲ್ಲಿ ತಮ್ಮದಲ್ಲದ ತಪ್ಪಿಗೆ ತಮ್ಮ ಬಾಲ್ಯವನ್ನು ಕಳೆದುಕೊಳ್ಳುತ್ತಿದ್ದಾರೆ. ಅವುಗಳಲ್ಲಿ ಲೈಂಗಿಕ ಜೀತವೂ ಒಂದು. ಸಮಾಜ, ಸಮುದಾಯ, ಕುಟುಂಬ, ಹೆತ್ತವರೇ ರಕ್ಷಿಸಬೇಕಾದ ಕಂದಮ್ಮಗಳು ಕೆಂಪು ದೀಪದ ಕೆಳಗೆ ನಡುಗುತ್ತಾ, ರಕ್ಷಣೆಗಾಗಿ ಚೀರುತ್ತಿರುವುದನ್ನು ಕಾಣುತ್ತಿದ್ದೇವೆ. ಬಹುಪಾಲು ಮಕ್ಕಳು ಅದೇ ಜೀವನ ಅಂದುಕೊಂಡು ಜೀವ ತೇಯುತ್ತಿವೆ. ಪರಸ್ಪರ ಜೀವ ಸಂಬಂಧಗಳ ಅರಿವು ಬಾರದಂತೆ ಅವರನ್ನು ತರಬೇತಿಗೊಳಿಸಲಾಗುತ್ತಿದೆ. ದೇಶ ಕಾಲ ಯಾವುದರ ಮಿತಿಯೂ ಇಲ್ಲದೇ ಅವರನ್ನು ನಿರಂತರವಾಗಿ ಸಾಗಿಸಲಾಗುತ್ತಿದೆ.

"ಮಕ್ಕಳ ಲೈಂಗಿಕ ಜೀತವು, ಮಕ್ಕಳ ಲೈಂಗಿಕ ಶೋಷಣೆ ಮತ್ತು ಸಾಗಾಣಿಕೆ ಎಂಬ ರೂಪದಲ್ಲಿ ಒಂದು ಜಾಗತಿಕ ಸಮಸ್ಯೆ ಮತ್ತು ಜಾಗತಿಕ ವ್ಯಾಪಾರವಾಗಿ ಇಂದು ಪರಿಣಮಿಸಿದೆ. ಈಗಾಗಲೇ ೧೦ ಮಿಲಿಯನ್ ಮಕ್ಕಳು ಬಾಜಾರಿ ಲೈಂಗಿಕ ಮಾರುಕಟ್ಟೆಯ ಮುಖ್ಯ ಸರಕಾಗಿದ್ದಾರೆ. ಇದರಲ್ಲಿ ಎರಡು ಮಿಲಿಯನ್‌ಗಿಂತಲೂ ಹೆಚ್ಚು ಹೆಣ್ಣುಮಕ್ಕಳು ೫ ರಿಂದ ೧೫ ವರ್ಷದ ಒಳಗಿನವರಾಗಿದ್ದಾರೆ"(ಎಸ್ ಪಿ ಪಾಂಡೆ, ಅವದೇಶ್ ಕರ್ನಲ್ ಸಿಂಗ್, ಸಂಜಯ್ ಕರ್ನಲ್ ಪಾಂಡೆ, ೨೦೦೮).[೩] "ಮುಂಬಯಿ ವೇಶ್ಯಾಗೃಹಗಳೊಂದರಲ್ಲಿಯೇ ೫೦ ಸಾವಿರ ಮಕ್ಕಳು ಲೈಂಗಿಕ ಜೀತದಲ್ಲಿದ್ದಾರೆ. ಭಾರತದಲ್ಲಿ ಪ್ರತಿದಿನ ೨೦೦ ಹೆಣ್ಣುಮಕ್ಕಳು ವೇಶ್ಯಾವಾಟಿಕೆಗೆ ಸಾಗಿಸಲ್ಪಡುತ್ತಿದ್ದಾರೆ. ಅವರಲ್ಲಿ ಶೇಕಡಾ ೮೦ರಷ್ಟು ಮಕ್ಕಳು, ಅವರ ಇಚ್ಛೆಗೆ ವಿರುದ್ಧವಾಗಿ ತಳ್ಳಲ್ಪಟ್ಟಿದ್ದಾರೆ. ಮುಂಬಯಿನ ಒಂದು ರೆಡ್‌ಲೈಟ್ ಏರಿಯಾದಲ್ಲಿ ಲೈಂಗಿಕ ದಂಧೆಯಲ್ಲಿ ತೊಡಗಿಸಿಕೊಂಡ ೧ ಲಕ್ಷ ಹೆಣ್ಣುಮಕ್ಕಳ ಆದಾಯ ೪೦೦ ಮಿಲಿಯನ್ ಡಾಲರ್‌ಗಳಾಗಿದೆ. ಇದು ಅವರು ೩೬೫ ದಿನಗಳಲ್ಲಿ ಪ್ರತಿದಿನಕ್ಕೆ ಒಬ್ಬ ಮಹಿಳೆ ಸರಾಸರಿ ೬ ಗಿರಾಕಿಗಳಿಂದ ತಲಾ ೨ ಡಾಲರ್‌ನಷ್ಟು ಹಣವನ್ನು ಪಡೆದು ಬಂದ ವ್ಯವಹಾರದ ಆದಾಯವಾಗಿದೆ. ಭಾರತದ ವಿಷಯದಲ್ಲಿ ಮಕ್ಕಳನ್ನು ಮಹಿಳೆಯರನ್ನು ಈ ವಿಷಮ ಪರಿಸ್ಥಿತಿಗೆ ಸಿಕ್ಕಿಸಲು ಮೂರು ಮುಖ್ಯ ಮತ್ತು ಸಾಮಾನ್ಯ ಕಾರಣಗಳಿವೆ, ಮೊದಲನೆಯದು ಬಡತನ, ಎರಡನೆಯದು ಮೋಸ/ವಂಚನೆ, ಮೂರನೇಯದು ದೇವದಾಸಿ ಪದ್ಧತಿ"(ಸೇವ್ ಅವರ್ ಸಿಸ್ಟರ್ಸ್).[೪] ಕೇಂದ್ರೀಯ ಸಮಾಜಕಲ್ಯಾಣ ಸಲಹಾ ಸಮಿತಿಯ ವರದಿ ಪ್ರಕಾರ, ಭಾರತದ ಒಟ್ಟು ವೇಶ್ಯೆಯರಲ್ಲಿ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ಉತ್ತರ ಪ್ರದೇಶಗಳಿಗೆ, ಸೇರಿದ ಮಕ್ಕಳೇ ಹೆಚ್ಚು. ಈ ವರದಿಯ ಪ್ರಕಾರ ಶೇಕಡಾ ೧೫ರಷ್ಟು ಮಕ್ಕಳು, ೧೫ ರಿಂದ ೧೮ ವಯೋಮಾನದವರು. ಶೇಕಡಾ ೧೫ರಷ್ಟು ಮಕ್ಕಳು ೧೫ರ ವಯೋಮಾನಕ್ಕಿಂತ ಕೆಳಗಿನವರು ಆಗಿದ್ದಾರೆ. ಇವರಲ್ಲಿ ಶೇಕಡಾ ೬೦ರಷ್ಟು ಮಕ್ಕಳು ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ಪಂಗಡಗಳಿಗೆ ಸೇರಿದವರಾಗಿರುತ್ತಾರೆ. ಹಾಗಿದ್ದರೆ ಇವರ ರಕ್ಷಣೆ ಹೇಗೆ? ಪುನರ್ವಸತಿ ಹೇಗೆ ಮತ್ತು ಪುನರ್‍ನೆಲೆ ಹೇಗೆ? ಎನ್ನುವುದು ಅತ್ಯಂತ ಮಹತ್ವದ್ದಾಗಿದೆ.

ಲೈಂಗಿಕ ಜೀತಕ್ಕೆ ಒಳಗಾಗಬಹುದಾದ ಮತ್ತು ಒಳಗಾದ ಮಕ್ಕಳ ರಕ್ಷಣೆ ಕುರಿತು ನಾವು ಈಗಾಗಲೇ ಅಧ್ಯಾಯ ನಾಲ್ಕರಲ್ಲಿ ವಿಸ್ತೃತವಾಗಿ ಚರ್ಚೆ ಮಾಡಿದ್ದೇವೆ. ಹಾಗೆಯೆ ಅಧ್ಯಾಯ ಏಳರಲ್ಲಿ ಅವರ ಸಾಮಾಜಿಕ ಭದ್ರತೆ ಮತ್ತು ರಕ್ಷಣೆಗಿರುವಂತಹ ಸಂವಿಧಾನಾತ್ಮಕ ಸೌಲಭ್ಯಗಳು ಮತ್ತು ಸರ್ಕಾರದ ಕಾರ್ಯತಂತ್ರಗಳ ಕುರಿತು ವಿವರವಾಗಿ ಚರ್ಚಿಸಲಾಗಿದೆ. ಆದರೆ ಇದೆಲ್ಲದರ ಹೊರತಾಗಿಯೂ ಸಹ ಹೆಣ್ಣುಮಕ್ಕಳ ಸಾಗಾಣಿಕೆ ಅವ್ಯಾಹತವಾಗಿ ಸಾಗುತ್ತಿರುವುದನ್ನು ಹಲವು ಅಧ್ಯಯನಗಳು ಗುರುತಿಸುತ್ತವೆ. ಅಲ್ಲದೇ ಬಹು ಮುಖ್ಯವಾಗಿ ನಮ್ಮ ಅಧ್ಯಯನದ ಪ್ರಕರಣಗಳು ಅದನ್ನು ಸ್ಪಷ್ಟ ಪಡಿಸುತ್ತವೆ. ರಕ್ಷಣಾ ಅಂಶವೇ ಈ ಮಟ್ಟದ ಸವಾಲುಗಳನ್ನು ಎದುರಿಸುತ್ತಿರುವಾಗ ಇನ್ನು ಅವರ ಪುನರ್ವಸತಿ ಪುನರ್‍ನೆಲೆ ಹೇಗಿದೆ? ಅಲ್ಲಿನ ಸವಾಲುಗಳು ಯಾವುವು ಎನ್ನುವುದನ್ನು ಮುಂದೆ ವಿಶ್ಲೇಷಣೆ ಮಾಡಲಾಗಿದೆ.

ಲೈಂಗಿಕ ದೌರ್ಜನ್ಯಕ್ಕೆ ಒಳಗಾದವರ ಪುನರ್ವಸತಿ ಮತ್ತು ಪುನರ್ನೆಲೆಯು ಅಷ್ಟು ಸರಳವಾದ ವಿಚಾರವಲ್ಲ. ಸಮಾಜ ಸುಧಾರಕರು ತುಂಬಾ ಮೊದಲಿನಿಂದಲೂ ವೇಶ್ಯಾವಾಟಿಕೆಯ ನಿಷೇಧ ಕುರಿತಾಗಿ ಹೋರಾಟ ಮಾಡುತ್ತಲೇ ಬಂದಿದ್ದಾರೆ. ಪರಿಣಾಮವಾಗಿ ಹಲವಾರು ಕಾಯ್ದೆ ಕಾನೂನುಗಳು ಜಾರಿಗೊಂಡವು. ಇವೆಲ್ಲವುಗಳಲ್ಲಿ ೧೯೨೩ರಲ್ಲಿ ಬಂದ ವೇಶ್ಯಾವೃತ್ತಿ ನಿಷೇಧ ಸಂಹಿತೆಯು ವೇಶ್ಯೆಯರ ಮೇಲೆ ನೇರವಾಗಿ ಪರಿಣಾಮ ಉಂಟು ಮಾಡಿದ ಮೊದಲ ಸುಧಾರಣಾ ಕಾಯಿದೆಯಾಗಿದೆ. ಅಪ್ರಾಪ್ತ ವಯಸ್ಸಿನ ಬಾಲೆಯರನ್ನು ಮಹಿಳೆಯರನ್ನು ಅನೈತಿಕ ಚಟುವಟಿಕೆಗಳಿಗೆ ಸಾಗಿಸುವ ದಂಧೆಗೆ ತಡೆಯೊಡ್ಡುವ ಉದ್ದೇಶದಿಂದ, ಇದೇ ಕಾಯಿದೆಗೆ ೧೯೨೬ ಮತ್ತು ೧೯೨೭ರಲ್ಲಿ ತಿದ್ದುಪಡಿ ತರಲಾಯಿತು. ೧೯೩೦ರ ಸಂದರ್ಭದಲ್ಲಿ ಬೆಳಕಿಗೆ ಬಂದ ನ್ಯಾಷನಲ್ ವಿಜಿಲನ್ಸ್ ಅಸೋಸಿಯೇಶನ್ ವೇಶ್ಯಾವಾಟಿಕೆಗಳನ್ನು ಮುಚ್ಚಿ ಬಿಡಬೇಕೆಂಬ ಪ್ರಯತ್ನ ಮಾಡಿತು. ಇದರಿಂದಾಗಿ ವೇಶ್ಯೆಯರು ಬೀದಿಗಳಲ್ಲಿಯೇ ದಂಧೆ ನಡೆಸ ತೊಡಗಿದರು. ಪರಿಣಾಮವಾಗಿ ಮಹಿಳಾ ಸಂಸ್ಥೆಗಳು ಮೊತ್ತ ಮೊದಲ ಬಾರಿಗೆ ನಮ್ಮ ದೇಶದಲ್ಲಿ ಮಹಿಳೆಯರಿಗೆ ಪುನರ್ವಸತಿ ಒದಗಿಸಬೇಕೆಂಬ ಅಗತ್ಯವನ್ನು ಮನಗಂಡವು. ಇದಕ್ಕಿಂತ ಮೊದಲು ಯುರೋಪಿಯನ್ ಪುರುಷ ಮತ್ತು ಮಹಿಳಾ ವಿದ್ವಾಂಸರಿಂದ ಕಾವಲು ಸಮಾಜಗಳು ಹುಟ್ಟಿ ಬಂದಿದ್ದನ್ನು ಜೆ ಆರ್ ಬಾನೂ ಇ. ಮಿಸ್ತ್ರಿಯವರು ಬರೆಯುತ್ತಾರೆ. ಆದರೆ ಸರ್ಕಾರಿ ಅಧಿಕಾರಿಗಳು, ಪೊಲೀಸರ ಒಂದು ಗುಂಪು, "ಕಾನೂನುಗಳಿಂದ ವೇಶ್ಯಾವಾಟಿಕೆಯನ್ನು ನಿಷೇಧಿಸಲು ಸಾಧ್ಯವಿಲ್ಲ. ಒಂದು ವೇಳೆ ನಿಷೇಧಿಸಿದರೂ, ಎಲ್ಲ ವೇಶ್ಯೆಯರಿಗೂ ಪುನರ್ವಸತಿ ಒದಗಿಸಲು ಸಾಧ್ಯವೇ ಇಲ್ಲ. ಹಾಗಾಗಿ ವೇಶ್ಯಾವಾಟಿಕೆಗಳನ್ನು ಕೆಲವು ನಿರ್ಬಂಧಿತ ಪ್ರದೇಶಗಳಲ್ಲಿ ಇರುವಂತೆ ನಿಯಮ ಮಾಡಬೇಕು" ಎಂದು ಅಭಿಪ್ರಾಯಪಟ್ಟರು. ಇದರಿಂದ ಅದರ ಉಸ್ತುವಾರಿ, ಕಾನೂನು ಪಾಲನೆ, ನೈರ್ಮಲ್ಯ ಹಾಗೂ ವೈದ್ಯಕೀಯ ಉಸ್ತುವಾರಿ ಸುಲಭವಾಗುತ್ತದೆ ಎಂಬ ಅಭಿಪ್ರಾಯ ಆ ಸಮಯದಲ್ಲಿ ಬಂದಿತ್ತು. ಇದನ್ನು ಕೆಲವು ಪ್ರಭಾವಿ ಶಿಕ್ಷಣ ತಜ್ಞರೂ ಅನುಮೋದಿಸಿದ್ದರು. ಇದಕ್ಕೆ ವಿರೋಧವಾಗಿ ಲೀಗ್ ಆಫ್ ನೇಷನ್ಸ್ ಅನೈತಿಕವಾಗಿ ಜನ ಸಾಗಣೆಯಾಗುವುದನ್ನು ಮತ್ತು ವೇಶ್ಯೆಯರ ಸಂಪಾದನೆಯ ಮೇಲೆ ಜನ ಬದುಕುವುದನ್ನು ತಡೆಗಟ್ಟಲು ಅನೇಕ ಉಪಾಯಗಳನ್ನು ಸೂಚಿಸಿತು. ಭಾರತವೂ ಇದಕ್ಕೆ ಒಪ್ಪಿಕೊಂಡಿತು. ವೇಶ್ಯಾವೃತ್ತಿ ಮಹಾಪರಾಧ ಎಂಬ ಅಭಿಪ್ರಾಯ ಸರ್ವಸಾಮಾನ್ಯವಾಗಿತ್ತು. ಇದರ ನಿರ್ಮೂಲನಕ್ಕಾಗಿ ಹೋರಾಡಿದ ಬಂಗಾಳದ ಚಾರುಲತಾ ಮುಖರ್ಜಿ, ರೊಮೋಲಾ ಸಿನ್ಹ ಮೊದಲಾದ ಸುಧಾರಕರು ಅವರ ಪುನರ್ವಸತಿಯನ್ನು ಕುರಿತು ಚಿಂತಿಸಿದರು (ಎಚ್.ಎಸ್.ಶ್ರೀಮತಿ. ೨೦೦೧)."

ಇಷ್ಟೆಲ್ಲ ಪ್ರಯತ್ನಗಳು ನಡೆದಿದ್ದರೂ ಸಹ, ಲೈಂಗಿಕ ದಂಧೆಯಲ್ಲಿರುವವರ ಪುನರ್ವಸತಿ ಕುರಿತಾಗಿ ಎಲ್ಲಿಯೂ ಕಾನೂನಾತ್ಮಕ ಬೆಂಬಲ ಸಿಕ್ಕಿರಲಿಲ್ಲ. ಆದರೆ ೧೯೫೬ರಲ್ಲಿ "ಮಹಿಳೆ ಮತ್ತು ಮಕ್ಕಳ(ಬಾಲೆ) ಅನೈತಿಕ ಸಾಗಾಣಿಕೆ ದಮನ ಕಾಯಿದೆ(ಎಸ್.ಐ.ಟಿ.ಎ.)ಯನ್ನು ಜಾರಿಗೊಳಿಸಲಾಯಿತು. ಇದೇ ಕಾಯಿದೆಗೆ ೧೯೮೬ರಲ್ಲಿ ತಿದ್ದುಪಡಿಗೊಳಿಸಿ "ಅನೈತಿಕ ಸಾಗಾಣಿಕೆ(ತಡೆಗಟ್ಟುವಿಕೆ) ಕಾಯಿದೆ"(ಪಿ.ಐ.ಟಿ.ಐ.) ಎಂದು ಕರೆಯಲಾಯಿತು. ಈ ಕಾಯಿದೆಯಲ್ಲಿ ಮೊತ್ತ ಮೊದಲ ಬಾರಿಗೆ ಲೈಂಗಿಕ ದಂಧೆಯ ಮಹಿಳೆಯರನ್ನು ಅಪರಾಧಿಗಳಂತೆ ಕಾಣದೇ, ಅವರಿಗೆ ಪುನರ್ವಸತಿಯನ್ನು ಒದಗಿಸಬೇಕೆಂದು ಆದೇಶಿಸಲಾಯಿತು.

ಈ ಕಾಯಿದೆಯಲ್ಲಿ, "ಬಂಧಿಸಲ್ಪಟ್ಟ ಮಹಿಳೆಯನ್ನು ಮತ್ತೆ ಅದೇ ವ್ಯಕ್ತಿಗೆ ಮರಳಿ ಹೋಗದಂತೆ ತಡೆಯಲು ಸೂಕ್ತವಾದ ಪುನರ್ವಸತಿ ಕಲ್ಪಿಸುವುದು ಅವಶ್ಯವಿದೆ. ಅವರನ್ನು ಹಿಡಿದು ಬಂಧಿಖಾನೆಗೆ ಹಾಕಿದಾಗ ಅವರನ್ನು ಜಾಮೀನು ನೀಡಿ ಬಿಡಿಸಿಕೊಳ್ಳಲು ಬರುವವರು ಅದೇ ತಲೆಹಿಡುಕರು ಮತ್ತು ಘರವಾಲಿಗಳಾಗಿರುತ್ತಾರೆ. ಅವರು ಇವರನ್ನು ಬಿಡಿಸಿಕೊಂಡು ಹೋಗಿ ಮತ್ತೆ ಅದೇ ದಂಧೆಯಲ್ಲಿ ಅವರನ್ನು ತೊಡಗಿಸುತ್ತಾರೆ. ಆದ್ದರಿಂದ ಲೈಂಗಿಕ ದಂಧೆಯಲ್ಲಿ ತೊಡಗಿಕೊಂಡ ಮಹಿಳೆಯರನ್ನು ಜೈಲಿಗೆ ಹಾಕುವ ಬದಲಿಗೆ, ಅವರನ್ನು ಪರಿವೀಕ್ಷಣಾ ಗೃಹಗಳಲ್ಲಿ ಇಡುವ ಮತ್ತು ಅಗತ್ಯವಾದ ಮಾನಸಿಕ ಹಾಗೂ ವೈದ್ಯಕೀಯ ಚಿಕಿತ್ಸೆಯ ಅವಶ್ಯಕತೆ ಇರುತ್ತದೆ. ಹಾಗೆಯೇ ಲೈಂಗಿಕ ದಂಧೆಯಲ್ಲಿದ್ದ ಮಹಿಳೆಯರ ಮಕ್ಕಳನ್ನು ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳನ್ನು ಅದೇ ದಂಧೆಗೆ ಬೀಳದಂತೆ ತಡೆಗಟ್ಟುವುದು ಅವಶ್ಯವಿದೆ. ಆದ್ದರಿಂದ ಅವರನ್ನು ಅವರ ತಾಯಿಯಿಂದ ಬೇರ್ಪಡಿಸಿ, ಸಾಮಾಜಿಕ ಕಳಂಕವಾಗದಂತೆ ಸಾಂಸ್ಥಿಕ ರಕ್ಷಣೆಯನ್ನು ಕೊಡುವುದು ಅವಶ್ಯವಿದೆ ಎಂದು ಸ್ಪಷ್ಟ ಪಡಿಸುತ್ತದೆ. ಈ ದಂಧೆಯಲ್ಲಿ ಮುಂದುವರೆಯಲು ಮನಸ್ಸಿರದೇ ಇದ್ದಂತಹ ಮಹಿಳೆಯರು ಮತ್ತು ಬಾಲೆಯರು, ತಮ್ಮ ಆರ್ಥಿಕ ಸಮಸ್ಯೆಯಿಂದಾಗಿಯೇ ಈ ದುಸ್ಥಿತಿಯಲ್ಲಿ ತೊಡಗಿಕೊಂಡಿರುತ್ತಾರೆ. ಆದ್ದರಿಂದ ಹಾಗೆ ಮರಳಿ ಬರಲು ಇಚ್ಛಿಸುವವರಿಗೆ ಗೌರವಧನ ನೀಡಿ ಕೆಲಸ ನೀಡಬೇಕು ಎಂದು ಈ ಕಾಯಿದೆಯು ಹೇಳುತ್ತದೆ" (ಸುಮತಿ ಕರ್ಮಾಕರ, ೨೦೦೧).[೬]

ಈ ಪುನರ್ವಸತಿಗಾಗಿಯೇ ಇಪ್ಪಾ (ಆಯ್.ಪಿ.ಎ) ಕಾಯಿದೆಯ ೨೧ನೇ ಸೆಕ್ಷನ್ ಅಡಿಯಲ್ಲಿ ಪ್ರೊಟೆಕ್ಟಿವ್ ಹೋಮ್ ವ್ಯವಸ್ಥೆ ಮಾಡಲು ತಿಳಿಸಲಾಗಿದೆ. ಈ ಪ್ರೋಟೆಕ್ಟಿವ್ ಹೋಮ್‌ಗಳು ಮಹಿಳೆಯರಿಗೆ ಆಶ್ರಯ ಮತ್ತು ರಕ್ಷಣೆ ಒದಗಿಸುವುದಲ್ಲದೇ ಶಿಕ್ಷಣ ಮತ್ತು ವೃತ್ತಿ ಶಿಕ್ಷಣವನ್ನೂ ಒದಗಿಸುತ್ತವೆ. ಸಂತ್ರಸ್ಥರ ರಕ್ಷಣೆ ಮತ್ತು ಪುನರ್ವಸತಿಗಾಗಿ, ಬಾಲ ನ್ಯಾಯ ಕಾಯಿದೆಯ ಪ್ರಕಾರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಅಲ್ಪಾವಧಿ ವಸತಿ ಕೇಂದ್ರಗಳು ರಚಿಸಲ್ಪಟ್ಟಿವೆ. ಕೇಂದ್ರ ಸಮಾಜ ಕಲ್ಯಾಣ ಮಂಡಳಿಯು ಲೈಂಗಿಕ ದಂಧೆಯ ಮಹಿಳೆಯರ ಮಕ್ಕಳ ಕಾಳಜಿ ಮತ್ತು ಅಭಿವೃದ್ಧಿಗಾಗಿ ರೆಡ್‌ಲೈಟ್ ಏರಿಯಾಗಳಲ್ಲಿ ಕೇರ್‌ಸೆಂಟರ್‌ಗಳನ್ನು ಪ್ರಾರಂಭಿಸಲು ಎನ್.ಜಿ.ಓ.ಗಳಿಗೆ ಆರ್ಥಿಕ ಸಹಾಯಧನವನ್ನು ಒದಗಿಸುತ್ತಿವೆ.

೧೯೫೬ರ ಸಾಗಣೆ ತಡೆ ಕಾಯಿದೆಯು ಲೈಂಗಿಕ ದೌರ್ಜನ್ಯಕ್ಕೊಳಗಾದ ಮಹಿಳೆ ಮತ್ತು ಮಕ್ಕಳ ಪರವಾಗಿ ಜಾರಿಗೊಂಡಿದ್ದರೂ ಸಹ ಅವರ ಪುನರ್ನೆಲೆಯ ಕುರಿತು ಏನೂ ಮಾತನಾಡುವುದಿಲ್ಲ. ೧೯೩೦ರಲ್ಲಿ ಸಮಾಜ ಸುಧಾರಕರು ಪುನರ್ವಸತಿಗೆ ಬಂದ ಮಹಿಳೆಯರನ್ನು ಅವರ ಮೂಲ ಕುಟುಂಬಗಳೊಂದಿಗೆ, ಜಾತಿಯ ಜನರೊಂದಿಗೆ ಪುನಃ ಒಂದಾಗಿಸುವ ಪ್ರಯತ್ನ ನಡೆಸಿದ್ದರು. ಆದರೆ ಅದು ಕಾನೂನಾತ್ಮಕಗೊಂಡಿರಲಿಲ್ಲ. ಆದರೆ ಸಂತ್ರಸ್ಥ ಮಕ್ಕಳು ಮತ್ತು ಮಹಿಳೆಯರು ಪುನರ್ವಸತಿಗೊಳ್ಳುವುದಷ್ಟೆ ಅಲ್ಲ, ಅವರು ಮತ್ತೆ ತಮ್ಮ ಕುಟುಂಬದೊಂದಿಗೆ ಒಂದಾಗಿ ಸಾಮಾನ್ಯ ಬದುಕನ್ನು ಬದುಕಬೇಕೆಂಬುದು ಅಷ್ಟೇ ಮುಖ್ಯವಾಗಿತ್ತು. ಈ ಆಶಯವನ್ನು ೨೦೦೦ದ ಇತ್ತೀಚಿನ ಬಾಲನ್ಯಾಯ(ಪಾಲನೆ ಮತ್ತು

ಪೋಷಣೆ) ಕಾಯಿದೆಯ ಮೂಲಕ, ಆಚರಣೆಗೆ ತರಲಾಯಿತು. ಈ ಕಾಯಿದೆಯು ಶೋಷಿತ ಮಕ್ಕಳ ಪುನರ್ವಸತಿಯನ್ನಷ್ಟೇ ಅಲ್ಲದೇ, ಮುಂದುವರೆದು ಮಗುವಿನ ಅತ್ಯುತ್ತಮ ಹಿತಾಸಕ್ತಿಯನ್ನು ಅನುಲಕ್ಷಿಸಿ ಅದರ ಪುನರ್ನೆಲೆಯ ಪ್ರಕ್ರಿಯೆಗಳನ್ನು ಸ್ಪಷ್ಟಪಡಿಸುತ್ತದೆ.

ಲೈಂಗಿಕ ಜೀತಕ್ಕೆ ಒಳಪಟ್ಟವರ ಪುನರ್ವಸತಿಗಾಗಿ ಇಷ್ಟೆಲ್ಲ ಚರ್ಚೆಗಳು ದಶಕಗಳಿಂದ ನಡೆಯುತ್ತ ಬಂದಿವೆ. ಸಂವಿಧಾನದ ಆಶಯದಂತೆ ಹುಟ್ಟಿಕೊಂಡಿರುವ ಕಾನೂನುಗಳು, ಜಾರಿಯಲ್ಲಿರುವ ಕಾರ್ಯಕ್ರಮಗಳು ಯೋಜನೆಗಳು ಇದ್ದಾಗಲೂ ಸಹ ರಕ್ಷಣೆಗೊಳ್ಳುತ್ತಿರುವವರ ಸಂಖ್ಯೆ ಅತೀ ವಿರಳ. ಈ ಕಾಯಿದೆಯಲ್ಲಿ ರಕ್ಷಣೆಗೊಂಡವರು ಈಗ ಏನು ಮಾಡುತ್ತಿದ್ದಾರೆ? ಅವರ ಬದುಕು ಹೇಗಿದೆ? ಅವರ ಪುನರ್ವಸತಿ ಹೇಗೆ ನಡೆದಿದೆ? ಪುನರ್ನೆಲೆಗೊಳಪಟ್ಟ ಬಾಲೆಯರ ಸ್ಥಿತಿ ಈಗ ಹೇಗಿದೆ? ಅಲ್ಲಿ ಅವರು ಎದುರಿಸುತ್ತಿರುವ ಸವಾಲುಗಳು ಯಾವುವು? ಎಂಬುದನ್ನು ಇಲ್ಲಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

**೮.೨. ಪುನರ್ವಸತಿಯ ಸವಾಲುಗಳು**

ಕರ್ನಾಟಕದ ಬೆಳಗಾವಿ, ಬಿಜಾಪೂರ ಮತ್ತು ಬಾಗಲಕೋಟೆ ಜಿಲ್ಲೆಗಳಿಂದ ಮಹಾರಾಷ್ಟ್ರದ ರೆಡ್‌ಲೈಟ್ ಏರಿಯಾಗಳಿಗೆ ಲೈಂಗಿಕ ಜೀತಕ್ಕಾಗಿ ಸಾಗಾಣಿಕೆಗೊಂಡು, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ರಕ್ಷಣೆ) ಕಾಯಿದೆ ೨೦೦೦ದ ಅಡಿಯಲ್ಲಿ ರಕ್ಷಿಸಲ್ಪಟ್ಟ ಅಪ್ರಾಪ್ತ ವಯಸ್ಸಿನ ಬಾಲೆಯರ ಪುನರ್ವಸತಿ ಮತ್ತು ಪುನರ್ನೆಲೆಯ ಸ್ಥಿತಿಯನ್ನು, ಅವರ ಪ್ರಕರಣ ಅಧ್ಯಯನಗಳ ಮೂಲಕ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಅಧ್ಯಯನಕ್ಕೆ ಒಳಪಟ್ಟ ಒಟ್ಟು ಒಂಬತ್ತು ಮಹಿಳೆಯರು ಸಾಗಾಣಿಕೆಗೊಂಡಾಗ ಅಪ್ರಾಪ್ತರಾಗಿದ್ದು, ಅನಕ್ಷರಸ್ಥರಾಗಿದ್ದರು. ಅವರಲ್ಲಿ ನಾಲ್ಕು ಬಾಲೆಯರು ಅವಿವಾಹಿತರಾಗಿದ್ದರು. ಮೂರು ಬಾಲೆಯರು ದೇವದಾಸಿ ಪ್ರಕ್ರಿಯೆಗೆ ಒಳಗಾದವರಾಗಿದ್ದರು. ಇಬ್ಬರು ವಿವಾಹಿತರಾಗಿದ್ದರು (ಈ ಇಬ್ಬರಲ್ಲಿ ಒಬ್ಬರು ಮರಣ ಹೊಂದಿದ್ದಾರೆ). ನಾವು ಅಧ್ಯಯನಕ್ಕೆ ಒಳಪಡಿಸಿದ ಪ್ರಕರಣಗಳು ೨೦೦೦ ದಿಂದ ೨೦೧೨ರ ಅವಧಿಯಲ್ಲಿ ಲೈಂಗಿಕ ದಂಧೆಯ ಮನೆಗಳಿಂದ ರಕ್ಷಿಸಲ್ಪಟ್ಟಿದ್ದು, ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಮೂಲಕ ಪುನರ್ವಸತಿಗೊಂಡು ಪುನರ್ನೆಲೆಗೊಂಡಿದ್ದಾರೆ. ಇವರಲ್ಲಿ ಮೂರು ಪ್ರಕರಣಗಳ ಬಾಲೆಯರನ್ನು ಸರ್ಕಾರಿ ಪುನರ್ವಸತಿ ಕೇಂದ್ರಗಳಲ್ಲಿಯೂ, ನಾಲ್ಕು ಪ್ರಕರಣಗಳ ಬಾಲೆಯರನ್ನು ಸರ್ಕಾರೇತರ ಸಂಸ್ಥೆಗಳಲ್ಲಿಯೂ ಪುನರ್ವಸತಿಗಾಗಿ ಇಡಲಾಗಿತ್ತು. ಇನ್ನೆರಡು ಪ್ರಕರಣಗಳ ಬಾಲೆಯರು ಸರ್ಕಾರೇತರ ಸಂಸ್ಥೆಯ ಸುಪರ್ದಿಗೆ ಒಪ್ಪಿಸಲ್ಪಟ್ಟಿದ್ದರೂ ಸಹ ಅವರನ್ನು ಅವರ ತಾಯಿ ಅಲ್ಲಿ ಇರಲು ಬಿಡದೇ ಬಿಡಿಸಿಕೊಂಡು ಬಂದಿದ್ದರು.

**ಪ್ರಕರಣ–೧ರ** ಬಾಲೆ ರಂಜನಾ. ಸರ್ಕಾರಿ ಪುನರ್ವಸತಿ ಕೇಂದ್ರದಲ್ಲಿ ೪ ತಿಂಗಳು ಕಳೆದಿದ್ದಳು. ಅಲ್ಲಿ ಪುನರ್ವಸತಿಗಾಗಿ ಟೇಲರಿಂಗ್ ತರಬೇತಿಯ ವ್ಯವಸ್ಥೆ ಇತ್ತು. ಆದರೆ, ಇವಳ ಮಾನಸಿಕ ಸ್ಥಿತಿ, ಅನಾರೋಗ್ಯಗಳು ಆ ತರಬೇತಿಯ ಕಲಿಕೆಯಲ್ಲಿ ಇವಳು ತನ್ನನ್ನು ತೊಡಗಿಸಿಕೊಳ್ಳಲು ಬಿಡಲಿಲ್ಲ.

ಹಾಗೆಯೇ ಪ್ರಕರಣ-೨ರ ಬಾಲೆ ಚೆನ್ನವ್ವ "ಅನಕ್ಷರಸ್ಥಳಾದ ತನಗೇನು ತಿಳಿಯುವುದು, ತನ್ನನ್ನು ಮನೆಗೆ ಬಿಟ್ಟರೆ ಸಾಕು" ಎಂಬ ಭಾವದಲ್ಲಿಯೇ ದಿನ ಕಳೆದಿದ್ದಳು. ಪ್ರಕರಣ-೩ರ ಬಾಲೆ ಲತಾ, ತಾನು ನರಕ ಸದೃಷವಾದ ದಂಧೆಯ ಮನೆಯಿಂದ ಪಾರಾಗಿ ಬಂದದ್ದಕ್ಕೆ ತುಂಬಾ ಸಂತಸಗೊಂಡಿದ್ದಳು. ಪುನರ್ವಸತಿ ಕೇಂದ್ರದಲ್ಲಿ ನಡೆಯುತ್ತಿರುವ ತರಬೇತಿ ಕುರಿತು ಅವಳಿಗೆ ಯಾವುದೇ ಆಸಕ್ತಿ ಇರಲಿಲ್ಲ. ಈ ಕುರಿತು ಸರ್ಕಾರಿ ಪುನರ್ವಸತಿ ಕೇಂದ್ರದಲ್ಲಿ ಸಿಬ್ಬಂದಿಯಿಂದ ಯಾವುದೇ ರೀತಿಯ ಒತ್ತಾಯ, ಪ್ರೇರಣೆಗಳು ಈ ಬಾಲೆಯರಿಗೆ ಇರುತ್ತಿರಲಿಲ್ಲ. ಇವರು ಅಲ್ಲಿಂದ ಯಾವಾಗ ಹೊರ ಹೋಗುತ್ತಾರೋ ಎಂಬ ಭಾವದಲ್ಲಿ ಅಲ್ಲಿಯ ಸಿಬ್ಬಂದಿ ಇರುತ್ತಿದ್ದರೆಂದು ಬಾಲೆಯರು ಹೇಳುತ್ತಾರೆ. ಅಲ್ಲದೇ ಇವರು ಅನಕ್ಷರಸ್ಥರಾಗಿದ್ದರಿಂದ ಅಲ್ಲಿ ನಡೆಯುತ್ತಿದ್ದ ತರಬೇತಿಗಳಲ್ಲಿ ಇವರಿಗೆ ಯಾವುದೇ ಆಸಕ್ತಿ ಇರುತ್ತಿರಲಿಲ್ಲವೆಂದು ಇವರು ಹೇಳುತ್ತಾರೆ.

ಸರ್ಕಾರೇತರ ಸಂಸ್ಥೆಯ ಅಡಿಯಲ್ಲಿ ಪುನರ್ವಸತಿಗೊಂಡ ನಾಲ್ಕು ಬಾಲೆಯರಲ್ಲಿ ಇಬ್ಬರು (ಪ್ರಕರಣ ಸಂಖ್ಯೆ ೪ ಮತ್ತು ೫) ತಾವು ಪುನರ್ವಸತಿ ಕೇಂದ್ರಗಳಲ್ಲಿ ಪಡೆದುಕೊಂಡ ತರಬೇತಿಗಳ ಉದ್ಯೋಗಗಳನ್ನೇ ಮಾಡುತ್ತಿದ್ದಾರೆ. ಆದರೂ ಅದರಿಂದ ಅವರ ಜೀವನಕ್ಕೆ ಭದ್ರತೆ ದೊರಕಿಲ್ಲ. ಪ್ರಕರಣ-೬ರ ಬಾಲೆ ಶೋಭಾ, "ನಮ್ಮ ಮನಿಯೊಳಗ ಹುಚ್ಚಿಯಾದ ನಮ್ಮವ್ವ ಅದಾಳ. ನಮ್ಮ ಆಯಿ ವಯಸ್ಸಾದಾಕಿ ಅದಾಳ. ಇನ್ನೂ ಆಟ ಆಡ್ಕೊಂಡಿರಬೇಕಾದ ಸಣ್ಣ ತಂಗಿ ಅದಾಳ. ನಮ್ಮಪ್ಪ ಇಂತವರ್ನೆಲ್ಲ ಬಿಟ್ಟು ಎಲ್ಲೋ ಓಡಿ ಹೋಗ್ಯಾನ. ಇನ್ನೂ ಬಂದಿಲ್ಲ. ಅವರ್ನೆಲ್ಲ ನಾನ ನೋಡ್ಕೋಬೇಕ. ಹಂಗಾಗಿ ನನಗ ಇಲ್ಲಿ ಇರೂದು ಬಾಳ ತ್ರಾಸ ಆಕ್ಕೈತಿ. ನನಗೇನ ಇದ್ನೆಲ್ಲ ಕಲ್ಯಾಕ ಆಗಂಗಿಲ್ಲ". ಎಂದು ಹೇಳುವುದನ್ನು ಕೇಳಿದರೆ, ಅವರೆಲ್ಲ ಇವಳ ಲೈಂಗಿಕ ದಂಧೆಯ ಮೇಲೆಯೇ ಅವಲಂಬಿತರಾಗಿದ್ದರು ಎನ್ನುವುದು ಅರ್ಥವಾಗುತ್ತದೆ. ಆದ್ದರಿಂದ ಶೋಭಾಳಿಗೆ ಈ ಯಾವ ಚಟುವಟಿಕೆಗಳ ಮೇಲೆಯೂ ಆಸಕ್ತಿ ಇರಲಿಲ್ಲ. ಅಲ್ಲದೇ "ಅಲ್ಲಿಂದ ಒಮ್ಮೆ ತನ್ನನ್ನು ಒಮ್ಮೆ ಮನೆಗೆ ಬಿಟ್ಟರೆ ಸಾಕು, ಮತ್ತೆ ಮರಳಿ ದಂಧೆಯ ಮನೆಗೆ ಬರಬಹುದು" ಎಂಬ ಎಣಿಕೆಯಲ್ಲಿಯೆ ದಿನ ಕಳೆದಿದ್ದಳು. ಪ್ರಕರಣ-೭ರ ಬಾಲೆ ಸುನಂದಾ, ಎಚ್.ಐ.ವಿ. ರೋಗ ಪೀಡಿತೆಯಾಗಿದ್ದಾಳೆ. ಹೀಗಾಗಿ ಆಕೆ ಜೀವನದಲ್ಲಿ ಯಾವ ಆಶಾ ಭಾವನೆಯನ್ನೂ ಇಟ್ಟುಕೊಂಡಿರಲಿಲ್ಲ. ತರಬೇತಿ ಕಾರ್ಯಕ್ರಮಗಳಲ್ಲಿಯೂ ಯಾವುದೇ ಆಸಕ್ತಿ ತೋರಿಸಿರಲಿಲ್ಲ.

ಸರ್ಕಾರೇತರ ಸಂಸ್ಥೆಯ ಪುನರ್ವಸತಿ ಕೇಂದ್ರದಲ್ಲಿ ಆಸರೆ ಪಡೆದಿದ್ದ, ಪ್ರಕರಣ ಸಂಖ್ಯೆ ೮ರ ಬಾಲೆ ಗೌರಿ, "ನಮಗ ಅವರು ಎಷ್ಟ ಪ್ರೀತಿ ಕಾಳಜಿ ತೋರ್ಸಿದರೂನೂ, ಅದು ಜೈಲ ಅನಸ್ತಿತ್ತು. ಹುಡುಗ್ಯಾರು, ಮನೀಗೆ ಹೋಗಾಕ ಬಾಳ ಚಟಪಡಸ್ತಿದ್ರು, ಕೆಲವು ಹುಡುಗಿಯರ ಘರವಾಲಿಗಳು ಬಂದು, ನಾವ ಅವರ ಅತ್ತಿ, ಚೀಗವ್ವ, ದೊಡ್ಡವ್ವ ಅಂತ ಹೇಳಿ, ತಮ್ಮ ಜೊತಿ ಕರ್ಕೊಂಡ ಹೋಗಾಕ ಪ್ರಯತ್ನ ಮಾಡ್ತಿದ್ರು, ನನ್ನ ಸುದ್ದೀನ ಕೇಳ್ರೀ, ನನ್ನನ್ನ ಕರ್ಕೊಂಡ ಹೋಗಿದ್ದ ಘರವಾಲಿ, ತನ್ನ ಜೋಡಿ ನನ್ನ ಕರ್ಕೊಂಡ ಹೋಗಾಕ ಬಾಳ ಪ್ರಯತ್ನ ಮಾಡಿದ್ಲು. ಆದರ ನಾ ಅದಕ್ಕ ಹೂಂ, ಅನಲಿಲ್ಲ. ಆಮ್ಯಾಕ ನಮ್ಮ ಅಪ್ಪ ಅವ್ವನ ಜೋಡಿನ ಕಳ್ಸಾಕ ವ್ಯವಸ್ಥಾ ಮಾಡಿದ್ರು. ಇಲ್ಲಿ ಬಾಳ ಹುಡುಗಿಯರನ್ನು

ಹಿಡಿದು ತರ್ತಾರ. ಹಂಗ ಬಂದಾಗ, ಹಿಂದೆ ಬಂದ ಹುಡುಗ್ಯಾರಿಗೆ ಇರಾಕ ಜಾಗ ಇರಂಗಿಲ್ಲ. ಹಿಂಗಾಗಿ ಸಂಸ್ಥಾದವರು, ಹುಡುಗ್ಯಾರ ಮತ್ತೊಂದು ಗುಂಪು ಬರೋ ಮೊದ್ಲಿಗೇನ, ಇಗಾಗ್ಲೇ ಇದ್ದವರನ್ನ, ಹೊರಗ ಕಳಿಸೋ ತರಾತುರ್ಯಾಗ ಇರ್ತಾರ. ಆದ್ರಿಂದ ಹೆಚ್ಚಿನ ಹುಡುಗ್ಯಾರಿಗೆ ತರಬೇತಿ ಪೂರ್ತಿ ಮಾಡಾಕನ ಸಾಧ್ಯ ಆಕ್ಕಿದ್ದಿಲ್ಲ. ಹಂಗನ ಇಲ್ಲಿಗೆ ಬರೋ ಬಾಳ ಹುಡುಗೀರು ಸಾಲಿ ಕಲಿತವರು ಇರಂಗಿಲ್ಲ. ಹಂಗಾಗಿ ಅವರು ಕಲಿಸುವ ತರಬೇತಿಗಳು ಬಹಳಷ್ಟು ಹುಡುಗಿಯರಿಗೆ ಅರ್ಥವಾಗುತ್ತಿರಲಿಲ್ಲ" ಎಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ.

ಮುಂಬಯಿಯ ಸರ್ಕಾರೇತರ ಸಂಸ್ಥೆಯ ಸುಪರ್ದಿಗೆ ಕಳಿಸಲ್ಪಟ್ಟಿದ್ದ ಒಬ್ಬಳೇ ತಾಯಿಯ(ಪ್ರಕರಣ ೮ ಮತ್ತು ೯) ಇಬ್ಬರು ಮಕ್ಕಳು ಪುನರ್ವಸತಿಗೆ ಒಳಗಾಗುವ ಸಂದರ್ಭವೇ ಬರಲಿಲ್ಲ. ಅಪ್ರಾಪ್ತರೂ ಮತ್ತು ಅವಿವಾಹಿತರೂ ಆಗಿದ್ದ ಇವರು ಲೈಂಗಿಕ ದಂಧೆಯ ಮನೆಯಲ್ಲಿರುವುದು, ಇವರ ತಾಯಿಗೆ ಗೊತ್ತಿತ್ತು. ಅವರನ್ನು ಬಂಧಿಸಲಾಗಿದೆ ಎಂಬ ಸುದ್ದಿ ಇವರ ತಾಯಿಗೆ ತಲುಪುತ್ತಲೇ, ಮುಂಬಯಿಗೇ ಹೋಗಿ ಮಕ್ಕಳನ್ನು ಸರ್ಕಾರೇತರ ಸಂಸ್ಥೆಯಿಂದ ಬಿಡಿಸಿಕೊಂಡು ಬಂದಿದ್ದರು. ಈ ಎಲ್ಲ ಪ್ರಕರಣಗಳನ್ನು ಅವಲೋಕಿಸಿದಾಗ ಲೈಂಗಿಕ ಜೀತಕ್ಕೆ ತಳ್ಳಲ್ಪಟ್ಟ ಬಾಲೆಯರ ಪುನರ್ವಸತಿಯು ಬರೀ ಬಾಹ್ಯವಾದ ವ್ಯವಸ್ಥೆಗಳನ್ನು ಪೂರೈಸುವುದರ ಮೇಲೆ ಆಧಾರಿತವಾಗಿಲ್ಲ. ಅವರು ಮಾನಸಿಕವಾಗಿ, ದೈಹಿಕವಾಗಿ, ಲೈಂಗಿಕವಾಗಿ ಮತ್ತು ಸಾಮಾಜಿಕವಾಗಿ ದೌರ್ಜನ್ಯಕ್ಕೆ ಒಳಗಾಗಿರುತ್ತಾರೆ. ಯಾವುದೋ ಒಂದು(ಹೆಚ್ಚಿನ ಸಂದರ್ಭಗಳಲ್ಲಿ ಟೇಲರಿಂಗ್) ತರಬೇತಿ ನೀಡಿ ಅವರನ್ನು ಆರ್ಥಿಕವಾಗಿ ಸಮರ್ಥರಾದರು ಎಂದು ಹೇಳಲು ಸಾಧ್ಯವಿಲ್ಲ. ಈಗಾಗಲೇ ಪುನರ್ವಸತಿಗೊಂಡವರಲ್ಲಿ, ಇಬ್ಬರು ಬಾಲೆಯರು(ಗೌರಿ ಮತ್ತು ಸೀತಾ) ಪುನರ್ವಸತಿ ಕೇಂದ್ರಗಳಲ್ಲಿ ಟೇಲರಿಂಗ್ ಕಲಿತುಕೊಂಡಿದ್ದಾರೆ. ಅದನ್ನೇ ತಮ್ಮ ಸಧ್ಯದ ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಆದರೆ ಇದರಿಂದಲೇ ಅವರು ಹೊಟ್ಟೆ ತುಂಬಿಸಿಕೊಳ್ಳುವುದು ಸಾಧ್ಯವಿಲ್ಲ. ಅವರಲ್ಲಿ ಗೌರಿಯದು ಮದುವೆಯಾಗಿದ್ದು, ಅವಳ ಗಂಡನ ಆದಾಯದಿಂದ ಅವಳ ಮನೆ ನಡೆಯುತ್ತದೆ. ಗೌರಿಯು ತಾನು ಮನೆಯಲ್ಲಿ ಕುಳಿತು ಏನು ಮಾಡುವುದು ಎಂದು, ನೆರೆಹೊರೆಯವರ ರವಿಕೆಗಳನ್ನು ಹೊಲಿದು ಕೊಡುತ್ತಾಳೆ. ಅದೂ ಹಳ್ಳಿಗಳಲ್ಲಿ ಬಟ್ಟೆ ಹೊಲಿಸಿಕೊಳ್ಳುವವರು ತುಂಬಾ ಕಡಿಮೆ. ಹಾಗಾಗಿ ಈ ಉದ್ಯೋಗ ಅವಳ ಜೀವನಕ್ಕೆ ಆಧಾರವಾಗಿಲ್ಲ. ಸೀತಾಳ ಮಗ ಗೌಂಡಿಗಳ ಕೈಯಲ್ಲಿ ಕೆಲಸ ಮಾಡುತ್ತಾನೆ. ಅವನ ಆದಾಯದಿಂದ ಸೀತಾಳ ಮನೆ ನಡೆಯುತ್ತದೆ. ಆದರೆ ಅವರು ಪುನರ್ವಸತಿ ಕೇಂದ್ರವಲ್ಲಿ ಪಡೆದುಕೊಂಡ ತರಬೇತಿಗಳಿಂದ ಅಲ್ಲ. ಬಹಳಷ್ಟು ಬಾಲೆಯರಿಗೆ ಆ ತರಬೇತಿಗಳ ನಂತರ ಒಂದು ಟೇಲರಿಂಗ್ ಮಶೀನ್ ಕೊಂಡುಕೊಳ್ಳುವ ಆರ್ಥಿಕ ಶಕ್ತಿಯೂ ಇರುವುದಿಲ್ಲ. ಅಲ್ಲದೇ ಇವರಲ್ಲಿ ಬಹುತೇಕರು ಅನಕ್ಷರಸ್ಥರಾಗಿರುವುದರಿಂದ, ಅಂತಹ ತರಬೇತಿಗಳನ್ನು ವ್ಯವಸ್ಥಿತವಾಗಿ ಕಲಿಯಲೂ ಸಹ ಇವರಿಂದ ಸಾಧ್ಯವಾಗುವುದಿಲ್ಲ. ಇವರಲ್ಲಿ ಏಳು ಬಾಲೆಯರು ಪರಿಶಿಷ್ಟ ಜಾತಿಯ ಮಾದಿಗ, ಹೊಲೆಯ ಸಮುದಾಯಗಳಿಗೂ, ಒಬ್ಬಳು ಪರಿಶಿಷ್ಟ ಪಂಗಡದ ಬೇಡ ಸಮುದಾಯಕ್ಕೂ ಹಾಗೂ ಒಬ್ಬಳು ಮಾತ್ರ ಪ್ರವರ್ಗ-೧ರ ತಳವಾರ ಸಮುದಾಯಕ್ಕೂ ಸೇರಿದವರಾಗಿದ್ದಾರೆ. ಜಾತಿಯ ಕಾರಣಕ್ಕಾಗಿಯೂ ಇವರು ಸಾಮಾಜಿಕವಾಗಿ ಹೊರಗಿಡಲ್ಪಡುತ್ತಾರೆ. ಚೆನ್ನವ್ವ ಹೇಳುವಂತೆ, ಪುನರ್ವಸತಿ ಕೇಂದ್ರವಲ್ಲಿದ್ದ

ಹುಡುಗಿಯರು, "ಅದನ್ನು ಕಲಿತು ಏನು ಮಾಡುವುದು ನಮ್ಮೂರಾಗ ಅವನ್ನೆಲ್ಲ ಯಾರು ತಗೋತಾರ. ನಮ್ಮ ಕಡೀಗೆ ಯಾರ ಅರಿವಿ ಹೊಲಿಸ್ಕೋತಾರ ಅಂತಿದ್ರು, ಅವರು ಅನ್ನೋದು ಖರೇನ ಐತಿ. ನಾವು ಮಾದರ ಜನ ಅದೇವಿ. ನಮ್ಮೂರಾಗ ಯಾರೂ ನಮ್ಮನ್ನ ಮುಟ್ಟಿಸಿಕೊಳಂಗಿಲ್ಲ. ಕೆಲಸ ಮಾಡಬೇಕಂದ್ರ ಅವರ ಹೊಲದಾಗ ಕೂಲಿ ಕೆಲಸಾನ ಮಾಡಬೇಕು. ಅವರು ನಮ್ಮ ಕೈಯಿಂದ ಮುಸುರಿ ಬಾಂಡೆ ಸುದ ತಿಕ್ಕಿಸಿಕೊಳ್ಳೋದಿಲ್ಲ" ಎಂದು ಚಿನ್ನವ್ವ ತನ್ನ ನೋವು ಮತ್ತು ಅನುಭವವನ್ನು ವಿವರಿಸುತ್ತಾಳೆ. ಹೀಗಾಗಿ ಜಾತಿಯ ವಿಕಾರ ರೂಪದ ಆಚರಣೆಯಿಂದಾಗಿಯೂ, ಲೈಂಗಿಕ ಜೀತಕ್ಕೊಳಗಾದ ಬಾಲೆಯರ ಪುನರ್ವಸತಿಯಲ್ಲಿ ಹಲವಾರು ಸವಾಲುಗಳು ಎದುರಾಗುತ್ತಿವೆ.

ಈ ಕುರಿತು ಮುಂಬಯಿಯ, ಗ್ರ್ಯಾಂಟ್ ರೋಡ್‌ನಲ್ಲಿ ಇರುವ ಆಶಾ ದರ್ಪಣ ಸಂಸ್ಥೆಯ ಮಾಜಿ ಅಧ್ಯಕ್ಷರಾಗಿದ್ದ ಕರ್ನಾಟಕದ ವಾಸಂತಿ ಇವರು, "ಸರ್ಕಾರ ನಮಗೆ ದಂಧಾ ಮಾಡಬೇಡಿ ಎಂದು ಇಲ್ಲಿಂದ ಮುಕ್ತಗೊಳಿಸುವ ಹೆಸರಿನಲ್ಲಿ, ಹೊಲಿಗೆ ಕೆಲಸ ಮಾಡ್ರೀ, ಹಪ್ಪಳ, ಸಂಡಿಗೆ, ಉಪ್ಪಿನಕಾಯಿ ಮಾಡ್ರೀ, ಅಂತ ಸಲಹೆ ಕೊಡುತ್ತದೆ. ಆದರೆ ಸೂಳೆಯರು ಮಾಡಿದ ಹಪ್ಪಳ ಸಂಡಿಗೆ ಯಾರು ತಿನ್ನುತ್ತಾರೆ? ಇನ್ನು ಹೊಲಿಗೆ ವಿಷಯಕ್ಕೆ ಬಂದಾಗ, ಸಧ್ಯ ರೆಡಿಮೇಡ್ ಬಟ್ಟೆಯ ಫ್ಯಾಶನ್ ನಡೆದಿದೆ. ಹಳ್ಳಿಯ ಜನರೂ ಸಹ, ಸಿನೇಮಾ ನಟಿಯು ಹಾಕಿದಂತ ಬಟ್ಟೆಯನ್ನೇ ಹಾಕಿಕೊಳ್ಳಬೇಕು ಎಂದು ಆಸೆ ಪಡುತ್ತಾರೆ. ಆ ರೀತಿಯ ಬಟ್ಟೆಗಳನ್ನು ಹೊಲಿದು ಕೊಡಲು ನಮ್ಮಿಂದ ಸಾಧ್ಯವಾ ಹೇಳಿ? ಎಂದು ಪುನರ್ವಸತಿಯ ವ್ಯವಸ್ಥೆಯಲ್ಲಿರುವ ನ್ಯೂನ್ಯತೆಗಳ ಕುರಿತು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇದೇ ವಿಷಯಕ್ಕೆ ಸಂಬಂಧಿಸಿದಂತೆ, ನಾವು(ಮಾರ್ಗದರ್ಶಕರು ಮತ್ತು ಸಂಶೋಧಕರು) ಸಾಂಗಲಿಯ ಸಂಗ್ರಾಮ ಸಂಸ್ಥೆಯ ಫಲಾನುಭವಿ(ಲೈಂಗಿಕ ದಂಧೆಯ ಮಹಿಳೆಯರು) ಮಹಿಳೆಯರೊಂದಿಗೆ ಗುಂಪು ಚರ್ಚೆ ಮಾಡುತ್ತಿದ್ದಾಗ, "ಈ ದಂಧಾಕ್ಕ ನಾವಾಗಿ ನಾವ ಏನ ಬಂದಿಲ್ಲ. ಇವತ್ತ ನಾವು ಇಲ್ಲಿರದು ಸಮಾಜಕ್ಕ ಒಂದು ಕಳಂಕ ಅನ್ನೋ ಸಮಾಜನ, ನಮ್ಮನ್ನ ಇಲ್ಲೀಗೆ ತಳ್ಳೇತಿ. ಈಗ ಬಂದು ನೀವ ಇದನ್ನ ಮಾಡಬ್ಯಾಡ್ರೀ ಅಂದ್ರ, ನಾವ ಹೆಂಗ ಬದುಕ ಮಾಡಬೇಕ. ದಂಧಾ ಬಿಟ್ಟು ಹೊರಗ ಬರ್ರೀ, ಜಂಪರ ಹೊಲೀರಿ ಅಂತಿರಿ. ಜಂಪರ ಹೊಲದ್ರ ಹೊಟ್ಟಿ ತುಂಬತೈತೇನ. ಸಾಧ್ಯನ ಇಲ್ಲ. ಆದ್ರೂ ಸುದ ನೀವ ಹೇಳೂದಕ್ಕ ನಮ್ಮ ಕಬೂಲ ಐತಿ. ಇದನ್ನೆಲ್ಲ ಬಿಟ್ಟ ಹೊರಗ ಬರ್ತೇವಿ. ಆದ್ರ ನೀವು ನಮಗ ದುಡ್ಯಾಕ ಹೊಲ ಕೊಡಬೇಕ. ಇರಾಕ ಮನೀ ಕೊಡಬೇಕ. ನಾವೆಲ್ಲ ಕೂಡಿ ಗುಂಪು ಚಟುವಟಿಕೆ ಮಾಡ್ತೇವಿ. ಪೆಟ್ರೋಲ್ ಬಂಕ್, ಸಕ್ರಿ ಫ್ಯಾಕ್ಟ್ರಿ ಮಾಡಿಕೊಡ್ರೀ. ಅಷ್ಟು ಚುಲೋ ಬದುಕ ಸಿಕ್ರ ನಾವ್ಯಾಕ ಇಲ್ಲಿ ಇರ್ತೇವಿ. ಇದೆಲ್ಲ ಸರ್ಕಾರದಿಂದ ಸಾಧ್ಯ ಇಲ್ಲ. ಸುಮ್ನ ರಕ್ಷಣಾ ಮಾಡ್ತೇವಿ. ರಕ್ಷಣಾ ಮಾಡ್ತೇವಿ ಅಂತ ನಾಟಕಾ ಮಾಡ್ತಾರ. ನಮ್ಮನ್ನ ಇಲ್ಲಿ ಬದುಕಾಗ ನೀವ ಜಿಡವರ್ರೀ, ಊರಾಗ ಬದುಕಾಗ ನಮಗ ಆಗವಲ್ಲದು. ಅದ್ಕ ನಾವು ನಮ್ಮ ಮಕ್ಕಳೀಗಿ ಹೀಂಗ ಮಾಡ್ರೀ ಅಂತ ಹೇಳಂಗಿಲ್ಲ. ಅವರಿಗೆ ಏನು ಚುಲೋ ಅನಸ್ತೈತಿ ಅದನ್ನ ಮಾಡ್ರೀ ಅಂತ ಸ್ವಾತಂತ್ರ್ಯ ಕೊಟ್ಟೇವಿ. ಅವರಿಗೆ ಚುಲೋ ಯಾದು, ಕೆಟ್ಟದ್ದು ಯಾದು ಅಂತ ಅವರ ತುಡುಕೊಂತಾರ" ಅಂತ ಒಕ್ಕೊರಲಿನಿಂದ ಹೇಳುತ್ತಾರೆ.

ಪ್ರಸ್ತುತ ನಡೆದ ಪುನರ್ವಸತಿ ಕಾರ್ಯಕ್ರಮಗಳನ್ನು ನೋಡುತ್ತಿದ್ದರೆ, ಅವರು ಈ ರೀತಿ ಅಭಿಪ್ರಾಯ ಪಡುವುದರಲ್ಲಿ ತಪ್ಪೇನು ಇಲ್ಲ ಅನ್ನಿಸುತ್ತದೆ. ಪ್ರಕರಣ ಸಂಖ್ಯೆ ಆರರ ಬಾಲೆ ಶೋಭಾ ಹೇಳುವಂತೆ, ಮನೀ ಸಮಸ್ಯಾ ಸಲುವಾಗಿ ಕೇರ್‍ಯಾಗಿನ ಹಿರ್‍ಯಾರು ದೇವದಾಸಿ ಮಾಡಿದ್ರು. ಅಕ್ಷರ ಅಂದ್ರ ಏನಂತ ಗೊತ್ತಿಲ್ಲ. ಮೈ ನೆರದ ಕೂಡ್ಲೆ, ಮುಂಬಯಿಗೆ ಕರ್‍ಕೊಂಡು ಹೋಗಿ ದಂಧಾಕ್ಕ ಹಚ್ಚಿದ್ರು. ನಮ್ಮ ಸುತ್ತ ಮುತ್ತ ಅದ ನಡೀತಿತ್ತು. ಹಂಗಾಗಿ ನಮಗ ಅದರಲ್ಲಿ ತಪ್ಪ ಕಾಣಸ್ತಿರಲಿಲ್ಲ. ಎಲ್ಲಾರೂ ಮಾಡೂದ ನಾವೂ ಮಾಡಾಕತ್ತೇವಿ ಅನಸ್ತಿತ್ತು. ತ್ರಾಸ ಆಕ್ಕಿತ್ತು ಖರೆ. ಆದರ ಹೊಂದಿಕೋಬೇಕಿತ್ತು. ಈಗ ಅದ ಬ್ಯಾಡ. ತಪ್ಪು ಅಂತ ತಂದು ಊರಿಗೆ ಬಿಟ್ಟೇರಿ. ನಮಗೇನ ಮಾಡಾಕ ಬರ್‍ತೈತಿ. ಇಷ್ಟ ದಿನ(೬–೭ ವರ್ಷ) ದಂಧಾದ ಮನ್ಯಾಗ ಇದ್ದಾಗ ಸೂರ್‍ಯಾನ ಬಿಸಲ ಹೆಂಗೈತಿ ಅಂತ ನೋಡಿದ್ದಿಲ್ಲ. ದೇಹ ಅದ ವಾತವಾರಣಕ್ಕ ಹೊಂದಿಕೊಂಡೈತಿ. ಈಗ ಇಲ್ಲಿ ಕೂಲಿ ಮಾಡುದ ಬಿಟ್ರ ಬ್ಯಾರೆ ದಾರಿ ಇಲ್ಲ. ಆದ್ರ ಈ ಬಿಸಿಲಾಗ ಜೀವನ ಮಾಡಾಕ ನಮ್ಮಿಂದ ಹೆಂಗ ಸಾಧ್ಯ ಐತಿ. ನಾವು ದಂಧಾ ಮಾಡಿ ಬಂದವ್ರ ಅದೇವಿ ಅಂತ ಹೇಳಿ, ಹೊಲದ ಮಾಲಕ್ರು, ಜೊತಿಗಿದ್ದ ಆಳು, ಊರಾನ ಪುಂಡ್ರು, ಜೀವ ಹಿಂಡತಾರ. ಹೊಟ್ಟೆ ತುಂಬಬೇಕಂದ್ರ ಅಲ್ಲಿ (ರೆಡ್‌ಲೈಟ್ ಏರಿಯಾ) ರೊಕ್ಕಕ್ಕ ಮಾಡಿದ್ದನ್ನ ಇಲ್ಲಿ ಪುಕ್ಸಟ್ಟೆ ಮಾಡಬೇಕು. ಇಲ್ಲಾ ಅಂದ್ರ ಮರು ದಿವ್ಸ ಕೆಲಸ ಸಿಗಂಗಿಲ್ಲ. ಇರಾಕ ಮನೀ ಇಲ್ಲ. ದುಡುದು ಹಾಕೋರಿಲ್ಲ. ನನ್ನ ಮ್ಯಾಲ ಮೂರ ಮಂದಿ ಬದುಕಬೇಕು. ಹೆಂಗ ಮಾಡುದು" ಎಂದು ಕೇಳುವ ಪ್ರಶ್ನೆಯಲ್ಲಿ ಸತ್ಯತೆ ಅಡಗಿದೆ.

ಸರ್ಕಾರವು, ಮಕ್ಕಳನ್ನು ರಕ್ಷಣೆ ಮಾಡಬೇಕು, ಎಂದು ಕಾನೂನು ಬರೆದುಕೊಂಡು, ಎಳೆದು ತಂದು ಬಿಟ್ಟು ಹೋದರೆ ಹೇಗೆ ಸಾಧ್ಯವಾದೀತು. ಹಿಂದೆ ನೋಡಿಕೊಳ್ಳಲು ಅಪ್ಪ, ಅಣ್ಣ, ಅವ್ವ ಇದ್ದವರಿದ್ದರೆ, ನೋಡಿಕೊಂಡಾರು. ಯಾರೂ ಇರದಿದ್ದರೆ ಅಥವಾ ಹಾಗೆ ಇದ್ದವರು ಇವರ ಮೇಲೆಯೇ ಅವಲಂಬಿತ ಆಗಿದ್ದರೆ, ಅವರ ಪರಿಸ್ಥಿತಿ ಊಹಿಸಲೂ ಸಾಧ್ಯವಿಲ್ಲ. ಆದ್ದರಿಂದ ದೌರ್ಜನ್ಯಕ್ಕೆ ಒಳಗಾದವರ ಪುನರ್ವಸತಿ ಅನ್ನುವ ವಿಚಾರವು ಬರೀ ಅವರ ಪುನರ್ವಸತಿಯ ಮೇಲೆ ಅವಲಂಬಿಸಿರದೇ, ಅದು ಇವರನ್ನೇ ಅವಲಂಬಿಸಿರುವ ಅವರ ಕುಟುಂಬದ ಸದಸ್ಯರ ಪುನರ್ವಸತಿಯನ್ನು ಅವಲಂಬಿಸಿದೆ.

ಆರ್ಥಿಕ ಪುನರ್ವಸತಿ ಈ ರೀತಿಯಾಗಿದ್ದರೆ, ಇನ್ನು ಅವರು ಮಾನಸಿಕವಾಗಿ ಮನೆಯ ಜನರೊಂದಿಗೆ, ಸಂಬಂಧಿಕರೊಂದಿಗೆ, ನೆರೆಹೊರೆಯವರೊಂದಿಗೆ ಹೊಂದಿಕೊಳ್ಳುವಾಗ ತುಂಬಾ ಹೋರಾಟ ನಡೆಸ ಬೇಕಾಗುತ್ತದೆ. ಬಹುತೇಕ ಪ್ರಕರಣಗಳಲ್ಲಿ ಇವರು ಮರಳಿ ಮನೆಗೆ ಬಂದಿರುವುದು. ಅವಳ ಮನೆಯ ಯಾವೊಬ್ಬ ಸದಸ್ಯರಿಗೂ (ತಾಯಿಯನ್ನು ಮೊದಲ್ಗೊಂಡು) ಸಂತೋಷ ತಂದಿರುವುದಿಲ್ಲ. ಯಾಕೆಂದರೆ ಅವರು ಊರಿಗೆ ಮರಳಿ ಬಂದರೆ, ಮನೆಯಲ್ಲಿದ್ದವರಿಗೆ ಗಳಿಸಿ ಹಣ ಕಳಿಸುವವರ್‍ಯಾರು? ಅಲ್ಲದೇ ಗಳಿಸಿ ಹಣ ಕಳಿಸುತ್ತಿದ್ದ ಅವಳಿಗೂ ಇವರೇ ಊಟ ಹಾಕಬೇಕಾಗಿ ಬರುವುದರಿಂದ ಅವರನ್ನು ತಿರಸ್ಕಾರದಿಂದಲೇ ನೋಡುತ್ತಿರುತ್ತಾರೆ. ಪ್ರಕರಣ ಸಂಖ್ಯೆ ಎರಡರ ಬಾಲೆ ಚಿನ್ನವ್ವಳ ವಿಷಯದಲ್ಲಿ, ಸಂಸ್ಥೆಯವರು ಅವಳನ್ನು ಅವಳ ತಾಯಿಗೆ ಒಪ್ಪಿಸುವಾಗ, ಅವಳ ತಾಯಿ, "ಇಕಿ ಅಲ್ಲಿ ಮುಂಬಯಿದಾಗ

ಇದ್ದಿದ್ದರ ನಮಗ ತಿಂಗಳಾ ೮೦೦ ರೂಪಾಯಿ ಕಳಸ್ತಿದ್ಲು. ಈಗ ಆ ರೊಕ್ಕಾ ನಮಗ್ಯಾರ ಕಳಸಬೇಕು. ಅಕಿನ್ನ ತುಗೊಂಡ ನಾವೇನ ಮಾಡೂನು. ಅಲ್ಲೇ ನಿಮ್ಮ ಆಫೀಸದಾಗ ಇಟ್ಕೊ ಹೋಗ್ರಿ. ನಮಗ ತಿಂಗಳಿಗೆ ೮೦೦ ರೂಪಾಯಿ ಕಳಿಸ್ರೀ". ಎಂದು ಸಮಾಲೋಚಕರಿಗೆ ಅಂದಿದ್ದ ಮಾತನ್ನು ಅವರ ವರದಿಯಲ್ಲಿ ಗಮನಿಸಿದರೆ, ಅವಳ ತಾಯಿ ಇವಳನ್ನು ಮನೆಯಲ್ಲಿ ಇಟ್ಟುಕೊಳ್ಳುವ ಭರವಸೆಯೇ ಇರುವುದಿಲ್ಲ. ಎಷ್ಟೊ ಜನ ಹುಡುಗಿಯರು, ತಮ್ಮಿಂದಾಗಿ ಮನೆಯಲ್ಲಿ, ತನ್ನ ತಂಗಿ, ತಮ್ಮಂದಿರ ಮದುವೆಗೆ ಜೀವನಕ್ಕೆ ತೊಂದರೆ ಎಂದು ಭಾವಿಸಿ ಲೈಂಗಿಕ ದಂಧೆಯ ಮನೆಯನ್ನು ಬಿಟ್ಟು ಬರುವುದೇ ಇಲ್ಲ. ಬಂದರೂ ಸಹ ಬಹಳ ದಿನ ಮನೆಯಲ್ಲಿ ಉಳಿಯುವುದಿಲ್ಲ ಎಂದು ಅಂತಹ ಸಂದರ್ಭಗಳನ್ನು ಎದುರಿಸಿದ ಮಹಿಳೆಯರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಇಷ್ಟೆಲ್ಲ ಕಷ್ಟಗಳನ್ನು ಎದುರಿಸಿ ನಿಂತರೂ, ಲೈಂಗಿಕ ಜೀತಕ್ಕೊಳಗಾದ ಬಾಲೆಯರ ಪುನರ್ವಸತಿಯಲ್ಲಿ ಅವರನ್ನು ಕಾಡುವ ಅವರ ಲೈಂಗಿಕ ಭಾವಗಳು, ದೇಹದ ಚಡಪಡಿಕೆಗಳು ಬಹುತೇಕರನ್ನು ಸಾಮಾನ್ಯ ಜೀವನಕ್ಕೆ ಹೊಂದಿಕೊಳ್ಳದ ಹಾಗೆ ಅಡ್ಡಿ ಪಡಿಸುತ್ತವೆ. ಲೈಂಗಿಕ ದಂಧೆ ಬೇಡವಾಗಿ ಉತ್ತರ ಪ್ರದೇಶದ ರೆಡ್‌ಲೈಟ್ ಏರಿಯಾದಿಂದ ತನ್ನ ಮನೆಗೆ ಮರಳಿದ ಅಥಣಿಯ ೨೬ ವರ್ಷದ ಮಹಿಳೆಯೊಬ್ಬಳು, " ಈ ದೇಹದ ಆಸಿಗೇನ, ಎಷ್ಟೋ ಹುಡಗೀರು ಹೊಳ್ಳಿ ದಂಧಾದ ಮನೀಗಿ ಹೊಕ್ಕಾರ. ಅದು ಅವರಿಗೆ ಸುಖಾ ನೀಡ್ತೈತಿ ಅಂತ ಅಲ್ಲ. ಅದು ಅವರಿಗೆ ಚಟಾ ಆಗಿ ಬಿಟ್ಟಿರ್ತೈತಿ. ಅದನ್ನು ಎದುರಿಸಿ ನಿಲ್ಲಾಕ ಬಾಳ ಘಟ್ಟಿ ಎದಿ ಬೇಕ" ಅಂತ ಹೇಳುತ್ತಾಳೆ. ಪುನರ್ನೆಲೆಗೊಂಡು ಊರಲ್ಲಿಯೇ ಉಳಿದಿರುವ ಹುಡುಗಿಯರಲ್ಲಿ, ಮೂವರಿಗೆ ಮದುವೆಯಾಗಿದೆ. ಗಂಡನ ಮನೆಯಲ್ಲಿ ಇದ್ದಾರೆ. ಮೂವರು ದೇವದಾಸಿಯರಾಗಿದ್ದು, ಅದರಲ್ಲಿ ಇಬ್ಬರು, ತಮ್ಮನ್ನು ನೋಡಿಕೊಳ್ಳಬಲ್ಲ ಒಬ್ಬ ಪಾರ್ಟನರ್‌ಗಳನ್ನು ಹುಡುಕಿಕೊಂಡಿದ್ದಾರೆ. ಅವಿಭಕ್ತ ಕುಟುಂಬಗಳಾಗಿದ್ದಲ್ಲಿ, ಮನೆ ಚಿಕ್ಕದಾಗಿದ್ದ ಸಂದರ್ಭಗಳಲ್ಲಿ, ಹೆಣ್ಣುಮಕ್ಕಳಿಗೆ ಪಾರ್ಟನರ್‌ಗಳನ್ನು ಇಟ್ಟುಕೊಳ್ಳುವುದು ಸಹಿತ ಸಾಧ್ಯವಾಗುವುದಿಲ್ಲ. ಇಂತದೇ ಪರಿಸ್ಥಿತಿಯನ್ನು ಎದುರಿಸುತ್ತಿರುವ ಯುವತಿಯೊಬ್ಬಳು, "ನನಗೇ ಒಂದು ಸಪರೇಟ್ ಮನಿ ಇದ್ದಿದ್ದರ, ನನ್ನ ಭಾವನಾಕ್ಕ ಒಪ್ಪೋ ಸ್ನೇಹಿತನನ್ನು ಹುಡುಕಿಕೊಳ್ಳಬಹುದು" ಎಂದು ಹೇಳುತ್ತಾಳೆ.

ಸಂಗ್ರಾಮ ಸಂಸ್ಥೆಯ ಫಲಾನುಭವಿ(ಲೈಂಗಿಕ ದಂಧೆಯ ಮಹಿಳೆ) ಕರ್ನಾಟಕದ ತಂಗೆವ್ವ ಎಂಬ ಮಹಿಳೆ, "ದಂಧಾ ಮಾಡದೂ ನಮ್ಮ ಜೀವಕ್ಕ ಕುತ್ತ ಆದ್ರೂನೂ ಅದರಿಂದ ನಮ್ಮ ಮನಿ ಸಮಸ್ಯಾ ಬಗಿ ಹರದಾವು. ಹಾಂ! ಇವತ್ತ ಸಮಾಜ ಸರ್ಕಾರ ನಮಗ ಇದನ್ನ ಮಾಡೂದ ಬ್ಯಾಡ. ನೀವು ಇದ್ದಷ್ಟರಾಗ ಬದುಕ ಮಾಡ್ರೀ ಅಂದರ ಅದಕ್ಕೂ ನಾವು ರೆಡೀ ಅದೇವಿ. ಆದ್ರ ನಾನೂ ಮನಷ್ಯಾಳದೇನಿ. ನನಗೂ ಎಲ್ಲಾನೂ ಬೇಕ ಅನಿಸ್ತೈತಿ. ನನ್ನ ದೇಹದ ಆಸೀ ತೀರಸಾಕ ಒಬ್ಬ ಮನಷ್ಯಾ ಬೇಕು ಅಂತಂದ್ರ, ನಿಮ್ಮ ಸರ್ಕಾರ ನಮಗೇನರ ಅದರ ವ್ಯವಸ್ಥಾ ಮಾಡತೈತೇನ. ಆಗ ನಾವು ಹೆಂಗಿರೋದು?" ಎಂದು ಪ್ರಶ್ನೆ ಮಾಡುತ್ತಾಳೆ. ಅವಳದು ಸಂಪೂರ್ಣವಾದ ಜೈವಿಕ ಬಯಕೆಯ ಪ್ರಶ್ನೆ. ಲೈಂಗಿಕತೆಯ ಪ್ರಶ್ನೆ. ಒಮ್ಮೆ ಲೈಂಗಿಕ ಜೀತಕ್ಕೆ, ದೌರ್ಜನ್ಯಕ್ಕೆ ಒಳಗಾಗಿ ಬಂದ ಹೆಣ್ಣುಮಕ್ಕಳನ್ನು ಸಮಾಜದ

ಯಾವೊಬ್ಬ ಗಂಡಸೂ ಮದುವೆಯಾಗಿ ಸಾಮಾನ್ಯ ಜೀವನ ಕಲ್ಪಿಸುವ ದೊಡ್ಡ ಮನಸ್ಸು ಮಾಡುವುದಿಲ್ಲ. ಬದಲಿಗೆ ಸಮಾಜ ಅವಳನ್ನು ಸೂಳೆಯಾಗಿ ಬದುಕುವಂತೆ ಒತ್ತಡ ನಿರ್ಮಿಸುತ್ತದೆ. ಪುನರ್ವಸತಿಗೊಂಡು ಬಂದ ಬಾಲೆಯರಲ್ಲಿ ಗೌರಿಯದು ಮದುವೆಯಾಗಿದೆ. ಅವಳು ರೆಡ್‌ಲೈಟ್ ಏರಿಯಾಗೆ ಸಾಗಿಸಲ್ಪಟ್ಟಿದ್ದರೂ, ಅವಳನ್ನು ಅಲ್ಲಿಯ ವ್ಯವಸ್ಥೆ ಲೈಂಗಿಕವಾಗಿ ಬಳಸಿಕೊಳ್ಳುವ ಮೊದಲೇ ಗೌರಿ ರಕ್ಷಿಸಲ್ಪಟ್ಟಿದ್ದಳು. ಅದಕ್ಕೆ ವೈದ್ಯಕೀಯ ಪರೀಕ್ಷೆಯ ದಾಖಲೆಯನ್ನೂ ಮಾಡಿಸಲಾಗಿತ್ತು. ಆದ್ದರಿಂದ ಆವಳ ಸೋದರ ಮಾವನೇ ಆಕೆಯನ್ನು ಮದುವೆಯಾಗಿದ್ದಾನೆ. ಆದರೆ ಗೌರಿ ಹೇಳುವ ಹಾಗೆ, "ಮದುವೆಯಾದ ಎರಡ್ಮೂರು ವರ್ಷ ನನ್ನ ಗಂಡ ಬಹಳ ಕಾಡಿಸುತ್ತಿದ್ದ. ಮುಂಬಯಿಗೆ ಹೋಗಿ ನೀನು ಏನೂ ಮಾಡದ ಬಂದಿ ಅಂದ್ರ, ಅದು ಸುಳ್ಳು ಇದೆ ಎಂದು ಸಂಶಯದಿಂದ ವರ್ತಿಸುತ್ತಿದ್ದ" ಎಂದು ಗೌರಿ ಹೇಳುತ್ತಾಳೆ. ಅವಿವಾಹಿತಳಾಗಿದ್ದ ರಂಜನಾ(ಪ್ರಕರಣ ಸಂಖ್ಯೆ ೧)ಳನ್ನು ಯಾರೂ ಮದುವೆಯಾಗಲು ಮುಂದೆ ಬರುವುದಿಲ್ಲ. ಮೊದಲೇ ಇವಳ ಜೊತೆ ಮದುವೆ ಮಾತುಕತೆಯಾಗಿದ್ದ ಅವಳ ಮಾವನೂ ಇವಳನ್ನು ಮದುವೆಯಾಗುವುದಿಲ್ಲ. ಆದರೆ ಈಗ ಅವನ ಜೊತೆಯೇ ಲೈಂಗಿಕ ಸಂಬಂಧವನ್ನಿಟ್ಟುಕೊಂಡು ಇಬ್ಬರು ಹೆಣ್ಣುಮಕ್ಕಳನ್ನು ಹೆತ್ತಿದ್ದಾಳೆ. ಮದುವೆಯಾಗದೇ ಇಲ್ಲವೇ ದೇವದಾಸಿಯಾಗದೆ ಒಬ್ಬನೊಡನೆ ಲೈಂಗಿಕ ಸಂಬಂಧವಿರಿಸಿಕೊಳ್ಳುವುದನ್ನು ಸಮಾಜ ಇಂದಿಗೂ ಒಪ್ಪುವುದಿಲ್ಲ. ಆ ಸಂಬಂಧವನ್ನು ಹಾದರ ಸಂಬಂಧವೆಂದು ಗುರುತಿಸುತ್ತಾರೆ. ಹಾಗಾಗಿ ರಂಜನಾ, "ನನ್ನ ಮದುವೆಯಾಗುವುದಂತೂ ಸಾಧ್ಯವಿಲ್ಲ. ದೇವದಾಸಿಯಾಗುವುದು ನನಗೆ ಇಷ್ಟವಿಲ್ಲ. ಆದ್ದರಿಂದ ಗರತಿ ಮುತ್ತು ಕಟ್ಟಿಕೊಂಡು ಬದುಕು ನಡೆಸಬೇಕೆಂದು ಕೊಳ್ಳುತ್ತಿದ್ದೇನೆ". ಎಂದು ಹೇಳುತ್ತಾಳೆ. ಪುನರ್ವಸತಿಯು ಯಶಸ್ಸುಗೊಳ್ಳಬೇಕಾದ ಸಂದರ್ಭಗಳಲ್ಲಿ ಹೀಗೆ ಲೈಂಗಿಕ ವಿಷಯವೂ ಸಹ ಒಂದು ಪ್ರಮುಖ ಸವಾಲಾಗಿದೆ.

### ೮.೩. ಪುನರ್‍ನೆಲೆಯ ಸವಾಲುಗಳು

ಪುರ್ವಸತಿಗೊಳಗಾದ ಸಂತ್ರಸ್ಥರು, ತನ್ನ ಕುಟುಂಬ, ಸಮುದಾಯ ಮತ್ತು ಸಮಾಜದಿಂದ ಹೊರಗಿಡಲ್ಪಡದೇ, ಅವರೊಳಗೆ ಒಂದಾಗಿ ಇರಬೇಕೆಂಬುದು ಪುನರ್‍ನೆಲೆಯ ಅರ್ಥವಾಗಿದೆ. ಲೈಂಗಿಕ ಜೀತಕ್ಕೆ ಒಳಗಾದವರ ಪುನರ್‍ನೆಲೆ ಎಂಬುದು ಇಂದಿನ ಕಾನೂನಾತ್ಮಕ ಪರಿಕಲ್ಪನೆಯಾಗಿದೆ. ೨೦೦೦ದ ಇಸ್ವಿಯಲ್ಲಿ ಜಾರಿಗೊಂಡ ಬಾಲನ್ಯಾಯ ಕಾಯಿದೆ(ಮಕ್ಕಳ ಪಾಲನೆ ಮತ್ತು ರಕ್ಷಣೆ)ಯಲ್ಲಿ ಪುನರ್‍ನೆಲೆಯ ಕುರಿತಾಗಿ ಮಾತನಾಡಲಾಗಿದೆ. ಸಂತ್ರಸ್ಥರನ್ನು ಪುನರ್ವಸತಿಗೊಳಿಸುವುದಷ್ಟೆ ಅಲ್ಲ, ಅವರು ತಮ್ಮ ಕುಟುಂಬ ಹಾಗೂ ಸಮಾಜದ ಜೊತೆಗೆ ಒಂದಾಗಿ ಸೌಹಾರ್ದದಿಂದ ಬದುಕುವಂತೆ ಮಾಡಬೇಕು ಎಂದು ನಿರ್ದೇಶಿಸಲಾಗಿದೆ. ಈ ಉದ್ದೇಶದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಟ್ಟ ೯ ಪ್ರಕರಣಗಳನ್ನೂ ಅವಲೋಕಿಸಿದಾಗ, ೫ ಪ್ರಕರಣಗಳು ಯಶಸ್ವಿಯಾಗಿ ಪುನರ್‍ನೆಲೆಗೊಂಡಿವೆ. ಎರಡು ಪ್ರಕರಣಗಳಲ್ಲಿ ಸ್ಪಷ್ಟತೆ ಇಲ್ಲ. ಒಂದು ಪ್ರಕರಣ ಸಾವನ್ನಪ್ಪಿದೆ. ಒಂದು ಪ್ರಕರಣ ಮಾತ್ರ ಮರು ಸಾಗಾಣಿಕೆಯಾಗಿರುವುದು ಕಂಡುಬರುತ್ತದೆ.

ಯಶಸ್ವಿಯಾಗಿ ಪುನರ್‍ನೆಲೆಗೊಂಡ ಪ್ರಕರಣಗಳಲ್ಲಿ ರಂಜನಾ ಮತ್ತು ಸೀತಾ ಇವರು ತಮ್ಮ ಕುಟುಂಬದೊಂದಿಗೆ ಸಮುದಾಯದೊಂದಿಗೆ ಸಾಮರಸ್ಯದಿಂದ ಇದ್ದಾರೆಂಬುದು. ಅವರನ್ನು ಭೇಟಿಯಾದಾಗ

ಅರ್ಥವಾಗುತ್ತಿತ್ತು. ಆದರೆ ಒಂದು ವಿಚಾರ ಇವರಿಬ್ಬರ ವಿಷಯದಲ್ಲಿ ಕಂಡುಬರುತ್ತಿರುವುದೆಂದರೆ, ರಂಜನಾ ಪುನರ್ನೆಲೆಗೊಂಡು ಮನೆಗೆ ಬಂದಾಗ ೧೭ ವಯಸ್ಸಿನ ಬಾಲೆ. ಅವಳಿಗೆ ಶಿಕ್ಷಣ ಪಡೆಯಲು ಸಾಧ್ಯವಾಗದ ವಯಸ್ಸು, ಬದುಕಿಗೆ ಕೂಲಿಯನ್ನೇ ಮಾಡಬೇಕು. ಆದರೆ ಅವಳ ಲೈಂಗಿಕ ಬದುಕಿಗೆ, ಅವಳು ಲೈಂಗಿಕ ದಂಧೆ ಮಾಡಿ ಬಂದವಳೆಂಬ ಕಾರಣಕ್ಕೆ ಅವಳನ್ನು ಯಾರೂ ಮದುವೆಯಾಗಿಲ್ಲ. ಅವಳು ತನ್ನ ಈ ಚಿಕ್ಕ ವಯಸ್ಸಿಗೆ ತನ್ನ ಲೈಂಗಿಕ ಸಹಜ ಬಯಕೆಗಳನ್ನು ಈಡೇರಿಸಿಕೊಳ್ಳಲು ಮತ್ತು ಸಮಾಜವನ್ನು ಎದುರಿಸಲು, ಒಂದು, ದೇವದಾಸಿಯಾಗಬೇಕು ಅಥವಾ ಯಾರೋ ಇವಳನ್ನು ಇಷ್ಟ ಪಟ್ಟವನಿಗೆ ಸೂಳೆಯಾಗಬೇಕು. ಇವೆರಡೂ ಅಸಾಧ್ಯ ಎಂದಾದರೆ ಮತ್ತೆ ಮರಳಿ ಲೈಂಗಿಕ ದಂಧೆಯ ಮನೆಗೇ ಹೋಗಬೇಕು. ಈ ಸಂದರ್ಭದಲ್ಲಿ ಅವಳಿಗೆ ಹುಟ್ಟುವ ಮಕ್ಕಳಿಗೆ ಯಾರು ಜವಾಬ್ದಾರಿ? ಅವು ತಮ್ಮ ಬದುಕಿನುದ್ದಕ್ಕೂ ತಂದೆ ಇಲ್ಲದ ಮಕ್ಕಳೆಂದೇ ಬದುಕು ನಡೆಸಬೇಕೆ? ಯಾವ ಗಂಡಸು ತಾನು ಲೈಂಗಿಕವಾಗಿ ಇಟ್ಟುಕೊಂಡವಳಲ್ಲಿ, ತನ್ನಿಂದ ಹುಟ್ಟುವ ಮಕ್ಕಳಿಗೆ, ತನ್ನ ಹೆಸರನ್ನು ಕೊಡಲು ಮುಂದೆ ಬರುತ್ತಾನೆ? ಒಂದು ವೇಳೆ ಅವಳೇ ಗಟ್ಟಿ ಮನಸ್ಸು ಮಾಡಿ ಲೈಂಗಿಕ ಬಯಕೆಗಳನ್ನು ಮೀರಿ ನಾನು ಚೆನ್ನಾಗಿ ಇರಬಲ್ಲೆ, ಎಂದು ಬದುಕುವ ಬಡವರ ಮನೆಯ, ಹರೆಯದ ಹೆಣ್ಣು ಮಗಳನ್ನು, ಈ ಸಮಾಜ ಎಷ್ಟು ದಿನ ಸುಮ್ಮನೆ ಬಿಟ್ಟೀತು? ಸಾಮಾಜಿಕವಾಗಿ ರಕ್ಷಣೆ ಇರದ, ಆರ್ಥಿಕವಾಗಿ ಭದ್ರತೆ ಇರದ ಹೆಣ್ಣುಮಕ್ಕಳು, ತಮ್ಮ ಹೊಟ್ಟೆ ಪಾಡಿಗಾಗಿ ದುಡಿಯಲು ಬೀದಿಗೆ ಬರಲೇಬೇಕು. ಅಂತ ಮಕ್ಕಳು ಇಂದು ನಮ್ಮ ನಡುವೆ ಎಳ್ಳಷ್ಟೂ ಸುರಕ್ಷಿತವಾಗಿಲ್ಲ. ರಂಜನಾ ತನ್ನ ಮದುವೆಯಾಗಬೇಕಾಗಿದ್ದವನ ಜೊತೆಯೇ ಲೈಂಗಿಕ ಸಂಬಂಧ ಇಟ್ಟುಕೊಂಡು ಎರಡು ಹೆಣ್ಣುಮಕ್ಕಳನ್ನು ಹೆತ್ತಿದ್ದಾಳೆ. ಆ ಮಕ್ಕಳ ಭವಿಷ್ಯ ಹೇಗೋ ಯಾರಿಗೂ ಗೊತ್ತಿಲ್ಲ. ಸೀತಾ ದೇವದಾಸಿಯಾಗಿದ್ದು, ಅವಳು ಲೈಂಗಿಕವಾಗಿ ಯಾರೊಟ್ಟಿಗಾದರೂ ಬದುಕಬಹುದೆಂದು ಸಮಾಜ ಒಪ್ಪಿಕೊಂಡಿದೆ. ಆದರೆ ಅಂಗೈಗಲ ಇರುವ ಮನೆಯಲ್ಲಿ, ಎದೆಯೆತ್ತರಕೆ ಬೆಳೆದ ಮಗನಿರುವಾಗ, ಹೇಗೆ ತಾನೆ ಅವಳಿಗೆ ಇದೆಲ್ಲ ಸಾಧ್ಯವಾದೀತು? ಲೈಂಗಿಕ ಜೀತಕ್ಕೊಳಗಾಗಿ ಬಂದ ಒಬ್ಬಳು ಬಾಲೆ ಆರ್ಥಿಕವಾಗಿ ಯಶಸ್ವಿಯಾಗಿ ಪುನರ್ವಸತಿಗೊಂಡರೂ ಸಹ ಪುನರ್ನೆಲೆಯ ಸಂದರ್ಭದಲ್ಲಿ ಎದುರಿಸುವ ಬಹು ಸೂಕ್ಷ್ಮ ಸವಾಲು ಇದು. ಗೌರಿಯ(ಪ್ರಕರಣ ೫) ವಿಷಯದಲ್ಲಿ ಆಕೆಯ ಗಂಡ ಮೊದಮೊದಲು ತುಂಬಾ ಅನುಮಾನದಿಂದ ವರ್ತಿಸುತ್ತಿದ್ದ. ಈಗ ಸ್ವಲ್ಪ ಚೆನ್ನಾಗಿ ವರ್ತಿಸುತ್ತಾನೆ ಎಂದು ಗೌರಿ ಹೇಳುತ್ತಾಳೆ.

ಚೆನ್ನವ್ವ (ಪ್ರಕರಣ ೨) ಕೂಲಿ ಕೆಲಸಕ್ಕೆ ಹೋಗಿ, ಬಿಸಿಲಿನಲ್ಲಿ ಅದನ್ನು ಮಾಡಲು ಸಾಧ್ಯವಾಗದೇ, ಸಿಬಿಓ ಒಂದರಲ್ಲಿ ಪೀಯರ್ ವರ್ಕರ್ ಆಗಿ ಕೆಲಸ ನಿರ್ವಹಿಸುತ್ತಾಳೆ. ಅಲ್ಲಿ ದೊರೆತ ಹಣದಿಂದ ಟೇಲರಿಂಗ್ ಕಲಿತು ಈಗ ಗಾರ್ಮೆಂಟ್ ಕೆಲಸಕ್ಕೆ ಹೋಗುತ್ತಿದ್ದಾಳೆ. ಜೊತೆಗೆ ಇವಳ ಮಗನೂ ಕೆಲಸ ಮಾಡುತ್ತಿರುವುದರಿಂದ ನೆಮ್ಮದಿಯ ಜೀವನ ನಡೆಸುತ್ತಿದ್ದಾಳೆ. ಮನೆಯಲ್ಲಿ ತನ್ನ ತಾಯಿ, ತಂಗಿ ಮತ್ತು ಅವಳ ಮಕ್ಕಳೊಂದಿಗೆ ಬದುಕುತ್ತಿದ್ದಾಳೆ. ಚೆನ್ನವ್ವಳನ್ನು ಭೇಟಿಯಾಗಲು ನಾವು ಅವಳಿರುವ ಅಂಗಡಿಗೆ ಹೋಗುತ್ತಿರುವಾಗ, ದಾರಿಯಲ್ಲಿ ಚೆನ್ನವ್ವಳ ತಾಯಿ "ಆಕೀ ವಿಷಯ ಹೀಂಗ ಅಂತ ಗಾರ್ಮೆಂಟ್ ಅಂಗಡ್ಯಾನವರಿಗೆ ಯಾರಿಗೂ ಗೊತ್ತಿಲ್ರೀ. ಗೊತ್ತಾದ್ರ ಆಕೀಗಿ ಅವಮಾನ ಆಗ್ತೈತಿ. ಅದ್ಕ ಆ ವಿಷಯ

ಅಲ್ಲಿದ್ದವ್ರಿಗೆ ಗೊತ್ತಾಗದಂಗ ಅಕಿನ್ನ ಹೊರಗ ಕರದು ಮಾತಾಡತ್ರೀ. ಅಂಗಡಿ ಮಾಲಕಗ ಈ ವಿಷಯ ಗೊತ್ತಾದ್ರ ಅಕೀನ್ನ ಕೆಲಸದಿಂದನೂ ತೆಗೀಬಹುದು" ಅಂತ ಹೇಳಿದಳು. ಚಿನ್ನವ್ವ ಮನೆಯವರನ್ನು ತನ್ನನ್ನು ಮೀರಿ ಬದುಕು ಕಟ್ಟಿಕೊಂಡಿದ್ದಾಳೆ. ಆದರೆ ಅವಳು ತಾನು ಹೀಗೆ ಎಂದು ಗೊತ್ತಾದರೆ, ಸಮಾಜ ನನ್ನನ್ನು ಹೊರತಳ್ಳಬಹುದೆಂಬ ಆತಂಕ ಅವಳಲ್ಲೂ ಮತ್ತು ಅವಳ ತಾಯಿಯಲ್ಲೂ ಮಡುಗಟ್ಟಿದೆ.

ಸುನಂದಾಳ (ಪ್ರಕರಣ–೭) ವಿಷಯದಲ್ಲಿ ಅವಳು ಎಚ್.ಐ.ವಿ ಸೋಂಕಿನಿಂದ ಬಳಲುತ್ತಿದ್ದಾಳೆ. ಸಮುದಾಯದ ಜನರೊಂದಿಗೆ ಯಾವ ಕಾರಣಕ್ಕೂ ಬೆರೆಯುವುದಿಲ್ಲ. ತಾಯಿ ಮತ್ತು ತಮ್ಮಂದಿರು ದುಡಿಯುತ್ತಾರೆ. ಅದೇ ಆದಾಯದಲ್ಲಿ ಇವಳ ಜೀವನವೂ ನಡೆಯುತ್ತದೆ. ಜೊತೆಗೆ ತಾಯಿಯ ತವರು ಮನೆಯ ಸಂಬಂಧಿಕರ ಹತ್ತಿರ ಚೌಡಿಕೆ ನುಡಿಸುವುದನ್ನು ಕಲಿತುಕೊಂಡಿದ್ದಾಳೆ. ಅವರ ಜೊತೆಗೆ ಚೌಡಿಕೆ ನುಡಿಸುವ ಕಾರ್ಯಕ್ರಮಕ್ಕೆ ಹೋಗುತ್ತಾಳೆ. ಇವಳನ್ನು ಭೇಟಿಯಾಗಲು ಮನೆಗೆ ಹೋದಾಗ, ಫೋಟೋ ತೆಗೆದುಕೊಳ್ಳಲು ಮನೆಯಿಂದ ಹೊರಗೆ ಕರೆದರೆ, ಸುನಂದಾ ಹೊರಗೆ ಬರಲು ಹಿಂಜರಿದಳು. ಹಾಗೆಯೇ ಎಚ್.ಐ.ವಿ ಸೋಂಕಿಗೆ ಸಂಬಂಧಿಸಿದ ಮಾತ್ರೆಗಳು ಮುಗಿದು ಹೋಗಿ ಬಹಳ ದಿನಗಳಾದರೂ, ಅವುಗಳನ್ನು ಮತ್ತೆ ತಂದು ಸೇವಿಸಿರುವುದಿಲ್ಲ. ಇದನ್ನೆಲ್ಲ ಗಮನಿಸಿದರೆ, ಇವಳ ರೋಗದಿಂದಾಗಿ ಸಮುದಾಯದಿಂದ ಇವಳ ಕುರಿತು ಅಸಡ್ಡೆ ಇರುವುದು ಅರ್ಥವಾಗುತ್ತದೆ.

ಲತಾ (ಪ್ರಕರಣ–೩) ತಳವಾರ ಸಮುದಾಯಕ್ಕೆ ಸೇರಿದ ವಿವಾಹಿತ ಹೆಣ್ಣು ಮಗಳು. ಲತಾ ಗಂಡನ ಮನೆಗೆ ಹೋದವಳು, ಕಾಣೆಯಾದಾಗ ಅವಳು ಸತ್ತು ಹೋಗಿರಬಹುದೆಂದು ಮನೆಯವರಾದಿಯಾಗಿ ಎಲ್ಲರೂ ಭಾವಿಸಿದ್ದರು. ಆದರೆ ಅವಳು ಈ ರೀತಿ ವಾಪಸು ಮನೆಗೆ ಬಂದಾಗ, ಎಲ್ಲರಿಗೂ ಅಚ್ಚರಿ ಅನ್ನಿಸಿತ್ತು. ಲತಾ ತನ್ನ ಜೊತೆಗೆ ಏನಾಗಿತ್ತೆಂದು ಯಾರೊಂದಿಗೂ ಹೇಳಿಕೊಂಡಿರಲಿಲ್ಲ. ಆದರೂ ಅವಳಿಗೆ ಅನಾರೋಗ್ಯವುಂಟಾಗಿ ಅಶಕ್ತಳಾಗತೊಡಗಿದಾಗ, ಸಮುದಾಯದ, ನೆರೆ ಹೊರೆಯ ಜನ ಅವಳಿಗೆ ಏಡ್ಸ್ ರೋಗ ತಗುಲಿದೆ ಎಂದು ಮಾತನಾಡಿಕೊಳ್ಳುತ್ತಿದ್ದರು. ಇದರಿಂದ ಲತಾ ತುಂಬಾ ನೊಂದುಕೊಳ್ಳುತ್ತಿದ್ದಳು. "ಇದೆಲ್ಲ ನಡೆದು ಒಂದು ವರ್ಷದ ಒಳಗೆ ಅವಳು ಸಾವನ್ನಪ್ಪಿದ್ದಳು" ಎಂದು ಅವಳ ತಂಗಿ ತಿಳಿಸುತ್ತಾಳೆ. ಜಮಖಂಡಿ ತಾಲೂಕಿನ ಮಹಿಳೆಯೊಬ್ಬರ ತಾಯಿ ಮುಂಬಯಿಯಲ್ಲಿದ್ದರು. ಅವರನ್ನು ಭೇಟಿಯಾಗಲು ಇವಳು ಮೇಲಿಂದ ಮೇಲೆ ಮುಂಬಯಿಗೆ ಹೋಗಿ ಬರುತ್ತಿದ್ದಳು. ಆದರೆ ಅವಳು ಎಂದೂ ಲೈಂಗಿಕ ದಂಧೆ ಮಾಡಿಲ್ಲ. ಆದರೂ, ಈಗ ಹಳ್ಳಿಯಲ್ಲಿರುವ ಇವಳಿಗೆ, ಎಂದಾದರೂ ಜ್ವರ ನೆಗಡಿ ಬಂದು ಮಲಗಿದರೆ, ವೈದ್ಯರ ಬಳಿ ಹೋದರೆ, ಕೇರಿಯ ಜನ ಇವಳಿಗೆ "ಏಡ್ಸ್ ರೋಗವೇ ಬಂದಿರಬಹುದೆಂದು ಮಾತನಾಡಿಕೊಳ್ಳತ್ತಾರೆ" ಎಂದು ನೋವಿನಿಂದ ತಿಳಿಸುತ್ತಾರೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಲೈಂಗಿಕ ಜೀತದ ಹೆಣ್ಣುಮಕ್ಕಳ ಪುನರ್ವಸತಿಯ ವಿಷಯದಲ್ಲಿ ಸಮುದಾಯದ ಸಮಾಜದ ಸಹಕಾರವನ್ನು ಪಡೆಯುವಲ್ಲಿ ನಮ್ಮ ಬಾಲೆಯರು ಸವಾಲುಗಳನ್ನು ಎದುರಿಸುತ್ತಿದ್ದಾರೆ ಎಂಬುದು ಕಂಡುಬರುತ್ತದೆ.

ಸಾಗಾಣಿಕೆಯಾದ ಬಹಳಷ್ಟು ಪ್ರಕರಣಗಳಲ್ಲಿ ಮನೆಯವರ ಕೈವಾಡವೇ ಇರುವುದು ಬಹುತೇಕ ಪ್ರಕರಣಗಳಿಂದ ಸ್ಪಷ್ಟವಾಗಿದೆ. ಸಾರಿಕಾ ಮತ್ತು ಅಂಬಿಕಾ(ಪ್ರಕರಣ ೮ ಮತ್ತು ೯) ಇವರ ಪ್ರಕರಣಗಳಲ್ಲಿ, ಮನೆ ಬಿಟ್ಟು ಹೋದ ಅಂಬಿಕಾ, ಮುಂಬಯಿಯ ರೆಡ್‌ಲೈಟ್ ಏರಿಯಾದಲ್ಲಿ ದಂಧೆ ಮಾಡುವಾಗ, ತಲೆಹಿಡುಕರೊಡನೆ ತನ್ನ ಮನೆಗೆ ಬಂದು, ತನ್ನ ತಂಗಿಯನ್ನೂ ಸಾಗಿಸಿಕೊಂಡು ಹೋದದ್ದನ್ನು ನೋಡಿಯೂ ಅವಳ ತಾಯಿ ಸುಮ್ಮನಿರುವುದರ ಅರ್ಥ ಆತಂಕಕ್ಕೆ ಎಡೆ ಮಾಡಿಕೊಡುತ್ತದೆ. ಇಂತವರ ಮಕ್ಕಳನ್ನು ಎಷ್ಟು ಸಾರಿ ರಕ್ಷಿಸಿದರೂ, ಅವರು ಮಾಡುವುದು ಮರಳಿ ಅದನ್ನೇ. ಸಾರಿಕಾ ಮತ್ತು ಅಂಬಿಕಾ ಇವರ ವಿಷಯದಲ್ಲಿ ಮಾಹಿತಿಯು ಅಸ್ಪಷ್ಟವಾಗಿದೆ. ಪುನರ್ವಸತಿ ನಂತರ ಇವರ ಮದುವೆಯಾಗಿರುವ ಕುರಿತು ದೊರೆತ ಪ್ರಮಾಣ ಪತ್ರಗಳು ಮದುವೆಯ ಖಚಿತತೆ ತೋರಿಸುತ್ತಿದ್ದರೂ, ಸಮುದಾಯದ ಅಭಿಪ್ರಾಯಗಳು ಮತ್ತು ತಾಯಿ ಹೇಳುವ ಗೊಂದಲದ ಮಾತುಗಳಿಂದ ಈ ಪ್ರಕರಣಗಳು ಮರು ಸಾಗಾಣಿಕೆ ಗೊಂಡಿರುವ ಸಾಧ್ಯತೆಗಳಿವೆ.

ಅಧ್ಯಯನಕ್ಕೆ ಒಳಪಡಿಸಿದ ಪ್ರಕರಣಗಳಲ್ಲಿ ಮರುಸಾಗಾಣಿಕೆಯಾಗಿರುವ ಪ್ರಕರಣವೆಂದರೆ, ಅದು ಶೋಭಾ (ಪ್ರಕರಣ ಸಂಖ್ಯೆ ೬) ಎಂಬ ಹೆಣ್ಣು ಮಗಳದು. ಶೋಭಾಳಿಗೆ ಸರ್ಕಾರೇತರ ಸಂಸ್ಥೆಯಿಂದ ಸಾಕಷ್ಟು ಸಮಾಲೋಚನೆ, ಸ್ವಯಂ ಉದ್ಯೋಗಕ್ಕಾಗಿ ಸಹಾಯ ದೊರೆತಿರುವಾಗಲೂ ಸಹ ಅವಳು ಅದನ್ನು ಸದುಪಯೋಗಪಡಿಸಿಕೊಳ್ಳದೇ ಮರಳಿ ಮುಂಬಯಿಯ ಲೈಂಗಿಕ ದಂಧೆಯ ಮನೆಗೆ ಹೋಗಿದ್ದಾಳೆ. ಅವಳ ಪರಿಸ್ಥಿತಿಯೂ ತುಂಬಾ ಸೂಕ್ಷ್ಮವಾಗಿದ್ದು, ಮನೆ ಬಿದ್ದು ಹೋಗಿದೆ. ಮನೆಯಲ್ಲಿರುವವರು ಎಲ್ಲರೂ ಇವಳ ಮೇಲೆ ಅವಲಂಬಿತರು. ಕೂಲಿ ಮಾಡಲು ಇವಳಿಗೆ ಸಾಧ್ಯವಾಗುತ್ತಿಲ್ಲ. ಅದನ್ನು ಬಿಟ್ಟರೆ ಬೇರೆ ಏನೂ ಮಾಡಲು ಅವಳಿಗೆ ಬರುವುದಿಲ್ಲ. ಮುಂಬಯಿಯಿಂದ ಮರಳಿ ಬಂದ ಮೇಲೆ ಪೊಲೀಸರಿಗೆ ಮತ್ತು ಪುನರ್ವಸತಿಗೊಳಿಸಿದ ಸಂಸ್ಥೆಯವರಿಗೆ ಹೆದರಿ ಸ್ವಲ್ಪ ದಿನ ಹಳ್ಳಿಯಲ್ಲಿದ್ದ ಶೋಭಾ, ಮತ್ತೆ ಮರಳಿ ಲೈಂಗಿಕ ದಂಧೆಯ ಮನೆ ಸೇರಿದ್ದಾಳೆ. ಗ್ರಾಮದಲ್ಲಿ ಕೆಲಸ ಮಾಡುವ ಸಮುದಾಯ ಕಾರ್ಯಕರ್ತೆಯೊಬ್ಬರು, "ಹೀಂಗ ಬಂದವರು ಬಾಳ ಮಂದಿ ಹೊಳ್ಳೀ, ಅದ ಜಾಗಾಕ್ಕ ಹೋಗ್ಯಾರ. ಅವರನ್ನ ಯಾರೂ ಏನೂ ಮಾಡಿಲ್ಲ. ಹಂಗಾಗಿ, ಈಕೀನೂ ಹೆದರಿಕಿಲ್ಲದನ ಹೋಗ್ಯಾಳ". ಅಂತ ಅಭಿಪ್ರಾಯ ವ್ಯಕ್ತ ಪಡಿಸುತ್ತಾರೆ.

ಬಂಗಾರಪೇಟೆಯ ೨೨ ವರ್ಷದ ಶಬಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಥಾಣೆ ಜಿಲ್ಲೆಯ ಬೀವಂಡಿ ರೆಡ್‌ಲೈಟ್ ಏರಿಯಾದಲ್ಲಿ ಭೇಟಿಯಾಗಿದ್ದಳು. ಶಬಾನಾಳನ್ನು ಮತ್ತು ಅವಳ ಗೆಳತಿಯನ್ನು ೧೫ ವರ್ಷದವರಿದ್ದಾಗ ಪೊಲೀಸರು ರಕ್ಷಿಸಿದ್ದರು. ಒಂದು ವರ್ಷ ಪುನರ್ವಸತಿ ಮತ್ತು ಸಮಾಲೋಚನೆಗೆ ಒಳಪಟ್ಟ ಇವರು ತಮ್ಮ ತಮ್ಮ ಮನೆಗಳಿಗೆ ಕಳಿಸಲ್ಪಟ್ಟಿದ್ದರು. ಶಬಾನಾ ಹೇಳುವಂತೆ, ಇವಳ ತಾಯಿ ಟೇಲರಿಂಗ್ ಕೆಲಸ ಮಾಡುತ್ತಿದ್ದಳು. ತಮ್ಮನೊಬ್ಬನಿದ್ದ. ಇವಳು ತಿರುಗಿ ಮನೆಗೆ ಹೋಗಿದ್ದಕ್ಕಾಗಿ ಅವಳ ತಾಯಿ ಮತ್ತು ತಮ್ಮನಿಗೆ ತುಂಬಾ ಖುಷಿಯಾಗಿತ್ತು. ಆದರೆ ಇವಳನ್ನು ಮನೆಗೆ ತಂದು ಬಿಟ್ಟಿದ್ದ ಪೊಲೀಸ್ ಪೇದೆಯೊಬ್ಬ ಮೇಲಿಂದ ಮೇಲೆ ಮನೆಯ ಹತ್ತಿರ ಬರುವುದು, ಮಾತನಾಡುವುದು

ಮಾಡತೊಡಗಿದ್ದ. ಇದರಿಂದ ಇವಳ ತಾಯಿಗೆ ಓಣಿಯಲ್ಲಿ ತುಂಬಾ ಮುಜುಗರವಾಗತೊಡಗಿತು. ಕೊನೆಗೆ ಪೊಲೀಸನ ಕಾಟ ವಿಪರೀತಗೊಂಡು, ಇವಳ ತಾಯಿ ತಾಳಲಾಗದೆ ತಮ್ಮ ಸ್ವಂತ ಮನೆ ಮಾರಾಟ ಮಾಡಿ, ಬೇರೆ ಕಡೆ ಬಾಡಿಗೆ ಮನೆ ಹಿಡಿದು ಜೀವನ ಮಾಡತೊಡಗಿದರು. ಅಲ್ಲಿಗೆ ಪೊಲೀಸನ ಕಾಟ ತಪ್ಪಿತ್ತು ಆದರೆ, ಇವಳ ತಾಯಿಯ ಟೇಲರಿಂಗ್ ಕೆಲಸ ನಡೆಯಲಿಲ್ಲ. ಹೀಗಾಗಿ ಮನೆಯ ಆದಾಯ ತುಂಬಾ ಕಡಿಮೆಯಾಗಿ, ಮನೆಯ ಪರಿಸ್ಥಿತಿ ತೀರಾ ಕೆಳಮಟ್ಟಕ್ಕೆ ಹೋಯಿತು. ದಿನದ ಊಟಕ್ಕೂ ಸಮಸ್ಯೆಯಾಗತೊಡಗಿತು. ಇದನ್ನೆಲ್ಲ ನೋಡುತ್ತಿದ್ದ ಶಬಾನಾಳಿಗೆ, ತಾನು ಅಲ್ಲಿರುವುದು ನಿರುಪಯುಕ್ತ ಅನ್ನಿಸತೊಡಗಿತ್ತು.

ಕೊನೆಗೆ ಶಬಾನಾ ತನ್ನ ತಾಯಿಗೆ ತಿಳಿಸಿ ಹೇಳಿ, ತಾನು ಮೊದಲು ಇದ್ದ ಜಾಗೆಯಲ್ಲಿ ಕೆಲಸಗಳು ತುಂಬಾ ಜಾಸ್ತಿ, ಇಲ್ಲಿ ಸುಮ್ಮನೇ ಕುಳಿತುಕೊಳ್ಳುವುದಕ್ಕಿಂತ, ತಾನು ಅಲ್ಲಿಗೆ ಕೆಲಸಕ್ಕೆ ಹೊಗುತ್ತೇನೆಂದು, ಬೀವಂಡಿಗೆ ಬಂದು ಬಿಟ್ಟಿದ್ದಳು. ಅಲ್ಲಿಂದ ತಾನು ಮೊದಲು ಲೈಂಗಿಕ ಜೀತಕ್ಕೆ ಇದ್ದ ಮನೆಯ ಹತ್ತಿರವೇ ಲೈಂಗಿಕ ದಂಧೆಗೆ ನಿಂತಳು. ತುಂಬಾ ಚಿಕ್ಕ ವಯಸ್ಸು, ಕೈ ತುಂಬ ಗಳಿಸುವ ಅವಕಾಶವಿತ್ತು. ಆ ಹುಚ್ಚು  ಆಸೆಯಲ್ಲಿ ತನ್ನ ೨೦ನೇ ವಯಸ್ಸಿಗೇ ಎಚ್.ಐ.ವಿ. ಸೋಂಕಿಗೆ ಬಲಿಯಾಗಿದ್ದಾಳೆ. ಈಗ ಲೈಂಗಿಕ ದಂಧೆಯ ಮನೆಯನ್ನು ಬಿಟ್ಟು ತನ್ನದೇ ಒಂದು ಬಾಡಿಗೆ ಮನೆಯನ್ನು ಮಾಡಿಕೊಂಡಿದ್ದಾಳೆ. ಇವಳ ಜೊತೆಗೆ ೪ ಹುಡುಗಿಯರಿದ್ದಾರೆ. ಅವರನ್ನಿಟ್ಟುಕೊಂಡು ದಂಧೆ ಮನೆ ನಡೆಸುತ್ತಿದ್ದಾಳೆ. ಎಚ್.ಐ.ವಿ./ಏಡ್ಸ್ ಇರುವ ಒಬ್ಬ ವ್ಯಕ್ತಿಯನ್ನು ಪಾರ್ಟನರ್‌ನನ್ನಾಗಿ ಮಾಡಿಕೊಂಡಿದ್ದಾಳೆ. ಲೈಂಗಿಕ ದಂಧೆಯ ಹುಡುಗಿಯ ಒಂದು ಹೆಣ್ಣು ಮಗುವನ್ನು ೨೫,೦೦೦ ರೂಪಾಯಿಗೆ ಖರೀದಿಸಿಕೊಂಡಿದ್ದಾಳೆ. ತಾಯಿ ಮತ್ತು ತಮ್ಮನನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಾಳೆ. ಅವರ ಹತ್ತಿರವೇ ತನ್ನ ಸಾಕು ಮಗಳನ್ನು ಬೆಳೆಸುತ್ತಿದ್ದಾಳೆ. ಇವಳ ಜೊತೆಗೆ ಪುನರ್ವಸತಿಗೊಂಡಿದ್ದ ಇವಳ ಗೆಳತಿ ಮರಳಿ ಇದೇ ಏರಿಯಾಗೆ ಬಂದಿದ್ದಾಳೆ. ಆದರೆ ಅವಳು ಲೈಂಗಿಕ ದಂಧೆ ಮಾಡುತ್ತಿಲ್ಲ. ಚಹಾದ ಅಂಗಡಿಯಲ್ಲಿ ಚಹಾ ಮಾಡುವುದು, ಪಾತ್ರೆ ತೊಳೆಯುವುದು ಮಾಡುತ್ತಾಳೆ. ಅವಳ ಜೀವನ ಕಂಡು ಶಬಾನ ನಗುತ್ತಾಳೆ. "ಅವಳು ಯಾಕೆ ಅಷ್ಟು ಕಷ್ಟ ಪಡುತ್ತಾಳೋ ಗೊತ್ತಿಲ್ಲ. ಅವಳು ತಿಂಗಳು ಪೂರ್ಣ ಗಳಿಸುವುದನ್ನು, ತಾನು ೧೦ ನಿಮಿಷ ದಲ್ಲಿ ಗಳಿಸುತ್ತೇನೆ. ಜೀವನದಲ್ಲಿ ಏನಿದೆ, ಇರುವಷ್ಟು ದಿನ ಖುಷಿಯಾಗಿರುವುದು ಮುಖ್ಯ" ಎಂದು ಹೇಳುತ್ತಾಳೆ. ಶಬಾನಾ ರಕ್ಷಿಸಲ್ಪಟ್ಟ ಬಾಲೆಯಾಗಿದ್ದಳು. ಕೆಲವು ಸಾರಿ ಕಾಯಬೇಕಾದವರ ತಪ್ಪು ವರ್ತನೆಗಳು, ಅತಿಯಾದ ಕಾಳಜಿಗಳು ಮತ್ತೇನನ್ನೋ ಮಾಡಿಬಿಡುತ್ತವೆ. ಶಬಾನಾಗೆ ಮರಳಿ ಬರುವ ವಿಚಾರವೇ ಇರಲಿಲ್ಲ. ತನ್ನ ಮನೆಯ ಜೊತೆಗೆ ಹೊಂದಿಕೊಳ್ಳಲಾರಂಭಿಸಿದ್ದಳು. ಆದರೆ ತನ್ನಿಂದಾಗಿ ತನ್ನ ಕುಟುಂಬ ಬೀದಿಗೆ ಬಂದ ಸ್ಥಿತಿ ನೋಡಿ ಮರಳಿ ಲೈಂಗಿಕ ದಂಧೆಗೆ ಬರಬೇಕಾಯಿತು ಎಂದು ಹೇಳುತ್ತಾಳೆ.

ಈ ಎರಡು ತಿಂಗಳ ಹಿಂದೆ. ನಾವು ಈಗಾಗಲೇ ಭೇಟಿಯಾಗಿ ಬಂದಿದ್ದ ರಂಜನಾ(ಪ್ರಕರಣ ಸಂಖ್ಯೆ ೧)ಳಿಗೆ ಫೋನ್ ಮಾಡಿ. "ನಿನ್ನ ಸಮಸ್ಯೆಗಳನ್ನು ಕೇಳಲು ಮೇಲಾಧಿಕಾರಿಗಳು ಬರುವವರಿದ್ದಾರೆ.

ನೀನು ಮನೆಯಲ್ಲಿಯೇ ಇರು. ನಾವು ಬರುತ್ತೇವೆ", ಅಂದಿದ್ದಕ್ಕೆ, ರಂಜನಾ, "ಅದೇನೂ ಬ್ಯಾಡ, ಅವತ್ತು ನೀವು ಬಂದು ಹ್ವಾದ ದಿನ, ನನ್ನ ಇಡೀ ದಿವಸದ ಕೂಲೀನ ಹಾಳಾತು. ಮತ್ತ ಯಾರೋ ಬಂದು, ನನ್ನ ದಿನ ಹಾಳು ಮಾಡೋದು ಬ್ಯಾಡ. ನನ್ನ ಬಗ್ಗೆ ನಿಮಗ ಎಲ್ಲಾ ವಿಷಯ ಗೊತ್ತೈತಿ. ನನ್ನ ಬದಲಿ ನೀವ ಮಾತಾಡಿ ಕಳಸ್ರೀ. ನಮ್ಮನ್ನ ಅಲ್ಲಿಂದ ಕರ್‍ಕಂಡ ಬಂದ ದೊಡ್ಡ ಉಪಕಾರ ಮಾಡೀರಿ ಅಷ್ಟ ಸಾಕ. ಹೀಂಗ ಮ್ಯಾಲಿಂದ ಮ್ಯಾಲೆ ನಮ್ಮ ಮನೀಗೆ ಬಂದು, ನಮ್ಮ ಮಂದಿ ಮುಂದ ಮರ್‍ಯಾದಿ ಕಳೀಬ್ಯಾಡ್ರೀ" ಎಂದು ಖಾರವಾಗಿ ರಂಜನಾ ನುಡಿದಿದ್ದಳು. ಅವಳ ಕೋಪದಲ್ಲಿ ಬಹುಪಾಲು ಸತ್ಯವಿದೆ.

ಸರ್ಕಾರ ಇವರನ್ನು ದಂಧೆ ಮನೆಯಿಂದ ಬಿಡಿಸಿ ತಂದಿದ್ದನ್ನು ಬಿಟ್ಟರೆ ಏನು ಮಾಡಿದೆ. ಎಲ್ಲ ಅವರವರೇ ಮಾಡಿಕೊಂಡಿದ್ದು. ಒಂದು ವೇಳೆ ಅವರೆಲ್ಲ ನಮಗೆ ಇಲ್ಲಿ ಬದುಕಲು ಸಾಧ್ಯವಿಲ್ಲ ಎಂದು ಮರಳಿ ಹೋಗಿದ್ದರೆ ನಾವು ಏನು ಮಾಡಲು ಸಾಧ್ಯವಿತ್ತು? ಈಗಾಗಲೇ ಹಾಗೆ ಹೋದ ಶೋಭಾಳಿಗೆ, ಶಬಾನಾಳಿಗೆ ನಮ್ಮಿಂದ ಏನು ಮಾಡಲು ಸಾಧ್ಯವಾಗಿದೆ? ಅವರ ಹಿಂದೆ ಹೋದ ಹುಡುಗಿಯರೆಷ್ಟೋ? ಶಬಾನಾಳಂತೂ ತನ್ನ ೨೨ರ ವಯಸ್ಸಿಗೆ ಏಡ್ಸ್ ರೋಗಿಯಾಗುವುದಲ್ಲದೇ, ಘರವಾಲಿಯಾಗಿದ್ದಾಳೆ. ಅವಳೇ ಚಿಕ್ಕ ವಯಸ್ಸಿನವಳು. ಇನ್ನು ಅವಳ ಮನೆಯಲ್ಲಿ ಇರುವ ಹುಡುಗಿಯರ ವಯಸ್ಸು ಎಷ್ಟಿರಬಹುದು? ಶೋಭಾ ಸಾಗಾಣಿಕೆಯಾದಾಗ ಅವಳಿಗೊಬ್ಬಳು ೬ ವರ್ಷದ ತಂಗಿ ಇದ್ದಳು. ಅವಳೀಗ ಊರಲ್ಲಿ ಇಲ್ಲ. ಅವಳು ಎಲ್ಲಿ ಹೋದಳು? ಶಬಾನಾ ಒಂದು ಹೆಣ್ಣು ಮಗುವನ್ನು ಖರೀದಿಸಿಕೊಂಡಿದ್ದಾಳೆ. ಮುಂದೆ ಅವಳ ಭವಿಷ್ಯವೇನು? ಹಾಗಂತ ರಕ್ಷಣೆಯ ಕಾರ್ಯದಲ್ಲಿ ಅರ್ಥವಿಲ್ಲವೆಂದಲ್ಲ. ಆದರೆ ಭರವಸೆ ಇಲ್ಲ. ನಿಖರತೆ ಇಲ್ಲ. ತಳಮಟ್ಟದಲ್ಲಿ ಮಕ್ಕಳಿಗೆ ಬದುಕು ಕಟ್ಟಿಕೊಳ್ಳಲು ಬೇಕಾದ ವ್ಯವಸ್ಥೆ ಇಲ್ಲ.

**೮.೪. ಜೆ ಜೆ ಆ್ಯಕ್ಟ್–೨೦೦೦ : ರಕ್ಷಣೆ, ಪುನರ್ವಸತಿ ಮತ್ತು ಪುನರ್‍ಮಿಲನ**

ಲೈಂಗಿಕ ಜೀತಕ್ಕೊಳಗಾಗದ ಬಾಲೆಯರ ರಕ್ಷಣೆ, ಪುನರ್ವಸತಿ ಮತ್ತು ಪುನರ್ಮಿಲನವನ್ನು ನೋಡುವಾಗ ನಿರೀಕ್ಷಿತ ಮಟ್ಟದ ಪರಿಣಾಮಗಳು ಉಂಟಾಗುತ್ತಿಲ್ಲ. ಈ ಬಗ್ಗೆಯೇ ಅನುಷ್ಠಾನಗೊಂಡಿರುವ ಜೆ ಜೆ ಆ್ಯಕ್ಟ್ ೨೦೦೦ ಇದರ ಮೇಲೆ ನಮ್ಮೆಲ್ಲರ ಭರವಸೆ ಅಗಾಧವಾಗಿತ್ತು ಏಕೆಂದರೆ, ಮಕ್ಕಳ ಹಕ್ಕುಗಳ ಒಡಂಬಡಿಕೆಯನಂತರ, ಮಗುವಿನ ಹಿತಾಸಕ್ತಿಗೆ(ದಿ ಬೆಸ್ಟ್ ಇಂಟರೆಸ್ಟ್ ಆಫ್ ದಿ ಚೈಲ್ಡ್) ಅನುಗುಣವಾಗಿ ಕಾರ್ಯ ನಿರ್ವಹಿಸುವ ಉದ್ದೇಶವನ್ನು ಇದು ಹೊಂದಿದೆ.

ಪ್ರಸ್ತುತ ಅಧ್ಯಯನದಲ್ಲಿ, ಮಗು ಇಂತ ದುಸ್ಥಿತಿಗೆ ಬರುವಲ್ಲಿ, ಪುನರ್ಮಿಲನಗೊಳಿಸಬೇಕಾದಂತಹ ಹೆತ್ತವರೇ ಮುಂಚೂಣಿಯಲ್ಲಿ ಕಂಡುಬರುತ್ತಿದ್ದಾರೆ. ಹಾಗಿದ್ದರೆ, ರಕ್ಷಣೆ ಮಾಡುವ ಒಂದು ಚಟುವಟಿಕೆ ಯಾವ ಸಾರ್ಥಕಕ್ಕೆ. ಪ್ರಸ್ತುತ ಅಧ್ಯಯನದ ಐದು ಮತ್ತು ಆರನೇ ಅಧ್ಯಾಯದಲ್ಲಿ ಪ್ರಕರಣಗಳು ಚರ್ಚಿಸುವಂತೆ ಅವರನ್ನು ಅವರ ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ಜೀತಕ್ಕೆ ಸಾಗಾಣಿಕೆ ಮಾಡಲಾಗಿತ್ತು. ಅವರನ್ನು ಯಾವ ಕಾಯಿದೆ ಕಾನೂನುಗಳೂ ರಕ್ಷಿಸಲಿಲ್ಲ. ಕೆಲವರು ಆ ಕೂಡಲೇ ಮರಳಿ ಬಂದಿದ್ದಾರೆ. ಕೆಲವರು ಎರಡು ಮೂರು ವರ್ಷಗಳಾದ ಮರಳಿ ಬಂದಿದ್ದಾರೆ. ಮತ್ತೆ ಕೆಲವರು ೧೦–೧೫

ವರ್ಷಗಳ ನಂತರ ಬಂದಿದ್ದಾರೆ. ಇವರನ್ನು ಅಲ್ಲಿ ಯಾರೂ ರಕ್ಷಣೆ ಮಾಡಲಿಲ್ಲ. ತಾವಾಗಿಯೇ ತಮಗೆ ಅಲ್ಲಿ ಬದುಕು ಸಾಕೆನಿಸಿದಾಗ ಬಂದಿದ್ದಾರೆ. ಹೀಗೆ ರೆಡ್‌ಲೈಟ್ ಏರಿಯಾಗಳಿಗೆ ಸಾಗಾಣಿಕೆಯ ಹರಿವು ಹೆಚ್ಚಾಗಿಯೇ ಇರುವುದನ್ನು ಇದು ಸೂಚಿಸುತ್ತದೆ. ಪೂರಕವಾಗಿ ರೆಡ್‌ಲೈಟ್ ಏರಿಯಾದಲ್ಲಿ ನಮ್ಮ ರಾಜ್ಯದ ೧೭-೧೮-೧೯-೨೦ರ ವಯಸ್ಸಿನಿಂದ ಪ್ರಾರಂಭಗೊಳ್ಳುವ ಬಹಳಷ್ಟು ಹುಡುಗಿಯರಿದ್ದಾರೆ. ಅವರ ಬದುಕು, ಜೀವನದ ಶೈಲಿ ನೋಡುತ್ತಿದ್ದರೆ ಅವರು ನಿನ್ನೆ ಮೊನ್ನೆ ಬಂದವರ ಹಾಗೆ ಕಾಣುವುದಿಲ್ಲ. ಅವರೂ ತಮ್ಮ ೧೦-೧೧ರ ಅಪ್ರಾಪ್ತ ವಯಸ್ಸಿಗೇ ಬಂದವರಾಗಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಹಾಗೆಯೆ ಆ ಹುಡುಗಿಯರು ತಾವು ಅಪ್ರಾಪ್ತ ವಯಸ್ಸಿನರಿದ್ದಾಗಲೇ, ಸಾಗಾಣಿಕೆಗೊಂಡು ಬಂದಿರುವುದೆಂದು, ತಮ್ಮ ಪ್ರಕರಣ ಅಧ್ಯಯನಗಳಲ್ಲಿ ವ್ಯಕ್ತ ಪಡಿಸಿದ್ದಾರೆ. ಆದರೆ ನಮ್ಮ ಜೆ.ಜೆ. ಆ್ಯಕ್ಟ್ ಅಡಿಯಲ್ಲಿ ರಕ್ಷಣೆ ಆಗುತ್ತಿರುವವರು ಎಷ್ಟು? ಇದು ಗಮನಿಸುಬೇಕಾದ ಅಂಶ.

ಎರಡನೆಯದಾಗಿ, ಅದು ಕಡಿಮೆಯೋ ಹೆಚ್ಚೋ. ಆದರೂ ಒಂದಷ್ಟು ಮಕ್ಕಳನ್ನು ಕಾಯಿದೆ ತನ್ನ ಅಡಿಯಲ್ಲಿ ರಕ್ಷಿಸಿದೆ(ಎನ್.ಜಿ.ಓ.ಗಳ ಸಹಾಯದಿಂದ). ಮುಂದುವರೆದು ಕಾಯಿದೆಯು, ಅವರ ಪುನರ್ವಸತಿಯ ಕುರಿತು ಮಾತನಾಡುತ್ತದೆ. ಆದರೆ ಪುನರ್ವಸತಿಗಾಗಿ ಬೇಕಾಗಿರುವ ಯಾವ ವ್ಯವಸ್ಥೆ ನಮ್ಮ ನಡುವೆ ಇದೆ? ಸರ್ಕಾರದ ಮಟ್ಟದಲ್ಲಿ ಜಿಲ್ಲೆಗೊಂದು ಬಾಲಕಿಯರ ಬಾಲಮಂದಿರಗಳಿವೆ. ಇಲ್ಲಿ ೬ರಿಂದ ೧೪ ವರ್ಷಗಳವರೆಗೆ ಬಾಲಕಿಯರನ್ನು ಇಟ್ಟುಕೊಂಡು ಅವರ ಯೋಗಕ್ಷೇಮ ನೋಡಿಕೊಳ್ಳುತ್ತಾರೆ. ಅಲ್ಲಿಂದ ಅವರು ೧೫ ರಿಂದ ೧೮ ವರ್ಷದವರೆಗಿನ ಬಾಲಕಿಯರಿಗಾಗಿ ಇರುವ ಬಾಲಮಂದಿರಕ್ಕೆ ವರ್ಗಾವಣೆಯಾಗುತ್ತಾರೆ. ಇವು ಜಿಲ್ಲೆಗೊಂದು ಇಲ್ಲ. ಅಲ್ಲಿಂದ ಅಂದರೆ ೧೮ ವರ್ಷದ ನಂತರ ಅವರನ್ನು ರಾಜ್ಯ ಮಹಿಳಾ ನಿಲಯಗಳಿಗೆ ವರ್ಗಾವಣೆ ಮಾಡುತ್ತಾರೆ. ಮೊದಲ ಎರಡು ಹಂತಗಳಲ್ಲಿ (೬ರಿಂದ ೧೪ ಮತ್ತು ೧೫ರಿಂದ ೧೮) ಶಾಲೆಗೆ ಹೋಗುವ ಮಕ್ಕಳಿಗೆ ಒಳ್ಳೆಯ ಅವಕಾಶವಿದೆ. ಇಲ್ಲಿ ಸಂಕಷ್ಟದೊಳಗಿರುವ, ಮನೆಯಲ್ಲಿ ಬದುಕು ನಡೆಸಲಾಗದ, ಹೆಣ್ಣುಮಕ್ಕಳಿಗೆ ಆಶ್ರಯ ಕೊಟ್ಟು, ಅವರ ವಸತಿ, ಶಿಕ್ಷಣ, ಆರೋಗ್ಯವನ್ನು ನೋಡಿಕೊಳ್ಳಲಾಗುತ್ತಿದೆ. ಇದು ಸಾಮಾನ್ಯ ಸಮಸ್ಯೆಗಳನ್ನು ಎದುರಿಸುವ ಮಕ್ಕಳಿಗೆ ಇರವ ವ್ಯವಸ್ಥೆ.

ಆದರೆ ಅನಕ್ಷರಸ್ಥರಾಗಿರುವ, ತಮ್ಮ ೯-೧೦ನೆ ವಯಸ್ಸಿಗೆ ಸಾಗಾಣಿಕೆಗೊಂಡು, ಲೈಂಗಿಕ ಜೀತದಲ್ಲಿದ್ದು ತಮ್ಮ ೧೬-೧೭ನೇ ವಯಸ್ಸಿಗೆ ರಕ್ಷಣೆಗೊಂಡು ಬರುವ ಮಕ್ಕಳಿಗಾಗಿ ಕರ್ನಾಟಕ ಸರ್ಕಾರದ ವ್ಯವಸ್ಥೆ ಯಲ್ಲಿ ಏನಿದೆ? ಹುಡುಕುತ್ತಾ ಹೊರಟಾಗ ಸಿಕ್ಕಿದ್ದು, ಸರ್ಕಾರದಿಂದ ಅನುದಾನ ಪಡೆಯುವ ಸರ್ಕಾರೇತರ ಸಂಸ್ಥೆಗಳು ನಡೆಸುತ್ತಿರುವ, ಅದೇ ಪೇಂಟಿಂಗ್, ಮೆಹೆಂದಿ ಡಿಸೈನ್ ಮತ್ತು ಟೇಲರಿಂಗ್ ತರಬೇತಿಗಳು. ಅವು ಕಾಟಾಚಾರಕ್ಕೆ ವ್ಯವಸ್ಥೆಯಾದಂತವುಗಳು. ಒಂದು ವೇಳೆ ಪುನರ್ವಸತಿಗೆ ಬಂದ ಬಾಲೆಯು ಇದನ್ನು ಮನಸಿಟ್ಟು ಕಲಿತು, ಪರಿಣಿತಿ ಪಡೆದರೂ ಸಹ, ಅದಕ್ಕೆ ಮಾರುಕಟ್ಟೆ ಎಲ್ಲಿದೆ? ಜಮಖಂಡಿ ತಾಲೂಕಿನ, ರಾಯಭಾಗ ತಾಲೂಕಿನ, ಬಸವನ ಬಾಗೇವಾಡಿ ತಾಲೂಕಿನ, ಸಾರಿಗೆ ವ್ಯವಸ್ಥೆಯನ್ನೂ ಕಾಣದಂತಹ ಯಾವುದೋ ಕುಗ್ರಾಮಗಳ ಬಾಲೆಯರು ಯಾರಿಗಾಗಿ ಪೇಂಟಿಂಗ್ ಮಾಡಬೇಕು?

ಯಾರಿಗಾಗಿ ಬಟ್ಟೆ ಹೊಲಿಯಬೇಕು? ಯಾರಿಗೆ ಮೆಹೆಂದಿ ಹಾಕಬೇಕು? ಇದರಿಂದ ಅವಳು ಬದುಕು ಕಟ್ಟಿಕೊಳ್ಳಲು ಸಾಧ್ಯವೇ?

ಸರ್ಕಾರದ ರಕ್ಷಣಾ ಗೃಹಗಳಲ್ಲಿ ಇಂತವರಿಗಾಗಿ ಏನೂ ವ್ಯವಸ್ಥೆ ಇಲ್ಲ. ಎನ್.ಜಿ.ಓ.ದವರು ನಡೆಸುತ್ತಿರುವ ಸ್ವಾಧಾರ, ಉಜ್ವಲಾಗಳು ಊಟ ಹಾಕಿ, ಮಲಗಿಸುವ ಜೈಲುಗಳಾಗಿವೆ. ಕರ್ನಾಟಕದ ಮೈಸೂರಿನ ಒಡನಾಡಿ ಸಂಸ್ಥೆಯಂತಹ ಕೆಲವು ಸಂಸ್ಥೆಗಳು ಇದಕ್ಕೆ ಹೊರತಾಗಿವೆ. ಆದರೆ ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗೆ ಬಂದರೆ ಮಾರುಕಟ್ಟೆ ಆಧಾರಿತವಾದ ಕೌಶಲ್ಯಗಳನ್ನು ಕಲಿಸುವ ಯಾವ ವ್ಯವಸ್ಥೆಯೂ ಸರ್ಕಾರದ ಮಟ್ಟದಲ್ಲಾಗಲೀ, ಸರ್ಕಾರೇತರ ಸಂಸ್ಥೆಗಳ ಮಟ್ಟದಲ್ಲಾಗಲೀ ಕಂಡು ಬರುವುದಿಲ್ಲ. ಹಾಗಾಗಿ ಲೈಂಗಿಕ ದೌರ್ಜನ್ಯಕ್ಕೊಳಗಾದ, ಲೈಂಗಿಕ ಜೀತಕ್ಕೆ ಒಳಗಾದ ಹೆಣ್ಣುಮಕ್ಕಳ ವಿಷಯದಲ್ಲಿ ಭದ್ರತೆ ಒದಗಿಸುವ ಪುನರ್ವಸತಿ ವ್ಯವಸ್ಥೆ ಕಲ್ಪಿಸುವ ಜೆ.ಜೆ. ಆ್ಯಕ್ಟ್‌ನ ಆಶಯ ಆಶಯವಾಗಿಯೇ ಉಳಿದಿದೆ. ಬದಲಿಗೆ ಲೈಂಗಿಕ ಜೀತಕ್ಕೊಳಗಾಗಿ ರಕ್ಷಣೆಗೊಳಗಾಗಿ ಬಂದ ಬಾಲೆಯರು, "ನಮ್ಮ ಬದುಕು ಕಟ್ಟಿಕೊಳ್ಳಲು ವ್ಯವಸ್ಥೆ ಮಾಡಲಾಗದ ನೀವು, ನಮ್ಮನ್ನು ಹಿಡಿದುಕೊಂಡು ಬರುವ ಅವಶ್ಯಕತೆ ಏನಿತ್ತು? ದಂಧೆಯ ಮನೆಯಲ್ಲಿದ್ದಾಗ ನಾವೂ ಬದುಕಿ, ನಮ್ಮನ್ನ ಆಶ್ರಯಿಸಿದವರನ್ನೂ ನಾವು ಬದುಕಿಸುತ್ತಿದ್ದೆವು. ಐಗ ಅವರೊಡನೆ ನಾವೂ ಉಪವಾಸ ಬೀಳಬೇಕಾಗಿದೆ" ಅವರು ಕೇಳುವ ಪ್ರಶ್ನೆಯಲ್ಲಿ ಸತ್ಯ ಇದೆ.

ಮೂರನೆಯದಾಗಿ ಅತ್ಯಂತ ಮುಖ್ಯ ಸವಾಲೆಂದರೆ, ಅಧ್ಯಯನವು ಕಂಡುಕೊಂಡಂತೆ, ಮಹಾರಾಷ್ಟ್ರ ರಾಜ್ಯದ ವೇಶ್ಯಾಗೃಹಗಳಿಗೆ ಸಾಗಾಣಿಕೆಗೊಂಡ ಕರ್ನಾಟಕದ ಬಾಲೆಯರು, ಅಲ್ಲಿಯ ಸರ್ಕಾರದಿಂದ ರಕ್ಷಣೆಗೊಂಡು, ಅಲ್ಲಿಯೇ ಇರುವಂತಹ ಸರ್ಕಾರೇತರ ಸಂಸ್ಥೆಗಳಲ್ಲಿ ಪುನರ್ವಸತಿಗೊಂಡು, ಪುನರ್ಮಿಲನಕ್ಕಾಗಿ ಕರ್ನಾಟಕದ ಸರ್ಕಾರೇತರ ಸಂಸ್ಥೆಯ ಸುಪರ್ದಿಗೆ ಬಂದಿರುತ್ತಾರೆ. ಮಹಾರಾಷ್ಟ್ರದ ಬಾಲಕಲ್ಯಾಣ ಮಂಡಳಿಗಳು ಮತ್ತು ಬಾಲನ್ಯಾಯ ಮಂಡಳಿಗಳು ಕರ್ನಾಟಕದಲ್ಲಿ ತಾವು ಗುರುತಿಸಿಕೊಂಡ ಸ್ವಯಂ ಸೇವಾ ಸಂಸ್ಥೆಗಳಿಂದ, ಮಗುವಿನ ಮನೆ ಭೇಟಿ ವರದಿ ಪಡೆದುಕೊಂಡು, ನಂತರ ಪುನರ್ಮಿಲನಕ್ಕಾಗಿ ಅದೇ ಸಂಸ್ಥೆಯ ಸುಪರ್ದಿಗೆ ನ್ಯಾಯಾಲಯ ಬಾಲೆಯನ್ನು ಒಪ್ಪಿಸುತ್ತದೆ. ಬಾಲೆಯನ್ನು ಸ್ವೀಕರಿಸಿದ ಸಂಸ್ಥೆಯು, ಬಾಲೆ ಮತ್ತು ಪೋಷಕರೊಡನೆ ಸಮಾಲೋಚನೆ ನಡೆಸಿ, ಸಂಬಂಧಿಸಿದ ಪೊಲೀಸ್ ಇಲಾಖೆಯ ಮೂಲಕ ಬಾಲೆಯನ್ನು ಅವಳ ಪೋಷಕರಿಗೆ ಒಪ್ಪಿಸುತ್ತದೆ (ಪುನರ್ಮಿಲನಗೊಳಿಸುತ್ತದೆ). ಈ ಎಲ್ಲ ಪ್ರಕ್ರಿಯೆಗಳ ಕುರಿತು, ಆ ಬಾಲೆಯು ಸಂಬಂಧಿಸಿದ ಜಿಲ್ಲೆಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಾಗಲೀ, ಮಕ್ಕಳ ಕಲ್ಯಾಣ ಸಮಿತಿಗಾಗಲೀ ಅಥವಾ ಬಾಲ ನ್ಯಾಯ ಮಂಡಳಿಗಾಗಲೀ ಯಾವುದೇ ಮಾಹಿತಿ ದೊರೆಯುವುದೇ ಇಲ್ಲ. ಹಾಗಾಗಿ ಆ ಬಾಲೆಯ ಪುನರ್ಮಿಲನದ ಸಂದರ್ಭದಲ್ಲಿ ಸರಕಾರದಿಂದ ಯಾವುದೇ ಬೆಂಬಲ ಸಿಗುವುದಿಲ್ಲ. ಯಾಕೆಂದರೆ ಅವರಿಗೆ ಸರ್ಕಾರದ ಆದೇಶ ಇರುವುದಿಲ್ಲ. ಮುಖ್ಯವಾಗಿ ಜವಾಬ್ದಾರಿ ಇರುವುದಿಲ್ಲ. ಉದಾ: ಶೋಭಾಳ ಪ್ರಕರಣದಲ್ಲಿ, ಅವಳಿಗೆ ಮನೆ ಇರಲಿಲ್ಲ. ಬಿದ್ದು ಹೋಗಿದೆ. ಪಂಚಾಯತಿಗೆ ಅದು ಗೊತ್ತಿದ್ದರೂ ಸುಮ್ಮನೆ ಕುಳಿತಿದೆ. ಮನೆ

ಯಲ್ಲಿ ಇರುವವರೆಲ್ಲರೂ ದುಡಿಯಲು ಅಸಮರ್ಥರು. ಪಂಚಾಯತಿಗೆ ಗೊತ್ತಿದೆ. ಆದರೂ ಸುಮ್ಮನೇ ಕುಳಿತಿದೆ. ಪುನರ್ವಸತಿಗೊಳಿಸಿದ ಸಂಸ್ಥೆ ಬೇರೆ ರಾಜ್ಯದ್ದು, ಇವರನ್ನು ಕಳಿಸಿ ನೆಮ್ಮದಿಯಿಂದ ಇದೆ. ಪುನರ್ನೆಲೆಗೊಳಿಸಿ ಹೋದ ಸಂಸ್ಥೆಯು ಬೇರೆ ಜಿಲ್ಲೆಯದು. ಪೋಷಕರಿಗೆ ಒಪ್ಪಿಸಿ ಕೈ ತೊಳೆದುಕೊಂಡಿದೆ. ಅಲ್ಲಿ ಬದುಕು ನಡೆಸಲಾಗದ ಶೋಭಾ ಮತ್ತೆ ಮರಳಿ ಮುಂಬಯಿಯ ಲೈಂಗಿಕ ದಂಧೆಯ ಮನೆಯ ದಾರಿ ಹಿಡಿದಿದ್ದಾಳೆ. ಎರಡು ಮಕ್ಕಳಿಗೆ ಜನ್ಮ ನೀಡಿದ್ದಾಳೆ. ಈಗಲೂ ಅಲ್ಲಿಯೇ ಇದ್ದಾಳೆ. ಹಾಗಿದ್ದರೆ ಇಲ್ಲಿ ನಮ್ಮ ಸರ್ಕಾರದ ಪಾತ್ರ ಏನು? ಇಂತಹ ಎಷ್ಟೋ ಮಕ್ಕಳು ಸರ್ಕಾರದ ಗಮನಕ್ಕೆ ಬಾರದೇ ಅಂಚಿನಾಚೆಗೆ ಸರಿದು ಹೊಗುತ್ತಿದ್ದಾರೆ.

ಕೊನೆಯಲ್ಲಿ ಕಾಯಿದೆಯು ಮಗು ತನ್ನ ಕುಟುಂಬದೊಂದಿಗೆ, ಸಮುದಾಯದೊಂದಿಗೆ ಒಂದಾಗಿ ಬದುಕುವಂತಹ ಪುನರ್ನೆಲೆಯ ಕುರಿತು ಸೂಚಿಸುತ್ತದೆ. ಕಾನೂನಿನಲ್ಲಿ ಮಗುವನ್ನು ಆ ಸ್ಥಿತಿಗೆ ತಂದಂತಹ, ಅಂದರೆ ಉದಾಹರಣೆಗಾಗಿ, ಲೈಂಗಿಕ ಜೀತಕ್ಕೆ ಇಟ್ಟುಕೊಂಡ ಘರವಾಲಿಗೆ ಇಲ್ಲಿ ಶಿಕ್ಷೆಯನ್ನು ನಿಗದಿಪಡಿಸಲಾಗಿದೆ. ಆದರೆ ಆ ಮಗು ಅಲ್ಲಿಗೆ ಬರುವ ಮೊದಲು ಸಾಗಾಣಿಕೆ ಮಾಡಿ ತಂದವರ ವಿರುದ್ಧ(ಅದು ತಂದೆ ತಾಯಿಯಾಗಿರಬಹುದು, ಬಂಧು ಬಳಗದವರಾಗಿರಬಹುದು, ಸ್ನೇಹಿತರಾಗಿರಬಹುದು ಇತ್ಯಾದಿ) ಯಾವುದೇ ಕ್ರಮ ತೆಗೆದುಕೊಳ್ಳುವ ಕುರಿತು ಮಾತನಾಡುವುದಿಲ್ಲ. ಮುಂದುವರೆದು ಪುನರ್ನೆಲೆಯ ಕುರಿತು ಮಾತನಾಡುತ್ತದೆ. ಯಾವ ಬಾಲೆಯನ್ನು ಅವಳ ತಾಯಿಯೇ ಲೈಂಗಿಕ ಜೀತಕ್ಕೆ ಸಾಗಾಣಿಕೆ ಮಾಡಿರುತ್ತಾಳೋ, ಅವಳು ಮತ್ತು ಅವಳ ಬಳಗ, ಅವಳ ಸಮುದಾಯದೊಂದಿಗೆ ಈ ಬಾಲೆ ಪುರ್ನೆಲೆಗೊಳ್ಳಬೇಕು. ಇದು ಎಷ್ಟರ ಮಟ್ಟಿಗೆ ಸಾಧ್ಯವಾಗಬಹುದು. ಯಾರು ಇವರ ಮೇಲ್ವಿಚಾರಣೆ ಮಾಡುತ್ತಿರಬಹುದು? ಆ ಬಾಲೆಯನ್ನು ಅಪ್ಪಿಕೊಂಡು ಸಾಂತ್ವನ ಸಮಾಧಾನ ಹೇಳಿ ಭರವಸೆ ನೀಡಬೇಕಾಗಿದ್ದ ಅವಳ ಬಳಗ, ಅವಳು ಬಂದ ದಿಕ್ಕಿನಲ್ಲಿಯೇ ಅವಳನ್ನು ಮರುಸಾಗಿಸಿರುತ್ತದೆ. ಈ ವಿಷಯವೂ ಸಹ ನಮ್ಮ ಸರ್ಕಾರದ ಗಮನಕ್ಕೆ ಬರುವುದಿಲ್ಲ.

ಪರಿಣಾಮವಾಗಿ ಒಂದು ಬಹುದೊಡ್ಡ ಕಂದಕ, ಸಮುದಾಯ ಮತ್ತು ಸರಕಾರದ ಮಧ್ಯೆ ಏರ್ಪಡುತ್ತಿದೆ. ಸರ್ಕಾರವೇ ರಕ್ಷಿಸಬೇಕಾದ ಮಕ್ಕಳು, ಅನಾಥರಂತೆ ಕಂಡಲ್ಲಿ ಬದುಕು ನಡೆಸಬೇಕಾದ ಅನಿವಾರ್ಯತೆ ಉಂಟಾಗುತ್ತಿದೆ.

"ಒಳ್ಳೆಯದೋ ಕೆಟ್ಟದ್ದೋ, ಹೇಗೋ ಮರಳಿ ಬಂದಿದ್ದೇವೆ. ಯಾವುದೋ ರೋಗ ತಗಲುವ ಮೊದಲು ನಮ್ಮ ಊರಿಗೆ ಬಂದದ್ದು ನಮಗೆ ಸಂತೋಷ ತಂದಿದೆ" ಎಂದು ಬಾಲೆಯರು ಹೇಳುವಲ್ಲಿ ಭರವಸೆಯ ಧೋರಣೆ ಇದೆ. ದುಡಿಯಲು ದೊರೆತ ಅವಕಾಶಗಳನ್ನು ಬಳಸಿಕೊಂಡು, ತಮ್ಮ ಕೌಶಲ್ಯವನ್ನು ಹೆಚ್ಚಿಸಿಕೊಂಡು ಬದುಕುವುದನ್ನು ಗಮನಿಸಿದರೆ ಜೀವನ ಪ್ರೀತಿ ಇದೆ. ಮದುವೆಯಾಗದೇ ಜೊತೆಯಾದವನಿಗೆ ಹುಟ್ಟುವ ಮಕ್ಕಳಿಗೆ ತಮ್ಮ ಹೆಸರನ್ನೇ ಹಚ್ಚಿಕೊಂಡು ಬೆಳೆಸುವ ಹಠದಲ್ಲಿ ಆತ್ಮವಿಶ್ವಾಸವಿದೆ. ಇಂತ ಅದೆಷ್ಟು ಮಕ್ಕಳು ತಮ್ಮ ಬಾಲ್ಯದಲ್ಲಿ ಕಳೆದು ಹೋಗುತ್ತಿದ್ದಾರೋ.

ಕಳೆದು ಹೋದ ಮೇಲೆ ಕಂಡಷ್ಟು ಮಕ್ಕಳ ಪಾರು ಮಾಡಿ ತಂದು ಕಾಯುವುದಕ್ಕಿಂತ, ಕಳೆದು ಹೋಗದಂತೆ ತಡೆಯುವಲ್ಲಿ ಒಂದು ದೊಡ್ಡ ಕಾಳಜಿ ಇದೆ. ತಾವು ಹೆತ್ತಮಕ್ಕಳನ್ನು ಪ್ರೀತಿ ಕಾಳಜಿಯಿಂದ ತಂದೆ ತಾಯಿಗಳು ರಕ್ಷಿಸಿಕೊಳ್ಳಬೇಕು. ಕೆಲಸಕ್ಕೆ ಹೋಗುವ ಅಮ್ಮಂದಿರು ಬಿಟ್ಟು ಹೋಗುವ ಮಕ್ಕಳನ್ನು ಅಂಗನವಾಡಿಯವರು ಕಣ್ಣಲ್ಲಿ ಕಣ್ಣಿಟ್ಟು ಕಾಯ್ದು, ಎರಡು ತುತ್ತು ತಿನ್ನಿಸಿ, ಜೋಗುಳ ಹಾಡಿ ಮಲಗಿಸಬೇಕು. ಅಕ್ಷರ ಕಲಿಯಲು ಶಾಲೆಗೆ ಬಂದ ಮಕ್ಕಳನ್ನು ಜವಾಬ್ದಾರಿಯಿಂದ, ಪ್ರೀತಿ, ಮಮತೆಯಿಂದ ಕಂಡು, ಶಿಕ್ಷಕರು ಅಕ್ಷರವನ್ನು ಕಲಿಸಬೇಕು. ಬಡತನದಿ ವಲಸೆ ಹೋಗುವ ಕುಟುಂಬಗಳ ಗುರುತಿಸಿ, ಊರಲ್ಲಿಯೆ ಆಹಾರ ಹುಡುಕಿಕೊಂಡು ಉಳಿಯುವಂತೆ ಪಂಚಾಯತಿಯು ತನ್ನ ಕರ್ತವ್ಯ ಮೆರೆಯಬೇಕು. ಗ್ರಾಮದ ಬಡವರಿಗೆ ಪಡಿತರ ಚೀಟಿ, ವಸತಿ ಸೌಲಭ್ಯ, ಉದ್ಯೋಗ ದೊರೆಯುವಂತೆ ಪಂಚಾಯತಿಯು ಕಾರ್ಯ ನಿರ್ವಹಿಸಬೇಕು. ಜನ ಪ್ರತಿನಿಧಿಗಳು ತಮ್ಮ ವಾರ್ಡಿನ ಹೆಣ್ಣುಮಕ್ಕಳು ೧೮ ತುಂಬಿದ ಮೇಲೆಯೇ ಮದುವೆಯಾಗುವಂತೆ ಹೆತ್ತವರನ್ನು ಪ್ರೇರೇಪಿಸಬೇಕು. ಮಕ್ಕಳ ರಕ್ಷಣೆ, ಶಿಕ್ಷಣ, ಅಭಿವೃದ್ಧಿಯ ಜವಾಬ್ದಾರಿ ಹೊತ್ತ ಸರ್ಕಾರದ ಎಲ್ಲ ಇಲಾಖೆಗಳೂ ಕಾಳಜಿಯಿಂದ ಜಾಗರೂಕತೆಯಿಂದ ಕಾರ್ಯ ನಿರ್ವಹಿಸಬೇಕು. ಅಂದಾಗ ನಮ್ಮ ಮಕ್ಕಳನ್ನು ನಾವು ಎಲ್ಲೋ ಹುಡುಕಿ, ಎಲ್ಲಿಂದಲೋ ರಕ್ಷಿಸಿ ತರುವ ಅಗತ್ಯವೇ ಬರುವುದಿಲ್ಲ. ಇದು ಚಿಟಕಿ ಹೊಡೆದಷ್ಟೇ ಸುಲಭದ ಕೆಲಸ. ಇದು ನಮ್ಮ ಸಂವಿಧಾನದ ಮೂಲ ಆಶಯ.(ಈ ಅಧ್ಯಾಯದಲ್ಲಿ ಚರ್ಚಿಸಲಾಗಿರುವ ಪ್ರಕರಣಗಳ ವಿವರಣಾತ್ಮಕ ವಿವರವನ್ನು ಅನುಬಂಧ-೨ರಲ್ಲಿ ಗಮನಿಸಬಹುದು.)

### ಉಲ್ಲೇಖಿತ ಗ್ರಂಥಗಳು


೧. ರವೀಂದ್ರನಾಥ ಟ್ಯಾಗೋರ್

೨. ಗ್ಯಾಬ್ರಿಯಲಾ ವಿಸ್ತ್ರೆಲ್, ಚಿಲಿ ದೇಶದ ನೊಬೆಲ್ ಪುರಸ್ಕೃತರು, ಭಾಷಣದಲ್ಲಿ ಹೇಳಿದ್ದು.

೩. Pandey S.P., Awadesh Kr.Singh, and Sanjay Kr. Paney., (2008), Rehabilitation of disadvanced Children and Women Sex Workers,Ministery of Women and Child Development , Social Justice and Empowerment, Govt. of India. Pp.10-11

೪. ಸೇವ್ ಅವರ್ ಸಿಸ್ಟರ್ಸ್, (೨೦೦೯), ಮಾಹಿತಿ ಪತ್ರ, ಮುಂಬಯಿ. ಪು. ೧

೫. ಶ್ರೀಮತಿ, ಎಚ್. ಎಸ್., (೨೦೦೧), ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪು. ೨೬೨-೨೬೯

೬. Sumati Karmakar.( 2001), Redlight Area Social Environment of Sex workers, Dominant Publishers, Pp. 99-100

## ಅಧ್ಯಾಯ ಒಂಬತ್ತು

# ಅಧ್ಯಯನದ ಸಾರಾಂಶ ಮತ್ತು ತಾತ್ಕಾಲಿಕ ನಿರ್ಧಾರಗಳು

ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನವು ಅರ್ಥಮಾಡಿಕೊಂಡ ವಿಷಯವನ್ನು ಇಡಿಯಾಗಿ ಒಂದೆಡೆ ತರುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹೀಗೆ ಮಾಡುವಾಗ ನಮ್ಮ ಕ್ಷೇತ್ರ ಅಧ್ಯಯನವನ್ನು ಆಧರಿಸಿ, ನಮಗೆ ಸ್ಪಷ್ಟವಾದ ಗುಣಾತ್ಮಕ ಮತ್ತು ವಿವರಣಾತ್ಮಕವಾದ ಮಾಹಿತಿಗಳ ಆಧಾರದಲ್ಲಿ ಕೆಲವು ತಾತ್ಕಾಲಿಕ ನಿಲುವುಗಳಿಗೆ ಇಲ್ಲಿ ಬರಲಾಗಿದೆ. ಹೀಗೆ ನಮ್ಮ ನಿಲುವುಗಳನ್ನು ಇಲ್ಲಿ ಸ್ಪಷ್ಟಪಡಿಸುವಾಗ ಲೈಂಗಿಕ ಜೀತಕ್ಕೆ ಒಳಗಾದ ಬಾಲೆಯರ ಮತ್ತು ಒಳಗಾಗಬಹುದಾದ(ಅಪಾಯದಂಚಿನಲ್ಲಿರುವ) ಬಾಲೆಯರನ್ನು ಗುರಿಯಾಗಿಸಿಕೊಂಡು ಮುಂದೆ ಯಾವ ಕಾರ್ಯಯೋಜನೆಗಳನ್ನು ಮಾಡಬಹುದು ಎಂಬ ಸೂಚನೆಗಳನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

ಡಾ. ಬಿ.ಆರ್. ಅಂಬೇಡ್ಕರ್ ಅವರು ಸಂವಿಧಾನ ಸಭೆಯಲ್ಲಿ ನವೆಂಬರ್ ೨೫, ೧೯೪೯ರಂದು ಮಾಡಿದ ತಮ್ಮ ಭಾಷಣದಲ್ಲಿ ಹೀಗೆ ಹೇಳುತ್ತಾರೆ, "ಜನವರಿ ೨೬, ೧೯೫೦ರಂದು ನಾವು ವೈರುಧ್ಯಗಳ ಒಂದು ಬದುಕಿಗೆ ಅಡಿ ಇಡುತ್ತಿದ್ದೇವೆ. ರಾಜಕೀಯದಲ್ಲಿ ಸಮಾನತೆ ಇರುತ್ತದೆ. ಆದರೆ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿ ಅಸಮಾನತೆ ಇರುತ್ತದೆ. ರಾಜಕೀಯವಾಗಿ ಒಬ್ಬ ವ್ಯಕ್ತಿ ಒಂದು ಮತ ಹಾಗೂ ಒಂದು ಮತ, ಒಂದು ಮೌಲ್ಯ ಎನ್ನುವ ತತ್ವವನ್ನು ಮಾನ್ಯ ಮಾಡುತ್ತೇವೆ. ಆದರೆ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ, ನಮ್ಮ ಸಾಮಾಜಿಕ ಮತ್ತು ಆರ್ಥಿಕ ರಚನೆಯಿಂದಾಗಿ, ಒಬ್ಬ ವ್ಯಕ್ತಿ ಒಂದು ಮೌಲ್ಯ ಎನ್ನುವ ತತ್ವದ ನಿರಾಕರಣೆಯನ್ನು ಮುಂದುವರೆಸುತ್ತೇವೆ" ಎಂದು ಅವರು ಹೇಳಿದ್ದರು. ಇದಕ್ಕೆ ಮುಖ್ಯ ಕಾರಣ ಭಾರತದಲ್ಲಿ ಬೇರೂರಿರುವ ಜಾತಿಪದ್ಧತಿ ಇರಬಹುದೇನೋ. ಏಕೆಂದರೆ, ಇಂದಿಗೂ ಜಾತಿಯೆಂಬ ಪಿಡುಗು ಮನುಕುಲವನ್ನು ಅವಮಾನದಲ್ಲಿ ಬೇಯುವಂತೆ ಮಾಡುತ್ತಿದೆ. "ಸ್ತ್ರೀಯರು, ಆದಿವಾಸಿಗಳು, ಶೂದ್ರರು, ಹರಿಜನರು ಹಾಗೂ ಮುಸಲ್ಮಾನರೊಳಗಿನ ಹಿಂದುಳಿದ ವರ್ಗಗಳ ಅಧಃಪತನಕ್ಕೆ ಜಾತಿಪದ್ಧತಿಯೇ ಮೂಲ ಕಾರಣವೆಂದು ಭಾವಿಸಬೇಕಾಗುತ್ತದೆ" ಎಂದು ಲೋಹಿಯಾ ಅವರು ಅಭಿಪ್ರಾಯ ಪಡುತ್ತಾರೆ(ಲೋಹಿಯಾ.೧೯೮೭)[೧] ಜಾತಿಯ ಕಾರಣಕ್ಕಾಗಿಯೇ ಬಹುಪಾಲು ಮಕ್ಕಳು ಲೈಂಗಿಕ ಜೀತಕ್ಕೆ ಬಲಿಯಾಗುತ್ತಿರುವುದನ್ನು ಕಂಡಾಗ ಈ ಮಾತುಗಳು

ಸತ್ಯವೆನ್ನಿಸುತ್ತವೆ. ಏಕೆಂದರೆ ಲೈಂಗಿಕತೆ, ಲೈಂಗಿಕ ಸುಖ ಎಂಬುದರ ಅರ್ಥವೇ ಗೊತ್ತಿರದ, ಹೇಳಿದರೂ ಅರ್ಥವಾಗದ ಅತ್ಯಂತ ಮುಗ್ಧ ಮತ್ತು ಅಮಾಯಕ ಮಕ್ಕಳನ್ನು ಭಾರತದಲ್ಲಿ ಲೈಂಗಿಕ ಜೀತಕ್ಕಾಗಿ ತಳ್ಳಲಾಗುತ್ತಿದೆ. ಅದಕ್ಕೆ ಭಾರತದಲ್ಲಿ ಆಚರಣೆಯಲ್ಲಿರುವ ಜಾತಿ ಆಧಾರಿತ ವಿಕಾರಗಳು ಪ್ರಮುಖವಾಗಿವೆ.

ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರ ವಿವರಗಳನ್ನು ಸೂಕ್ಷ್ಮವಾಗಿ ವಿಶ್ಲೇಷಣೆ ಮಾಡಿದರೆ, ಭಾರತದಲ್ಲಿರುವ ಜಾತಿ ಪದ್ಧತಿ ಅತ್ಯಂತ ಪ್ರಮುಖ ಸ್ಥಾನ ವಹಿಸುತ್ತಿರುವುದು ಕಂಡುಬರುತ್ತಿದೆ. ಬಡತನ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ವಿಷಚಕ್ರವಾಗಿ ಕಾಡುತ್ತಿರುವುದನ್ನು ಅನೇಕ ಸಮಾಜ ಶಾಸ್ತ್ರೀಯ ಸಂಶೋಧನೆಗಳು ಈಗಾಗಲೇ ಗುರುತಿಸಿವೆ. ಈ ಬಡತನವು ಮಹಿಳೆಯರ ವಿಷಯಕ್ಕೆ ಬಂದಾಗ ಹೆಚ್ಚು ವಿಕಾರವಾಗುತ್ತದೆ ಎನ್ನುವುದನ್ನು 'ಬಡತನದ ಲಿಂಗೀಕರಣ' ಎಂಬ ಪರಿಕಲ್ಪನೆಯ ಮೂಲಕ ಅಮಾರ್ತ್ಯಸೇನ್ ಗುರುತಿಸಿದ್ದಾರೆ. ಬಡತನವು ಬಹುತೇಕ ಸಮಯದಲ್ಲಿ ಮಹಿಳೆಯರು ಹೆಚ್ಚು ಸಮಯ ದುಡಿಯುವಂತೆ ಮಾಡುವುದರ ಜೊತೆಗೆ ಅಪಾಯಕಾರಿ ದುಡಿಮೆಗೆ ಮಹಿಳೆಯರನ್ನು ತಳ್ಳುತ್ತದೆ ಎನ್ನುವುದು 'ಬಡತನದ ಲಿಂಗೀಕರಣ' ಎನ್ನುವ ಪರಿಕಲ್ಪನೆಯ ವಾದ. ಹೆಚ್ಚು ಕಡಿಮೆ ನಾವು ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರ ಜೊತೆ ನಡೆಸಿದ ಸಂವಾದಗಳಲ್ಲಿ, ನಾವು ಕಂಡಿದ್ದು ಇದನ್ನೇ. ಬಡತನದ ಕಾರಣದಿಂದಾಗಿ ಹಸಿವು ಮತ್ತು ದೌರ್ಜನ್ಯದಿಂದ ಹೊರಬರುವ ಕಾರಣಕ್ಕಾಗಿ, ಅಪ್ರಾಪ್ತ ವಯಸ್ಸಿನಲ್ಲಿ, ತಮ್ಮನ್ನೇ ತಾವು ಅಪಾಯಕ್ಕೆ ಒಡ್ಡಿಕೊಂಡಿರುವ ಮಹಿಳೆಯರೇ ನಮ್ಮ ವಕ್ತೃಗಳು. ನಮ್ಮ ವಕ್ತೃಗಳಲ್ಲಿ ಹೆಚ್ಚಿನವರು ಅಂದರೆ ಶೇಕಡಾ ೯೮ರಷ್ಟು ಲೈಂಗಿಕ ಜೀತಕ್ಕೆ ಒಳಗಾದವರು ಪರಿಶಿಷ್ಟ ಜಾತಿಗೆ ಸೇರಿದ ಮಹಿಳೆಯರೇ ಆಗಿದ್ದಾರೆ. ಈ ಸೋಜಿಗವನ್ನು ನಾವು ಮತ್ತೆ ಮತ್ತೆ ಕೆದಕಿಕೊಳ್ಳಬೇಕಾದ ಅಗತ್ಯವಿದೆ. ಮತ್ತೆ ಮತ್ತೆ ಎನ್ನುವುದನ್ನು ಯಾಕೆ ಇಲ್ಲಿ ಬಳಸುತ್ತಿದ್ದೇವೆ ಅಂದರೆ, ಜಾತಿಯ ವಿಕಾರಗಳು, ಜಾತಿ ಶ್ರೇಣೀಕರಣದ ವಿಕಾರಗಳು, ಧರ್ಮದ ವಿರೂಪಗಳು ಹೇಗಿರುತ್ತವೆ ಎನ್ನುವುದಕ್ಕೆ ಅಂಬೇಡ್ಕರ್ ಅವರ ಬರವಣಿಗೆಗಳಲ್ಲಿ ಬಹಳ ಪ್ರಖರವಾಗಿ ಕಾಣಸಿಗುತ್ತವೆ. ಆದರೆ ನಮ್ಮ ಅಧ್ಯಯನವು ಕಂಡುಕೊಂಡ ಸತ್ಯವನ್ನು ಮತ್ತು ಅಂಬೇಡ್ಕರ್ ಅವರು ಜಾತಿ ದೌರ್ಜನ್ಯಗಳ ವಿರುದ್ಧ ಎತ್ತಿದ ಪ್ರಶ್ನೆಯನ್ನು ಮತ್ತೆ ಗಟ್ಟಿಗೊಳಿಸುವ ಸಲುವಾಗಿ, ಲೈಂಗಿಕ ಜೀತ, ಲೈಂಗಿಕ ದಂಧೆಯಂತಹ ಅಮಾನವೀಯ ಪರಿಸ್ಥಿತಿಯಲ್ಲಿ ಬೇಯುವ ಸ್ಥಿತಿ, ಬಹುಪಾಲು ಪರಿಶಿಷ್ಟ ಜಾತಿಯ ಹೆಣ್ಣುಮಕ್ಕಳಿಗೇ ಯಾಕೆ ಬರುತ್ತದೆ? ಎಂದು ಹುಡುಕುತ್ತಾ ಹೊರಟಾಗ, ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರ ಜೊತೆಗೆ ನಡೆಸಿದ ಸಂವಾದದಲ್ಲಿ ಬಂದ ಅಭಿಪ್ರಾಯವಿದು. *"ಎಲ್ಲೋ ಸಿಟಿ ಊರಾಗ ಆಟೀಟು ಬದಲಾಗಿರ್ಬೋದು. ಆದ್ರ ಹಳ್ಳೀ ಊರಾಗ, ನಮ್ಮನ್ನ ಕೂಲಿ ಕೆಲಸ ಬಿಟ್ಟರ ಬ್ಯಾರೆ ಯಾವ ಕೆಲಸಕ್ಕೂ ಕರ್ಕಳಂಗಿಲ್ಲ. ನಮ್ಮ ಗಂಡುಮಕ್ಕಳ ತಲೀ ಕೂದಲಾ ಸೂದ ಕಟ್ಟ ಮಾಡಂಗಿಲ್ರೀ. ನಮ್ಮ ಹುಡುಗರು ಅಂಗಡಿಗೆ ಹೋದಾಗನ, ತಲೀ ಕೂದಲಾ ಕತ್ತರಿಸ್ಕೊಂಡು ಬರ್ಬೇಕು. ಇನ್ನೂವರೆಗೂ ಊರವರ ಮನಿಯೊಳಗ ನಮಗಾಗಿ ಬ್ಯಾರೇನ ವಾಟಿ ಬಟ್ಲ ಇಟ್ಟಿರ್ತಾರ. ನಮಗೇನರ ಅವರ ತಿನ್ನಾಕ ಕುಡ್ಯಾಕ ಕೊಟ್ರ, ಅದ್ರಾಗ ತಿಂದು, ಕುಡುದ ತೊಳ್ದು ಅಲ್ಲೇ ಮಾಡಸ್ಯಾಗ ಇಟ್ಟು ಬರ್ಬೇಕು. ಇನ್ನ ನಾವ ಏನ ವ್ಯಾಪಾರ, ವ್ಯವಹಾರ ಮಾಡಾಕ ಸಾಧ್ಯ ಐತಿ ಹೇಳ್ರಿ. ಬರಗಾಲ ಬಿದ್ರ ಸಿಗೋ ಕೂಲಿ ಕೆಲಸಾನೂ ಹೋಂತಾ ಆಕ್ಕೈತಿ. ಅಂತಾ ಹೊತ್ತಿನ್ಯಾಗ ನಮ್ಮ ಅಪ್ಪ*

*ಅವ್ವಗ ನಾವು ಒಂದು ಆಸ್ತೀನ ಆಗಿರ್ತೇವಿ. ನಮ್ಮ ವಯಸ್ಸು ಏಟ ಐತಿ ಅಂತ ಸೂದ ಅವರು ವಿಚಾರ ಮಾಡಂಗಿಲ್ಲ. ದಂಧೆ ಮಾಡಾಕ ಹೋದವ್ರ ಹಿಂದ ಬೆನ್ನ ಹಚ್ಚಿಸೇ ಬಿಡ್ತಾರ*" ಎಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದರು.

ಜಾತಿ ಮತ್ತು ಧರ್ಮ ರೂಪಿಸಿದ ನಂಬಿಕೆ ಮತ್ತು ಆಚರಣೆಗಳು ಶೇಕಡಾ ೭೩ರಷ್ಟು ಮಹಿಳೆಯರನ್ನು ಲೈಂಗಿಕ ಜೀತಕ್ಕೆ ನೂಕಿವೆ ಎನ್ನುವುದು ನಮ್ಮ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ವಿಶೇಷವಾಗಿ ಪರಿಶಿಷ್ಟ ಜಾತಿಗೆ ಸೇರಿದ ಹೊಲೆಯ ಮತ್ತು ಮಾದಿಗರಲ್ಲಿ ದೇವರು ಮತ್ತು ದೈವದಲ್ಲಿ ಹೆಚ್ಚು ನಂಬಿಕೆಗಳನ್ನು ಹುಟ್ಟಿಸಿ ಅವರನ್ನು ಧರ್ಮ ಮತ್ತು ದೇವರ ಹೆಸರಿನಲ್ಲಿ ಕಟ್ಟಿ ಹಾಕಲಾಗುತ್ತದೆ. ಕಟ್ಟಿ ಹಾಕುವ ಮೂಲಕ ಅವರ ಏಳು ಮತ್ತು ಬೀಳು ವೈಜ್ಞಾನಿಕವಾಗಿ ನಡೆಯುತ್ತಿಲ್ಲ. ಬದಲಾಗಿ ಅದು ದೇವರ ಆಶೀರ್ವಾದ ಮತ್ತು ನಂಬಿಕೆಯಿಂದ ನಡೆಯುತ್ತದೆ ಎಂಬುದನ್ನು ಪ್ರಬಲವಾಗಿ ಪ್ರತಿಪಾದಿಸುತ್ತಿರುವುದು ಕಂಡುಬರುತ್ತಿದೆ. ಅದಕ್ಕೆ ದೇವದಾಸಿ ಆಚರಣೆ ನಿಷೇಧಗೊಂಡು ೩೪ ವರ್ಷ ಕಳೆದರೂ, ಅದನ್ನು ಇನ್ನೂ ತಡೆಯಲಾಗದ ಸ್ಥಿತಿಯಲ್ಲಿ ನಾವು ಇದ್ದೇವೆ ಎಂದರೆ, ನಮ್ಮ ಸಂವಿಧಾನಕ್ಕೆ ಸವಾಲೊಡ್ಡುವಂತೆ, ಧರ್ಮ ಮತ್ತು ಧರ್ಮದ ವಿಕಾರಗಳು ತಳಮಟ್ಟದಲ್ಲಿ ಯಾವ ಮಟ್ಟಿಗೆ ಭದ್ರವಾಗಿ ಉಳಿದಿವೆ ಎಂಬುದನ್ನು ತಿಳಿಸುತ್ತದೆ. ಈ ಕುರಿತು ನಾವು ಅಧ್ಯಯನಕ್ಕೊಳಪಡಿಸಿದ ಮಹಿಳೆಯರು, "ಒಂದೊಮ್ಮೆ ನಾವು ಈ ಕೆಳಜಾತಿಯಲ್ಲಿ ಜನಿಸದೇ ಹೋಗಿದ್ದರೆ, ನಮ್ಮನ್ನು ದೇವದಾಸಿ ಪದ್ಧತಿಗೆ ತಳ್ಳುತ್ತಿರಲಿಲ್ಲ. ದೇವದಾಸಿಯಾಗಿರದಿದ್ದರೆ ನಮ್ಮನ್ನು ಈ ಲೈಂಗಿಕ ಜೀತಕ್ಕೆ ಬಲಿಯಾಗಿಸುವ ಪ್ರಮೇಯವೂ ಇರುತ್ತಿರಲಿಲ್ಲ" ಎಂದು ಗಟ್ಟಿ ಧ್ವನಿಯಲ್ಲಿಯೇ ಹೇಳುತ್ತಾರೆ. ಹಸಿವಿನ ಅಸಹಾಯಕತೆ ಹೇಗೆ ತಳಜಾತಿಯ ಹೆಣ್ಣುಮಕ್ಕಳನ್ನು ಲೈಂಗಿಕ ದೌರ್ಜನ್ಯಕ್ಕೆ, ತಳ್ಳುತ್ತದೆ ಎನ್ನುವುದನ್ನು ಕುರಿತು ಅಧ್ಯಯನ ಮಾಡಿದ ಎಚ್.ಡಿ. ಪ್ರಶಾಂತ್ ಇವರು, ತಮ್ಮ ಒಂದು ಅಧ್ಯಯನದಲ್ಲಿ ಹೀಗೆ ಹೇಳುತ್ತಾರೆ, "ತಳಜಾತಿಗೆ ಸೇರಿದ ಸಮುದಾಯದಲ್ಲಿ ದೇವದಾಸಿ ಆಚರಣೆ ಇನ್ನೂ ಇದೆ. ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿ ಎಂಬ ಹಳ್ಳಿಯಲ್ಲಿ, ಇಬ್ಬರು ಹೆಣ್ಣುಮಕ್ಕಳನ್ನು ಇತ್ತೀಚೆಗೆ ಎರಡ್ಮೂರು ವರ್ಷಗಳ ಹಿಂದಷ್ಟೇ ದೇವದಾಸಿ ಯರನ್ನಾಗಿ ಮಾಡಲಾಗಿದೆ. ಇವರಿಬ್ಬರು ಹೆಣ್ಣುಮಕ್ಕಳು ಕಡುಬಡವರಾಗಿದ್ದು, ಕೃಷಿ ಕೂಲಿಕಾರರಾಗಿದ್ದಾರೆ. ಅಕ್ಷರ ಕಲಿಯದ ಈ ಹೆಣ್ಣುಮಕ್ಕಳು ಕೆಲಸಕ್ಕೆಂದು ಹೋದಾಗ, ಪಟ್ಟಭದ್ರ ಹಿತಾಸಕ್ತಿಗಳು, ಲೈಂಗಿಕವಾಗಿ ಇವರನ್ನು ದುರ್ಬಳಕೆ ಮಾಡಿಕೊಳ್ಳುತ್ತವೆ. ಆ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ಧ್ವನಿ ಎತ್ತಲಾಗದ ಕುಟುಂಬ ದವರು, ಸಮುದಾಯದ ಹಿರಿಯರು, ಅವರಿಗೆ ಮುತ್ತು ಕಟ್ಟಿ ದೇವದಾಸಿ ಮಾಡುತ್ತಾರೆ" ಎಂದು ಹೇಳುತ್ತಾರೆ. ಅವರ ಪ್ರಕಾರ, "ಈ ಹೆಣ್ಣುಮಕ್ಕಳ ದೇವದಾಸಿ ಸಮರ್ಪಣೆಯು ಕೇವಲ ಸಂಪ್ರದಾಯ ನಂಬಿಕೆಯಿಂದ ಆದುದಲ್ಲ. ಬದಲಾಗಿ, ಆ ಹಳ್ಳಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ರಾಜಕಾರಣಗಳಿಂದಾಗಿ ಆಗಿದೆ" ಎಂಬುದಾಗಿದೆ(ಎಚ್.ಡಿ. ಪ್ರಶಾಂತ್, ೨೦೦೯).[೨]

ಕಾನೂನುಗಳ ಅರಿವಿದ್ದವರು, ಇಲ್ಲದವರು ಯಾರೂ ದೇವದಾಸಿ ಪದ್ಧತಿಯ ಆಚರಣೆ ತಪ್ಪು ಎಂಬ ಕುರಿತು ಚಿಂತಿಸುವುದೇ ಇಲ್ಲ. ಯಾಕೆಂದರೆ, ಕಾನೂನು ಜಾರಿಗೊಂಡು ೩೪ ವರ್ಷ ಕಳೆದಿವೆ.

ಇದುವರೆಗೂ ನ್ಯಾಯಾಲಯದವರೆಗೆ ಹೋದ ಪ್ರಕರಣಗಳು ಬೆರಳೆಣಿಕೆಗೂ ನಿಲುಕುವುದಿಲ್ಲ. ಘಟಪ್ರಭಾದ ಮಾಸ್ ಸಂಸ್ಥೆಯು ತಿಳಿಸುವ ಪ್ರಕಾರ, ೧೯೯೦ ಜನವರಿಯವರೆಗೂ ಯಾವುದೇ ಪ್ರಕರಣ ದಾಖಲಾಗಿರುವುದಿಲ್ಲ. ಆದರೆ ಫೆಬ್ರುವರಿ ೧೯೯೦ ರಿಂದ ೧೯೯೨ರವರೆಗೆ ಸವದತ್ತಿ ಪೋಲೀಸ್ ಠಾಣೆಯಲ್ಲಿ ಒಟ್ಟು ೩೪ ಪ್ರಕರಣಗಳು ದಾಖಲಾಗಿದ್ದವು. ಇವುಗಳನ್ನು ಪೋಲೀಸರೇ ನೇರವಾಗಿ ದಾಖಲು ಮಾಡಿದ್ದರು. ಇದಕ್ಕೆ ಮಹಿಳಾ ಅಭಿವೃದ್ಧಿ ನಿಗಮದಿಂದ ಒಂದು ಪ್ರಕರಣ ದಾಖಲಾದರೆ ೧೦೦ ರೂಪಾಯಿ ಪ್ರೋತ್ಸಾಹ ಧನ ನೀಡಿದ್ದೂ ಕೂಡ ಕಾರಣವಾಗಿತ್ತೆಂದು ಮಾಸ್ ಸಂಸ್ಥೆ ಅಭಿಪ್ರಾಯಪಡುತ್ತದೆ. ಇದರ ನಂತರ ೨೦೦೭ರವರೆಗೆ ಮಾಸ್ ಸಂಸ್ಥೆಯು ತನ್ನ ಗುಪ್ತ ದಳದ ಸಹಾಯದಿಂದ ಮತ್ತೆ ೧೩ ಪ್ರಕರಣಗಳನ್ನು ದಾಖಲು ಮಾಡುವಲ್ಲಿ ಯಶಸ್ವಿಯಾಗಿತ್ತು. ಅಂದರೆ ಒಟ್ಟು ದಾಖಲಾದ ಪ್ರಕರಣಗಳು ೪೭. ಇದರಲ್ಲಿ ಒಂದು ಪ್ರಕರಣದಲ್ಲಿ ಆರೋಪಿಯಾದವಳು ತುಂಬಾ ವಯಸ್ಸಾದವಳು ಎಂದು ಹಾಗೆಯೇ ಬಿಡಲಾಯಿತು. ಮತ್ತೊಂದು ಪ್ರಕರಣದಲ್ಲಿ ೩ ಮತ್ತು ೪ನೇ ಆರೋಪಿಗಳಿಗೆ ತಲಾ ೧೦೦೦ ಸಾವಿರ ರೂಪಾಯಿ ದಂಡ ವಿಧಿಸಲಾಯಿತು. ಉಳಿದವರಿಗೆ ಸಾಕ್ಷಿ ಸರಿ ಇರಲಿಲ್ಲವೆಂದು ಬಿಡುಗಡೆಗೊಳಿಸಲಾಯಿತು. ಇನ್ನು ಮೂರು ಪ್ರಕರಣಗಳು ನ್ಯಾಯಾಲಯದಲ್ಲಿವೆ. ಇನ್ನು ಉಳಿದ ೪೨ ಪ್ರಕರಣಗಳಿಗೆ ಸರಿಯಾದ ಸಾಕ್ಷಿಗಳು ಇರಲಿಲ್ಲವೆಂಬ ಕಾರಣಕ್ಕೆ ಖುಲಾಸೆ ಮಾಡಲಾಗಿದೆ(ಹೀಗೊಂದು ಪಯಣ, ೨೦೦೮).[೩]

ಪರಿಸ್ಥಿತಿ ಹೀಗಿರುವಾಗ ತಮ್ಮ ಮಕ್ಕಳನ್ನು ದೇವಾದಾಸಿ ಮಾಡದೆ ಇರುವುದಕ್ಕೆ, ಪಾಲಕರು ಯಾವ ಕಾರಣಕ್ಕಾಗಿ ಹೆದರಬೇಕು? ಸಮುದಾಯದ ದೈವದ ಜನರು ಅಡ್ಡಿಪಡಿಸುತ್ತಾರಲ್ಲವೇ, ಅವರಿಗೆ ದಂಡ ಕಟ್ಟಿದರೆ ಮುಗಿಯಿತು. ಯಾವ ವಯಸ್ಸಿನ ಹುಡುಗಿ ಬೇಕಾದರೂ ದೇವದಾಸಿಯಾಗಬಹುದು. "ಉತ್ತರ ಕರ್ನಾಟಕದ ೧೩ ಜಿಲ್ಲೆಗಳಲ್ಲಿ ದೇವದಾಸಿ ಆಚರಣೆ, ಮುತ್ತುಕಟ್ಟುವ ಪದ್ಧತಿ ದೇವಸ್ಥಾನದ ಅಂಗಳದಿಂದ ಹೊರ ಬಂದಿತೇ ಹೊರತು; ಪದ್ಧತಿ ಆಚರಣೆ ಮಾತ್ರ ತೆರೆಯಲ್ಲಿ ಇನ್ನೂ ಚಾಲ್ತಿಯಲ್ಲಿ ಇದೆ ಎನ್ನುವುದಕ್ಕೆ ಕೊಪ್ಪಳ ಜಿಲ್ಲೆಯಲ್ಲಿ ಇರುವ ದೇವದಾಸಿ ತಾಯಂದಿರೇ ಜೀವಂತ ಸಾಕ್ಷಿ" ಎಂದು ವಿಮುಕ್ತಿ ದೇವದಾಸಿ ವೇದಿಕೆಯ ಯುವಕರಾದ ಚಂದಾಲಿಂಗ ಕಲಾಲಬಂಡಿ ಮತ್ತು ಸ್ನೇಹಿತರು ಮಾಧ್ಯಮಗಳಿಗೆ ಹೇಳುತ್ತಾರೆ(ಪ್ರಜಾವಾಣಿ, ೨೦೧೭).[೪]

ನ್ಯಾಯಮೂರ್ತಿ ಎನ್ ಸಂತೋಷ್ ಹೆಗ್ಡೆ ಇವರು ಹೇಳುವಂತೆ, "ಮಕ್ಕಳ ಹಕ್ಕುಗಳ ರಕ್ಷಣೆಗೆ ನಮ್ಮಲ್ಲಿ ಸಾಕಷ್ಟು ಕಾನೂನುಗಳು ಇವೆ. ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆ, ಬಾಲ್ಯವಿವಾಹ ತಡೆ ಹಾಗೂ ಶಿಕ್ಷಣದ ಹಕ್ಕಿನ ರಕ್ಷಣೆಗೆ ಈಗಾಗಲೇ ಸಾಕಷ್ಟು ಬಲವಾದ ಕಾನೂನುಗಳು ಭಾರತದಲ್ಲಿ ಇವೆ. ದುರಂತವೆಂದರೆ ಈ ಕಾನೂನುಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಲ್ಲಿ ನಾವು ವಿಫಲರಾಗುತ್ತಿರುವುದು. ಕಾನೂನುಗಳ ಜೊತೆಗೆ ಮಕ್ಕಳ ಹಕ್ಕುಗಳ ಸಂರಕ್ಷಣೆ ಮಾಡುವ ಸಲುವಾಗಿಯೇ ನಮ್ಮ ಸರ್ಕಾರಿ ವ್ಯವಸ್ಥೆಯಲ್ಲಿ ಇಲಾಖೆಗಳು ಇವೆ. ಅಧಿಕಾರಿಗಳು ಇದ್ದಾರೆ. ಆದರೆ ಇಲಾಖೆ ಮತ್ತು ಅಧಿಕಾರಿಗಳು ತಮ್ಮ ಜವಾಬ್ದಾರಿಯನ್ನು ಸಮಗ್ರವಾಗಿ ಅರಿಯದೇ ಹೋದಲ್ಲಿ ಕಾನೂನುಗಳು ಇದ್ದರೂ

ಪ್ರಯೋಜನವಿಲ್ಲ. ಎಂದು ಅವರು ಹೇಳುತ್ತಾ, "ಮಕ್ಕಳ ಹಕ್ಕುಗಳ ಸಂರಕ್ಷಣೆಗೆ ಎಂದೇ ನಮ್ಮಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಇದೆ. ಆದರೆ ಆ ಇಲಾಖೆಯು ಅಷ್ಟು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತಿಲ್ಲ" ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ(ಪುಟ್ಟ ಹೆಜ್ಜೆ: ಸದ್ದು ಕೇಳಿ, ೨೦೧೫)[೬] ಇದಕ್ಕೆ ಉದಾಹರಣೆ ಮೇಲೆ ಚರ್ಚಿಸಿದ ಕರ್ನಾಟಕ ದೇವದಾಸಿ ಸಮರ್ಪಣಾ ನಿಷೇಧ ಕಾಯಿದೆಯ ಅನುಷ್ಠಾನ ಮತ್ತು ಅದರ ವಿಫಲತೆ.

ಸುಮಾರು ೪ ತಲೆಮಾರುಗಳಿಂದ ಮುಂಬಯಿಯಲ್ಲಿಯೇ ಇರುವ ಬಾಗಲಕೋಟೆ ಜಿಲ್ಲೆಯ ದೇವದಾಸಿ ಮೂಲದ ಕುಟುಂಬದ ಹೆಣ್ಣುಮಗಳೊಬ್ಬಳು, "ದೇವದಾಸಿ ಬಿಡುವುದು ಕಡಿಮೆಯಾಗಿರಬಹುದು ಆದರೆ ಪೂರ್ಣ ನಿಂತಿಲ್ಲ. ನಿಲ್ಲುವುದೂ ಇಲ್ಲ. ಈಗ ಬೇರೆ ಬೇರೆ ಕಾರಣಗಳಿಂದಾಗಿ ಕಾಮಾಟಿಪೂರದಲ್ಲಿ ಕನ್ನಡದ ಹುಡುಗಿಯರು ಕಡಿಮೆ ಆಗಿದ್ದಾರೆ ಅನ್ನಿಸಬಹುದು. ಅದಕ್ಕೆ ಬದಲಾಗಿ ಮಿರಜ್, ಸಾಂಗ್ಲಿ, ಕೊಲ್ಲಾಪೂರ, ಕರಾಡ, ಸಾತಾರಾ, ಇಸ್ಲಾಂಪೂರ, ಪುಣೆ, ಕಲ್ಯಾಣ, ಬೀವಂಡಿ ಇದೊಂದು ರೆಡ್ ಲೈಟ್ ಏರಿಯಾಗಳ ದೊಡ್ಡ ಹಂದರ. ಅತೀ ಕಡಿಮೆ ಖರ್ಚಿನಲ್ಲಿ ಟ್ರೇನ್ ಹತ್ತಿ ಓಡಾಡಬಹುದು. ಕಾಮಾಟಿಪುರ, ಬೀವಂಡಿ, ಗ್ರ್ಯಾಂಟ್ ರೋಡ್‌ಗಳಲ್ಲಿ ಕಡಿಮೆ ಅನ್ನಿಸಿದ ಹುಡುಗಿಯರು ಮೇಲೆ ತಿಳಿಸಿದ ಸ್ಥಳಗಳಲ್ಲಿ ಹರಿದು ಹಂಚಿ ಹೋಗಿರಬಹುದು. ಹಾಗೆಯೇ ಇನ್ನೊಂದು ಆತಂಕಕಾರಿ ಬೆಳವಣಿಗೆ ಅಂದರೆ ಇಲ್ಲಿಂದ ಹೋದ ಹೆಣ್ಣುಮಕ್ಕಳು ಇದೇ ಮಾದರಿಯ ಲೈಂಗಿಕ ದಂಧೆಯನ್ನು ತಮ್ಮ ತಮ್ಮ ಊರುಗಳಲ್ಲಿ, ತಾಲ್ಲೂಕಾ ಪ್ರದೇಶಗಳಲ್ಲಿ ನಡೆಸುತ್ತಿರಬಹುದು". ಎಂದು ವಿವರಿಸುತ್ತಾರೆ.

ಬಿಜಾಪೂರ ಜಿಲ್ಲೆಯ ಕೆಲವು ಗ್ರಾಮಗಳ ಮಹಿಳೆಯರು ಕಾಮಾಟಿಪುರ ಬಿಟ್ಟು ಬಂದ ಮೇಲೆ, ಆಲಮಟ್ಟಿ ಬಳಿ ದಾಬಾ ನಡೆಸುವುದರ ಮೂಲಕ ಹೆಣ್ಣುಮಕ್ಕಳನ್ನು ಇಟ್ಟುಕೊಂಡು ದಂಧೆ ಮಾಡುತ್ತಿದ್ದರೆಂದು ಮಹಿಳೆಯರು ತಮ್ಮ ಪ್ರಕರಣ ಅಧ್ಯಯನಗಳಲ್ಲಿ ತಿಳಿಸುತ್ತಾರೆ. ಈ ದಾಬಾಗಳಿಗೆ ಬಿಜಾಪೂರ, ಬಾಗಲಕೋಟೆ ಜಿಲ್ಲೆಗಳ ಮತ್ತು ಬೆಳಗಾವಿ ಜಿಲ್ಲೆಯ ಮಹಿಳೆಯರು ಬರುತ್ತಿದ್ದರೆಂದು ಮಾಹಿತಿ ದೊರೆಯುತ್ತದೆ. ಇದರ ಜೊತೆಗೆ ಬಿಜಾಪೂರದಲ್ಲಿ ದಂಧೆ ನಡೆಸುವ ಕೆಲವು ಮನೆಗಳಿದ್ದು, ಅಲ್ಲಿಗೂ ಸಹ ಗ್ರಾಮೀಣ ಮಹಿಳೆ ಮತ್ತು ಮಕ್ಕಳ ಸರಬರಾಜು ಆಗುತ್ತಿರುವ ಕುರಿತು ಪ್ರಕರಣಗಳು ಮಾಹಿತಿ ನೀಡುತ್ತವೆ. ಹೀಗೆ ಸರಬರಾಜು ಆಗುವ ಬಹುತೇಕ ಮಹಿಳೆಯರು ದೇವದಾಸಿಯರಾಗುರುವವರು. ಇದು ನಮಗೆ ಇಂದಿಗೂ ದೇವದಾಸಿ ಪದ್ಧತಿಯು ಬೇರೆ ಬೇರೆ ರೂಪಗಳಲ್ಲಿ ನಡೆಯುತ್ತಿರುವುದನ್ನು ತೋರಿಸುತ್ತದೆ.

"ಅಭಿವೃದ್ಧಿ ಎನ್ನುವುದು ಮೂರು ಸಂಪನ್ಮೂಲಗಳ ಮೂಲಕ ಆಗುವುದು ಎಂಬ ಅರ್ಥದಲ್ಲಿ ಬಳಸಿದರೆ, ಒಬ್ಬ ವ್ಯಕ್ತಿ, ಕುಟುಂಬವೊಂದು ಅಭಿವೃದ್ಧಿ ಹೊಂದಬೇಕಾದರೆ ಭೂಮಿ ಅಥವಾ ಬಂಡವಾಳ ಅಥವಾ ಶಿಕ್ಷಣ, ಆರೋಗ್ಯಗಳು ಅನಿವಾರ್ಯ. ಇವುಗಳ ಜೊತೆಗೆ ಸ್ಥಾನಮಾನ, ಸ್ವಾತಂತ್ರ್ಯ ಹಾಗೂ ಸಮಾನತೆಗಳು ಕೂಡ ಬೇಕು. ನಮ್ಮ ಜಾತಿ ವ್ಯವಸ್ಥೆಯಲ್ಲಿ ದಲಿತರು, ಬುಡಕಟ್ಟುಗಳು ಹಾಗೂ ಹಿಂದುಳಿದ ವರ್ಗಗಳು ಏಣಿಯ ಬುಡದಲ್ಲಿದ್ದಾರೆ. ಜಾತಿ ವ್ಯವಸ್ಥೆಯ ಚರ್ಚೆಯಲ್ಲಿ ಸಾಮಾಜಿಕ

ಸಾಂಸ್ಕೃತಿಕ ಅಂಶಗಳೇ ರಾರಾಜಿಸುತ್ತಿವೆ" ಎಂದು ನಿಕೋಲಸ್ ಡರ್ಕ್ಸ್ ಮತ್ತು ಓರಾ ಸಿಂಗ್ ಹೇಳುತ್ತಾರೆ(ಎಂ.ಚಂದ್ರ ಪೂಜಾರಿ, ೨೦೧೬).[೬] ಜಾತಿಯಿಂದ ಅಂಚಿನಲ್ಲಿರುವ ಅವರಿಗೆ ಭೂಮಿ ಇರದೇ ಇದ್ದುದರಿಂದ, ಯಾವುದೇ ಕೌಶಲ್ಯವಿರದ ಇವರು ಬೇರೆಯವರ ಹೊಲದಲ್ಲಿ ತಮ್ಮ ಮಕ್ಕಳು ಮಹಿಳೆ ಯರೊಂದಿಗೆ ನಿಕೃಷ್ಟ ಮಟ್ಟದ ಕೂಲಿಯವರಾಗಿ ಕೆಲಸ ಮಾಡಬೇಕಿದೆ. ಇದರ ಜೊತೆಗೆ ಉತ್ತರ ಕರ್ನಾಟಕದಲ್ಲಿ ಕಂಡು ಬರುವ ನಿರಂತರ ಬರಗಾಲಗಳು ಇವರಿಗೆ ಕೆಲಸಗಳು ಇಲ್ಲದಂತೆ ಮಾಡುತ್ತವೆ. "ಬರಗಾಲಗಳು ಎಲ್ಲ ಜನವಿಭಾಗಗಳನ್ನೂ ಒಂದೇ ರೀತಿಯಾಗಿ ಕಾಡುವುದಿಲ್ಲ. ಬರಗಾಲಗಳು ಉಂಟಾದಾಗ ನಿರ್ಧಿಷ್ಟ ಜನ ವರ್ಗಗಳಾದ ಕೃಷಿ ಕೂಲಿಕಾರರು, ವಲಸೆ ಕಾರ್ಮಿಕರು ಮತ್ತು ಕೈ ಕಸುಬಿನವರು ಮಾತ್ರ ಹಸಿವಿನಿಂದ ಬಳಲುತ್ತಾರೆ" ಎಂದು ಅಮಾರ್ತ್ಯಸೇನ್ ಬರೆಯುತ್ತಾರೆ(ವಸಂತಕುಮಾರ ಎನ್.ಕೆ., ೨೦೦೯).[೭] ಈ ಎರಡು ಅಧ್ಯಯನಗಳಿಗೆ ಸ್ವಲ್ಪ ವಿಭಿನ್ನವಾದ ನಿಲುವನ್ನು ನಮ್ಮ ಅಧ್ಯಯನ ಕಂಡುಕೊಂಡಿದೆ. ನಾವು ಅಧ್ಯಯನಕ್ಕೆ ಒಳಪಡಿಸಿದ ಶೇಕಡಾ ೯೮ರರಷ್ಟು ಮಹಿಳೆಯರ ಕುಟುಂಬಗಳು ಭೂ ರಹಿತ ಕುಟುಂಬಗಳಾಗಿದ್ದು, ಹಸಿವು ಹಿಂಗಿಸಿಕೊಳ್ಳಲೂ ಬೇರೆಯವರನ್ನು ಅವಲಂಬಿಸುವಂತೆ ಮಾಡಿದೆ. ಇವರಲ್ಲಿ ಶೇಕಡಾ ೭೦ರಷ್ಟು ಮಹಿಳೆಯರ ಕುಟುಂಬಗಳಲ್ಲಿ ಕೂಲಿಯನ್ನೇ ಮಾಡುತ್ತಿದ್ದಾರೆ. ಅಂತಹ ಸಂದರ್ಭಗಳಲ್ಲಿ ಇವರಿಗೆ ಪರಿಹಾರ ಒದಗಿಸುವವರು ಇವರ ಅಪ್ರಾಪ್ತ ಹೆಣ್ಣುಮಕ್ಕಳು ಎನ್ನುವುದನ್ನು ನಮ್ಮ ಅಧ್ಯಯನ ಕಂಡಿದೆ.

ಇದುವರೆಗೂ ನಾವು ಲೈಂಗಿಕ ಜೀತಕ್ಕೆ ಪ್ರವೇಶಿಸುವಂತೆ ಒತ್ತಡ ನಿರ್ಮಿಸುವ ಸಾಮಾಜಿಕ ವಿಕಾರಗಳನ್ನು ವಿವರಿಸಿದ್ದೇವೆ. ಇನ್ನು ಮುಂದೆ ಅವರ ರಕ್ಷಣೆ, ಪುನರ್ವಸತಿ, ಪುನರ್‍ನೆಲೆಗೊಳ್ಳುವಾಗ ಎದುರಾಗುವ ಸವಾಲುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಲೈಂಗಿಕ ಶೋಷಿತ ಬಾಲೆಯರ ರಕ್ಷಣೆ, ಪುನರ್ವಸತಿ, ಪುನರ್ನೆಲೆ' ಅನ್ನುವುದು ಅಷ್ಟು ಸುಲಭವಾದ ಕೆಲಸವಲ್ಲ. ಏಕೆಂದರೆ ಅಧ್ಯಯನಕ್ಕೆ ಒಳಪಡಿಸಿದ ಬಹಳಷ್ಟು ಅಂದರೆ ಶೇಕಡಾ ೮೬.೬೬ರಷ್ಟು ಮಹಿಳೆಯರ ಸಾಗಾಣಿಕೆಯು ಗೊತ್ತಿರುವ, ಸಂಬಂಧದ, ತಾಯಿ, ಅಕ್ಕ, ಅತ್ತೆ ಮತ್ತು ಅವರ ಅತೀ ಹತ್ತಿರದ ಸಂಬಂಧಗಳಿಂದಲೇ ನಡೆದಿವೆ. ಇನ್ನು ಅದರಲ್ಲಿ ಅತೀ ಹೆಚ್ಚು ಸಂಖ್ಯೆಯು, ಅಂದರೆ ಶೇಕಡಾ ೨೩.೩೩ರಷ್ಟು ಮಹಿಳೆಯರನ್ನು ಅವರ ತಾಯಿಯೇ ರೆಡ್‌ಲೈಟ್ ಏರಿಯಾಕ್ಕೆ ಕರೆದುಕೊಂಡು ಬಂದಿರುವುದು ಕಂಡುಬರುತ್ತದೆ. ಇನ್ನುಳಿದಂತೆ ಶೇಕಡಾ ೨೦ರಷ್ಟು ಮಹಿಳೆಯರನ್ನು ನೆರೆಮನೆಯ ದೇವದಾಸಿ, ಶೇಕಡಾ ೧೩.೩೩ರಷ್ಟು ಪಕ್ಕದ ಊರಿನ ಘರವಾಲಿ ಮಹಿಳೆ. ಶೇಕಡಾ ೧೦ರಷ್ಟು ಮಹಿಳೆಯರು ಅವರ ಅತ್ತೆಯಿಂದ, ಶೇಕಡಾ ೧೦ರಷ್ಟು ಮಹಿಳೆಯರು ಅವರ ಸಹೋದರಿಯರಿಂದ ಮತ್ತು ಶೇಕಡಾ ೬.೬೬ರಷ್ಟು ಮಹಿಳೆಯರು ಗೆಳತಿಯರ ಮೂಲಕ ಲೈಂಗಿಕ ದಂಧೆಗೆ ಬಂದಿರುವುದು ಕಂಡುಬರುತ್ತದೆ. ಹೀಗೆ ಹೆಣ್ಣುಮಕ್ಕಳನ್ನು ಹೆತ್ತವರೇ ಮುಂದೆ ನಿಂತು ಲೈಂಗಿಕ ಜೀತಕ್ಕೆ ತಳ್ಳುವಾಗ, ಮೂಲದಲ್ಲಿ ಅವರೇ ಶೋಷಕರಾಗಿರುತ್ತಾರೆ. ಹಾಗಾಗಿ ಒಂದು ಲೈಂಗಿಕ ಶೋಷಿತ ಮಗುವಿನ ಪುನರ್ವಸತಿ ಅಷ್ಟು ಸರಳವಾಗಿ ಇಲ್ಲ. ಇವಕ್ಕೆ ಜೊತೆಯಾಗಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಜೈವಿಕ ಕಾರಣಗಳು

ಸುತ್ತುವರೆದಿವೆ. ಅಧ್ಯಾಯ ಮೂರರಲ್ಲಿ ಲೈಂಗಿಕ ದಂಧೆಯಲ್ಲಿರುವ ಮಹಿಳೆಯರಿಗೆ ಒಂದು ದಿನ ಗಿರಾಕಿಗಳು ಬರದೇ ಹೋದರೆ ನಿಮಗೆ ಏನನ್ನಿಸುತ್ತದೆ? ಎಂದು ಕೇಳಿದ ಪ್ರಶ್ನೆಗೆ ಕೆಲವರು ಸಮಾಧಾನ ವಾಗುವುದಿಲ್ಲ ಎಂದರೆ, ಮತ್ತೆ ಕೆಲವರಿಗೆ ಬೇಸರವಾಗುತ್ತದೆ ಎಂದರು. ಆದರೆ ಶೇಕಡಾ ೬೬.೬೬ರಷ್ಟು ಮಹಿಳೆಯರು ಗಿರಾಕಿಗಳು ಸಿಗದೇ ಹೋದರೆ ಚಿಂತೆಯಾಗುತ್ತದೆ ಎಂದು ವ್ಯಕ್ತಪಡಿಸುವ ಮಾತಿನಲ್ಲಿ, ಅವರ ಹಿಂದೆ ಇರುವ ಅವಲಂಬಿತರ ಬದುಕಿನ ಪ್ರಶ್ನೆ ಅಡಗಿದೆ. ಹಾಗಾಗಿ ಎಸ್ ಪಿ ಪಾಂಡೆ, ಅವದೇಶ್ ಕರ್ನಲ್ ಸಿಂಗ್ ಮತ್ತು ಸಂಜಯ್ ಕರ್ನಲ್ ಪಾಂಡೆ ಇವರು, "ಮಕ್ಕಳ ಮತ್ತು ಮಹಿಳೆಯರ ಅನೈತಿಕ ಸಾಗಾಣಿಕೆಯನ್ನು ತಡೆಗಟ್ಟಲು ವೇಶ್ಯಾವಾಟಿಕೆಯನ್ನು ಹತ್ತಿಕ್ಕಬೇಕು ಮತ್ತು ಲೈಂಗಿಕ ದಂಧೆಯಲ್ಲಿ ತೊಡಗಿದವರ ಮಕ್ಕಳು ಮತ್ತು ಅವರ ಅವಲಂಬಿತರನ್ನು ಸಬಲೀಕರಣಗೊಳಿಸು ವುದನ್ನು ಪುನರ್ವಸತಿ ಕಾರ್ಯಕ್ರಮಗಳು ಮಾಡಬೇಕು"[೮] ಎಂದು ಹೇಳುತ್ತಾರೆ.

೨೦೦೫ರಲ್ಲಿ ಮಕ್ಕಳ ಮತ್ತು ಮಹಿಳೆಯರ ಅನೈತಿಕ ಸಾಗಣೆ ತಡೆಯುವ ನಿಟ್ಟಿನಲ್ಲಿ ಗ್ರಾಮ ಪಂಚಾಯತಿಯಿಂದ ಉನ್ನತ ಹಂತದವರೆಗೂ ಕಾವಲು ಸಮಿತಿಗಳು ಕಾರ್ಯ ನಿರ್ವಹಿಸುತ್ತಿವೆ. ಆದರೆ ಗ್ರಾಮಗಳಿಂದ ಇಷ್ಟೊಂದು ಮಕ್ಕಳು ಮತ್ತು ಮಹಿಳೆಯರು ಸಾಗಿಸಲ್ಪಡುತ್ತಿದ್ದರೂ ಸಹ ಅವರ ವರದಿಗಳು "ಯಾವ ಸಾಗಾಣಿಕೆಗಳೂ ನಡೆದಿಲ್ಲ" ಎಂಬುದನ್ನು ತೋರಿಸುತ್ತಿವೆ. ಇದು ಕಾನೂನುಗಳು ಹಾಗೂ ಕಾರ್ಯಕ್ರಮಗಳು ಮತ್ತು ಅವು ಸಂಬಂಧಿಸಿದವರಿಗೆ ತಲುಪುವ ರೀತಿಯನ್ನು ಎತ್ತಿಹಿಡಿಯುತ್ತದೆ. ಈ ಕುರಿತು ೨೦೦೫ ರಿಂದ ೨೦೧೫ರ ಮೇ ತಿಂಗಳಿನವರೆಗೆ ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆ ಕುರಿತಂತೆ ಔಪಚಾರಿಕ ಮತ್ತು ಅನೌಪಚಾರಿಕ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಕುರಿತಂತೆ ಅಧಿಕೃತ ವರದಿಯನ್ನು ಮುಂಬೈ ನಗರ ಪೊಲೀಸ್ ಆಯುಕ್ತ ಕಛೇರಿಯಿಂದ ಪಡೆದು ಕೊಳ್ಳಲಾಗಿದೆ. ಈ ವರದಿಯಲ್ಲಿ ೨೬ ಅಪ್ರಾಪ್ತರನ್ನು ರಕ್ಷಿಸಿದ ಕುರಿತು ಮಾಹಿತಿಗಳಿವೆ. ಆದರೆ ಈ ಹತ್ತು ವರ್ಷಗಳಲ್ಲಿ(೨೦೦೫–೨೦೧೫ ಮೇ) ಕೇವಲ ೨೬ ಮಕ್ಕಳು ಮಾತ್ರ ಅನೈತಿಕವಾಗಿ ಸಾಗಿಸಲ್ಪಟ್ಟಿದ್ದರೆ? ಎನ್ನುವ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲು ನಾವು ಪ್ರಯತ್ನಿಸಿದೆವು. ಅದೇ ಅವಧಿಯಲ್ಲಿ(೨೦೦೫–೨೦೧೫), ನಾವು ಅಧ್ಯಯನಕ್ಕೊಳಪಡಿಸಿದ ಬೀವಂಡಿ ಮತ್ತು ಕಾಮಾಟಿಪೂರದಲ್ಲಿರುವ ಒಟ್ಟು ಮಹಿಳೆಯರಲ್ಲಿ ಶೇಕಡಾ ೪೬.೬೬ರಷ್ಟು ಮಹಿಳೆಯರು ಇದ್ದರೆಂಬುದು ಕಂಡುಬಂದಿತು. ಈ ಮಹಿಳೆಯರು ತಮ್ಮ ಅಪ್ರಾಪ್ತ ವಯಸ್ಸಿನಲ್ಲಿಯೇ ಈ ರೆಡ್‌ಲೈಟ್ ಏರಿಯಾಗಳಿಗೆ ಬಂದವರಾಗಿದ್ದರು. ಇವರೆಲ್ಲರು ನಾವು ಅಧ್ಯಯನಕ್ಕೆ ಒಳಪಡಿಸಿದ ಮೂರೂ ಜಿಲ್ಲೆಗಳಿಗೆ ಒಳಪಟ್ಟವರಾಗಿದ್ದರು. ಇವರನ್ನು ರಕ್ಷಿಸಬಹು ದಾಗಿದ್ದರೂ ಸಹ, ರಕ್ಷಣೆಯಾಗಿರಲಿಲ್ಲ. ಪೊಲೀಸ್ ರೇಡ್‌ಗಳು ನಡೆದಾಗಲೂ ಇವರ ರಕ್ಷಣೆಯಾಗಲಿಲ್ಲ. ಆದರೆ ಪೊಲೀಸ್ ರೇಡ್‌ಗಳು ನಡೆಯುತ್ತಲೇ ಇರುತ್ತವೆ. ಈ ರೇಡ್‌ನಲ್ಲಿ ಆ ದಂಧೆಗೆ ಬಳಸಿ ಬೀಸಾಡಿದ, ಹೊರದೂಡಲ್ಪಟ್ಟ ಮಹಿಳೆಯರನ್ನು ಮಾತ್ರ ಗುರುತಿಸಿ ರಕ್ಷಿಸಲಾಗುತ್ತದೆ. ಈ ಎಲ್ಲವೂ ನಾವು ಅಧ್ಯಯನ ನಡೆಸಿದ ಸಂವಾದ, ಚರ್ಚೆ ಮತ್ತು ವಿಷಯ ಆಧಾರಿತ ಗುಂಪು ಚರ್ಚೆ(ಎಫ್.ಜಿ.ಡಿ) ಗಳಿಂದ ತಿಳಿಯುತ್ತದೆ. ಇದನ್ನು ಪೊಲೀಸ್ ಆಯುಕ್ತರ ವರದಿಯಿಂದ ದೊರೆತ ಮಾಹಿತಿಯ ಜೊತೆ ತಾಳೆ ನೋಡಿದಾಗಲೂ ಸಹ ನಮ್ಮ ನಿಲುವನ್ನು ಸಮರ್ಥಿಸುವಂತೆಯೇ ಇದೆ.

ಮಹಿಳೆ ಮತ್ತು ಮಕ್ಕಳ ಅನೈತಿಕ ಸಾಗಾಣಿಕೆ ತಡೆ ಕಾಯಿದೆ ಅನ್ವಯ, ೨೦೦೫ರಿಂದ ೨೦೧೫ರ ಮೇ ತಿಂಗಳವರೆಗೆ ಮುಂಬಯಿಯ ರೆಡ್‌ಲೈಟ್ ಏರಿಯಾಗಳಲ್ಲಿ ರೇಡ್ ಮಾಡಿ ರಕ್ಷಿಸಿದ ವಯಸ್ಕರು, ಮಕ್ಕಳು, ಘರವಾಲಿ ಮತ್ತು ಮ್ಯಾನೇಜರ್‌ಗಳ ಮಾಹಿತಿಯನ್ನು ಮುಂಬಯಿ ನಗರದ ಪೊಲೀಸ್ ಆಯುಕ್ತರ ಕಛೇರಿಯ, ಸಮಾಜಸೇವಾ ವಿಭಾಗದಿಂದ ಅಧ್ಯಯನದ ಉದ್ದೇಶದಿಂದ ಪಡೆಯಲಾಗಿದೆ. ಆ ಮಾಹಿತಿಯ ಪ್ರಕಾರ ೨೦೦೫ನೇ ಇಸ್ವಿಯಲ್ಲಿ ೨೬(ಕರ್ನಾಟಕದವರಷ್ಟೇ ಅಲ್ಲದೇ, ಬೇರೆ ಬೇರೆ ಪ್ರದೇಶದವರಾಗಿದ್ದಾರೆ) ಅಪ್ರಾಪ್ತರನ್ನು ರಕ್ಷಿಸಿದ ಕುರಿತು ಮಾಹಿತಿ ಇದೆ. ಅದೇ ಸಂದರ್ಭದಲ್ಲಿ ನಮ್ಮ ಅಧ್ಯಯನದ ಶೇಕಡಾ ೪೬.೬೬(ಕರ್ನಾಟಕದವರು ಮಾತ್ರ) ಮಹಿಳೆಯರು ಅಪ್ರಾಪ್ತರಾಗಿದ್ದು, ರೆಡ್‌ಲೈಟ್ ಏರಿಯಾದಲ್ಲಿಯೇ ಇದ್ದರು. ಅವರನ್ನು ರಕ್ಷಿಸಬಹುದಿತ್ತು ಆದರೆ ಅವರ ಬಂಧನವೇ ಆಗಲಿಲ್ಲ. ಮಹಿಳೆಯರು ಹೇಳುವಂತೆ ರೇಡ್‌ಗಳು ಆದರೂ ಸಹ ಹುಡುಗಿಯರನ್ನು ಬಂಧಿಸುತ್ತಿರಲಿಲ್ಲವೆಂಬುದಕ್ಕೆ ಆಯುಕ್ತರ ಕಛೇರಿಯಿಂದಲೇ ದೊರೆತ ಮಾಹಿತಿ ಸಾಕ್ಷಿಯಾಗುತ್ತದೆ.

ರೆಸ್ಕ್ಯೂ ಫೌಂಡೇಶನ್ ಎಂಬ ಸಂಸ್ಥೆಯು ೨೦೦೫ ರಲ್ಲಿ ಕರ್ನಾಟಕದ ೧೯ ಮಕ್ಕಳನ್ನು ಸೇರಿಸಿ, ಮಹಾರಾಷ್ಟ್ರ (೧೯), ಪಶ್ಚಿಮಬಂಗಾಳ(೪೮), ಆಂಧ್ರಪ್ರದೇಶ(೧೦), ಮಧ್ಯಪ್ರದೇಶ(೧), ಉತ್ತರಪ್ರದೇಶ (೧೨), ತಮಿಳುನಾಡು (೧), ಆಸ್ಸಾಂ (೩), ಹಿಮಾಚಲಪ್ರದೇಶ (೧), ಬಿಹಾರ(೪), ರಾಜ್ಯಗಳ ಒಟ್ಟು ೧೧೮ ಬಾಲೆಯರನ್ನು ರಕ್ಷಿಸಿದ ಮಾಹಿತಿಯು ರೆಸ್ಕ್ಯೂ ಫೌಂಡೇಶನ್ ಸಂಸ್ಥೆಯಿಂದ ನಮಗೆ ದೊರೆಯುತ್ತದೆ. ಆದರೆ ಅದೇ ೨೦೧೫ ರಲ್ಲಿ ಪೊಲೀಸ್ ಇಲಾಖೆಯು ರಕ್ಷಣೆ ಮಾಡಿದ್ದು ಕೇವಲ ೨೬ ಬಾಲೆಯರನ್ನು. ಹಾಗೆಯೇ ೨೦೦೫ ರಿಂದ ೨೦೧೫ರ, ೧೦ ವರ್ಷಗಳ ಅವಧಿಯಲ್ಲಿ ಪೊಲೀಸರಿಗೆ ಸಿಕ್ಕ ಒಟ್ಟು ಮಕ್ಕಳು ೨೩೧. ಅದೇ ೨೦೦೫ ರಿಂದ ೨೦೧೫ರ ಅವಧಿಯಲ್ಲಿ ರೆಸ್ಕ್ಯೂ ಫೌಂಡೇಶನ್‌ಗೆ ಸಿಕ್ಕ ಒಟ್ಟು ಕರ್ನಾಟಕದ ಮಕ್ಕಳು ೧೪೧ ಮಕ್ಕಳನ್ನು ಸೇರಿಸಿ ಒಟ್ಟು ೧,೮೯೯. ಇವೆರಡರ ನಡುವಿನ ಅಂತರ ಬರೋಬ್ಬರಿ ೧,೬೫೮ ಆಗಿದೆ. ಹಾಗಿದ್ದರೆ, ರೆಸ್ಕ್ಯೂ ಫೌಂಡೇಶನ್ ದಾಳಿ ಮಾಡಿದಾಗ ಸಿಕ್ಕಿರುವ ಮಕ್ಕಳು, ಪೊಲೀಸಿನವರಿಗೆ ಯಾಕೆ ಸಿಗಲಿಲ್ಲ?

ಪೊಲೀಸ್ ಇಲಾಖೆಯ ಮಾಹಿತಿಯಿಂದ ಕಂಡು ಬರುವುದೆಂದರೆ, ಪೊಲೀಸರಿಂದ ಬಂಧಿತರಾದ ಮಹಿಳಾ ಘರವಾಲಿಗಳ ಸಂಖ್ಯೆ ತುಂಬಾ ಕಡಿಮೆ ಇದ್ದು (೩೬೯), ಬಂಧಿತರಾದ ಲೈಂಗಿಕ ದಂಧೆಯ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಿರುವುದು (೬೬೪೯) ಕಂಡು ಬರುತ್ತದೆ. ಅದಕ್ಕೆ ಸರಿಸಮನಾಗಿ ಬಂಧಿತ ಪುರುಷ ಮ್ಯಾನೇಜರ್/ದಲಾಲ/ತಲೆಹಿಡುಕರ ಸಂಖ್ಯೆಯಲ್ಲಿ (೧೦೪೯) ಇರುವುದು ಕಂಡು ಬರುತ್ತದೆ. ಅಂದರೆ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಂತೆ, ಬಿಲ್ಡರ್ಸ್ ಲಾಬಿಯಿಂದಾಗಿ ಘರವಾಲಿಗಳು ತಮ್ಮ ದಂಧೆಯ ಮನೆಗಳನ್ನು ಮಾರಿಯೋ ಅಥವಾ ಬಾಡಿಗೆಗೆ ಕೊಟ್ಟೋ ಊರಿಗೆ ಹೋಗಿದ್ದಾರೆ. ಅದೇ ಮನೆಗಳನ್ನು ತಲೆಹಿಡುಕರು, ದಲಾಲರು ಬಾಡಿಗೆಗೆ ತೆಗೆದುಕೊಂಡು, ಹುಡುಗಿಯರನ್ನು ಇಟ್ಟುಕೊಂಡು ದಂಧೆ ನಡೆಸುತ್ತಿರಬಹುದಾದ ಸಾಧ್ಯತೆಗಳು ಕಂಡುಬರುತ್ತವೆ.

೨೦೦೫ರಿಂದ ೨೦೧೫(ಮೇ)ರವರೆಗೆ ರೆಡ್‌ಲೈಟ್ ಏರಿಯಾದ ಲೈಂಗಿಕ ದಂದೆಯ ಮನೆಗಳ ಮೇಲೆ ದಾಳಿ ಮಾಡಿ ಸ್ವದೇಶಿ ಅಪ್ರಾಪ್ತ ಬಾಲಕಿಯರು ಮತ್ತು ವಯಸ್ಕ ಮಹಿಳೆಯರು, ವಿದೇಶಿ

ಅಪ್ರಾಪ್ತ ಬಾಲಕಿಯರು ಮತ್ತು ವಯಸ್ಕ ಮಹಿಳೆಯರು, ಘರವಾಲಿಗಳು, ಘರವಾಲಾಗಳು, ಮ್ಯಾನೇಜರ್‌ಗಳು ಇವರನ್ನು ದಂಧೆಯ ಸಮಯದಲ್ಲಿ ಬಂಧಿಸಿದ್ದಾಗ, ಆ ಸ್ಥಳದಲ್ಲಿ ಆ ಹೊತ್ತು, ಅವರಿಂದ ಪೋಲೀಸ್ ಅವರು ವಶ ಪಡಿಸಿಕೊಂಡ ಮೊತ್ತ ೨ ಕೋಟಿ, ೭೦ ಲಕ್ಷ, ೬೯ ಸಾವಿರದಾ, ೮ ನೂರಾ ೬೫ ರೂಪಾಯಿಗಳು ಆಗಿದೆ. ಇದು ಸಣ್ಣ ಮೊತ್ತವೇನಲ್ಲ. ಆದರೆ ಇದು ಪೂರ್ತಿ ಮೊತ್ತವೂ ಅಲ್ಲ. ಇದನ್ನು ಗಮನಿಸಿದರೆ ಲೈಂಗಿಕ ದಂಧೆಯಲ್ಲಿ ಬಾಲೆಯರ ಮತ್ತು ಹೆಣ್ಣುಮಕ್ಕಳ ಬಳಸುವಿಕೆಯ ತೀವ್ರತೆ ನಮಗೆ ಅರಿವಾಗುತ್ತದೆ.

ನಮ್ಮ ಸಂವಿಧಾನದ ಕಲಂ ೪೫ರ ಪ್ರಕಾರ, ೦-೩, ೩-೬, ಮತ್ತು ೬ ರಿಂದ ೧೪ ವರ್ಷದ ಎಲ್ಲಾ ಮಕ್ಕಳಿಗೆ ಕ್ರಮವಾಗಿ ನಿಯಮಿತ ಆಹಾರ, ಆರೋಗ್ಯ ಮತ್ತು ರಕ್ಷಣೆಯನ್ನು, ಪೂರ್ವ ಪ್ರಾಥಮಿಕ ಶಿಕ್ಷಣವನ್ನು ಮತ್ತು ೧೪ ವರ್ಷದವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವುದು ರಾಜ್ಯ ವ್ಯವಸ್ಥೆಯ ಪ್ರಮುಖ ಕರ್ತವ್ಯವಾಗಿದೆ. ಆದರೆ ಕೇಂದ್ರ ಸರಕಾರ ೨೦೦೬ ರಲ್ಲಿ ನೀಡಿದ ವರದಿಯು, ಕರ್ನಾಟಕದಲ್ಲಿ ೧,೭೪,೫೩೩ ಮಕ್ಕಳು ಶಾಲೆಯಿಂದ ಹೊರಗಿದ್ದಾರೆ ಎಂದು ಹೇಳುತ್ತದೆ. ಆದರೆ ಅದನ್ನೇ ರಾಜ್ಯ ಸರ್ಕಾರವು ಕೇವಲ ೭೫,೮೨೫ ಎಂದು ಹೇಳುತ್ತದೆ(ಮಕ್ಕಳಿಗಾಗಿ ಮಕ್ಕಳ ಹಕ್ಕುಗಳು, ವಾಸುದೇವ ಶರ್ಮಾ, ೨೦೦೮).[೯] ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿದ ಮಹಿಳೆಯರಲ್ಲಿ ಶೇಕಡಾ ೬೦ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಶೇಕಡಾ ೩೩.೩೩ರಷ್ಟು ಮಹಿಳೆಯರು ಶಾಲೆಯ ಮೆಟ್ಟಿಲನ್ನು ಹತ್ತಿದ್ದಾರೆ. ಆದರೆ ಓದಲು ಬರೆಯಲು ಬರುವುದಿಲ್ಲ. ಹಾಗಿದ್ದರೆ ನಮ್ಮ ಅಂಗನವಾಡಿ ಕಾರ್ಯಕರ್ತೆಯರು, ಎ.ಎನ್.ಎಂ.ಗಳು, ಆಶಾ ಕಾರ್ಯಕರ್ತೆಯರು, ಶಾಲಾ ಶಿಕ್ಷಕರು, ಪಂಚಾಯತಿಯ ಸಿಬ್ಬಂದಿ ಇವರೆಲ್ಲರಿಗಿಂತ ಮುಖ್ಯವಾಗಿ ಆಯಾ ವಾರ್ಡಿನ ಪಂಚಾಯತಿಯ ಜನಪ್ರತಿನಿಧಿ ಇವರೆಲ್ಲ ಏನು ಮಾಡುತ್ತಿದ್ದಾರೆ? ಎನ್ನುವ ಪ್ರಶ್ನೆ ಬಹಳ ಸವಾಲಿನದಾಗಿರುತ್ತದೆ.

ಉದ್ಯೋಗವಿಲ್ಲದೇ ಉದ್ಯೋಗ ಅರಸಿಕೊಂಡು ಗ್ರಾಮೀಣ ಭಾಗದ ಬಹಳಷ್ಟು ಕುಟುಂಬಗಳು ಊರು ಬಿಟ್ಟು ವಲಸೆ ಹೋಗುತ್ತಿವೆ. ಅವರ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಹೆಣ್ಣುಮಕ್ಕಳು ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ. ಬರಗಾಲದಿಂದಾಗಿ ಕೆಲಸಗಳಿಲ್ಲದೇ, ಹಸಿವಿನಿಂದ ತತ್ತರಿಸುತ್ತಿರುವ ಕುಟುಂಬಗಳು ತಮ್ಮ ಮನೆಯ ಹೆಣ್ಣುಮಕ್ಕಳನ್ನು ಲೈಂಗಿಕ ಜೀತಕ್ಕೆ ನೂಕುತ್ತಿದ್ದಾರೆ. ವಿಪರ್ಯಾಸವೆಂದರೆ, ಇಂತಹ ಕುಟುಂಬಗಳಿಗೆ ರೇಶನ್ ಕಾರ್ಡ ಇಲ್ಲ. ಆದರೆ ವೋಟಿಂಗ್ ಕಾರ್ಡ ಇದೆ. ಚುನಾವಣೆಗಳು ಬಂದಾಗ ಗ್ರಾಮೀಣ ಆಡಳಿತ ವ್ಯವಸ್ಥೆಗೆ ನೆನಪಾಗುವ ಇವರು. ಅವರ ಮಕ್ಕಳು ಅಂಗನವಾಡಿಯಲ್ಲಿ ಇರದೇ ಹೋದಾಗ, ಶಾಲೆಯಲ್ಲಿ ಇರದೇ ಹೋದಾಗ ಯಾಕೆ ನೆನಪಾಗುವುದಿಲ್ಲ? ಇವರ ಆಹಾರ ಮತ್ತು ಉದ್ಯೋಗ ಭದ್ರತೆಗಾಗಿ ಅನುಷ್ಠಾನಗೊಂಡಿರುವ ಮಹಾತ್ಮಾಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಏನು ಮಾಡುತ್ತಿದೆ? ಯಾರಿಗೆ ಉದ್ಯೋಗ ಒದಗಿಸುತ್ತಿದೆ? ಜಮಖಂಡಿ ಮೂಲದ ಹೆಣ್ಣುಮಗಳೊಬ್ಬಳನ್ನು ರಕ್ಷಿಸಿ ಊರಿಗೆ ತಂದು ಬಿಟ್ಟರೂ. ಇರಲು ಮನೆ ಇಲ್ಲದೆ, ಮಾಡಲು ಕೆಲಸವಿಲ್ಲದೆ ಮತ್ತೆ ಮರಳಿ ಕೆಂಪು ದೀಪದ ದಾರಿ ಹಿಡಿದಿದ್ದಾಳೆ. ಅವಳಿಗೊಂದು ಸೂರು ಕೊಡದ, ಅವಳಿಗೊಂದಿಷ್ಟು ಸಮಾಧಾನ ಹೇಳದ ಗ್ರಾಮ ಪಂಚಾಯತಿಗಳು, ಸ್ತ್ರೀಶಕ್ತಿ ಸಂಘಟನೆಗಳು ಇದ್ದರೆಷ್ಟು?

ಬಿಟ್ಟರೆಷ್ಟು? ಹಾಗಂತ ಬಿಟ್ಟರೆ ತಿಂದು ತೇಗಿ ನಿದ್ದೆ ಮಾಡಿ ಹೋಗುವ ಜನಗಳೇ ನಮ್ಮ ನಡುವೆ ತುಂಬಿ ಹೋಗಿದ್ದಾರೆ. ಹಾಗಾಗಿ ಸರ್ಕಾರ, ಸಂಸ್ಥೆಗಳು, ಸಮುದಾಯ, ಕುಟುಂಬ, ಪೋಷಕರು, ವ್ಯಕ್ತಿ ಎಲ್ಲರೂ ಸೇರಿ ಒಂದು ಸಾಂಘಿಕ ರೂಪದಲ್ಲಿ ಕೆಲಸ ಮಾಡಿದಾಗ ಕಳೆದು ಹೋಗಬಹುದಾದ, ಕಳೆದು ಹೋದ ಅಮಾಯಕ ಮಕ್ಕಳು ನಮ್ಮ ಅಂಗಳದಲ್ಲಿಯೇ ಆಟ ಆಡಿಕೊಂಡು, ಅಕ್ಷರ ಕಲಿತುಕೊಂಡು, ಉಂಡುಟ್ಟು ಬದುಕು ಕಟ್ಟಿಕೊಳ್ಳಬಹುದು.

ಹಾಗಿದ್ದರೆ ಆಗಬೇಕಿರುವುದು ಏನು?

**೯.೨. ತಾತ್ಕಾಲಿಕ ನಿರ್ಧಾರಗಳು**

**ಕಾನೂನಿನ ಅಡಿಯಲ್ಲಿ**

ಮಕ್ಕಳ ರಕ್ಷಣೆ, ಪಾಲನೆ ಮತ್ತು ಪೋಷಣೆಯ ಹೊಣೆ ಹೊತ್ತಿರುವ ಬಾಲನ್ಯಾಯ ಕಾಯಿದೆ ೨೦೦೦ ಇದು ಪರಿಣಾಮಕಾಯಾಗಿ ಜಾರಿಯಾಗಬೇಕು. ಲೈಂಗಿಕ ಶೋಷಿತ ಮಕ್ಕಳ ರಕ್ಷಣೆಯ ವಿಷಯದಲ್ಲಿ ಈಗ ನಡೆಯುತ್ತಿರುವ ಪ್ರಕ್ರಿಯೆಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿ ಕೆಲವು ಅಂಶಗಳನ್ನು ಸೇರಿಸಿ ಅಧಿನಿಯಮ ರೂಪಿಸಬೇಕು. ಅಧ್ಯಯನದಲ್ಲಿ ಕಂಡುಕೊಂಡ ಇದಕ್ಕೆ ಅಗತ್ಯವಾದ ಅಂಶಗಳು ಈ ಕೆಳಗಿನಂತಿವೆ.

೦೧. ಪ್ರಸ್ತುತ ಜಾರಿಯಲ್ಲಿರುವ ನಿಯಮದ ಪ್ರಕಾರ, ವೇಶ್ಯಾಗೃಹಗಳಿಂದ ರಕ್ಷಿತವಾದ ಬಾಲೆಯರನ್ನು ಆಯಾ ರಾಜ್ಯದ ಅಂದರೆ ಮಗು ಸಿಕ್ಕಿರುವ ರಾಜ್ಯದ ಸರ್ಕಾರಿ ಬಾಲಕಿಯರ ಬಾಲಮಂದಿರ ಅಥವಾ ಸರ್ಕಾರೇತರ ಸಂಸ್ಥೆಗಳಲ್ಲಿ ಪುನರ್ವಸತಿಗಾಗಿ ಆಶ್ರಯ ನೀಡಲಾಗುತ್ತಿದೆ. ಪುನರ್ವಸತಿ ಪ್ರಕ್ರಿಯೆಯ ನಂತರ ಬಾಲೆಯರನ್ನು ಬಾಲಕಲ್ಯಾಣ ಮಂಡಳಿ(ಸಿ.ಡಬ್ಲ್ಯೂಸಿ) ಅಥವಾ ಬಾಲನ್ಯಾಯ ಮಂಡಳಿ(ಜೆ.ಜೆ.ಬಿ) ಗಳ ಆದೇಶದಂತೆ ಬಾಲಕಿಯು ಅವಳಿಗೆ ಸಂಬಂಧಿಸಿದ ರಾಜ್ಯದಲ್ಲಿಯ ಸರ್ಕಾರೇತರ ಸಂಸ್ಥೆಗಳ ಮೂಲಕ ಪುನರ್ನೆಲೆಗೊಳ್ಳುತ್ತಾಳೆ. ಹೀಗೆ ಮಾಡುವ ಸಂದರ್ಭದಲ್ಲಿ ಬಾಲೆಯರು ಸಾಗಾಣಿಕೆಗೊಂಡ ಕುರಿತಾಗಲೀ, ರಕ್ಷಣೆಗೊಂಡಿದ್ದ ಕುರಿತಾಗಲೀ, ಪುರ್ವಸತಿಗೊಂಡಿದ್ದ ಕುರಿತಾಗಲೀ ಮತ್ತು ಪುನರ್ನೆಲೆಗೊಂಡಿದ್ದ ಕುರಿತಾಗಲೀ ಯಾವುದೇ ಮಾಹಿತಿಯು ಬಾಲೆಗೆ ಸಂಬಂಧಪಡುವ ರಾಜ್ಯದ ಘನ ಸರ್ಕಾರಕ್ಕೆ ಸಿಗುತ್ತಿಲ್ಲ. ಇದರಿಂದ ಸರ್ಕಾರಕ್ಕೂ ಮತ್ತು ಮಕ್ಕಳನ್ನು ಬಲಿ ತೆಗೆದುಕೊಳ್ಳುತ್ತಿರುವ ಒಂದು ದೊಡ್ಡ ವ್ಯವಸ್ಥೆಯ ನಡುವೆ ಕಂದಕ ನಿರ್ಮಾಣವಾಗಿ, ಸಮಸ್ಯೆ ಇನ್ನೂ ಹೆಚ್ಚು ಉಲ್ಬಣಿಸುತ್ತಲೇ ನಡೆದಿದೆ.

ಹಾಗಾಗಿ ಪ್ರಸ್ತುತ ಯಾವುದೇ ರಾಜ್ಯದಲ್ಲಿ ಮಗು ರಕ್ಷಣೆಗೊಂಡಿದ್ದರೂ, ಅದು ನೇರವಾಗಿ ಮಗುವಿಗೆ ಸಂಬಂಧಿಸಿದ ರಾಜ್ಯ ಸರ್ಕಾರದ ಸುಪರ್ದಿಗೆ ಒಪ್ಪಿಸಲ್ಪಡಬೇಕು. ಅದರ ಮುಂದಿನ ಪುನರ್ವಸತಿ ಮತ್ತು ಪುನರ್ನೆಲೆಗಳು ಆಯಾ ಸರ್ಕಾರಗಳ ಜವಾಬ್ದಾರಿಯಾಗಬೇಕು. ಈ ಪ್ರಕ್ರಿಯೆಯು ಸಮಸ್ಯೆಯ ಆಳ ಆಯಾ ಸರ್ಕಾರಕ್ಕೆ ಅರ್ಥವಾಗಲು ಸಹಕಾರಿಯಾಗುತ್ತದೆ. ಆಗ ಸಂಬಂಧಿಸಿದ ರಾಜ್ಯ ಸರ್ಕಾರದ ಇಲಾಖೆಗಳು ಜವಾಬ್ದಾರಿಯುಂದ ಸ್ಪಂದಿಸುತ್ತವೆ ಎನ್ನುವುದು ನಮ್ಮ ನಿಲುವು.

೧೨. ರಕ್ಷಣೆಗೊಂಡ ಮಗು ಸಮಾಲೋಚಕರೊಂದಿಗೆ ತನ್ನ ನೋವನ್ನೆಲ್ಲ ಹಂಚಿಕೊಂಡಿರುತ್ತದೆ. ಆ ಸಂದರ್ಭದಲ್ಲಿ ತನ್ನ ಸಾಗಾಣಿಕೆಗೆ ಕಾರಣರಾದವರ ಬಗ್ಗೆಯೂ ಸಹ ಸುಳಿವನ್ನು ನೀಡುತ್ತದೆ. ಬಹಳಷ್ಟು ಸಂದರ್ಭಗಳಲ್ಲಿ ಸಾಗಾಣಿಕೆ ಮಾಡಿದ್ದವರ ಹೆಸರು ವಿಳಾಸವನ್ನೂ ನೀಡಿರುತ್ತದೆ. ಅಂತಹ ಸಂದರ್ಭದಲ್ಲಿ ಅವರು ಯಾರೆ ಆಗಿದ್ದರೂ, ಅವರು ಮಗುವಿನ ತಂದೆ ತಾಯಿ ಆಗಿದ್ದರೂ ಸಹ ಅವರಿಗೆ ಕಠಿಣವಾಗಿ ಶಿಕ್ಷೆ ವಿಧಿಸುವ ವ್ಯವಸ್ಥೆಯಾಗಬೇಕು.

**ಸರ್ಕಾರದ ನೆಲೆಯಲ್ಲಿ**

೧. ಗ್ರಾಮಗಳ ಜನಸಂಖ್ಯೆಯ ಮರು ಸಮೀಕ್ಷೆ ಆಗಬೇಕು. ಈ ಸಮೀಕ್ಷೆ ಮಾಡುವ ಮೊದಲು ಜನಪ್ರತಿನಿಧಿಗಳು ತಮಗೆ ಸಂಬಂಧಿಸಿದ ವಾರ್ಡಿನ ಜನಸಮುದಾಯಕ್ಕೆ ಚಿಕ್ಕ ಚಿಕ್ಕ ಸಭೆಗಳನ್ನು ಸೇರಿಸಿ ಹೊರಗೆ ಹೋದ ಕುಟುಂಬಗಳನ್ನು ಮರಳಿ ಊರಿಗೆ ಬರುವಂತೆ ಪ್ರೇರೇಪಿಸಿ ಕ್ರಮ ಕೈಗೊಳ್ಳಬೇಕು. ಹೀಗೆ ಬಂದವರ ಸಾಮಾಜಿಕ, ಆರ್ಥಿಕ ಸಮೀಕ್ಷೆ ಕೈಗೊಳ್ಳುವ ಮೂಲಕ ಅವರಿಗಿರುವ ಮೂಲಭೂತ ಸಮಸ್ಯೆಗಳು (ನೀಡ್ ಬೇಸ್ಡ ಸರ್ವೆ) ಏನು ಮತ್ತು ಅವಶ್ಯಕತೆಗಳು ಏನು ಎಂಬುದನ್ನು ಗುರುತಿಸಬೇಕು. ಅಸಹಾಯಕರಾದ ಬಡವರಿಗೆ ಈ ಮೂಲಭೂತ ಅವಶ್ಯಕತೆಗಳನ್ನು (ಮನೆ, ಪಡಿತರ ಚೀಟಿ, ನೀರಿನ ವ್ಯವಸ್ಥೆ, ಬೆಳಕಿನ ಸೌಲಭ್ಯ, ಮಕ್ಕಳಿಗೆ ಶೈಕ್ಷಣಿಕೆ ಸೌಲಭ್ಯಗಳು, ಆರೋಗ್ಯ) ಕಡ್ಡಾಯವಾಗಿ ಒದಗಿಸಬೇಕು.

೨. ಸಮೀಕ್ಷೆ ಗುರುತಿಸುವ ಮಹಿಳೆ ಮತ್ತು ಮಕ್ಕಳ (೦–೧೮ ವರ್ಷ) ಯಾದಿ ತಯಾರಿಸಬೇಕು. ಹೀಗೆ ತಯಾರಿಸಿದ ಯಾದಿಯಲ್ಲಿರುವ ಮಹಿಳೆ ಮತ್ತು ಮಕ್ಕಳು ತಮ್ಮ ಜೀವನಕ್ಕಾಗಿ ಅನೈತಿಕ ಚಟುವಟಿಕೆಗಳಿಗೆ ವಲಸೆ ಹೋಗದಂತೆ ತಡೆದು ಅವರು ಗುಣಾತ್ಮಕವಾದ ನೆಲೆಗಟ್ಟಿನಲ್ಲಿ ಬದುಕು ಕಟ್ಟಿಕೊಳ್ಳಲು ಸಹಾಯ ಬೆಂಬಲ ನೀಡಬೇಕು. ಮಕ್ಕಳ ೦ ದಿಂದ ೧೮ ವಯಸ್ಸಿನವರೆಗೂ ಅವರ ರಕ್ಷಣೆಯ ಜವಾಬ್ದಾರಿಯನ್ನು ಸರ್ಕಾರವೇ ವಹಿಸಿಕೊಳ್ಳಬೇಕು. ಒಂದೊಮ್ಮೆ ಆ ಮಕ್ಕಳೇನಾದರೂ ಗಂಡಾಂತರದಲ್ಲಿ (ಅನಕ್ಷರತೆ, ಬಾಲ್ಯ ವಿವಾಹ, ಬಾಲ ಕಾರ್ಮಿಕತೆ, ದೇವದಾಸಿ, ಅನೈತಿಕ ಸಾಗಾಣಿಕೆ ಇತ್ಯಾದಿ) ಸಿಕ್ಕರೆ ಅದರ ಸಂಪೂರ್ಣ ಹೊಣೆ ಸರ್ಕಾರದ್ದೇ ಆಗಿರಬೇಕು. ಮಕ್ಕಳ ವಿಷಯದಲ್ಲಿ ತಪ್ಪಿತಸ್ಥರು ಯಾರೇ ಆಗಿರಲಿ, ಸ್ವತಃ ಮಗುವಿನ ತಂದೆ, ತಾಯಿ ಆಗಿದ್ದರೂ ಸಹ ಕಠಿಣವಾದ ಶಿಕ್ಷೆಗೆ ಗುರಿಪಡಿಸಬೇಕು. ಇದು ಸಂಬಂಧಿಸಿದ ಇಲಾಖೆಯಲ್ಲಿ ಸರ್ಕಾರಿ ನೌಕರಿ ಮಾಡುತ್ತಿರುವ ಪ್ರತಿಯೊಬ್ಬ ವ್ಯಕ್ತಿಯ ಆದ್ಯ ಕರ್ತವ್ಯವಾಗಿರಬೇಕು.

೩. ಪ್ರಸ್ತುತ ಜಾರಿಯಲ್ಲಿರುವ ಮಕ್ಕಳು ಮತ್ತು ಮಹಿಳೆಯರ ಕಾವಲು ಸಮಿತಿಯು ಪರಿಣಾಮ ಕಾರಿಯಾಗಿ ಕೆಲಸ ಮಾಡಬೇಕು.

೪. ಕರ್ನಾಟಕ ದೇವದಾಸಿ ಸಮರ್ಪಣೆ(ನಿಷೇಧ) ಕಾಯಿದೆಯನ್ನು ಇನ್ನೂ ಹೆಚ್ಚು ಪರಿಣಾಮ ಕಾರಿಯಾಗಿ ಅನುಷ್ಠಾನಗೊಳಿಸಬೇಕು.

೫. ಬಾಲ್ಯವಿವಾಹ ನಿಷೇಧ ಕಾಯಿದೆಯು ಇನ್ನೂ ಹೆಚ್ಚು ಪರಿಣಾಮಕಾರಿಯಾಗುವಂತೆ ಅನುಷ್ಠಾನಗೊಳಿಸಬೇಕು. ಈ ನಿಟ್ಟಿನಲ್ಲಿ ಶಾಲೆಯ ವರ್ಗಶಿಕ್ಷಕರು ಮತ್ತು ಮುಖ್ಯೋಪಾಧ್ಯಾಯರನ್ನು ನೇರ ಹೊಣೆಗಾರರನ್ನಾಗಿ ಮಾಡಬೇಕು. ಗ್ರಾಮದ ಮಕ್ಕಳೆಲ್ಲರೂ ಶಾಲೆಗೆ ಬರುವಂತೆ ವೈಯುಕ್ತಿಕ ಕಾಳಜಿ ಮತ್ತು ಜವಾಬ್ದಾರಿ ವಹಿಸುವ, ಹಾಗೆ ಬಂದಂತಹ ಎಲ್ಲ ಮಕ್ಕಳೂ ವಿಶೇಷವಾಗಿ ಹೆಣ್ಣುಮಕ್ಕಳು ತಮ್ಮ ೧೦ ನೇ ತರಗತಿ ಮುಗಿಯುವವರೆಗೂ ಶಿಕ್ಷಣ ವ್ಯವಸ್ಥೆಯ ಜೊತೆಗೆ ಇರುವಂತೆ ನೋಡಿಕೊಳ್ಳಬೇಕು.

೬. ಈಗಾಗಲೇ ದೇವದಾಸಿ ಮಹಿಳೆಯರಿಗೆ ಕೊಡುತ್ತಿರುವ ಮಾಶಾಸನವನ್ನು ಸಧ್ಯಕ್ಕೆ ಸಮೀಕ್ಷೆಯಲ್ಲಿರುವ ಮಹಿಳೆಯರಿಗಷ್ಟೇ ಸೀಮಿತಗೊಳಿಸಬೇಕು. ಯಾವುದೇ ಒತ್ತಡಕ್ಕೂ ಮರು ಸಮೀಕ್ಷೆ ಮಾಡಬಾರದು. ಯಾಕೆಂದರೆ ಈಗಾಗಲೇ ಎರಡು ಸಮೀಕ್ಷೆ ಮಾಡಲಾಗಿದೆ. ಅದರಲ್ಲಿ ತುಂಬಾ ವ್ಯತ್ಯಾಸಗಳು ಕಂಡು ಬಂದಿದ್ದು, ಮತ್ತೆ ಸಮೀಕ್ಷೆಯಾದಲ್ಲಿ ಅದು ಮತ್ತೆ ಹೆಚ್ಚಾಗುವ ಸಂಭವಗಳು ಉಂಟು. ಇದರಿಂದ, ಈಗಾಗಲೇ ನಮ್ಮ ಅಧ್ಯಯನದಲ್ಲಿ ದೊರೆತಿರುವಂತೆ ದೇವದಾಸಿಯಲ್ಲದವರೂ ಮಾಶಾಸನ ಪಡೆದು ಕೊಳ್ಳಬಹುದು. ಇದು ತಪ್ಪು ಎಂದು ಅರ್ಥಮಾಡಿಕೊಳ್ಳದ, ಆರ್ಥಿಕ ಸಂಕಷ್ಟದಲ್ಲಿ ಇರುವ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಮಾಶಾಸನಕ್ಕಾಗಿ ದೇವದಾಸಿ ಮಾಡಬಹುದಾದ ಸಾಧ್ಯತೆಗಳಿವೆ. ಶಾಲಾ ಹಂತದಲ್ಲಿ ಹೆಣ್ಣುಮಕ್ಕಳಿಗಾಗಿ ಆದಾಯ ಉತ್ಪನ್ನಕರ ಕೌಶಲ್ಯ ತರಬೇತಿಗಳನ್ನು ನೀಡಬೇಕು.

೭. ನಿರ್ಗತಿಕರಾದ ಮಹಿಳೆಯರಿದ್ದರೆ, ಅವರಿಗೆ ದಿನಕ್ಕೆ ೧೦೦ ರಿಂದ ೨೦೦ ರೂಪಾಯಿ ಆದಾಯ ದೊರೆಯುವಂತಹ ಕೆಲಸಗಳನ್ನು ದೊರಕಿಸುವ ವ್ಯವಸ್ಥೆ ಮಾಡಬೇಕು.

೮. ಸರ್ಕಾರಕ್ಕೆ ಸಂಬಂಧಿಸಿದ, ಬಿಸಿಯೂಟ ತಯಾರಿಸುವ, ಅಂಗನವಾಡಿ ಕೆಲಸಗಳಿಗೆ ಸಾಮಾಜಿಕ ವಾಗಿ ಮತ್ತು ಆರ್ಥಿಕವಾಗಿ ವಿಷಮ ಪರಿಸ್ಥಿತಿಯಲ್ಲಿರುವ ಈ ಮಹಿಳೆಯರಿಗೆ ಆದ್ಯತೆ ನೀಡಿ ನೇಮಕ ಮಾಡಿಕೊಳ್ಳಬೇಕು.

೯. ಸರ್ಕಾರಿ ಶಾಲಾ ಮಕ್ಕಳ ಸಮವಸ್ತ್ರಗಳನ್ನು ತಯಾರಿಸುವ ಘಟಕಗಳನ್ನು ಗ್ರಾಮೀಣ ಪ್ರದೇಶ 'ಗಳಲ್ಲಿ ಪ್ರಾರಂಭಿಸಬೇಕು ಮತ್ತು ಗ್ರಾಮದ ಅಸಹಾಯಕ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗೆ ಮತ್ತು ಯುವತಿಯರಿಗೆ ಗ್ರಾಮಮಟ್ಟದಲ್ಲಿಯೇ ಮಾರುಕಟ್ಟೆ ಒದಗಿಸುವ ಕೌಶಲ್ಯ ತರಬೇತಿಗಳನ್ನು ನೀಡಬೇಕು.

೧೦. ಗ್ರಾಮದಲ್ಲಿ ಲಭ್ಯವಿರುವ ಕೃಷಿಯೋಗ್ಯ ಭೂಮಿಯನ್ನು ಮಂಜೂರು ಮಾಡಬೇಕು. ಸರ್ಕಾರದ ಜಮೀನು ಇರದಿದ್ದ ಪಕ್ಷದಲ್ಲಿ ರೈತರಿಂದ ಭೂಮಿಯನ್ನು ಗೇಣಿ ಪಡೆದು ಸಹಕಾರ ಕೃಷಿಯನ್ನು ಪ್ರಾರಂಭಿಸಬೇಕು. ಅಲ್ಲಿ ಅಸಹಾಯಕರಾದ ಗ್ರಾಮದ ಭೂರಹಿತ ಕುಟುಂಬಗಳು ಸಹಕಾರ ಕೃಷಿಯಲ್ಲಿ ಸದಸ್ಯರಾಗಿ ಕೆಲಸ ಮಾಡುವಂತೆ ಪ್ರೋತ್ಸಾಹಿಸಬೇಕು. ಪರಿಶಿಷ್ಟ ಜಾತಿಯ ಜನರಿಗೆ ಭೂಮಿ ಕೊಡುವ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕು.

೧೧. ರೆಡ್‌ಲೈಟ್ ಏರಿಯಾ ಬಿಟ್ಟು ಬರಲು ತಯಾರಿರುವವರಿಗೆ ತಕ್ಷಣವೇ ಎಲ್ಲ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು. ರಕ್ಷಣೆಗೊಂಡು ಬರುವ ಮಕ್ಕಳ ಪುನರ್ವಸತಿ ಕಾರ್ಯವು ಪರಿಣಾಮ ಕಾರಿಯಾಗಿ ನಡೆಯಬೇಕು. ಅವರಿಗೆ ನೀಡುತ್ತಿರುವ ತರಬೇತಿಗಳು ಮಾರುಕಟ್ಟೆ ಒದಗಿಸುವಂತಿರಬೇಕು.

೧೨. ಗ್ರಾಮೀಣ ಭಾಗದ ಪರಿಶಿಷ್ಟ ಜಾತಿ ಮತ್ತು ಪಂಗಡದ, ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಮಕ್ಕಳಿಗೆ ಈಗಿರುವ ವಸತಿ ನಿಲಯಗಳನ್ನು ಹೆಚ್ಚಿಸಬೇಕು. ಅವರಿಗೆ ಕೊಡುವ ಸ್ಥಳಾವಕಾಶವನ್ನು ಅವರ ಶೈಕ್ಷಣಿಕ ಗುಣಮಟ್ಟದ ಮೇಲೆ ಅಳೆಯದೇ ಕುಟುಂಬದ ಆರ್ಥಿಕ ಸ್ಥಿತಿಯ ಮೇಲೆ ಆಧರಿಸಿ ಒದಗಿಸಬೇಕು.

**ಸಮಾಜ ಮತ್ತು ಸಮುದಾಯಗಳ ನೆಲೆಯಲ್ಲಿ**

೧. ಅಸ್ಪೃಶ್ಯತೆ, ಜಾತಿಯಂತಹ ಅನಿಷ್ಟ ಆಚರಣೆಗಳನ್ನು ಸಮಾಜ ಇನ್ನಾದರೂ ಬಿಡಬೇಕು. ಸಮುದಾಯದ ಹಿರಿಯರು ದೈವದ ಹೆಸರಿನಲ್ಲಿ ದಂಡ ಕಟ್ಟಿಸಿಕೊಂಡು, ಮಕ್ಕಳನ್ನು ದೇವದಾಸಿ ಮಾಡಲು ಪೋಷಕರಿಗೆ ನೀಡುವ ಸಾಮಾಜಿಕ ಒಪ್ಪಿಗೆಯನ್ನು ನಿಲ್ಲಿಸಬೇಕು. ಕಾನೂನಿನ ಮೂಲಕ ಅವರನ್ನು ಶಿಕ್ಷೆಗೆ ಗುರಿಪಡಿಸಲು ಸಹಾಯ ಬೆಂಬಲ ನೀಡಬೇಕು.

೨. ಸಮುದಾಯದಲ್ಲಿ ನಡೆಯುವ ಬಾಲ್ಯವಿವಾಹಗಳನ್ನು ತಡೆಗಟ್ಟಬೇಕು. ಸಾಧ್ಯವಾಗದೇ ಹೋದಲ್ಲಿ ಸಂಬಂಧಿಸಿದ ಇಲಾಖೆಗೆ ತಿಳಿಸಬೇಕು. ಸಮುದಾಯಗಳು ತಮ್ಮ ನಡುವೆ ನಡೆಯುವ ಹೆಣ್ಣುಮಕ್ಕಳ ಸಾಗಾಣಿಕೆ, ಶಾಲೆಯನ್ನು ಮಧ್ಯದಲ್ಲಿ ಬಿಡಿಸಿದರೆ ಸಂಬಂಧಿಸಿದ ಇಲಾಖೆಗೆ ಕೂಡಲೇ ತಿಳಿಸಬೇಕು. ಈ ಎಲ್ಲಾ ವಿಷಯಗಳ ಕುರಿತ ಅರಿವು ವಿಸ್ತಾರಗೊಳ್ಳಬೇಕು.

**ಕೌಟುಂಬಿಕ ನೆಲೆಯಲ್ಲಿ**

೧. ಕುಟುಂಬಗಳೇ ಮಕ್ಕಳನ್ನು ರಕ್ಷಿಸುವ ಪ್ರಮುಖ ಹೊಣೆ ಹೊರಬೇಕು. ದೇವದಾಸಿ ಪದ್ಧತಿ ಆಚರಣೆಯಂತಹ ಧಾರ್ಮಿಕ ಅಂಧಶ್ರದ್ಧೆಗಳು, ಮೂಢನಂಬಿಕೆಗಳನ್ನು ತ್ಯಜಿಸಬೇಕು. ತಮ್ಮ ಎಲ್ಲ ಮಕ್ಕಳೂ ಕಡ್ಡಾಯವಾಗಿ ಶಿಕ್ಷಣವನ್ನು ಪಡೆಯುವಲ್ಲಿ ಶ್ರಮಿಸಬೇಕು. ಶಾಲೆಗೆ ಹೋಗುವ ಮಕ್ಕಳನ್ನು ಕಡ್ಡಾಯವಾಗಿ ಸರ್ಕಾರದ ವಸತಿ ನಿಲಯಗಳಲ್ಲಿ ಇಡಬೇಕು.

೨. ಬಡತನಕ್ಕೆ ವಲಸೆ ಹೋಗುವುದೊಂದನ್ನೇ ಪರಿಹಾರ ಎಂದು ಭಾವಿಸದೇ ಸ್ಥಳೀಯ ಪಂಚಾಯತಿಗಳ ಮೇಲೆ ಒತ್ತಡ ತಂದು ಆ ಮೂಲಕ ಉದ್ಯೋಗ ಸೃಷ್ಟಿಸಿಕೊಳ್ಳುವಲ್ಲಿ ಪ್ರಯತ್ನಿಸಬೇಕು.

೩. ಮಕ್ಕಳಲ್ಲಿ ಲಿಂಗ ತಾರತಮ್ಯ ಮಾಡದೇ ಎಲ್ಲಾ ವಿಷಯಗಳಲ್ಲೂ ಸಮಾನ ಅವಕಾಶಗಳನ್ನು ಒದಗಿಸಬೇಕು. ಆ ಮೂಲಕ ಬಾಲ್ಯವಿವಾಹವನ್ನು ನಾವು ತಕ್ಷಣವೇ ನಿಲ್ಲಿಸಬೇಕು.

**ವೈಯಕ್ತಿಕ ನೆಲೆಯಲ್ಲಿ**

೧. ತಂದೆ ತಾಯಿಯಿಂದ ಮೊದಲ್ಗೊಂಡು ಸಮುದಾಯದ ಹಿರಿಯರು, ಸಮಾಜ ಕಾರ್ಯಕರ್ತರು, ಕ್ಷೇತ್ರ ಕಾರ್ಯಕರ್ತರು, ಸರ್ಕಾರಿ ನೌಕರರು, ಅಧಿಕಾರಿಗಳು, ಜನಪ್ರತಿನಿಧಿಗಳು ಹೀಗೆ ಮಕ್ಕಳ ರಕ್ಷಣೆಗೆ ಸಂಬಂಧಿಸಿದ ಪ್ರತಿಯೊಬ್ಬ ವ್ಯಕ್ತಿಯೂ ಆತ್ಮಸಾಕ್ಷಿಯಿಂದ ಕೆಲಸ ನಿರ್ವಹಿಸಬೇಕು.

೨. ಮಕ್ಕಳ ರಕ್ಷಣೆಯ ವಿಷಯ ಬಂದಾಗ ಯಾವ ಕಾಲಕ್ಕೂ ಭ್ರಷ್ಟಾಚಾರಕ್ಕೆ ಆಸ್ಪದ ಬಾರದಂತೆ ಎಚ್ಚರ ವಹಿಸಬೇಕು. ಆ ರೀತಿಯ ಮಾನಸಿಕ ಸ್ಥಿತಿಯನ್ನು ಬೆಳೆಸಲು ಜಾಗೃತಿ ಕಾರ್ಯಕ್ರಮಗಳನ್ನು ವೈಯಕ್ತಿಕ

ಮತ್ತು ಸಾಮುದಾಯಿಕ ನೆಲೆಯಲ್ಲಿ ನಡೆಯಬೇಕು. ಜೊತೆಗೆ ಮಕ್ಕಳ ರಕ್ಷಣೆಯಲ್ಲಿ ಸರ್ಕಾರದಷ್ಟೇ ಜವಾಬ್ದಾರಿಯನ್ನು ಮಗುವಿನ ನೆರೆಹೊರೆಯ ಸಮುದಾಯ ತೆಗೆದುಕೊಳ್ಳುವಂತಾಗಬೇಕು.

೩. ಮಕ್ಕಳ ರಕ್ಷಣೆಯಲ್ಲಿ ವಿಶೇಷ ಪಾತ್ರ ವಹಿಸಬಹುದಾದ ಶಿಕ್ಷಕರು, ಸಮಾಜ ಕಾರ್ಯಕರ್ತರು ಮತ್ತು ಪೊಲೀಸ್ ಸಿಬ್ಬಂದಿಯಲ್ಲಿ ತುಂಬಾ ಸೂಕ್ಷ್ಮತೆ ಮತ್ತು ಜವಾಬ್ದಾರಿಯನ್ನು ಮನಶಾಸ್ತ್ರೀಯ ಹಾಗೂ ಸಮಾಜಶಾಸ್ತ್ರೀಯ ನೆಲೆಯಲ್ಲಿ ತಿಳಿಸಿಕೊಡಬೇಕು.

## ಉಲ್ಲೇಖಿತ ಗ್ರಂಥಗಳು


೧. ರಾಮ ಮನೋಹರ ಲೋಹಿಯಾ (೧೯೮೬), ಜಾತಿ ಪದ್ಧತಿ, ಕನ್ನಡಕ್ಕೆ ಅನುವಾದ, ಹಸನ್ ನಯೀಂ ಸುರಕೋಡ, ಲಂಕೇಶ್ ಪ್ರಕಾಶನ, ಬೆಂಗಳೂರು,

೨. ಪ್ರಶಾಂತ್ ಎಚ್. ಡಿ., (೨೦೧೪), ಶಿಕ್ಷಣದ ಹಕ್ಕು ಕಾಯಿದೆ-೨೦೦೯ ಹಕ್ಕಲ್ಲ ಹಕ್ಕಿನ ಪ್ರತೀಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪು, ೫೮

೩. ಹೀಗೊಂದು ಪಯಣ, (೨೦೦೮), ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ, ಘಟಪ್ರಭಾ, ಪು. ೧೦೦-೧೦೧

೪. ಪ್ರಜಾವಾಣಿ, ಕಾಮನಬಿಲ್ಲು, ದಿನಾಂಕ ೨೧-೧-೨೦೧೭, ಬೆಂಗಳೂರು.

೫. ಪುಟ್ಟಹೆಜ್ಜೆ: ಸದ್ದು ಕೇಳಿ, ಮಕ್ಕಳ ಕಥೆಗಳ ಮರುಪಯಣ, ೨೦೧೫, ಕರ್ನಾಟಕ ಸರ್ಕಾರ, ಜಿಲ್ಲಾಡಾಳಿತ ಯುನಿಸೆಪ್, ಮಕ್ಕಳ ಸಂರಕ್ಷಣಾ ಯೋಜನೆ, ರಾಯಚೂರು. ಪು. ೧೧-೧೨

೬. ಚಂದ್ರ ಪೂಜಾರಿ ಎಂ., (೨೦೧೬), ದಲಿತ ಮಾನವಾಭಿವೃದ್ಧಿ, ದಲಿತ ಹಕ್ಕುಗಳ ಸಮಿತಿ ಕರ್ನಾಟಕ, ಪು. ೪೪

೭. ವಸಂತಕುಮಾರ ಎನ್. ಕೆ, (೨೦೦೯), ಹಸಿವಿನ ಸಾಮ್ರಾಜ್ಯಕ್ಕೆ ಕೊನೆಯೆಂತು?, ಚಿಂತನ ಪುಸ್ತಕ, ಬೆಂಗಳೂರು, ಪು. ೬೩

೮. Pandey S.P., Awadesh Kr.Singh, and Sanjay Kr. Paney, (2008), Rehabilitation of disadvanced Children and Women Sex Workers.Ministery of Women and Child Development, Social Justice and Empowerment, Govt. of India. P. 67

೯. ವಾಸುದೇವ ಶರ್ಮ (೨೦೦೮), ಮಕ್ಕಳಿಗಾಗಿ ಮಕ್ಕಳ ಹಕ್ಕುಗಳು, ಚೈಲ್ಡ್ ರೈಟ್ಸ್ ಟ್ರಸ್ಟ್, ಬೆಂಗಳೂರು, ಪು. ೭೬

# ಅನುಬಂಧ-೧

## ಪ್ರಕರಣ ಅಧ್ಯಯನಗಳು: ಲೈಂಗಿಕ ಜೀತದ ನಂತರದ ಬದುಕು

### ಪ್ರಕರಣ-೧: ಛಾಯಾ ಪ್ರಕರಣ

ಛಾಯಾ ೩೧ ವರ್ಷದ ದೇವದಾಸಿ ಮಹಿಳೆ. ಇವಳು ತನ್ನ ತಂದೆ ತಾಯಿಗೆ ಇರುವ ಮೂರು ಮಕ್ಕಳಲ್ಲಿ ಒಬ್ಬಳೇ ಹೆಣ್ಣು ಮಗಳು. ಚಿಕ್ಕ ವಯಸ್ಸಿನಲ್ಲಿಯೆ ತನ್ನ ತಂದೆಯಿಂದಲೇ ಲೈಂಗಿಕ ದಂಧೆಯ ಮನೆಗೆ ಸಾಗಾಣಿಕೆಗೊಂಡ ಇವಳು, ತನ್ನ ಮೂವತ್ತನೇ ವಯಸ್ಸಿನಲ್ಲಿ ಆ ಜೀವನ(ಲೈಂಗಿಕ ಜೀವನ) ಬೇಡವೆನ್ನಿಸಿ ತನ್ನ ಊರಿಗೆ ಬಂದವಳು. ಹಾಗೆ ಬಂದವಳು ತನ್ನ ಮುಂದಿನ ಬದುಕು ಕಟ್ಟಿಕೊಳ್ಳಲು ಏನಾದರೂ ಸಹಾಯ ಸಿಗಬಹುದೆಂದು ಅಥಣಿಯ ವಿಮೋಚನಾ ಸಂಸ್ಥೆಗೆ ಬಂದಿದ್ದಳು. ಆಗ ಅವಳು ನಮ್ಮೊಡನೆ ಮಾತನಾಡಿದ, ಹಂಚಿಕೊಂಡ ವಿಷಯಗಳನ್ನು ಇಲ್ಲಿ ಅವಳದೆ ಮಾತಿನಲ್ಲಿ ವಿವರಿಸಲಾಗಿದೆ.

**ಪೂರ್ವ**

*ನಾನು ಛಾಯಾ ೩೧ ವರ್ಷದ ದೇವದಾಸಿ ಮಹಿಳೆ. ಅನಕ್ಷರಸ್ಥೆ. ನಾನು ನಮ್ಮ ತಂದೆಗೆ ಒಬ್ಬಳೇ ಮಗಳು. ನನಗೆ ಒಬ್ಬ ಅಣ್ಣ ಮತ್ತು ಒಬ್ಬನು ತಮ್ಮ ಇದ್ದಾರೆ. ನನ್ನ ಹೆಸರು ಶಾಲೆಯಲ್ಲಿ ದಾಖಲಾಗಿದ್ದರೂ, ಶಾಲೆಯ ಮೆಟ್ಟಲು ಹತ್ತಿದ್ದು, ಶಾಲೆಯು ಕೊಡುವ ಬಟ್ಟೆ ಬರೆಗಾಗಿ ಮಾತ್ರ. ೭ನೇ ವರ್ಗದವರೆಗೂ ಶಿಕ್ಷಕರು ಹಾಗೆಯೇ ಪಾಸು ಮಾಡುತ್ತಾ ನಡೆದಿದ್ದರು. ಮುಂದೇನಾಯಿತೆಂಬುದು ನನಗೇ ಗೊತ್ತಿಲ್ಲ. ನನಗೆ ನನ್ನ ಸಹಿ ಮಾಡುವಷ್ಟೂ ಸಹ ಅಕ್ಷರ ಜ್ಞಾನವಿಲ್ಲ.*

*ನನ್ನ ಅಜ್ಜಿಗೆ(ತಂದೆಯ ತಾಯಿ) ಹೆಣ್ಣುಮಕ್ಕಳಿರಲಿಲ್ಲ. ಆರು ಜನ ಗಂಡುಮಕ್ಕಳೇ ಇದ್ದರು. ಹೆಣ್ಣು ಮಕ್ಕಳಿರದ ಅಜ್ಜಿ, ಎಲ್ಲಮ್ಮ ದೇವರಿಗೆ ಹರಕೆ ಹೊತ್ತಿದ್ದಳಂತೆ. ಒಂದು ವೇಳೆ ತನ್ನ ಗಂಡು ಮಕ್ಕಳಿಗೆ ಹೆಣ್ಣುಮಕ್ಕಳು(ಅಂದರೆ ಮೊಮ್ಮಕ್ಕಳು) ಹುಟ್ಟಿದರೆ ಅವರನ್ನು ದೇವದಾಸಿ ಮಾಡಿ ದೇವರಿಗೆ ಅರ್ಪಿಸುತ್ತೇನೆಂದು. ನಮ್ಮ ಅಜ್ಜಿಯ ಆರು ಗಂಡುಮಕ್ಕಳ ನಡುವೆ ೭ ಜನ ಹೆಣ್ಣುಮಕ್ಕಳು ಹುಟ್ಟಿದ್ದೇವೆ. ನನ್ನ ಅಜ್ಜಿ ಈಗ ಇಲ್ಲ. ಸತ್ತು ಹೋಗಿದ್ದಾಳೆ. ಹುಟ್ಟಿದ ೭ ಹೆಣ್ಣು ಮೊಮ್ಮಕ್ಕಳಲ್ಲಿ ಇಬ್ಬರಿಗೆ ಮದುವೆ ಮಾಡಿದ್ದಾರೆ. ಉಳಿದ ಐದೂ ಹೆಣ್ಣು ಮಕ್ಕಳನ್ನೂ ಅಜ್ಜಿಯ ಹರಕೆಯಂತೆ ದೇವದಾಸಿ ಮಾಡಿದ್ದಾರೆ. ತಮ್ಮ ತಾಯಿ ಇಲ್ಲದ ಅಂದರೆ ನನ್ನ ಅಜ್ಜಿ ಇಲ್ಲದ ಹೊತ್ತಿನಲ್ಲಿಯೂ ಅವರ ಮಕ್ಕಳು(ಅಂದರೆ ನನ್ನ ಅಪ್ಪ, ದೊಡ್ಡಪ್ಪ, ಕಾಕಾ) ತಮ್ಮ ಅವ್ವ ಹೊತ್ತ ಹರಕೆಯನ್ನು ಶಿರಸಾ ವಹಿಸಿ ಪಾಲಿಸಿದ್ದಾರೆ. ಅವರಲ್ಲಿ ನಾನೂ ಕೂಡಾ ಒಬ್ಬಳು.*

*ನನ್ನ ತಂದೆ ಮದ್ಯಪಾನಿಯಾಗಿದ್ದು, ಬಟ್ಟೆಗಳನ್ನು ಇಸ್ತ್ರಿ ಮಾಡುತ್ತಿದ್ದ. ಅವನು ದುಡಿಯುವುದರಲ್ಲಿ ಬಂದದ್ದು ಕಡಿಮೆ. ಅದರಲ್ಲಿ ತನ್ನ ಚಟಕ್ಕೆ ಆಗಿ, ಮಿಕ್ಕಿ ಉಳಿದರೆ ಮನೆಗೆ ಕೊಡುತ್ತಿದ್ದ. ನನ್ನ*

ತಾಯಿಯೊಬ್ಬಳೇ ಕೂಲಿ ಮಾಡುತ್ತಿದ್ದಳು. ಹಾಗಾಗಿ ನಮ್ಮ ಮನೆಯಲ್ಲಿ ಊಟಕ್ಕೂ ಕೂಡ ಕಷ್ಟವಿತ್ತು. ನನ್ನ ತಂದೆಗೆ ತನ್ನ ಅಣ್ಣನ ಮಕ್ಕಳು ದೇವದಾಸಿಯರಾಗಿ ಬೇರೆ ಬೇರೆ ಕಡೆ ಇದ್ದು ದಂಧೆ ಮಾಡಿ ಹಣ ಗಳಿಸುತ್ತಿರುವುದು ಚೆನ್ನಾಗಿ ಗೊತ್ತಿತ್ತು. ಹೀಗಾಗಿ ನನ್ನನ್ನೂ ದೇವದಾಸಿ ಮಾಡಲು ಹುನ್ನಾರ ನಡೆಸಿದ್ದ. ನನ್ನ ದೊಡ್ಡಮ್ಮನೂ(ತಾಯಿಯ ಅಕ್ಕ) ದೇವದಾಸಿಯಾಗಿದ್ದು ಸಾಂಗ್ಲಿ(ಮಹಾರಾಷ್ಟ್ರ) ಯಲ್ಲಿ ದಂಧೆ ಮಾಡುತ್ತಿದ್ದಳು. ಆದರೆ ನನ್ನನ್ನು ದೇವದಾಸಿ ಮಾಡಲು ನನ್ನ ತಾಯಿಗೆ ಮನಸ್ಸಿರಲಿಲ್ಲ. ಈ ಕುರಿತು ನನ್ನ ತಂದೆ ಕುಡಿದು ಬಂದು ನನ್ನ ತಾಯಿಯ ಜೊತೆ ತುಂಬಾ ಜಗಳವಾಡುತ್ತಿದ್ದ. ನನಗೂ ಕೂಡ ಅಲ್ಪ ಸ್ವಲ್ಪ ತಿಳಿಯುತ್ತಿತ್ತು. ನಾನೂ ಜಗಳವಾಡುತ್ತಿದ್ದೆ. ಆದರೆ ಎಂಟು-ಒಂಬತ್ತು ವರ್ಷದ ನನ್ನ ಬೇಕು ಬೇಡಗಳಿಗೆ ಅಲ್ಲಿ ಯಾವುದೇ ಬೆಲೆ ಇರಲಿಲ್ಲ. ತನ್ನ ತಾಯಿಯು ಮಾಡಿದ ಹರಕೆಯನ್ನೇ ಮುಂದಿಟ್ಟುಕೊಂಡು ೮-೯ ವಯಸ್ಸಿನ ನನ್ನನ್ನು ಮುತ್ತು ಕಟ್ಟಿಸಿ ದೇವದಾಸಿ ಮಾಡಿದ್ದರು ನನ್ನ ತಂದೆ.

ನನ್ನನ್ನು ದೇವದಾಸಿ ಮಾಡಿದ ನಂತರ ಋತುಮತಿಯಾಗುವವರೆಗೂ ಮನೆಯಲ್ಲೇ ಉಳಿಸಿ ಕೊಂಡಿದ್ದರು. ಹನ್ನೆರಡು ತುಂಬುತ್ತಿದ್ದಂತೆಯೇ ಋತುಮತಿಯಾದ ನನ್ನನ್ನು, ನನ್ನ ತಾಯಿ ತನ್ನ ಅಕ್ಕನ ಮಗಳ ಹತ್ತಿರವೇ ಸಾಂಗ್ಲಿಗೆ ಕಳಿಸಿದ್ದಳು.

**ಜೀತದ ಸ್ಥಿತಿ**

ನನ್ನನ್ನು ಲೈಂಗಿಕ ದಂಧೆಗೆ ಕಳಿಸುವಾಗ ನನ್ನ ತಂದೆ ಘರವಾಲಿಯಾದ ನನ್ನ ಅಕ್ಕ(ದೊಡ್ಡಮ್ಮನ ಮಗಳು) ತಮಗೆ ಇಷ್ಟಿಷ್ಟು ಹಣ ಕೊಡಬೇಕು ಎಂಬ ಕರಾರಿನೊಂದಿಗೆ, ಬಿಟ್ಟು ಬಂದಿದ್ದ. ಆದರೂ ನಾನು ದಂಧೆ ಮಾಡಲು  ಪ್ರಾರಂಭವಾದಾಗಿನಿಂದ, ಅಲ್ಲಿ ನನಗೆ ಊಟ ಬಟ್ಟೆ ಹೊರತು ಪಡಿಸಿದರೆ ಬೇರೆ ಏನೂ ಸಿಕ್ಕಿರಲಿಲ್ಲ. ಘರವಾಲಿ(ಛಾಯಾಳ ದೊಡ್ಡಮ್ಮನ ಮಗಳು) ಗಿರಾಕಿಗಳ ಹತ್ತಿರ ಹಣ ತೆಗೆದುಕೊಂಡು, ಅವರನ್ನು ನನ್ನ ಹತ್ತಿರ ಕಳಿಸುತ್ತಿದ್ದಳು. ಅವರನ್ನು ತೃಪ್ತಿಪಡಿಸುವುದೊಂದೇ ನನ್ನ ಕೆಲಸ. ಹೆಚ್ಚಿಗೆ ಏನೂ ಮಾತನಾಡುವಂತಿರಲಿಲ್ಲ. ಹಾಗೇನಾದರೂ ಅಕ್ಕ ಎನ್ನುವ ಸಲುಗೆಯಿಂದ ಮಾತನಾಡಿದರೆ, ಹೊಡೆಯುವುದು ಅವಾಚ್ಯ ಶಬ್ದಗಳಿಂದ ನಿಂದಿಸುವುದು ಪ್ರಾರಂಭವಾಗುತ್ತಿತ್ತು. ಹೊರಗೆ ಹೋಗಲು ಬಿಡುತ್ತಿರಲಿಲ್ಲ. ಒಳಗೇನೇ ಕೂಡಿ ಹಾಕಿದಂತೆ ಇಟ್ಟಿರುತ್ತಿದ್ದಳು. ನಮ್ಮ ಮನೆಗೆ ಹಣ ಕಳಿಸುತ್ತೇನೆ ಅಂದವಳು, ಕಳಿಸಿರಲೇ ಇಲ್ಲ. ಈ ಕುರಿತು ನನ್ನ ತಂದೆ ಜಗಳ ತೆಗೆದರೆ ಅವನಿಗಷ್ಟು ಮದ್ಯ ಕುಡಿಸಿ ಸುಮ್ಮನಾಗಿಸಿ ಬಿಡುತ್ತಿದ್ದಳು. ಅವರು ನನ್ನನ್ನು ನೋಡಲು ಬಂದಾಗ ಅವರಿಗೆ ದಿನಸಿ ಬಟ್ಟೆ ಬರೆ ಮೊದಲಾದ ಅವಶ್ಯಕ ವಸ್ತುಗಳನ್ನು ಖರೀದಿ ಮಾಡಿ ಕಳಿಸಿಕೊಡುತ್ತಿದ್ದಳು. ಇವರ ಹೊರತು ಅವರಿಗೆ ಬೇರೆ ಏನೂ ಸಿಗುತ್ತಿರಲಿಲ್ಲ. ಹೀಗೆ ಬಂದ ನನ್ನನ್ನು ಸುಮಾರು ಒಂದು ವರ್ಷವಾದರೂ ಮನೆಗೆ ಬಿಡದೇ. ಒಳಗೇ ಕೂಡಿ ಹಾಕಿದ್ದಳು. ಘರವಾಲಿ ನನ್ನ ಸಂಬಂಧೀ ಅಕ್ಕನೇ ಆಗಿದ್ದರಿಂದ ಅವಳೊಡನೆ ಜಗಳವಾಡಿ ಊರಿಗೆ ಬಂದು ಬಿಟ್ಟೆ. ಆಗ ನನಗೆ ಹದಿಮೂರು  ವರ್ಷ.

ನನ್ನಿಂದ ಹಣ ಗಳಿಸುವ ಆಸೆ ಇದ್ದ ನನ್ನ ತಂದೆಯು. ಮೊದಲ ಸಾರಿ ಮೋಸವಾಗಿದ್ದರಿಂದ. ಈ ಬಾರಿ ತನ್ನ ಅಣ್ಣನ ಮಕ್ಕಳ ಕಡೆಗೆ ನನ್ನನ್ನು ಬಿಡಲು ವಿಚಾರಿಸಿ. ಉತ್ತರಪ್ರದೇಶದ ಅಲಹಾಬಾದಿಗೆ ಬಿಟ್ಟು ಬಂದಿದ್ದ. ಅವಳು ಬಾಡಿಗೆ ಮನೆಯೊಂದರಲ್ಲಿ ಹುಡುಗಿಯರನ್ನು ಇಟ್ಟುಕೊಂಡು ಅಲ್ಲಿ ದಂಧೆ ನಡೆಸುತ್ತಿದ್ದಳು. ಅವಳ ಹತ್ತಿರ ದುಡ್ಡು ತೆಗೆದುಕೊಂಡು. ಮುಂದೆ ಸಮಯಕ್ಕೆ ಸರಿಯಾಗಿ ಹಣ

ಕಳಿಸುವ ಕರಾರನ್ನು ಮಾಡಿಕೊಳ್ಳುತ್ತಾನೆ. ಆದರೂ ಸಹ ನಮ್ಮ ಜೊತೆಗೆ ಮೊದಲಿನ ಅನುಭವವೇ ಕಾಯ್ದಿತ್ತು. ನನ್ನ ತಂದೆ ಮುಂದೆ ಹಣ ಕಳಿಸುತ್ತೇನೆ ಎಂದು ಹೇಳುತ್ತ ಬಂದ ಅವಳು ನಿಜಕ್ಕೂ. ನನ್ನ ಅಪ್ಪ ಅಮ್ಮನಿಗೆ ಹಣ ಕಳಿಸಿರಲೇ ಇಲ್ಲ. ಹೆಚ್ಚಿಗೆ ಏನಾದರೂ ಕೇಳಿದರೆ, "ಮನೆ ಬಾಡಿಗೆ, ನೀರು, ಲೈಟು, ಊಟ, ಬಟ್ಟೆ ಇವುಗಳಿಗೆ ಯಾರು ದುಡ್ಡು ಕೊಡುತ್ತಾರೆ. ಈಗಾಗಲೇ ನಿಮ್ಮ ಮನೆಯವರಿಗೆ ಕೊಟ್ಟ ಹಣದ ಸಾಲವನ್ನು ಯಾರು ತೀರಿಸುತ್ತಾರೆ. ಅದಕ್ಕೆ ಬಡ್ಡಿ ಯಾರು ತುಂಬುತ್ತಾರೆ" ಎಂದು ಜಗಳಕ್ಕೆ ಬರುತ್ತಿದ್ದಳು.

ದಂಧೆಯ ಮನೆಗಳಿಗೆ ಹೆಚ್ಚು ಹೆಚ್ಚು ಚಿಕ್ಕ ಹುಡುಗಿಯರನ್ನೇ ತರುತ್ತಿದ್ದರು. ಕರ್ನಾಟಕದ ಜನರು ಬಹಳಷ್ಟು ಇದ್ದರು. ಚಿಕ್ಕವರೆಂದರೆ ೧೦ ವಯಸ್ಸಿನ ಹುಡುಗಿಯರಿಂದಲೂ ಅಲ್ಲಿ ಕಾಣಲು ಸಿಗುತ್ತಿದ್ದರು. ವಯಸ್ಸು ಹೆಚ್ಚಾದವರಿಗೆ ಅಲ್ಲಿ ಜಾಗವೇ ಇರುತ್ತಿರಲಿಲ್ಲ. ದಂಧೆಯ ಮನೆಗಳಲ್ಲಿ ೧೮ ವರ್ಷದ ಒಳಗಿನ ಹುಡುಗಿಯರು ಇರುವುದು ಗೊತ್ತಾದರೆ ಪೊಲೀಸ್ ಅವರು ರೇಡ್ ಮಾಡಿ ಅವರನ್ನು ಹಿಡಿದುಕೊಂಡು ಹೋಗುತ್ತಿದ್ದರು. ನನ್ನನ್ನೂ ೨-೩ ಸಾರಿ ಜೈಲಿಗೆ ಹಾಕಿದ್ದರು. ನಾನೂ ಒಂದು ಸಾರಿ ೪ ದಿನ ಜೈಲಿನಲ್ಲಿ ಇದ್ದೆ. ನಂತರ ಘರವಾಲಿ ಬಿಡಿಸಿಕೊಂಡು ಬಂದಿದ್ದಳು. ಆಗೆಲ್ಲ ನನ್ನ ಜೊತೆಗಿದ್ದ ಹುಡುಗಿಯರು "ನಾವೆಲ್ಲ ಬಡತನದಿಂದ ಊಟಕ್ಕಿಲ್ಲದೇ ಇಲ್ಲಿಗೆ ಬಂದೀವಿ. ದಂಧಾದ ಮನೀನ್ಯಾಗ ಹೊಡೆಸಿಕೊಂಡು ಬೈಸಿಕೊಂಡು ಸಾಯುದಕ್ಕಿಂತ, ಇಲ್ಲಿಯೇ ಜೈಲಿನ್ಯಾಗ ಕೊಡೋ ಊಟ ತಿಂದು ಆರಾಮಾಗಿ ಇರುನು" ಎಂದು ಪರಸ್ಪರ ಚರ್ಚಿಸುತ್ತಿದ್ದರು.

ನಾವು ಪೊಲೀಸರಿಗೆ ಸಿಕ್ಕಾಗಲೆಲ್ಲ ಘರವಾಲಿಯು ಪೊಲೀಸರಿಗೆ ದುಡ್ಡು ಕೊಟ್ಟು ನಮ್ಮನ್ನು ಬಿಡಿಸಿಕೊಂಡು ಹೋಗುತ್ತಿದ್ದಳು. ಅಲ್ಲಿ ಪೊಲೀಸರಿಗೆ, ಮಧ್ಯವರ್ತಿಗಳಿಗೆ ಮಾಡಿದ ಖರ್ಚು ಎಷ್ಟಿರುತ್ತಿತ್ತೋ ಏನೋ, ಆದರೆ ಒಂದಕ್ಕೆ ಮತ್ತೊಂದು ಹಚ್ಚಿ ೨೦-೩೦ ಸಾವಿರ ಮಾಡಿ, ಅದಕ್ಕೆ ಮತ್ತೆ ಬಡ್ಡಿ ಸೇರಿಸಿ ಸಾಲವಾಗಿ ಇಡುತ್ತಿದ್ದಳು. ಆ ಸಾಲ ತೀರುತ್ತಲೆ ಇರಲಿಲ್ಲ. ನಾವು ಹೊರಗೆ ಬರುತ್ತಿರಲಿಲ್ಲ (ಛಾಯಾ ನಗುತ್ತಲೇ ಹೇಳುತ್ತಾಳೆ. ಆದರೆ ನಗುವ ಸಂದರ್ಭದಲ್ಲಿ ಕಣ್ಣಾಲಿಗಳಲ್ಲಿ ತಿಳಿಯಾದ ನೀರು ಹರಿದಾಡುತ್ತಿತ್ತು).

ಸುಖ ಪಡೆಯುವುದಕ್ಕಾಗಿ ನಡೆಸುವ ಈ ಪ್ರಕ್ರಿಯೆಯಿಂದ ದಂಧೆ ಮಾಡುತ್ತಿದ್ದ ನಿಮಗೆ ಏನು ಅನ್ನಿಸುತ್ತಿತ್ತು? ಅದು ಸುಖವೋ, ನೋವೋ? ಎಂಬ ಪ್ರಶ್ನೆಗೆ " ಹತ್ತು ಜನರ ಮುಂದೆ ಕೈ ಹಿಡಿದು ಕರೆತಂದ ಗಂಡ ಕೊಡುವ ಸುಖವೇ  ಮತ್ತೊಂದು ತಾಸಿಗೆ ನೋವು ಅನ್ನಿಸುತ್ತದೆಯಂತೆ. ಅಂತಾ ಹೊತ್ತಿನೊಳಗೆ. ಇದು ದೇಹ ಮನಸ್ಸಿಗೆ ಸಂಬಂಧ ಪಟ್ಟ ವಿಚಾರ. ಬಂದ ಗಿರಾಕಿಗಳು ಎಂತೆಂತವರೋ ಇರುತ್ತಾರೆ. ಏನೂ ತಿಳಿಯಲಾರದಂತಹ ಸಣ್ಣ ವಯಸ್ಸಿನ ಹುಡುಗ್ರೂ ನಮ್ಮ ಕಡೆಗೆ ಬರುತ್ತಾರೆ. ಇನ್ನೊಂದು ತಾಸಿಗೆ ಸಾಯುತ್ತಾನೆ ಅನ್ನುವ ಮುದುಕನೂ ನಮ್ಮ ಹತ್ತಿರ ಬರುತ್ತಾನೆ. ಕುಡುಕರು ಎಂತೆಂತವರೋ ಇರುತ್ತಾರೆ. ಎಲ್ಲರೊಂದಿಗೂ ನಾವು ಮಲಗಾಕ ಬೇಕು. ಯಾಕೆಂದರೆ ಇದು ಹಣದ ವಿಷಯ ಇದೆ. ಸುಖದ ಅಥವಾ ನೋವಿನ ಸಂಗತಿ ಅಲ್ಲ. ನಮ್ಮಿಂದ ಅವರಿಗೆ ಸುಖ ಸಿಗಬಹುದು. ಆದ್ರ ಅವರಿಂದ ನಮಗ ಸುಖ ಅಂತ ಏನೂ ಇಲ್ಲ. ಆಯಾಸವಾದರೂ, ಜ್ವರ ಬಂದರೂ. ಅವೆಲ್ಲ ಬಿಡ್ರಿ. ತಿಂಗಳಿನ ಮೂರು ದಿನ ಸಹಿತ ಬಿಡುವುದಿಲ್ಲ. ಅಂತ ಕ್ರೂರ ಜಗತ್ತು ಅದು. ಹಗಲು ಯಾವುದೋ ರಾತ್ರಿ ಯಾವುದೋ ಗೊತ್ತಿರುವುದಿಲ್ಲ. ನಮ್ಮನ್ನು ಕೇಳಿಕೊಂಡು ಬರುವವರು ಕಡಿಮೆಯಾದಾಗ ಮಾತ್ರ

ನಮಗೆ ಹೊರಗಿನ ಜಗತ್ತು ಕಾಣಿಸುತ್ತದೆ. ೨೨-೨೩ ವರ್ಷಗಳೆಂದರೆ ನಮ್ಮನ್ನು ದಂಧೆಯ ಮನೆಯಿಂದ ಹೊರಗೆ ಬಿಡುತ್ತಾರೆ. ಅಲ್ಲಿಯವರೆಗೂ ನಮ್ಮ ಸಾಲವೇ ತೀರಿರೋದಿಲ್ಲ. ಕೈಯಲ್ಲಿ ಅಷ್ಟೋ ಇಷ್ಟೋ ತುರುಕಿ ನಮ್ಮನ್ನು ಮುಕ್ತಗೊಳಿಸುತ್ತಾರೆ. ಆಗ ನಾವು ಬೇಕೆನಿಸಿದರೆ ಅಲ್ಲಿರಬಹುದು. ಇಲ್ಲದಿದ್ದರೆ ಇಲ್ಲ. ಆ ಸಂದರ್ಭದಲ್ಲಿ ನಾವು ಮನೆಗೂ ಹೋಗುವಂತಿಲ್ಲ. ಆದರೂ ರಸ್ತೆದಾಗ ನಿಂತಕೊಂಡು ಗಿರಾಕಿಗಳನ್ನು ಕಾಯಲು ಶುರು ಮಾಡುತ್ತೇವೆ. ಸಿಕ್ಕ ಗಿರಾಕಿಗಳು ಕೊಡುವ ಹಣದಲ್ಲಿ ಅವರಿಗೆ ಅರ್ಧ, ನಮಗೆ ಅರ್ಧ. ಹಿಂಗ ಮತ್ತೊಂದು ಹೊಸ ಜೀವನ ಶುರುವಾಗುತ್ತದೆ.

ನಮಗೆಲ್ಲ ಇಷ್ಟರ ಮಧ್ಯ ಏಡ್ಸ್ ರೋಗದ ಭಯ ತುಂಬಾನೆ ಕಾಡುತ್ತಿತ್ತು(ಸ್ವಲ್ಪ ಹೊತ್ತು ಸುಮ್ಮನೇ ಕುಳಿತ ಛಾಯಾ, ಮತ್ತೆ ಮಾತನ್ನು ಮುಂದುವರೆಸಿದ್ದಳು). ಅಲ್ಲಿ ಎಲ್ಲರೂ ಕಾಂಡೋಮ್ ಕಡ್ಡಾಯವಾಗಿ ಬಳಸುತ್ತಾರೆ. ಆದರೂ ಕೆಲವು ಸಾರಿ, ಕಾಂಡೋಮ್ ಬಳಸದೇ ಹಾಗೆಯೇ ಬರುತ್ತೇನೆಂದವನಿಂದ ಘರವಾಲಿ ಹೆಚ್ಚಿಗೆ ಹಣ ತೆಗೆದುಕೊಂಡು, ಅವನನ್ನ ಒಳಗ ಕಳಿಸುತ್ತಿದ್ದಳು. ನಾವೇನಾದರೂ ನಿರಾಕರಿಸಿದರೆ, ಆತ ಹೋಗಿ ಅವಳ ಹತ್ತಿರ ಹೇಳುತ್ತಾನೆಂದು. ನಮಗೆ ಬೇಡ ಅನ್ನಿಸಿದರೂ ಮಲಗುತ್ತಿದ್ದೇವು. ಅಲ್ಲಿ ನಮ್ಮ ಸಿಟ್ಟು ಸೆಡವು ನಡೀತಿರಲಿಲ್ಲ. ಒಂದು ಮಶೀನ್‌ನ ಹಾಗೆ ಕೆಲಸ ಮಾಡಬೇಕು. ಅದಕ್ಕೆ ವಿರೋಧ ವ್ಯಕ್ತ ಪಡಿಸಿದರೆ ಹೊಡೆತ, ಬೈಗುಳ, ಉಪವಾಸ ಅನುಭವಿಸಬೇಕಿತ್ತು. "ಕಾಂಡೋಮ್ ಬಿಟ್ಟರೆ ನಿಮಗೇನು ಜಿಡ್ಡು ಹತ್ತಂಗಿಲ್ಲ(ಏಡ್ಸ್), ಹೊಟ್ಟೆ ನಿಲ್ಲಂಗಿಲ್ಲ(ಗರ್ಭ ಧರಿಸುವುದು), ಅಷ್ಟಕ್ಕೂ ನಿಂತ್ರ(ಗರ್ಭ ಕಟ್ಟಿದರೆ) ಗುಳಿಗಿ ತಗೊಂಡ್ರ ಬಿದ್ದು ಹೊಕ್ಕೈತಿ(ಗರ್ಭ ಪಾತವಾಗುವುದು). ನೀವು ಮಕ್ಕೊಳ್ಳದಿದ್ರ ನಿಮ್ಮನ್ಯಾನವ್ರು ಬಂದ ಮಕ್ಕೋತಾರೇನ "ಅಂತ ಘರವಾಲಿ ಹಂಗಿಸುತ್ತಿದ್ದಳು. ಘರವಾಲಿ ನನಗೆ ಅಕ್ಕನೇ ಆಗಬೇಕಿತ್ತು. ಆದರೂ ಅವಳು ಹಾಗೆ ಮಾತನಾಡುತ್ತಿದ್ದಳು. ಇನ್ನು ಬೇರೆಯವರ ಸ್ಥಿತಿ ಹೇಗೋ ಏನೋ. ವಿಪರ್ಯಾಸವೆಂದರೆ, ನನಗೆ ಕೆಲವು ಗಿರಾಕಿಗಳು ೧೦-೨೦ ರೂಪಾಯಿ ಭಕ್ಷೀಸು ಅಂತ ಕೈಯಲ್ಲಿ ಕೊಟ್ಟು ಹೋಗಿರುತ್ತಿದ್ದರು. ಘರವಾಲಿಯನ್ನು ಕದ್ದು ಮುಚ್ಚಿ ಕೂಡಿಸಿಟ್ಟಿರುತ್ತಿದ್ದೆ. ಕಾಂಡೋಮ್ ಬೇಡ ಎಂದು ಬಂದವನಿಗೆ ಅವನು ಘರವಾಲಿ ಕೈಯಲ್ಲಿ ಕೊಟ್ಟಷ್ಟು ಹಣವನ್ನು ನಾನೇ ಅವನಿಗೆ ಕೊಟ್ಟು ಕಳಿಸುತ್ತಿದ್ದೆ.

ಈ ಮಧ್ಯ ನನಗೆ ಪಕ್ಕದ ಮನೆಯ ಹುಡುಗನೊಡನೆ ಪ್ರೇಮ ಬೆಳೆದಿತ್ತು. ಪರಸ್ಪರ ತುಂಬಾ ಪ್ರೀತಿಸುತ್ತಿದ್ದೆವು. ಇಬ್ಬರೂ ಅಲ್ಲಿಂದ ಪಾರಾಗಿ ಹೋಗಿ ಮದುವೆಯಾಗಬೇಕೆಂದು ನಿರ್ಧರಿಸಿದ್ದೆವು. ಆದರೆ ಅದು ಘರವಾಲಿಗೆ ಗೊತ್ತಾಗಿ ದೊಡ್ಡ ರಂಪ ಮಾಡಿ ನಿಲ್ಲಿಸಿದಳು. ಆದರೆ ಆತನೊಂದಿಗಿನ ಸ್ನೇಹ ಪ್ರೇಮ ಸಂಬಂಧಗಳು ಇಂದಿಗೂ ಇವೆ. ನನ್ನನ್ನು ಭೇಟಿಯಾಗಲೆಂದೇ ಉತ್ತರಪ್ರದೇಶದಿಂದ ಇಲ್ಲಿಯವರೆಗೂ ಪ್ರಯಾಣ ಮಾಡಿ ಬಂದು ಹೋಗುತ್ತಾನೆ.

**ಜೀತದಿಂದ ಹೊರಬಂದ ಸ್ಥಿತಿ**

ಘರವಾಲಿ. ಇಷ್ಟು ದಿನ ನನ್ನನ್ನು ದುಡಿಸಿಕೊಂಡಿದ್ದಕ್ಕಾಗಿ. ನಮ್ಮ ಮನೆಗೆ ಹಣ ಕಳಿಸುತ್ತೇನೆಂದವಳು. ಮಾತು ತಪ್ಪಿದ್ದಳು. ನಮ್ಮ ತಂದೆಗೆ ಹಣ ಕಳಿಸಿರುವುದೇ ಇಲ್ಲ. ಇದು ಗೊತ್ತಾಗಿ ನಾನು ಒಂದು ದಿನ ಅವಳ ಜೊತೆ ತುಂಬಾ ಜಗಳ ಮಾಡಿ. ಪಕ್ಕದ ಮನೆಯಲ್ಲಿ ಇದ್ದ ಕರ್ನಾಟಕದ ಹೆಣ್ಣುಮಗಳೊಂದಿಗೆ ಊರಿಗೆ ಬಂದು ಬಿಟ್ಟಿದ್ದೆ. ಯಾವ ಊಟಕ್ಕಾಗಿ. ಹಣಕ್ಕಾಗಿ ಅಷ್ಟು ದೂರ

ಹೋಗಿದ್ದೆನೋ, ಆ ದಿನ ಬರುವಾಗ, ಮೂರು ದಿನದ ಪ್ರಯಾಣದಲ್ಲಿ ನೀರು ಬಿಟ್ಟರೆ ಮತ್ತೇನೂ ಸಿಕ್ಕಿರಲಿಲ್ಲ. ಕೈಯಲ್ಲಿ ಒಂದು ಪೈಸೆಯೂ ಇರಲಿಲ್ಲ.

ಈಗ ಊರಿಗೆ ಬಂದಿದ್ದೇನೆ. ಮೂವತ್ತೊಂದು ವರ್ಷದ ನನ್ನನ್ನು ನನ್ನ ಸಹೋದರರು ನೋಡಿಕೊಳ್ಳುತ್ತಿದ್ದಾರೆ. ನನ್ನ ಅಣ್ಣನ ಒಂದು ಗಂಡು ಮಗುವನ್ನು ಕಾನೂನು ಮೂಲಕವಾಗಿಯೇ ದತ್ತು ತೆಗೆದುಕೊಂಡು ಬೆಳೆಸುತ್ತಿದ್ದೇನೆ. ಎರಡು ರೂಮಿನ ಮನೆ ಬಿಟ್ಟರೆ ಬೇರೆ ಏನೂ ಇಲ್ಲ. ಅಣ್ಣ ಬಟ್ಟೆ ಹೊಲಿಯುತ್ತಾನೆ. ತಾಯಿ ಕೂಲಿ ಮಾಡುತ್ತಾಳೆ. ಅದರಲ್ಲೇ ಹೊಟ್ಟೆ ತುಂಬಿಸಿಕೊಳ್ಳಬೇಕು. ಓದು ಬರಹ ಗೊತ್ತಿಲ್ಲ. ಸರಕಾರ ದೇವದಾಸಿ ಪಟ್ಟಿ  ಮಾಡಿಕೊಳ್ಳುವಾಗ ನಾನು ಅಲಹಾಬಾದ್‌ನಲ್ಲಿ ಇದ್ದೆ. ಊರಲ್ಲಿ ಇರಲಿಲ್ಲ. ನಮ್ಮ ತಂದೆ ಅಪರಾಧವೆಂದು ಹೆದರಿ ಏನನ್ನೂ ಬರೆಸಿರಲಿಲ್ಲ. ಹಾಗಾಗಿ ದೇವದಾಸಿ ಪಿಂಚಣಿಯೂ ದೊರೆಯುತ್ತಿಲ್ಲ. "ನಮ್ಮ ತಂದೆ-ತಾಯಿ ನನ್ನನ್ನು ಜೀವಂತವಾಗಿ ಕೊಂದರು".

ನೀನು ಊರಿಗೆ ಬಂದು ೪ ವರ್ಷಗಳಾದವು ಈಗ ಹೇಗನ್ನಿಸುತ್ತಿದೆ ಛಾಯಾ? ಎಷ್ಟೋ ಜನ ಮರಳಿ ಮತ್ತೆ ಅದೇ ದಂಧೆಗೆ ಮರಳಿದ ಉದಾಹರಣೆಗಳಿವೆ. ನಿನಗೆ ಹೇಗನ್ನಿಸುತ್ತದೆ? ಎಂದು ಕೇಳಿದಾಗ

"ಎಷ್ಟೋ ಸಾರಿ ಅನ್ನಿಸುತ್ತದೆ. ಮರಳಿ ಅಲ್ಲಿಗೇ ಹೋಗಬೇಕು. ನಾನೇ ಸ್ವಂತ ನಿಂತು ಗಳಿಸಬೇಕು ಅಂತ. ಆದರೆ ಯಾಕೋ ಮನಸ್ಸು ಒಪ್ಪುವಲ್ದು. ನನ್ನ ಜೊತೆಗೆ ಹೋದವರು ಸಾಂಗ್ಲಿ ಮೀರಜ್ಹಾಗ ಅದಾರ. ಅವರು ಊರಿಗೆ ಬಂದಾಗ ನನ್ನನ್ನೂ ಕರೀತಿರ್ತಾರ, "ಯಾಕ ಹಿಂಗ ಇಲ್ಲಿ ಕುಂತೀ. ದುಡಿಯೋ ವಯಸ್ಸಿನ್ಯಾಗ ದುಡಿಬೇಕು ಅಂತ, ಹೇಳ್ತಾರ". ಒಂದು ಸಾರಿ ಬೇಡ ಅಂತ ಬಂದಿದ್ದಾಗಿದೆ. ಯಾವ ಕಾರಣಕ್ಕೂ ತಿರುಗಿ ಹೋಗುವುದಿಲ್ಲವೆಂದು ನಾನು ಅವರಿಗೆ ಹೇಳಿದರೆ, ಅದಕ್ಕೆ ನನ್ನ ಗೆಳತಿಯರು, "ನಿನಗೇನು ನೋಡಿಕೊಳ್ಳಲು ಅಣ್ಣ, ತಮ್ಮ, ಅವ್ವ ಅದಾರ. ನೋಡ್ಕೊಂತಾರ. ನಮಗ್ಯಾರು ಅದಾರ, ಈ ವಯಸ್ಸಿನ್ಯಾಗ ನಮ್ಮನ್ನ ಯಾರು ನೋಡಿಕೋಬೇಕು" ಅನ್ನುತ್ತಾರೆ.

ಛಾಯಾ, ನಿಮ್ಮದು ಚಿಕ್ಕ ವಯಸ್ಸು, ೧೨ ವರ್ಷಕ್ಕೆ ಮನೆ ಬಿಟ್ಟು ಗಳಿಸುವ ಮನೆಯಲ್ಲಿದ್ದವಳು. ಪ್ರತಿದಿನ ಕಡಿಮೆ ಅಂದರೂ ೧೦ರ ಮೇಲೆಯೇ ಗಿರಾಕಿಗಳನ್ನು ತೃಪ್ತಿ ಪಡಿಸಿದವಳು. ಅದೊಂದು ದೇಹದ ಜೊತೆಗಿನ ಸಹಜ ಪ್ರಕ್ರಿಯೆ. ಅದರಿಂದ ನಿಮಗೆ ಸುಖಾ ಸಿಗುತ್ತದೆಯಾ? ಎಂದು ಛಾಯಾಳನ್ನು ಕೇಳಿದರೆ,

"ಎಷ್ಟೋ ಜನ ಹೆಣ್ಣು ಮಕ್ಕಳಿಗೆ ದಂಧೆಯ ಸ್ಥಳ ಬೇಡ ಅಂತ ಬಂದರೂ ಸಹ ಮತ್ತೆ ಮರಳಿ ಹೋಗಲು ಇದೇ ವಿಷಯನೇ ಕಾರಣವಾಗುತ್ತದೆ. ತಿಳಿಯದ ವಯಸ್ಸಿನಿಂದ ಅದೇ ದಂಧೆಯನ್ನು ಮಾಡಿ ಬಂದವರಿಗೆ. ಅದರಿಂದ ದೂರವಿರುವುದು ತುಂಬಾ ಕಷ್ಟ ಆಗುತ್ತದೆ. ಅವರಿಗೆ ಅದೊಂದು ಚಟವೇ ಆಗಿರುತ್ತದೆ. ನನ್ನ ಜೊತೆಗೆ ಒಬ್ಬಳು ಇದ್ದಳು. ಅವಳು ಬಸುರಿ ಇದ್ದಾಗ, ನಾಳೆ ಅವಳಿಗೆ ಹೆರಿಗೆ ಆಗುತ್ತದೆ ಅಂದರೆ, ಇಂದೂ ಗಂಡಸಿನ ಜೊತೆಗಿದ್ದು ಹೋಗಿದ್ದನ್ನು ನಾನು ನೋಡಿದ್ದೇನೆ. ಹಾಗೆ ಮಗು ಹುಟ್ಟಿದ ಹದಿನೈದು ಇಪ್ಪತ್ತು ದಿನಗಳಿಗೆ ಮತ್ತೆ ದಂಧೆಗೆ ಮರಳಿದ್ದನ್ನೂ ನೋಡಿದ್ದೀನಿ. ಈಗ ಅವಳಿಗೆ ವಯಸ್ಸಾಗುತ್ತಿದೆ. ಮಕ್ಕಳು ದೊಡ್ಡವರಾಗಿದ್ದಾರೆ. ಶಾಲೆ ಕಲಿತು ನೌಕರಿ ಮಾಡುತ್ತಿದ್ದಾರೆ. ಈ ದಂಧೆಯ ಅವಶ್ಯಕತೆಯೇ ಆಕೆಗೆ ಇಲ್ಲ. ಆದರೂ ಅವಳು ಗಳಿಸೋ ಜಾಗದಲ್ಲಿ ಇರುತ್ತಾಳೆ. ಆಕೆಗೆ ಅದು ಒಂದು ಚಟವಾಗಿ ಬಿಟ್ಟಿದೆ. ಬಿಟ್ಟು ಇರಲು ಸಾಧ್ಯವೇ ಇಲ್ಲ ಅನ್ನುತ್ತಾಳೆ.

*ದಂಧೆಯಲ್ಲಿರೋರಿಗೆ, ನೂರಾರು ಚಟಗಳು. ಸಾರಾಯಿ, ಸ್ಟಾರ್, ಗುಟುಕಾ, ತಂಬಾಕು ಇನ್ನೂ ಬೇರೆ ಬೇರೆ ಚಟಗಳು ಅಂಟಿರುತ್ತವೆ. ಅವುಗಳಿಂದಲೂ ಅವರಿಗೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಆ ಸಂದರ್ಭದಲ್ಲಿ ಗಳಿಸುವುದು ಮುಖ್ಯ ಆಗಿರುವುದಿಲ್ಲ. ಆ ಹೊತ್ತಿನ ಸರಾಯಿ ಮತ್ತು ಜೊತೆಗೆ ಒಬ್ಬ ಮನುಷ್ಯ ಸಿಕ್ಕರೆ ಸಾಕು ಅವರು ಎಲ್ಲವನ್ನೂ ಮರೆಯುತ್ತಾರೆ. ಇಂತ ಹಳ್ಳಿಯಲ್ಲಿ ಅದು ನಡೆಯುವುದಿಲ್ಲ. ದುಡಿಯಲು ಆಗದ ನನ್ನಂತವರಿಗೆ ಅವರು ಊಟ ಹಾಕುವುದೇ ಒಂದು ಪುಣ್ಯ ಆಗಿರುತ್ತದೆ. ಅಂತಾ ಸಂದರ್ಭದಲ್ಲಿ, ಸಾರಾಯಿ, ಗುಟುಕಾ ಕೊಡು ಅಂದ್ರ ಯಾರಿಗೆ ಸಾಧ್ಯವಾಗುತ್ತದೆ. ಹಾಗಾಗಿ ಇಲ್ಲಿ ಅವರಿಗೆ ಜೀವನ ನಡೆಸುವುದು ಕಷ್ಟ ಆಗಿಯೇ ಹೋಗಿರುತ್ತಾರೆ. ನನಗೆ ಅಂತಹ ಯಾವ ಚಟವೂ ಹತ್ತಿಲ್ಲ. ಆದರೂ ನನಗೂ ಆಸೆಗಳಿವೆ. ಆ ಕ್ಷಣ ಹೊತ್ತು ನೆನಪಾದಾಗ ನೋವಾಗುತ್ತದೆ. ಅದು ನನಗ ಸುಖ ಅಲ್ಲ, ಹಾಗಂತ ಅದನ್ನು ಬಿಟ್ಟಿರಲೂ ಆಗುತ್ತಿಲ್ಲ. ಬಹಳ ತ್ರಾಸ ಅನ್ನಿಸಿದರೆ ಅಳುತ್ತೇನೆ. ಇದನ್ನೆಲ್ಲ ಯಾರಿಗೆ ಹೇಳುವುದು. ನನ್ನ ತಾಯಿಗೆ, ಅಣ್ಣನಿಗೆ ಏನು ಹೇಳುವುದು. ಇದ ಊರಾಗ ನನಗೂ ಜೊತೀ ಸಿಗ್ತಾರ. ಆದರ ಅವರನ್ನು ಮನೆಗೆ ಹೇಗೆ ಕರೆಯಬೇಕು. ನಮ್ಮ ಮನಿಯೊಳಗ ಎರಡ ರೂಮ ಇವೆ. ಹಂಗೇನಾದ್ರೂ ನಾನು ಮಾಡಿದರೆ ನನ್ನ ಅತ್ತಿಗೆ(ಅಣ್ಣನ ಹೆಂಡತಿ) ಈಗ ಕೊಡುವ ಮರ್ಯಾದೆಯನ್ನೂ ಮುಂದ ಕೊಡುತ್ತಾಳೆಯೇ? ನನ್ನ ನೋಡಿ ಅವಳೂ ಅದೇ ದಾರಿ ಹಿಡಿದರೆ. ಹೀಗೆ ಹತ್ತು ಹಲವು ಯೋಚನೆಗಳು ಬರುತ್ತವೆ. ನಾನು ದತ್ತು ತೆಗೆದುಕೊಂಡ ಮಗ ಬಾಳ ಚಿಕ್ಕವನಿದ್ದಾನೆ. ರಾತ್ರಿ ಮೂತ್ರಕ್ಕೆ ಅಂತ ಎದ್ದರೂ ಸಹ, ನನ್ನನ್ನು ಹುಡುಕುತ್ತಾನೆ. ಅದಕ್ಕಾಗಿ ನನಗೊಂದು ಸ್ವತಂತ್ರ ರೂಮನ್ನು ಕಟ್ಟಿಸಿಕೊಡಲು ಅಮ್ಮ ಮತ್ತು ತಮ್ಮನಿಗೆ ಕೇಳುತ್ತಿದ್ದೇನೆ. ಆದರೆ ಅವರು, "ನಿನಗೆ ಏನು ಕಡಿಮಿ ಮಾಡೀವಿ, ಯಾಕ ಬ್ಯಾರೆ ರೂಮ್ ಬೇಕು" ಎಂದು ಪ್ರಶ್ನೆ ಕೇಳುತ್ತಾರೆ. ನನಗೇನು ಬೇಕು ಅನ್ನುವುದು ಅವರಿಗೆ ಯಾಕೆ ತಿಳಿಯುವುದಿಲ್ಲ". ಎಂದು ಛಾಯಾ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ಇದೇ ದೇಹದ ಲೈಂಗಿಕ ತಳಮಳಕ್ಕೋಸ್ಕರ, ಹೆಚ್ಚಿನ ಹೆಣ್ಣುಮಕ್ಕಳು ಇಲ್ಲಿರಲು ಇಷ್ಟಪಡುವುದಿಲ್ಲ. ಈಗಲೂ ಅದಕ್ಕಾಗಿಯೇ ದಂಧೆ ಮಾಡುತ್ತಾರೆ.*

## ಪ್ರಕರಣ–೨: ನಿಜವ್ವ ಪ್ರಕರಣ

**ನಿಜವ್ವ** ಎತ್ತರ ನೀಳಕಾಯದ ದೇವದಾಸಿ ಹೆಣ್ಣುಮಗಳು. ಈಗ ಅವಳಿಗೆ ೭೦ರ ವಯಸ್ಸು. ಊರಿನ ಶಾಲೆಯಲ್ಲಿಯೇ ನಾಲ್ಕನೇ ತರಗತಿ ಓದಿದ್ದಾಳೆ. ಅಥಣಿ ತಾಲೂಕಿನವಳು. ಇವಳನ್ನು ಭೇಟಿಯಾಗಲು ಅವರ ಮನೆಗೆ ಹೋಗಿದ್ದಾಗ, ನಿಜವ್ವ ಎಲ್ಲಮ್ಮನ ಗುಡಿಯಲ್ಲಿ ಮಡಿಯಿಂದ ಇದ್ದು ಪೂಜೆ ಮಾಡುತ್ತಿದ್ದಳು. ನಾವು ಹೋದ ಉದ್ದೇಶವನ್ನು ಹೇಳಿದಾಗ, "ನನ್ನ ಕಥೆ ತೆಗೆದುಕೊಂಡು ಏನು ಮಾಡುತ್ತೀರಿ, ಅಂತ ನಕ್ಕಳು. ನಂತರ ಹಾಗೆ ಮಾತನಾಡುತ್ತ ತನ್ನ ಕುರಿತು ಹಲವಾರು ವಿಷಯಗಳನ್ನು ತಿಳಿಸಿದಳು. ಆ ವಿಷಯಗಳನ್ನು ಇಲ್ಲಿ ವಿವರಿಸಲಾಗಿದೆ.

### ಪೂರ್ವ

*ನಾನು ಒಬ್ಬಳು ದೇವದಾಸಿ ಹೆಣ್ಣುಮಗಳು. ನನ್ನ ತಾಯಿಯೂ ದೇವದಾಸಿಯಾಗಿದ್ದರು. ಅವರಿಗೆ ೯ ಹೆಣ್ಣುಮಕ್ಕಳು. ಅದರಲ್ಲಿ ೮ ಮಕ್ಕಳು ಏನೇನೋ ರೋಗ ಬಂದು ಸತ್ತು ಹೋಗಿದ್ದರು. ಬದುಕುಳಿದವಳು ನಾನು ಮಾತ್ರ. ನನ್ನ ತಾಯಿ ದೇವದಾಸಿಯಾದರೂ ಎಲ್ಲೂ ಹೊರಗೆ ಹೋಗಿ*

*ದಂಧೆ ಮಾಡಿದವಳಲ್ಲ. ಊರಲ್ಲೇ ಒಬ್ಬ ಮನುಷ್ಯನ ಜೊತೆಗಿದ್ದು, ದುಡಿದು ಬದುಕಿದವಳು. ಜೂರು ಭೂಮಿ ಇತ್ತು. ಅದಕ್ಕೆ ೨೦ ಜನ ವಾರಸುದಾರರು ಇದ್ದರು. ಅಲ್ಲೇನೂ ಬೆಳಸಲು ಉಳಿಸಲು ಸಾಧ್ಯವಿರಲಿಲ್ಲ. ಇರುವ ನನ್ನೊಬ್ಬಳನ್ನು ಚೆನ್ನಾಗಿ ಬೆಳಸಿದ್ದಳು.*

*ನಮ್ಮ ಸಂಬಂಧಿ ಅಣ್ಣ ತಮ್ಮಂದಿರು ನಾನು ದೇವದಾಸಿಯಾದರೆ ಆಸ್ತಿಯಲ್ಲಿ ನನಗೂ ಪಾಲು ಕೊಡಬೇಕಾಗುತ್ತದೆ ಎಂದು ತಿಳಿದು ಮದುವೆ ಮಾಡಿ ಕಳುಹಿಸಲು ಹವಣಿಸುತ್ತಿದ್ದರು. ತಾಯಿ ಚಂದ್ರವ್ವ ಈ ಕುರಿತು ಏನೂ ಚಿಂತಿಸಿರಲಿಲ್ಲ. ಆದರೆ ಊರಿನ ಗೌಡ, ಕುಲಕರ್ಣಿ ಮತ್ತು ಹಳಬ ಇದನ್ನೆಲ್ಲ ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಅವರು ನಿಜವ್ವನ ತಾಯಿಯನ್ನ ಕರೆಸಿ "ನಿನ್ನ ಮುಪ್ಪಿನ ಕಾಲಕ್ಕ ಯಾರು ದಿಕ್ಕು? ನಿನ್ನ ಮಗಳಿಗೆ ಮುತ್ತು ಕಟ್ಟು. ಮನೆಯಲ್ಲಿ ಇಟ್ಕೋ. ಆಕಿನ ನಿನ್ನ ನೋಡ್ಕೋಳ್ತಾಕಿ. ಒಂದ ವೇಳೆ ಸರಕಾರದಿಂದ ಏನಾರ ತಸ್ತಿ(ತ್ರಾಸ) ಬಂದ್ರ ನಾವು ನೋಡ್ಕೋಂತವಿ" ಎಂದು ಹೇಳುತ್ತಾರೆ. ಊರ ಹಿರಿಯರ ಮುಂದೆ ನನ್ನ ತಾಯಿ ನನಗೆ ಮುತ್ತು ಕಟ್ಟಲು ಒಪ್ಪಿಕೊಳ್ಳುತ್ತಾಳೆ. ಹಿರಿಗುಡ್ಡದ ಎಲ್ಲವ್ವನ(ಸವದತ್ತಿ ಎಲ್ಲಮ್ಮ) ಸನ್ನಿಧಿಯಲ್ಲಿ ನನ್ನನ್ನು ದೇವದಾಸಿ ಮಾಡುತ್ತಾರೆ. ಒಂದು ಮದುವೆಯಂತೆ ನಡೆದ ಈ ಸಮಾರಂಭದ ಎಲ್ಲ ಖರ್ಚನ್ನು ಅದೇ ಗೌಡರೇ ಕೊಡುತ್ತಾರೆ. ನಂತರ ಊರಿಗೆ ಬಂದು ದೈವಕ್ಕೆ ಊಟದ ವ್ಯವಸ್ಥೆ ಮಾಡಿಸುತ್ತಾರೆ. ಇದೆಲ್ಲ ನಡೆದಾಗ ನನಗೆ ಬರೀ ೮-೯ ವಯಸ್ಸು. ನನಗೆ ಎಲ್ಲ ಗೊತ್ತಾಗುತ್ತಿತ್ತು. ಆದರೆ ಅರ್ಥವಾಗುತ್ತಿರಲಿಲ್ಲ. ಹಿರಿಗುಡ್ಡದಲ್ಲಿ(ಸವದತ್ತಿ ಎಲ್ಲಮ್ಮನ ಗುಡ್ಡ) ಹೊಸಸೀರೆ ಉಡಿಸಿ, ಸುರಗಿ ಸುತ್ತಿ, ಪಕ್ಕಕ್ಕೆ ತುಂಬಿದ ಚರಗಿಯಲ್ಲಿ ದೇವರನ್ನ ಪ್ರತಿಷ್ಠಾಪಿಸಲಾಗಿತ್ತು. ಗುಡಿಯ ಪೂಜಾರಿಯೇ ಮಾರಾಟಕ್ಕಿಟ್ಟಿದ್ದ ಗುಳದಾಳಿಯನ್ನು ತಂದು ನನ್ನ ಕೊರಳಿಗೆ ಕಟ್ಟಿದ್ದ. ಇದೆಲ್ಲವೂ ನಾನು ಋತುಮತಿಯಾಗುವ ಮೊದಲು ನಡೆದಿತ್ತು. ಋತುಮತಿಯಾದ ನಂತರ ಯಾರೋ ಸೀರೆ ತಂದವನೊಬ್ಬ ಮೊದಲ ಬಾರಿ ನನ್ನನ್ನು ಹೆಣ್ಣು ಮಾಡಿದ್ದ. ನಮ್ಮ ಊರಿನ ಬಹಳಷ್ಟು ದೇವದಾಸಿ ಮಹಿಳೆಯರು ಮಿರಜ್‌ನಲ್ಲಿ ದಂಧೆ ಮಾಡುತ್ತಿದ್ದರು. ಹಾಗಾಗಿ ನನ್ನನ್ನೂ ಸಹ ಮಿರಜ್‌ಗೆ ಕಳಿಸಿದ್ದರು.*

**ಜೀತದ ಸ್ಥಿತಿ**

ನಿಜವ್ವ ನೀವು ಇರುವ ಗ್ರಾಮ ಕೃಷ್ಣಾ ನದಿಯ ದಂಡೆಯ ಮೇಲಿದೆ. ಜೋರಾಗಿ ಗಾಳಿ ಬೀಸಿದರೂ, ನದಿಯ ನೀರು ಉಕ್ಕಿ ಊರ ಒಳಗೆ ಬರುತ್ತದೆ. ಇಂತ ಊರಲ್ಲಿ ಕಬ್ಬು, ಅರಿಶಿನದಂತಹ ಶ್ರೀಮಂತ ಬೆಳೆಗಳು ಬೆಳೆಯುತ್ತವೆ. ಆದರೂ ನೀವು ಮಿರಜ್‌ಗೆ ಹೋಗುವ ಕಾರಣವೇನಿತ್ತು? ಇಲ್ಲಿಯೇ ದುಡಿಯಬಹುದಿತ್ತಲ್ಲ, ಅಂತ ನಿಜವ್ವನನ್ನ ಪ್ರಶ್ನೆ ಮಾಡಿದರೆ.

ನೀರಿದ್ರ ಅದು ಭೂಮಿ ಇದ್ದವರಿಗಾತು. ಏನೂ ಇರದ ನಮ್ಮಂತವರಿಗೇನು ಕೆಲಸ? ಇದ್ದವರ ಚಾಕರಿ ಮಾಡಿದ್ದಕ್ಕೆ ನಾವು ಅರೆ ಹೊಟ್ಟೆ ಉಂಡು ಹರಕು ಅರಿವೆ ಹಾಕ್ಕೋಬೇಕಾಗಿತ್ತು. ನಮಗೂ ಅವರಂತೆ ರೇಷ್ಮೆ ಸೀರೆ, ಬಂಗಾರ ಹಾಕಿಕೊಳ್ಳಬೇಕೆಂಬ ಆಸೆ ಇರೂದಿಲ್ಲವೆ? ಅದಕ್ಕೆ ಊರು ಬಿಟ್ಟು ಹಣ ಸಿಗುವ ಕಡೆಗೆ ಹೋದೆ. ಅಲ್ಲದೇ ದೇವದಾಸಿ ಮಾಡಿದ ಮೇಲೆ, ಗರತಿ ಹಾಗೆ ಬಾಳಲು ಸಾಧ್ಯವಿಲ್ಲ. ಸೂಳೆ ಬದುಕೆ ಬದುಕಬೇಕು. ಊರಲ್ಲಿ ಅಣ್ಣ, ತಮ್ಮ, ಕಾಕಾ, ಬಾಬಾ ಅಂತ ಹಿರಿಯರು ಇರ್ತಿದ್ದರು. ಅವರ ಮುಂದೆ ನಾನು ಈ ಕೆಲಸ ಮಾಡೂದು ಅವಮಾನ ಮತ್ತು ಮುಜುಗರವಾಗುತ್ತಿತ್ತು.

ಹೀಗಾಗಿ ಊರು ಬಿಟ್ಟು ಮಿರಜ್ ಸೇರಿದೆ. ಈಗಾಗಲೆ ಅಲ್ಲಿ ನಮ್ಮ ಊರಿನ ಬಹಳಷ್ಟು ದೇವದಾಸಿ ಮಹಿಳೆಯರು ಇದ್ದರು.

**ಜೀತದಿಂದ ಹೊರಬಂದ ಸ್ಥಿತಿ**

ನಾನು ದಂಧೆಯ ಗಲ್ಲಿಯಲ್ಲಿ ಇದ್ದದ್ದು ಬಹಳ ಕಡಿಮೆ. ನಮ್ಮ ಊರಿನ ಪಕ್ಕದ ಹಳ್ಳಿಯ ಜನ್ನ ಸಮುದಾಯಕ್ಕೆ ಸೇರಿದ ರೈತರೊಬ್ಬರು ನನಗೆ ಮಿರಜ್‌ನಲ್ಲಿ ಪರಿಚಯವಾಗುತ್ತಾರೆ. ಅವರು ತಮ್ಮ ಊರಲ್ಲಿ ಬರಗಾಲವಿದ್ದುದರಿಂದ, ಹೆಂಡತಿ, ಮಕ್ಕಳು, ಎತ್ತು, ಚಕ್ಕಡಿ ಸಮೇತ ಮಿರಜದ ಕುಪ್ಪವಾಡಕ್ಕೆ ವಲಸೆ ಹೋದವರಾಗಿದ್ದರು. ಅಲ್ಲಿ ತಮ್ಮ ಎತ್ತು ಮತ್ತು ಚಕ್ಕಡಿಯನ್ನ ಬಾಡಿಗೆಗೆ ಬಿಡುತ್ತಿದ್ದರು. ಹಾಗೇ ಕೆಲಸ ಮಾಡುತ್ತಾ ಹೊಲಗಳನ್ನು ಭೋಗ್ಯಕ್ಕೆ ಪಡೆದು ಅದರಲ್ಲಿ ಮೇವನ್ನು ಬೆಳೆಯುತ್ತಿದ್ದರು. ಆ ಮೇವನ್ನು ಕಟ್ಟು ಕಟ್ಟಿ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದರು. ಇವರು ಒಂದು ದಿನ ನನ್ನ ಗಿರಾಕಿಯಾಗಿ ಬಂದಿದ್ದರು. ಅವರು ನನ್ನನ್ನು ತುಂಬಾ ಇಷ್ಟಪಟ್ಟು, ದಂಧೆ ಗಲ್ಲಿಯಿಂದ ಹೊರತಂದರು. ತನ್ನ ಮನೆಯ ಹತ್ತಿರವೇ ಒಂದು ಪುಟ್ಟ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿ ನನ್ನನ್ನು ಇಟ್ಟುಕೊಂಡಿದ್ದರು. ಆಗ ನನಗೆ ೧೫ ವರ್ಷಗಳಿದ್ದವು. ನಾನು ಅವನಿಗೆ ಹೆಂಡತಿಯಂತೆ ಇದ್ದು, ಅವನ ಎಲ್ಲ ಕೆಲಸದಲ್ಲೂ ಸಹಕರಿಸುತ್ತಾ ಜೀವನ ನಡೆಸುತ್ತಿದ್ದೆ. ನನಗೆ ಅವನಿಂದ ೩ ಗಂಡು ೨ ಹೆಣ್ಣು ಒಟ್ಟು ೫ ಮಕ್ಕಳು ಹುಟ್ಟಿದ್ದವು. ಒಬ್ಬಳನ್ನು ಮದುವೆ ಮಾಡಿದ್ದೇನೆ. ಹಿರಿಯ ಮಗನೊಬ್ಬನು ಅಂಗವಿಕಲನಾಗಿದ್ದಾನೆ. ಆದ್ದರಿಂದ ಅವನ ಮದುವೆ ಆಗುತ್ತದೋ ಇಲ್ಲವೋ, ಆದರೂ ಸಹ ಎಂತವಳು ಇರ್ತಾಳೋ ಏನೋ, ಎಂದು ಚಿಂತಿಸಿ ತಮ್ಮನಿಗೆ ಜೊತೆಯಾಗಿ ಇರಲಿ ಅಂತ ಹಿರಿಯ ಮಗಳನ್ನ ದೇವರಿಗೆ ಬಿಟ್ಟಿದ್ದೆ(ದೇವದಾಸಿ).

ಈ ಸಂದರ್ಭದಲ್ಲಿ ಮಿರಜ್‌ನ ಬಸ್ಟ್ಯಾಂಡ್ ಹಿಂದೆ ಇರುವ ಪ್ರದೇಶದಲ್ಲಿ ಮನೆಗಳೇನೂ ಇರಲಿಲ್ಲ. ಖುಲ್ಲಾ ಜಾಗೆ ಇತ್ತು. ಅಲ್ಲಿ ಬಹಳಷ್ಟು ಮಹಿಳೆಯರು ಗುಡಿಸಲು ಹಾಕಿಕೊಂಡು ದಂಧೆ ಮಾಡುತ್ತಿದ್ದರು. ಅಲ್ಲಿ ನನ್ನ ಮಗಳೂ ಸಹ ಒಂದು ಗುಡಿಸಲು ಹಾಕಿಕೊಂಡು ದಂಧೆ ಮಾಡುತ್ತಿದ್ದಳು. ನನ್ನನ್ನು ಇಟ್ಟುಕೊಂಡಿದ್ದ ರೈತ. ಊರಲ್ಲಿ ಸರಿಯಾಗಿ ಮಳೆಯಾಗತೊಡಗಿದಾಗ ಮತ್ತು ನೀರಾವರಿ ಸೌಲಭ್ಯಗಳು ಪ್ರಾರಂಭವಾಗಿದ್ದರಿಂದ ಮತ್ತೆ ತನ್ನ ಎಲ್ಲ ಸಂಸಾರವನ್ನು ಕಟ್ಟಿಕೊಂಡು ಮರಳಿ ತನ್ನ ಊರಿಗೆ ಬಂದನು. ಆ ಸಂದರ್ಭದಲ್ಲಿ ನಾನು ಸಹ ನಮ್ಮ ಊರಿಗೆ ವಾಪಸ್ಸು ಬಂದೆ. ಆದರೆ ನನ್ನ ಮಗಳು ಮಾತ್ರ ಅಲ್ಲಿಯೇ ದಂಧೆಯ ಗುಡಿಸಲಿನಲ್ಲಿ ಉಳಿದಳು.

ನನ್ನ ಮಗಳು ಅತಿಯಾದ ಮದ್ಯಪಾನಿಯಾಗಿದ್ದಳು. ಆರೋಗ್ಯ ಸರಿಯಾಗಿಟ್ಟುಕೊಳ್ಳದ ಕಾರಣ, ಅವಳಿಗೆ ಕಾಮಾಲೆ ರೋಗ ಅಂಟಿಕೊಂಡಿತು. ಸರಿಯಾದ ಚಿಕಿತ್ಸೆ, ಔಷಧೋಪಚಾರ ಮಾಡಿಕೊಳ್ಳದೇ ಹೋದದ್ದಕ್ಕಾಗಿ ಕಾಮಾಲೆ ರೋಗವು ಹೆಚ್ಚಾಗಿ ಸತ್ತು ಹೋದಳು. ಅವಳಿಗೆ ಒಬ್ಬ ಮಗನಿದ್ದಾನೆ. ಅವನನ್ನು ನಾನೇ ನೋಡಿಕೊಳ್ಳುತ್ತಿದ್ದೇನೆ. ಮಿರಜಿನಲ್ಲಿ ನನ್ನ ಮಗಳಿರುತ್ತಿದ್ದ ಗುಡಿಸಲು ಈಗ ಮನೆಯಾಗಿದೆ. ಅದು ನಮ್ಮ ಸ್ವಂತ ಹೆಸರಲ್ಲಿ ಇದೆ. ಈಗ ನಾನೇ ಅದನ್ನು ನೋಡಿಕೊಳ್ಳುತ್ತಿದ್ದೇನೆ. ಈಗ ಅಲ್ಲಿ ದಂಧೆ ಮಾಡುವ ಬೇರೆ ಹುಡುಗಿಯರು ಬಾಡಿಗೆಗೆ ಇದ್ದಾರೆ.

*ಊರಿಗೆ ಬಂದ ಮೇಲೂ ಸಹ ನನ್ನನ್ನು ಇಟ್ಟುಕೊಂಡಿದ್ದ ರೈತ ನನ್ನ ಮನೆಗೆ ಬರುತ್ತಿದ್ದರು. ಅವರು ಈಗ ಸ್ವಲ್ಪ ದಿನಗಳ ಹಿಂದೆ ಮರಣವನ್ನಪ್ಪಿದ್ದಾರೆ. ನಾನು ಈಗ ಎಲ್ಲಮ್ಮನ ಪೂಜೆ ಮಾಡುತ್ತಾ, ಜೋಗ ಬೇಡುತ್ತಾ ಜೀವನ ಮಾಡತೊಡಗಿದ್ದೇನೆ. ಕೇರಿಯ ಜನರದಂತೂ ಪ್ರಶ್ನೆಯೇ ಇಲ್ಲ. ಎಲ್ಲರ ಮನೆಯಲ್ಲಿಯೂ ನನ್ನಂತವರು ಇರುವುದರಿಂದ ವ್ಯತ್ಯಾಸವೇನೂ ಇಲ್ಲ. ದೇವದಾಸಿ ಯೋಜನೆಯ ಮಾಶಾಸನವೂ ಬರುತ್ತದೆ. ಮಕ್ಕಳು ದೊಡ್ಡವರಾಗಿದ್ದಾರೆ. ಕೆಲಸ ಮಾಡುತ್ತಾರೆ. ಒಳ್ಳೆಯ ಮನೆ ಕಟ್ಟಿಸಿದ್ದಾರೆ. ನನ್ನನ್ನೂ ಚೆನ್ನಾಗಿ ನೋಡಿಕೊಳ್ಳುತ್ತಿದ್ದಾರೆ.*

## ಪ್ರಕರಣ-೩: ಶೃತಿ ಪ್ರಕರಣ

**ಶೃತಿ** ದೇವದಾಸಿ ಮಹಿಳೆ. ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನವಳು. ಈಗ ಅವಳಿಗೆ ೩೮ ವರ್ಷ. ಚಿಕ್ಕವಯಸ್ಸಿನಲ್ಲಿಯೇ ಇವಳನ್ನು ಮುಂಬಯಿ, ಪೂನಾಗಳಲ್ಲಿ ಲೈಂಗಿಕ ದಂಧೆಗೆ ಇಟ್ಟಿದ್ದರು. ನಂತರ ಇವಳು ಗೋವಾದಲ್ಲಿಯೂ ಸಹ ಲೈಂಗಿಕ ದಂಧೆ ಮಾಡಿ ಬಂದಿದ್ದಾಳೆ. ಅವಳನ್ನು ಭೇಟಿಯಾಗಲು ಅವಳ ಮನೆಗೆ ಹೋದಾಗ, ಶೃತಿ ತನ್ನ ತಾಯಿಯೊಂದಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಳು. ನಾವು ಅಲ್ಲಿಗೆ ಹೋದ ಉದ್ದೇಶವನ್ನು ತಿಳಿಸಿದಾಗ ತಮ್ಮ ಹಲವು ವಿಚಾರಗಳನ್ನು ಹಂಚಿಕೊಂಡರು. ಆ ವಿಚಾರಗಳನ್ನು ಅವರದೇ ಧಾಟಿಯಲ್ಲಿ ಇಲ್ಲಿ ವಿವರಿಸಲಾಗಿದೆ.

### ಪೂರ್ವ

*ನನ್ನ ತಾಯಿ ದೇವದಾಸಿ. ನಮ್ಮ ತಾಯಿಗೆ ನಾವು ಎರಡು ಜನ ಹೆಣ್ಣುಮಕ್ಕಳು, ಎರಡು ಜನ ಗಂಡುಮಕ್ಕಳು. ಒಟ್ಟು ೪ ಮಕ್ಕಳು. ನಾನು ಕೊನೆಯ ಮಗಳು. ನಾನು ೪ನೇ ತರಗತಿಯವರೆಗೆ ಶಾಲೆಗೆ ಹೋಗಿದ್ದೇನೆ. ಶಾಲೆಗೆ ಹೋಗುವುದೆಂದರೆ ನನಗೆ ತುಂಬಾ ಇಷ್ಟವಿತ್ತು. ಆದರೆ ಮನೆಯವರು ಹೋಗಲು ಬಿಡುತ್ತಿರಲಿಲ್ಲ. ಶಾಲೆಗೆ ಹೋಗುತ್ತಾಳೆಂದು ಪುಸ್ತಕದ ಚೀಲವನ್ನು ಅರಿವೆಯ ಗಂಟಿನಲ್ಲಿ ಮುಚ್ಚಿ ಇಡುತ್ತಿದ್ದರು.*

*ನನ್ನ ಅಕ್ಕನನ್ನ ಮದುವೆ ಮಾಡಿ ಕೊಟ್ಟಿದ್ದರು. ನನ್ನ ಮದುವೆ ಮಾಡಲು ವರನ ಮನೆಯವರೊಂದಿಗೆ ಮಾತುಕತೆಯಾಗಿತ್ತು. ಆದರೆ ನನ್ನ ತಾಯಿಗೆ ನಮ್ಮ ನೆರೆಹೊರೆಯವರು, "ಗಂಡುಮಕ್ಕಳು ನೋಡಿಕೊಳ್ಳಂಗಿಲ್ಲ. ಮುಪ್ಪಿನ ಕಾಲಕ್ಕೆ ಏನ್ ಮಾಡ್ತಿ. ಇಕಿನ್ನ ನಿನಗ ಇಟ್ಕೊ. ಮುತ್ತುಕಟ್ಟು" ಅಂತ ಹೇಳುತ್ತಾರೆ. ಆಗ ನನ್ನ ತಾಯಿ ಆಗಬಹುದಾದ ಮದುವೆಯನ್ನು ರದ್ದುಗೊಳಿಸಿ, ೧೦ ವರ್ಷದ ನನ್ನನ್ನು ಶಾಲೆ ಬಿಡಿಸಿ ಮುತ್ತುಕಟ್ಟಿ ದೇವದಾಸಿ ಮಾಡಿದಳು. ನಾನು ೧೩ ವರ್ಷದವಳಿದ್ದಾಗ ಋತುಮತಿಯಾಗಿದ್ದೆ. ಋತುಮತಿ ಯಾದ ೬ ತಿಂಗಳಿಗೆ ನನ್ನ ತಾಯಿ ನನ್ನನ್ನು, ನಮ್ಮದೇ ಕೇರಿಯ ದೇವದಾಸಿ ಮಹಿಳೆಯೊಂದಿಗೆ ದಂಧೆ ಮಾಡಲು ಮುಂಬಯಿಗೆ ಕಳಿಸಿದ್ದಳು.*

### ಜೀತದ ಸ್ಥಿತಿ

*ನನ್ನದು ಕುಳ್ಳ ಮತ್ತು ದಪ್ಪದೇಹ. ನಾನು ನೋಡಲು ಅಂತ ಸುಂದರಿಯೇನಲ್ಲ. ಹಾಗಾಗಿ ಮುಂಬಯಿಯಲ್ಲಿ ನನಗೆ ಗಿರಾಕಿಗಳು ಸಿಗಲಿಲ್ಲ. ಆದ್ದರಿಂದ ಮುಂಬಯಿಗೆ ನನ್ನನ್ನು ಕರೆದುಕೊಂಡು ಹೋದವಳು ಘರವಾಲಿ. ತನ್ನದೇ ಹಣ ಖರ್ಚು ಮಾಡಿ ಮರಳಿ ಮನೆಗೆ ತಂದು ಬಿಟ್ಟಳು. ಮನೆಗೆ ಬಂದ ನನ್ನನ್ನು ನನ್ನ ತಾಯಿ ಮತ್ತೆ ಪೂನಾದ ಬುಧವಾರ ಪೇಟೆಗೆ ಬಿಟ್ಟು ಬಂದಿದ್ದಳು. ಅಲ್ಲಿನ*

ಘರವಾಲಿ "ನಿನ್ನ ಮಗಳು ಬಾಳ ಸಣ್ಣಾಕಿ ಕಾಣಸ್ತಾಳ, ಪೋಲಿಸರ ಕಾಟ ಜಾಸ್ತಿ ಐತ್ರೀ. ನೋಡಾಕರ ಚೆಂದ ಇದ್ದಿದ್ರ ಒಳಗಿಟ್ಟು ದಂಧೆ ಮಾಡಸ್ತಿದ್ವಿ. ಆದ್ರ ಈಕೀಗೆ ಗಿರಾಕಿ ಹತ್ತೂದ ಮುಸ್ಕಿಲ್ ಐತಿ" ಅಂತ ಹೇಳಿದಳು. ಹೀಗಾಗಿ ನಾನು ಮರಳಿ ಊರಿಗೆ ಹೋಗದೇ, ದಂಧೆ ಮನೆಯ ಪಕ್ಕದ ಹೊಟೇಲ್‌ನಲ್ಲಿ ಕೆಲಸ ಮಾಡತೊಡಗಿದೆ. ನಾನು ಇರಲು ದಂಧೆಯ ಮನೆಯಲ್ಲಿಯೇ ಇರುತ್ತಿದ್ದೆ. ಆದರೆ ನನ್ನ ಕೆಲಸ ಮಾತ್ರ ಪಕ್ಕದ ಹೊಟೇಲ್‌ನಲ್ಲಿ ಇರುತ್ತಿತ್ತು. ಈ ನಡುವೆ ಯಾರಾದರೂ ಅಂತ ಗಿರಾಕಿಗಳು ಬಂದರೆ ನನ್ನನ್ನು ತೋರಿಸಿ ಘರವಾಲಿ ಅವಕಾಶ ಮಾಡಿಕೊಡುತ್ತಿದ್ದಳು. ದಂಧೆಯ ಮನೆಯ ಹುಡುಗಿಯರಿಗೆ ಊಟಕ್ಕೆ ತಂದು ಕೊಡುವುದು. ಚಹಾ ತಂದುಕೊಡುವುದನ್ನು ಮಾಡುತ್ತಿದ್ದೆ. ಇದರಿಂದ ತಿಂಗಳಿಗೆ ೨೫೦ ರೂ ಸಿಗುತ್ತಿತ್ತು. ಈ ಕೆಲಸದಿಂದ ನನಗೆ ಏನೂ ಲಾಭವಿಲ್ಲ ಅನ್ನಿಸತೊಡಗಿತು. ನನ್ನ ಅಕ್ಕನ ನಾದಿನಿಯೊಬ್ಬಳು ಗೋವಾದಲ್ಲಿ ದಂಧೆ ಮಾಡುತ್ತಿದ್ದಳು. ಅವಳು ನನ್ನ ಪರಿಸ್ಥಿತಿ ಕೇಳಿ ತನ್ನೊಂದಿಗೆ ಕರೆದುಕೊಂಡು ಹೋಗಿದ್ದಳು. ಗೋವಾದ ಜನ ಬಾಳ ಒಳ್ಳೆಯವರು. ಮುಂಬಯಿ ಪೂಣಾದಂಗ ಅಲ್ಲ. ಅಲ್ಲಿಯ ಮಂದಿಗೆ ನಾನು ಚೆಂದ ಕಂಡಿರಲಿಲ್ಲ. ಆದರ ಗೋವಾದಾಗ ನನ್ನನ್ನ ಖಾಯಂ ಇಟ್ಟುಕೊಳ್ಳುತ್ತೇನೆಂದು ಬಹಳ ಜನ ಅನ್ನುತ್ತಿದ್ದರು.

ನಾನು ಸಣ್ಣಾಕಿದ್ದಾಗ, ನಾಲ್ಕನೇ ಇಯತ್ತೆ ಶಾಲೆಗೆ ಹೋದರೂನೂ ಸಹ, ಶಾಲೆಗಿಂತ ಹೆಚ್ಚಾಗಿ ಕೆಲಸಕ್ಕೆ ಹೋಗುತ್ತಿದ್ದೆ. ನಾನು ೫-೬ ವರ್ಷದವಳಿದ್ದಾಗಲೇ ಕೆಲಸಕ್ಕೆ ಹಚ್ಚಿಬಿಟ್ಟಿದ್ರು. ನಮ್ಮೂರಾಗ ಹತ್ತಿಗಿರಣಿ ಇದ್ವು. ಅಲ್ಲಿ ಹತ್ತಿಯಿಂದ ಬೀಜ ತೆಗೆದು ಆಳಿ ಮಾಡುವ ಕೆಲಸ ಇರುತ್ತಿತ್ತು. ಸಣ್ಣ ಹುಡುಗರಿಗೆ ಪಗಾರ ಕಡಿಮೆ ಎಂದು ನಮ್ಮನ್ನೂ ಕೆಲಸಕ್ಕೆ ಕರೆದುಕೊಳ್ಳುತ್ತಿದ್ದರು. ಒಂದು ಬುಟ್ಟಿ ಹತ್ತಿ ಕೆಲಸ ಮಾಡಿದರೆ, ಎಂಟಾಣಿ ಕೊಡ್ತಿದ್ರು. ದಿನಕ್ಕೆ ಅಂತಹ ೪-೫ ಬುಟ್ಟಿ ಕೆಲಸ ಮಾಡ್ತಿದ್ದೆ. ಆಮೇಲೆ ಶಾಲೆ ಬಿಡಿಸಿ ದೇವದಾಸಿ ಮಾಡಿದ ಮೇಲೆ, ಸುಣ್ಣದ ಬಟ್ಟ್ಯಾಗ, ಸುಣ್ಣದ ಕಲ್ಲಿನ ಬುಟ್ಟಿ ಹೊರುವ ಕೆಲಸ ಮಾಡುತ್ತಿದ್ದೆ. ಅಲ್ಲಿ ದಿನಕ್ಕೆ ೫ ರೂ ಕೊಡುತ್ತಿದ್ದರು. ಆ ಸುಣ್ಣದ ಕಲ್ಲು ಹೊತ್ತು ಹೊತ್ತು ನನ್ನ ದೇಹ ಗಿಡ್ಡಾಗಿ. ಕುರೂಪ ಆಗಿತ್ತು. ಅದಕ್ಕಾಗಿ ನನಗ ಮುಂಬಯಲ್ಲಿ ಗಿರಾಕಿಗಳು ಬರಲಿಲ್ಲ. ಆದರೂ ಸಹಿತ ಗೋವಾದ ಮಂದಿ ನನ್ನ ಕೈ ಬಿಡಲಿಲ್ಲ. ಅಲ್ಲಿ ಸ್ವಲ್ಪ ದಿನ ದಂಧೆ ಮಾಡಿದ್ದೆ. ನಂತರ ಒಬ್ಬ ಖಾಯಂ ಮನುಷ್ಯ ನನ್ನ ಪಾಲಿಗೆ ಸಿಕ್ಕ. ಅವನು ಬಿಹಾರ ರಾಜ್ಯದವನಿದ್ದ. ಅವನು ನನ್ನ ಎಲ್ಲ ಖರ್ಚುಗಳನ್ನು ಸಮಸ್ಯೆಗಳನ್ನು ನೋಡಿಕೊಳ್ಳುತ್ತಿದ್ದ.

**ಜೀತದಿಂದ ಹೊರಬಂದ ಸ್ಥಿತಿ**

ನನ್ನ ಮಗ ಈಗ ದೊಡ್ಡವ ಆಗಿ ಶಾಲೆಗೆ ಹೋಗುತ್ತಿದ್ದಾನೆ. ಆದರಿಂದ ಅವನಿಗೆ ಎಲ್ಲ ರೀತಿಯ ತಿಳುವಳಿಕೆ ಬರತೊಡಗಿತ್ತು. "ನಮ್ಮವ್ವ ಇಂತಾಕಿ" ಅಂತ ಅವನಿಗೆ ಗೊತ್ತಾಗುವುದಕ್ಕಿಂತ ಮೊದಲು ಈ ದಂಧೆ ಬಿಟ್ಟು ಬಿಡಬೇಕೆಂದು ಗೋವಾ ಬಿಟ್ಟು ನಾನು ಊರಿಗೆ ಬಂದೆ. ಈಗ ನನ್ನ ತಾಯಿಯನ್ನೂ ನೋಡಿಕೊಳ್ಳಬೇಕಾದ ಜವಾಬ್ದಾರಿ ನನ್ನ ಮೇಲೆಯೇ ಇದೆ. ಅಣ್ಣಂದಿರು ದುಡಿಯುತ್ತಾರೆ. ಅವರ ಆದಾಯವೂ ಚೆನ್ನಾಗಿದೆ. ಆದರೂ ತಾಯಿಯನ್ನು ನೋಡಿಕೊಳ್ಳುವುದಿಲ್ಲ. ಹಾಗಾಗಿ ನಮ್ಮ ತಾಯಿಯನ್ನ ನಾನೇ ನೋಡಿಕೊಳ್ಳುತ್ತಿದ್ದೇನೆ. ಮಗ ಪಿ ಯು ಸಿ ಓದುತ್ತಿದ್ದಾನೆ. ಈಗಲೂ ನನ್ನ ಮನೆಯ ಖರ್ಚಿಗಾಗಿ ನನ್ನನ್ನು ಖಾಯಂ ಆಗಿ ಇಟ್ಟುಕೊಂಡ ಬಿಹಾರದ ವ್ಯಕ್ತಿಯೇ ಹಣವನ್ನು ಕಳಿಸುತ್ತಾನೆ. ಸಮಯ ಸಿಕ್ಕಾಗಲೆಲ್ಲ ಆತ ಇಲ್ಲಿಗೆ ಬಂದು ಹೋಗುತ್ತಾನೆ.

*ನಾನು ಊರಿಗೆ ಬಂದ ಮೇಲೆ ಖಾಲಿ ಕೂಡುವುದು ಒಳ್ಳೆಯದಲ್ಲವೆಂದು ಚೌಡಕಿ ಬಾರಿಸುವುದನ್ನು ಮತ್ತು ಚೌಡಕಿ ಪದ ಹಾಡುವುದನ್ನು ಕಲಿತಿದ್ದೇನೆ. ಅದಕ್ಕಾಗಿ ೧೫,೦೦೦ ಸಾವಿರ ರೂಪಾಯಿ ಖರ್ಚು ಮಾಡಿ ಐದು ತಿಂಗಳ ಅಭ್ಯಾಸ ಮಾಡಿದ್ದೇನೆ. ಈಗ ನನ್ನದೇ ಐದು ಕಲಾವಿದರ ಗುಂಪನ್ನು ತಯಾರಿಸಿಕೊಂಡಿದ್ದೇನೆ. ಸುತ್ತಮುತ್ತಲ ಹಳ್ಳಿಗಳಿಗೆ ಚೌಡಕಿ ಕಾರ್ಯಕ್ರಮ ನೀಡಲು ಕರೆಯುತ್ತಾರೆ. ಅದು ರಾತ್ರಿ ೧೦ ಘಂಟೆಗೆ ಪ್ರಾರಂಭವಾದರೆ ಬೆಳಗಿನ ೬ ಘಂಟೆಗೆ ಮುಗಿಯುತ್ತದೆ. ಒಂದು ಕಾರ್ಯಕ್ರಮಕ್ಕೆ ೧೮,೦೦೦ ಸಾವಿರ ರೂಪಾಯಿ ಬರುತ್ತದೆ. ಇದನ್ನು ನನ್ನ ಗುಂಪಿನ ಎಲ್ಲ ಸದಸ್ಯರು ಹಂಚಿಕೊಳ್ಳುತ್ತೇವೆ. ಸದ್ಯಕ್ಕೆ ನನ್ನ ಈ ಉದ್ಯೋಗ ಚೆನ್ನಾಗಿ ನಡೆದಿದೆ. ವರ್ಷಕ್ಕೆ ೬ ರಿಂದ ೭ ಇಂತಹ ಕಾರ್ಯಕ್ರಮಗಳು ಸಿಗುತ್ತವೆ. ನನ್ನ ತಂಡವನ್ನು ಸರಕಾರದ ಕೆಳಗೆ ನೋಂದಣಿ ಮಾಡಿಸಿಕೊಳ್ಳಬೇಕೆಂಬ ಆಸೆ ಇದೆ. ಅದಕ್ಕಾಗಿ ಪ್ರಯತ್ನಗಳನ್ನೂ ಮಾಡುತ್ತಿದ್ದೇನೆ.*

**ಪ್ರಕರಣ–೪: ಶ್ರೀದೇವಿ ಪ್ರಕರಣ**

ಶ್ರೀದೇವಿ ಬಿಜಾಪೂರ ತಾಲೂಕಿನ ದೇವದಾಸಿ ಮಹಿಳೆ. ಇವಳಿಗೆ ಈಗ ಮೂವತ್ತೈದು ವರ್ಷ. ಇವಳಿಗೆ ಒಬ್ಬಳೆ ಮಗಳಿದ್ದು ಅವಳು ೧೦ನೇ ತರಗತಿ ಓದುತ್ತಿದ್ದಾಳೆ. ಶ್ರೀದೇವಿಯನ್ನು ಅವಳ ತಂದೆ ತಾಯಿಯೇ ದೇವದಾಸಿ ಮಾಡಿ ಮಹಾರಾಷ್ಟ್ರದ ಥಾಣೆಯ ಬೀವಂಡಿ ಕೆಂಪು ದೀಪದ ಪ್ರದೇಶಕ್ಕೆ ಲೈಂಗಿಕ ದಂಧೆಗಾಗಿ ಕಳಿಸಿರುತ್ತಾರೆ. ಶ್ರೀದೇವಿಯನ್ನು ಭೇಟಿಯಾಗಲು ಹೋದಾಗ, ಅವಳು ಮನೆಯಲ್ಲಿಯೆ ಇದ್ದಳು. ಅವಳು ತನ್ನ ಜೀವನದ ಕುರಿತು ನಮ್ಮೊಂದಿಗೆ ಹಂಚಿಕೊಂಡ ವಿಷಯಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಪೂರ್ವ**

*ನಾನು ನನ್ನ ತಂದೆ ತಾಯಿಗೆ ಇರುವ ೪ ಜನ ಮಕ್ಕಳಲ್ಲಿ ಮೂರನೇಯವಳು. ಬರಗಾಲದಿಂದಾಗಿ ದುಡಿಯಲು ಕೆಲಸವಿರಲಿಲ್ಲ. ಹಸಿವು ನೀಗುವುದು ತುಂಬಾ ಕಷ್ಟವಾಗಿತ್ತು. ಇಡೀ ಕುಟುಂಬಕ್ಕೆ ಉಪವಾಸವೇ ಪರಿಹಾರವಾಗಿತ್ತು. ಹಾಗಾಗಿ ನನ್ನ ತಂದೆ ತಾಯಿ ಮನೆಯ ಕಷ್ಟ ತೀರಿಸಿಕೊಳ್ಳಲು ನನ್ನನ್ನು ದೇವದಾಸಿ ಮಾಡಿದ್ದರು.*

***ಜೀತದ ಸ್ಥಿತಿ***

*ನನ್ನನ್ನು ನಮ್ಮ ಮನೆಯವರು ದಂಧೆ ಮಾಡುವ ಉದ್ದೇಶದಿಂದಲೇ ಕಳಿಸಿದ್ದರಿಂದ ಅಲ್ಲಿಯ ಕಷ್ಟಗಳಿಗೆ ಒಗ್ಗಿಕೊಳ್ಳಲೇಬೇಕಾಗಿತ್ತು. ನಾವಿರುವ ಸಂದರ್ಭದಲ್ಲಿ ಪೋಲೀಸ್ ರೇಡ್‌ಗಳು ತುಂಬಾ ಜಾಸ್ತಿ ಇದ್ದವು. ಅವರಿಂದ ನನ್ನನ್ನು ಉಳಿಸಿಕೊಳ್ಳಲು ಬೀವಂಡಿಯಿಂದ ಕರಾಡ, ಸೋಲ್ಲಾಪುರ, ಪೂಣಾ ಹೀಗೆ ಎಲ್ಲ ಕಡೆಯೂ ಸುತ್ತಾಡುತ್ತಿದ್ದೆ. ಹೀಗೆ ಒಟ್ಟು ೧೨ ವರ್ಷ ಮಹಾರಾಷ್ಟ್ರದ ರೆಡ್‌ಲೈಟ್ ಏರಿಯಾಗಳಲ್ಲಿ ಬದುಕು ಕಳೆದು. ಈಗ ಊರಿಗೆ ಮರಳಿ ಬಂದಿದ್ದೇನೆ.*

*ನಾನು ದಂಧೆಯಲ್ಲಿ ಇರುವಾಗ ತಂದೆ ತಾಯಿ ಕಳಿಸಿದ ಉದ್ದೇಶಕ್ಕೆ ಮೋಸ ಮಾಡದೇ. ಗಳಿಸಿದ್ದನ್ನ ಊರಿಗೆ ಕಳಿಸಿ ಅವರ ಸಂಕಷ್ಟಗಳನ್ನೆಲ್ಲ ತೀರಿಸಿದ್ದೇನೆ. ನನ್ನ ಅಣ್ಣ ತಮ್ಮಂದಿರ ಮದುವೆ ಮಾಡಿದ್ದೇನೆ. ನಾನೂ ಸಹ ಹಣವನ್ನ ಉಳಿತಾಯ ಮಾಡಿ ಬ್ಯಾಂಕಿನಲ್ಲಿ ಇಟ್ಟುಕೊಂಡಿದ್ದೇನೆ. ಇರಲು ಮನೆ ಕಟ್ಟಿಸಿಕೊಂಡಿದ್ದೇನೆ.*

**ಜೀತದಿಂದ ಹೊರಬಂದ ಸ್ಥಿತಿ**

*ನನ್ನ ಗಳಿಕೆ ಅಲ್ಲಿ ಚೆನ್ನಾಗಿಯೇ ಇತ್ತು. ಆದರೆ ಎಷ್ಟು ದಿನ ಅಂತ ಪರ ಊರಿನಲ್ಲಿ ಇರುವುದು. ಇದೇ ದಂಧೆಯನ್ನು ನಮ್ಮ ಊರಲ್ಲಿಯೇ ಮಾಡಿದರೆ ಹೇಗೆ ಎಂಬ ಆಲೋಚನೆ ಬಂದು ಊಂಗೆ ಬಂದಿದ್ದೆ. ಅದೇ ವಿಚಾರವನ್ನು ಮಾಡಿ ಆಲಮಟ್ಟಿಯಲ್ಲಿ ನನ್ನದೇ ದಾಬಾ ತೆರೆಯುವ ಮೂಲಕ ಕಾರ್ಯರೂಪಕ್ಕೂ ತಂದಿದ್ದೆ. ದಾಬಾದಲ್ಲಿ ಊಟ ತಿಂಡಿ ಒದಗಿಸುವುದರ ಜೊತೆಗೆ ಸುತ್ತಮುತ್ತಲಿನಿಂದ ಬಂದ ಹುಡುಗಿಯರನ್ನ ಇಟ್ಟುಕೊಂಡು ದಂಧೆಯನ್ನೂ ನಡೆಸುತ್ತಿದ್ದೆ. ಮುಖ್ಯ ವಿಷಯ ಅಂದರೆ ದಂಧೆ ನಡೆಸುವುದಕ್ಕಾಗಿಯೇ ಧಾಬಾ ತೆರೆದಿದ್ದೆ. ಬೆಂಗಳೂರಿನಿಂದ-ಮುಂಬೈ, ಕೋಲ್ಹಾಪೂರ, ಸಾತಾರಾ, ರತ್ನಾಗಿರಿ ಮೊದಲಾದ ಮುಖ್ಯ ಕೈಗಾರಿಕಾ ಕೇಂದ್ರಗಳಿಗೆ ಸಂಪರ್ಕ ಒದಗಿಸುವ ಹೈವೇ ನಂಬರ ೧೩ರಲ್ಲಿ ನನ್ನ ದಾಬಾ ಇತ್ತು (ಅಂತರಾಜ್ಯಗಳಿಂದ ಈ ಮೂಲಕ ಹೋಗುವ ಟ್ರಕ್‌ಗಳು ಆಲಮಟ್ಟಿಯ ದಾಬಾಗಳಲ್ಲಿ ವಿಶ್ರಾಂತಿಗೆ ಮತ್ತು ಊಟಕ್ಕೆ ನಿಲ್ಲುತ್ತವೆ). ಅಲ್ಲಿ ಸಾಕಷ್ಟು ಗಾಡಿಗಳು ಓಡಾಡುವುದರಿಂದ ತುಂಬಾ ಲಾಭವೂ ಇತ್ತು. ಆದರೆ ಈ ವಿಚಾರ ಪೊಲೀಸರಿಗೆ ಗೊತ್ತಾಗಿ ಒಂದು ದಿನ ಬುಲ್ಡೋಜರ್ ಹಚ್ಚಿ ದಾಬಾಗಳನ್ನು ನೆಲ ಸಮ ಮಾಡಿದ್ದರು. ನನ್ನನ್ನೂ ಹಿಡಿದು ಜೈಲಿಗೆ ಹಾಕಿದ್ದರು. ಮಹಿಳಾ ಸಂಘಟನೆಗಳ ಸಹಾಯದಿಂದ ದಂಡ ಕಟ್ಟಿ ಜೈಲಿನಿಂದ ಹೊರಬಂದಿದ್ದೇನೆ.*

*ಈಗ ನನ್ನ ಮಗಳು ದೊಡ್ಡವಳಾಗಿದ್ದಾಳೆ. ಇದ್ಯಾವ ವ್ಯವಹಾರವೂ ಬೇಡವೆಂದು ಮನೆಯಲ್ಲಿಯೇ ಇದ್ದೇನೆ. ಗಳಿಸಿದ ಹಣವನ್ನು ಬ್ಯಾಂಕ್‌ನಲ್ಲಿಟ್ಟು, ಅದರಿಂದ ಬರುವ ಹಣದ ಬಡ್ಡಿಯಲ್ಲಿ ಜೀವನ ನಡೆಸುತ್ತಿದ್ದೇನೆ. ದೇವದಾಸಿ ಸಮೀಕ್ಷೆಯ ಸಂದರ್ಭದಲ್ಲಿ ನನ್ನ ಹೆಸರು ನೋಂದಣಿ ಆಗಿಲ್ಲವಾದ್ದರಿಂದ ದೇವದಾಸಿ ಯೋಜನೆಯ ಯಾವ ಸೌಲಭ್ಯವೂ ಸಿಗುವುದಿಲ್ಲ.*(ಆದರೆ ಶ್ರೀದೇವಿಯ ಮನೆಯ ವಾತಾವರಣ ಗಮನಿಸಿದರೆ, ಇಬ್ಬರು ಚಿಕ್ಕ ವಯಸ್ಸಿನ ಹೆಣ್ಣುಮಕ್ಕಳು(ಅವರು ದೇವದಾಸಿಯಾಗಿರಬಹುದು) ದಂಧೆಗೆ ಬಂದು ನಿಂತ ಹಾಗಿತ್ತು. ಅವರನ್ನು ತನ್ನ ಅಕ್ಕನ ಮಕ್ಕಳು ಎಂದು ಶ್ರೀದೇವಿ ಪರಿಚಯಿಸಿದ್ದಳು. ಆದರೆ ಅವರು ಇರುವ ರೀತಿ ನಡತೆ ಬೇರೆಯದೇ ಕತೆ ಹೇಳುತ್ತಿದ್ದವು(ಮನೆಯ ವಾತಾವರಣವೂ ಸಹ ವೇಶ್ಯಾಗೃಹವನ್ನು ಹೋಲುವ ಹಾಗೆ ಇತ್ತು).

## ಪ್ರಕರಣ-೫: ಜಲಜ ಪ್ರಕರಣ

**ಜಲಜ** ಬಿಜಾಪೂರ ತಾಲೂಕಿನ ೫೦ ವರ್ಷದ ದೇವದಾಸಿ ಮಹಿಳೆ. ಐದು ಜನ ಹೆಣ್ಣುಮಕ್ಕಳು ಮತ್ತು ಎರಡು ಜನ ಗಂಡುಮಕ್ಕಳಿರುವ ಕುಟುಂಬದಲ್ಲಿ ಹಿರಿಯವಳು. ಕೆಳ ಸ್ತರದ ಪರಿಶಿಷ್ಟ ಜಾತಿಯ ಹೊಲೆಯ ಮತ್ತು ಮಾದಿಗ ಸಮುದಾಯದ ಜನರು ಸಾಂಪ್ರದಾಯಿಕವಾಗಿ ಹರಡಿದ ದೇವದಾಸಿ ಪದ್ಧತಿಯು ಬಡತನಕ್ಕೆ ಒಂದು ಪರಿಹಾರವೆಂಬಂತೆ ಕಂಡುಕೊಳ್ಳುತ್ತಿದ್ದರು. ಈ ಸಂದರ್ಭದಲ್ಲಿ ಕುಟುಂಬದ ಎಲ್ಲರ ಹೊಟ್ಟೆ ತುಂಬಿಸುವ ಜವಾಬ್ದಾರಿಯನ್ನು ಹೊರೆಸಿ ಜಲಜಳನ್ನು ಅತೀ ಚಿಕ್ಕ ವಯಸ್ಸಿನಲ್ಲಿಯೆ ದೇವದಾಸಿ ಮಾಡಿದ್ದರು. ಅವಳನ್ನು ಭೇಟಿಯಾಗಲು ಅವಳ ಮನೆಗೆ ಹೋದಾಗ ಆದೇ ತಾನೆ ಕೂಲಿಗೆ ಹೋಗಿ ಬಂದು ಮನೆಯ ಕಟ್ಟೆ ಮೇಲೆ ಕುಳಿತಿದ್ದಳು. ನಾವು ಬಂದ ವಿಚಾರವನ್ನು ಕೇಳಿ ತುಂಬಾ ಖುಷಿಯಾಗಿ, ತನ್ನ ನೋವನ್ನು, ಸಧ್ಯದ ಪರಿಸ್ಥಿತಿಯನ್ನು ಹಂಚಿಕೊಂಡಳು. ಅವಳು ಹಂಚಿಕೊಂಡ ವಿಷಯವನ್ನು ಇಲ್ಲಿ ಅವಳದೇ ಮಾತಿನಲ್ಲಿ ವಿವರಿಸಲಾಗಿದೆ.

**ಜೀತದ ಸ್ಥಿತಿ**

ನಾನು ಜಲಜ. ದೇವದಾಸಿ ಮಹಿಳೆಯಾಗಿದ್ದೇನೆ. ದೇವದಾಸಿಯಾದ ಮೇಲೆ ಊರಲ್ಲಿಯೇ ಉಳಿದಿದ್ದೆ. ಆದರೆ ನನ್ನನ್ನು ಇಟ್ಟುಕೊಂಡವನಿಂದ ಏನೂ ಸಹಾಯ ಸಿಗಲಿಲ್ಲ. ಹಾಗಾಗಿ ನಾನು ನನ್ನ ಒಂಬತ್ತು ತಿಂಗಳ ಮಗಳನ್ನು ಕಟ್ಟಕೊಂಡು ಮುಂಬಯಿಯ ಕಾಮಾಟಪೂರದ ೧೩ನೆ ಗಲ್ಲಿಗೆ ದಂಧೆ ಮಾಡಲು ಹೋಗಿದ್ದೆ( ಮನೆಯವರೇ ನೂಕುತ್ತಾರೆ). ನಾನು ಒಂಭತ್ತು ವರ್ಷಗಳ ಅವಧಿಯಲ್ಲಿ ೩ ವರ್ಷ ಕಾಮಾಟಪುರದಲ್ಲಿಯೇ ಕಳೆದೆ. ಆದರೂ ನನಗೆ ಹಿಂದಿ ಭಾಷೆ ಬರಲೇ ಇಲ್ಲ. ಹಾಗಾಗಿ ಅಲ್ಲಿಂದ ತಮ್ಮ ಊರಿನವರೆ ಹೆಚ್ಚು ಜನರಿರುವ ಬಾಂಡುಪ್‌ಗೆ ನನ್ನ ಸ್ಥಳ ಬದಲಾಯಿಸಿದ್ದೆ.

ನಾವು ಸಂಜೆ ೩-೪ ಗಂಟೆಯಿಂದ ಹಿಡಿದು ಬೆಳಿಗ್ಗೆ ೪.೦೦ ರವರೆಗೆ ನಿಂತುಕೊಂಡೇ ದಂಧೆ ಮಾಡಬೇಕಿತ್ತು. ಮಗಳು ಚಿಕ್ಕವಳಾದ್ದರಿಂದ ಗಿರಾಕಿಗಳು ಬಂದಾಗ ಅವರಿವರ ಕೈಯಲ್ಲಿ ಎತ್ತಿಕೊಳ್ಳಲು ಕೊಟ್ಟು ದಂಧೆ ಮಾಡುತ್ತಿದ್ದೆ. ಒಬ್ಬ ಗಂಡಸಿನಿಂದ ನನಗೆ ೫ ರೂಪಾಯಿ ಸಿಗುತ್ತಿತ್ತು. ಆದರಲ್ಲಿ ಘರವಾಲಿಗೆ ಎರಡೂವರೆ ರೂಪಾಯಿ ಕೊಡಬೇಕಿತ್ತು. ಅದನ್ನು ಬಿಟ್ಟು ನನಗುಳಿದ ಅರ್ಧ ಹಣದಲ್ಲಿ ೨೫ ಪೈಸೆ ಪರ್ಸಿ(ನೆಲ) ಒರೆಸುವವರಿಗೆ, ೨೫ ಪೈಸೆ ಫ್ಯಾನ್ ಉಪಯೋಗಿಸಿದ್ದಕ್ಕೆ ಅಂತ ಘರವಾಲಿ ವಸೂಲು ಮಾಡುತ್ತಿದ್ದಳು. ಆ ಎರಡು ರೂಪಾಯಿಯಲ್ಲಿ ನನ್ನ ಊಟ, ಬಟ್ಟೆ ,ಮೇಕಪ್ ಸಾಮಾನುಗಳು, ಸಾಬೂನು ಎಂದೆಲ್ಲ ತುಂಬಾ ಖರ್ಚುಗಳಿರುತ್ತಿದ್ದವು. ಬರುವ ಗಿರಾಕಿಗಳಿಗೇನೂ ಕಡಿಮೆ ಇರಲಿಲ್ಲ. ಆದರೆ ದಂಧೆ ಮಾಡುವ ತಾಕತ್ತು ನಮಗಿರಲಿಲ್ಲ. ದಿನಕ್ಕೆ ೨೦ ಗಿರಾಕಿ ಅಂದ್ರ ಸಾಕಾಗಿ ಬಿಡುತ್ತಿತ್ತು. ಅದರಲ್ಲೇ ಉಳಿಸಿ ತಿಂಗಳಿಗೆ ೧೫೦ ರೂಪಾಯಿ ಊರಿಗೆ ಕಳಿಸುತ್ತಿದ್ದೆ.

ಊರಲ್ಲಿ ನಮ್ಮ ತಂದೆ ಎಮ್ಮೆ ಮೈ ಬೋಳಿಸುವ ಕೆಲಸ ಮಾಡುತ್ತಿದ್ದ. ಒಂದು ಎಮ್ಮೆ ಬೋಳಿಸಿದರೆ ೧ ರೂಪಾಯಿ ಕೊಡುತ್ತಿದ್ದರು. ಎಮ್ಮೆ ಮತ್ತು ಕರು ಎರಡೂ ಇದ್ದರೆ ೧ ರೂಪಾಯಿ ೭೫ ಪೈಸೆ ಕೊಡುತ್ತಿದ್ದರು. ನನ್ನ ತಾಯಿ ಕಟ್ಟಗೆ ಆರಿಸಿ ತಂದು ಮಾರಾಟ ಮಾಡುತ್ತಿದ್ದಳು. ಎರಡು ಹೊರಿ ಕಟ್ಟಿಗೆ ಆರಿಸಿ ತಂದ್ರ ೧ ರೂಪಾಯಿ ಸಿಗುತ್ತಿತ್ತು. ಹೀಗಾಗಿ ನಾನು ಕಳಿಸುವ ೧೫೦ ರೂಪಾಯಿ ಅವರ ತುಂಬಿದ ಸಂಸಾರಕ್ಕೆ ದೊಡ್ಡ ಆಧಾರವಾಗಿತ್ತು. ನಾನೇ ಖರ್ಚು ಮಾಡಿ ಅಣ್ಣ ತಮ್ಮಂದಿರ ಮದುವೆ ಮಾಡಿದ್ದೆ.

ನಾನು ಘರವಾಲಿಯ ಮನೆಯಲ್ಲಿ ತುಂಬಾ ನೋವಿನ ದಿನಗಳನ್ನು ಅನುಭವಿಸುತ್ತಿದ್ದೆ. ಹೊಸದಾಗಿ ಹೋದಾಗ ನನ್ನ ಮಗಳು ಬರಿ ಒಂಬತ್ತು ತಿಂಗಳಿನ ಹಸುಳೆ. ಎದೆಹಾಲು ಕುಡಿಯುತ್ತಿದ್ದಳು. ಅವಳಿಗೆ ಎದೆಹಾಲನ್ನು ಬಿಡಿಸಿ ಬೇರೆ ಊಟದ ರೂಢಿ ಮಾಡಿಸಲು ನನಗೆ ಸಮಯವೂ ಇರುತ್ತಿರಲಿಲ್ಲ ಮತ್ತು ಸಹಾಯಕ್ಕೂ ಯಾರೂ ಇರುತ್ತಿರಲಿಲ್ಲ. ಹಾಗಾಗಿ ನನ್ನ ಕೂಸಿಗೆ ನನ್ನ ಎದೆಹಾಲು ಒಂದೇ ಆಧಾರ ವಾಗಿತ್ತು. ಗಿರಾಕಿಗಳು ದಂಧೆ ಮಾಡುವಾಗ ನನ್ನ ಎದೆಯನ್ನು ಹಿಸುಕಿದರೆ, ನನಗೆ ಜೀವ ಹೋಗುವಂತ ನೋವು ಆಗುತ್ತಿತ್ತು. ಹಾಲು ಹೊರಚಿಮ್ಮುತ್ತಿತ್ತು. ಹಾಗಾಗಿ ದಂಧೆಗೆ ತೊಂದರೆ ಆಗಬಾರದೆಂದು ಎದೆ ಹಾಲು ಹಿಂಡಿ ಚರಂಡಿಯಲ್ಲಿ ಚೆಲ್ಲಿ ಹೋಗುತ್ತಿದ್ದೆ. ಆದರೂ ಸಹ ತೊಂದರೆ ಆಗುತ್ತಿತ್ತು. ಗೆಳತಿಯರ ಸಲಹೆಯ ಮೇರೆಗೆ ಹತ್ತಿ ತುಂಬಿ ಮಾಡಿದ ದಪ್ಪನೆಯ ಬ್ರಾ(ಒಳ ಉಡುಪು) ಹಾಕಿಕೊಳ್ಳುತ್ತಿದ್ದೆ. ಇದರಿಂದ ಎದೆಹಾಲು ಒಳಗೇ ಹೆಪ್ಪುಗಟ್ಟಿ ಏನಾಯಿತೆಂಬುದು ನನಗೆ ಗೊತ್ತಾಗಲೇ ಇಲ್ಲ. ನನ್ನ ಎಡಗಡೆಯ ಒಂದು ಸ್ತನ ಕರಗಿ ಹೋಗಿದೆ. ಈ ಕುರಿತು ಯಾವ ಆಸ್ಪತ್ರೆಗೂ ನಾನು ತೋರಿಸಿಲ್ಲ.

*ನನ್ನ ಮಗಳು ಚಿಕ್ಕವಳಾಗಿರುವುದರಿಂದ, ಹಾಸಿಗೆಯ ಮೇಲೆ ಮೂತ್ರ ಮಾಡಿ ಹೊಲಸು ಮಾಡಿದರೆ ಗಿರಾಕಿಗಳಿಗೆ ತೊಂದರೆ ಆಗುತ್ತದೆಂದು, ನಮ್ಮನ್ನು ಮಂಚದ ಮೇಲೆ ಮಲಗಲು ಬಿಡುತ್ತಿರಲಿಲ್ಲ. ನಾವು ಮಂಚದ ಕೆಳಗೆ ಬೆಡ್ ಶೀಟ್ ಹಾಸಿಕೊಂಡು ಮಲಗಬೇಕಿತ್ತು. ಆಗಲ್ಲ ಮಂಚದ ಮೇಲೆ ಗಿರಾಕಿಗಳ ಜೊತೆ ಹುಡುಗಿಯರು ಲೈಂಗಿಕ ಚಟುವಟಿಕೆಯಲ್ಲಿ ತೊಡಗಿರುತ್ತಿದ್ದರು. ಅವರು ಮಾಡುವ ಗದ್ದಲಕ್ಕೆ ನನ್ನ ಮಗಳು ನಿದ್ದೆಯನ್ನೇ ಮಾಡುತ್ತಿರಲಿಲ್ಲ. ಹಾಗೂ ಹೀಗೂ ಹಿಂಸೆಯಲ್ಲಿಯೇ ದಿನ ದೂಡಿದೆ. ನನ್ನ ಮಗಳಿಗೆ ೨ ವರ್ಷ ತುಂಬುತ್ತಲೇ ಅವಳನ್ನು ಊರಲ್ಲಿ ನನ್ನ ತಾಯಿಯ ಹತ್ತಿರ ಬಿಟ್ಟು ಬಂದಿದ್ದೆ. ಕಷ್ಟ ಪಟ್ಟು ಹಣವನ್ನು ಕೂಡಿಟ್ಟುಕೊಂಡು ಒಂದು ಮನೆಯನ್ನು ಕೊಂಡುಕೊಂಡಿದ್ದೆ. ನನ್ನ ದುರಾದೃಷ್ಟಕ್ಕೆ ಆ ಮನೆ ಈಗಾಗಲೇ ಮಾರಾಟವಾಗಿಬಿಟ್ಟಿತ್ತು. ನಾನು ಅದನ್ನು ತಿಳಿಯದೇ ಮೋಸ ಹೋಗಿದ್ದೆ. ಜಗಳ ಮಾಡಿ ಗುಂಡಾಗಳಿಂದ ಹೊಡೆಸಿಕೊಂಡು, ನನ್ನ ಹಣವನ್ನು ಮರಳಿ ಪಡೆದಿದ್ದೆ. ಈ ಜಗಳದಲ್ಲಿ ಗುಂಡಾಗಳಿಂದ ನನ್ನನ್ನು ರಕ್ಷಿಸಿದ್ದ, ಒಬ್ಬ ಘರ್‌ಗ್ರಹಸ್ಥೆ(ಕುಟುಂಬಸ್ಥ) ವ್ಯಕ್ತಿ ನನ್ನಿಂದ ಅರ್ಧ ಹಣ ತೆಗೆದುಕೊಂಡ.*

**ಜೀತದಿಂದ ಹೊರಬಂದ ಸ್ಥಿತಿ**

*ನನಗೆ ಒಟ್ಟು ಮೂರು ಮಕ್ಕಳು ಹುಟ್ಟಿದ್ದವು. ಎರಡು ಗಂಡು ಮತ್ತು ಒಂದು ಹೆಣ್ಣು ಮಗಳು. ಅವರೆಲ್ಲ ಈಗ ದೊಡ್ಡವರಾಗಿದ್ದಾರೆ. ಅವರ ಮುಂದೆ ದಂಧೆ ಮಾಡುವುದು ಸರಿ ಅಲ್ಲವೆಂದು ಮತ್ತು ಮುಂಬಯಲಿ ಗುಂಡಾಗಳ ಕಾಟ ಜಾಸ್ತಿ ಆಗಿ ಅಲ್ಲಿರುವುದೇ ಬೇಡವೆಂದು ಊರಿಗೆ ಬಂದಿದ್ದೇನೆ. ಮಕ್ಕಳು ವಿದ್ಯಾವಂತರಾಗಿದ್ದಾರೆ. ಮಗಳು ಬಿಎ ಓದಿ ಅಂಗನವಾಡಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾಳೆ. ಒಬ್ಬ ಮಗ ಸೆಕ್ಯೂರಿಟಿ ಗಾರ್ಡ ಆಗಿ ಕೆಲಸ ನಿರ್ವಹಸುತ್ತಿದ್ದಾನೆ. ಇನ್ನೊಬ್ಬ ಮಗ ಕೃಷಿ ಕೂಲಿಯನ್ನು ಮಾಡುತ್ತಿದ್ದಾನೆ.*

## ಪ್ರಕರಣ–೬: ಮೀನಾ ಪ್ರಕರಣ

**ಮೀನಾ** ೩೨ ವರ್ಷ ದೇವದಾಸಿ ಮಹಿಳೆ. ತಂದೆ ದೈಹಿಕವಾಗಿ ಅಶಕ್ತನಾಗಿದ್ದು ಕೆಲಸ ಮಾಡಲಾಗುತ್ತಿರಲಿಲ್ಲ. ತಾಯಿಯೇ ಮನೆಯ ಆಧಾರವಾಗಿದ್ದಳು. ತಂದೆ–ತಾಯಿಗೆ ಇವರು ಇಬ್ಬರು ಹೆಣ್ಣು ಮಕ್ಕಳು. ಇನ್ನೊಬ್ಬಳದು ಮದುವೆಯಾಗಿದೆ. ಮೀನಾಳ ಅತ್ತೆ(ತಂದೆಯ ಸಹೋದರಿ) ದೇವದಾಸಿ ಯಾಗಿದ್ದಳು. ಮುಂಬಯಿಯ ಕಾಮಾಟಪುರಕ್ಕೆ ಇವಳು ಸಾಗಾಣೆಕೆಗೊಂಡಿದ್ದಳು. ಈಗ ಊರಲ್ಲಿ ಇರುತ್ತಾಳೆ. ಒಂದೊಂದು ಸಾರಿ ಮುಂಬಯಿಗೆ ಹೋಗುತ್ತಾಳೆ. ಅವಳನ್ನು ಭೇಟಿಯಾಗಲು ಮನೆಗೆ ಹೋದಾಗ ಮೀನಾ ಮಲಗಿದ್ದಳು. ನಾವು ಹೋಗಿದ್ದನ್ನು ಕಂಡು ಎದ್ದು ಕುಳಿತು ಸ್ವಾಗತಿಸಿದಳು. ತನ್ನ ಜೀವನದ ಕುರಿತು ಮೀನಾ ನಗುತ್ತಲೇ ಮಾಹಿತಿ ನೀಡಿದಳು. ಅವಳು ನಮ್ಮೊಂದಿಗೆ ಹಂಚಿಕೊಂಡ ವಿಷಯಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಪೂರ್ವ**

*ನಾನು ಚಿಕ್ಕಂದಿನಲ್ಲಿ ಶಾಲೆಗೆ ಹೋಗುತ್ತಿದ್ದೆ. ನನ್ನ ತಾಯಿ ಕೆಲಸಕ್ಕೆ ಹೋಗಿರುತ್ತಿದ್ದಳು. ಹಾಗಾಗಿ ಮನೆಯಲ್ಲಿ ಚಿಕ್ಕ ತಂಗಿಯನ್ನು ನೋಡಿಕೊಳ್ಳಲು ಯಾರೂ ಇರಲಿಲ್ಲ. ಅದ್ದರಿಂದ ನಾನು ಶಾಲೆಗೆ ಹೋಗುವಾಗ ನನ್ನ ತಂಗಿಯನ್ನೂ ನನ್ನೊಡನೆ ಶಾಲೆಗೆ ಕರೆದುಕೊಂಡು ಹೋಗುತ್ತಿದ್ದೆ. ಒಂದು ದಿನ*

ನನ್ನ ತಂಗಿ ಶಾಲೆಯಲ್ಲಿ ಸಂಡಾಸ್(ಮಲ ವಿಸರ್ಜನೆ) ಮಾಡಿಕೊಂಡಿದ್ದಳು. ಆಗ ನಮ್ಮ ಮಾಸ್ತರರು ನನ್ನನ್ನು ಹೊಡೆದು, "ಅದನ್ನು ನೀನೇ ಸ್ವಚ್ಛ ಮಾಡಬೇಕು" ಎಂದು ಬೆದರಿಸಿ ನನ್ನ ಕೈಯಿಂದಲೇ ಸ್ವಚ್ಛ ಮಾಡಿಸಿದರು. ಆಗ ನನಗೆ ಎಂಟು ವರ್ಷ. ನನಗೆ ನನ್ನ ಗೆಳತಿಯರ ಮುಂದೆ ತುಂಬಾ ಅವಮಾನವಾಗಿತ್ತು. ಅಂದಿನಿಂದ ಬೇಸರಿಸಿಕೊಂಡು ನಾನು ಶಾಲೆಗೆ ಹೋಗಲೇ ಇಲ್ಲ. ಅವರೂ ನನ್ನನ್ನು ಕರೆಯಲು ಬರಲಿಲ್ಲ.

ನನ್ನ ತಂದೆ–ತಾಯಿಗೆ ನನ್ನನ್ನು ದೇವದಾಸಿ ಮಾಡುವುದು ಒಪ್ಪಿಗೆ ಇರಲಿಲ್ಲ. ಆದರೆ ನನ್ನ ಅತ್ತೆ "ತನ್ನ ತಮ್ಮನಿಗೆ(ಮೀನಾಳ ತಂದೆ) ಕೆಲಸ ಮಾಡಲು ಆಗುವುದಿಲ್ಲ. ಅವನನ್ನು ನೋಡಿಕೊಳ್ಳುವವರು ಒಬ್ಬರು ಬೇಕು, ತಂದೆ–ತಾಯಿಗೆ ಆಧಾರವಾಗಿರುತ್ತಾಳೆ" ಎಂದು ಹೇಳಿ ತುಂಬಾ ಒತ್ತಾಯ ಮಾಡಿ ನನ್ನನ್ನು ದೇವದಾಸಿ ಮಾಡಿದಳು. ಆಗ ನನ್ನ ತಾಯಿ ಮನೆಯಲ್ಲಿ ಇರಲಿಲ್ಲ. ಮಹಾರಾಷ್ಟ್ರದ ರೋಡ್ ಕೆಲಸ ಮಾಡಲು ಹೋಗಿದ್ದಳು. ಅವಳಿಗೆ ನನ್ನನ್ನು ದೇವದಾಸಿ ಮಾಡಿದ್ದ ಕುರಿತು ತಿಳಿಸುವುದೇ ಇಲ್ಲ.

ಒಂದು ಸಾರಿ ನನ್ನ ಹೊಟ್ಟೆಯ ಮೇಲೆ ಒಂದು ಅಗಲವಾದ ದೊಡ್ಡ ಗುಳ್ಳೆಯಾಗಿ ನೋವು ಕಾಣಿಸಿಕೊಂಡಿತ್ತು. ಅದು ದಿನಗಳೆದಂತೆ ಅಗಲವಾಗುತ್ತಾ ಹೋಗತೊಡಗಿತ್ತು. ಅದಕ್ಕೆ ನನ್ನ ತಂದೆ ಶೇಡ್‌ಬಾಳಕ್ಕೆ ಸಂಬಂಧಿಕರ ಮನೆಗೆ ಕರೆದುಕೊಂಡು ಹೋಗಿ ಔಷಧೋಪಚಾರ ಮಾಡಿಸತೊಡಗಿದ್ದರು. ಚಿಕಿತ್ಸೆ ಮುಗಿಯುವವರೆಗೂ ಸ್ವಲ್ಪ ದಿನ ನಾವಿಬ್ಬರೂ ಅಲ್ಲಿಯೇ ಉಳಿದೆವು. ಆ ಊರಿನಲ್ಲಿ ಬೀದಿ ವ್ಯಾಪಾರಸ್ಥನೊಬ್ಬ ಓಣಿ ಓಣಿ ತಿರುಗುತ್ತಿದ್ದ. ಆತ ನನ್ನನ್ನು ನೋಡಿದ್ದ. ಹಾಗೆ ನೋಡಿದ ಅವನು ನನ್ನ ತಂದೆಯೊಡನೆ ಸ್ನೇಹ ಬೆಳೆಸಿ, "ನಿಮ್ಮ ಮಗಳಿಗೆ ಒಳ್ಳೆಯ ನೌಕರಿ ಕೊಡಿಸುತ್ತೇನೆ" ಎಂದು ನಮ್ಮನ್ನು ಮುಂಬಯಿಗೆ ಕರೆದುಕೊಂಡು ಬಂದ. ಆತ ಮುಂಬಯಿಯ ಕಾಮಾಟಿಪುರದಲ್ಲಿ ನಮ್ಮ ಅರಿವಿಗೆ ಬರದಂತೆ ಒಬ್ಬ ಘರವಾಲಿಗೆ ನನ್ನನ್ನು ಮಾರಿಬಿಟ್ಟಿದ್ದ.

**ಜೀತದ ಸ್ಥಿತಿ**

ನನಗೆ ದಂಧೆಯ ಮನೆಯ ನೆನಪಾದರೆ, ನರಕಯಾತನೆ ಎನಿಸುತ್ತದೆ. ನನಗಾಗ ೧೧–೧೨ ವರ್ಷವಿತ್ತು. ನಾನು ಅಲ್ಲಿಗೆ ಹೋದ ಮೊದಲೆರಡು ದಿನ ಘರವಾಲಿ ನನ್ನನ್ನು ತುಂಬಾ ಪ್ರೀತಿಸುತ್ತಿದ್ದಳು. ನನ್ನ ಹೊಟ್ಟೆಯ ಮೇಲೆ ಆದ ನೋವನ್ನು ವೈದ್ಯರಿಗೆ ತೋರಿಸಿ ಗುಣವಾಗುವಂತೆ ಮಾಡಿದ್ದಳು. ಅದಾದ ನಂತರ ನಾನು ತುಂಬಾ ಸುಂದರವಾಗಿ ಕಾಣತೊಡಗಿದ್ದೆ. ಒಂದು ದಿನ ಘರವಾಲಿ "ನಿನ್ನ ಮದುವೆ ಮಾಡುತ್ತಿದ್ದೇವೆ ತಯಾರಾಗು" ಎಂದು ನನಗೆ ಹೇಳಿದಳು. ನನಗೆ ನನ್ನ ಮದುವೆ ನಡೆಯುತ್ತದೆ ಎಂದು ತುಂಬಾ ಖುಷಿಯಾಗಿತ್ತು. ಆದರೆ ಕೆಲವೇ ಸಮಯದಲ್ಲಿ ಅದು ಸುಳ್ಳಾಯಿತು. ಸಾಯಂಕಾಲ ಧಡೂತಿ ದೇಹದ ಮನುಷ್ಯನೊಬ್ಬ ಬಂದ. ನನ್ನನ್ನು ರೂಮಿನಲ್ಲಿ ಕೂಡಿಸಲಾಗಿತ್ತು. "ನೀನು ಸಣ್ಣಾಕಿ ಇರೋದ್ರಿಂದ ಹೊರಗೆ ಮದುವೆ ಮಾಡಲು ಸಾಧ್ಯವಿಲ್ಲ. ಪೋಲೀಸರಿಗೆ ಗೊತ್ತಾದರೆ ಹಿಡಿದು ಕೊಂಡು ಹೋಗುತ್ತಾರೆ. ಆದ್ದರಿಂದ ಕೋಲಿಯೊಳಗೆ ಮದುವೆ ಮಾಡ್ತೀವಿ". ಎಂದು ಘರವಾಲಿ ನನಗೆ ಹೇಳಿದಳು. ಈಗಾಗಲೇ ಆ ಮನುಷ್ಯ ಬಂದು ಕುಳಿತಿದ್ದ ಕೋಲಿಯೊಳಗೆ ಘರವಾಲಿ ನನ್ನನ್ನು ಬಿಟ್ಟು ಬಾಗಿಲು ಹಾಕಿ ಹೊರ ಹೋಗಿದ್ದಳು. ರೂಮಿನೊಳಗೆ ಇದ್ದ ವ್ಯಕ್ತಿಯ ವರ್ತನೆಯಿಂದ ನನಗೆ ತುಂಬಾ ಹೆದರಿಕೆ ಆಯಿತು. ನಾನು ಅಂಜಿ, ಕೂಗಾಡಿ ಚೀರಾಡಿ ಆತನನ್ನು ಹೊಡೆದು. ನೀನು

ನನ್ನನ್ನ ಮದುವಿ ಮಾಡ್ಕೋಳ್ಳೋ ಮೊದಲ ಹಿಂಗೆಲ್ಲ ಮಾಡಬೇಡ" ಅಂತ ಅಂದೆ. ಅದಕ್ಕೆ ಆತ "ಯೇ ಲಡಕೀ ಏ ಕ್ಯಾ ಸಮಝು ರಖಿ ತುಮ್, ತೇರಿ ಘರವಾಲಿ ಕೋ, ಪಾಂಚ ಹಜಾರ ದಿಯಾ ಹೂಂ ಮೈ! ಕ್ಯೂಂ ಕೋ ಶಾದಿ ಕರೂ ತುಮಕೋ, ಚುಪ್ ಬೈಟ್!", ಅಂತ ಅವನು ನನ್ನನ್ನೇ ಗದರಿಸಿದ್ದ. ನನಗೆ ಅಲ್ಪ ಸ್ವಲ್ಪ ಹಿಂದಿ ಅರ್ಥವಾಗುತ್ತಿತ್ತು. ಅವನು ಹೇಳಿದ್ದು ಕೇಳಿ ಆಕಾಶವೇ ಕಳಚಿ ಬಿದ್ದ ಹಾಗಾಗಿತು. ಅವನಿಗೆ ಹೊಡೆದು ಬಡಿದು ಹೊರಗೆ ಓಡಿ ಬಂದಿದ್ದೆ. ತಕ್ಷಣವೇ ಘರವಾಲಿ ಓಡಿ ಬಂದವಳೇ ನನ್ನನ್ನು ಹಿಡಿದು "ನೀ ಅಂವಾ ಹೇಳದಂಗ ಮಾಡಿದ್ರನ ಅವನ ಗೂಡ ನಿನ್ನ ಮದುವಿ ಮಾಡೂದು. ಇಲದಿದ್ರ ಮದುವಿ ಆಗಂಗಿಲ್ಲ" ಅಂದಳು. ಆದರೂ ನಾನು ಒಪ್ಪದೇ ಹೋದಾಗ, ಘರವಾಲಿ ನನ್ನನ್ನು ಒಂದು ಕಡೆ ಕೂಡಿಸಿ ಕಾವಲು ನಿಂತಳು. ಹೀಗೇ ೨-೩ ದಿನ ಆ ಮನುಷ್ಯ ಬಂದು ಬಂದು ಮರಳಿ ಹೋದ. ಕಡೆಗೆ ಒಂದು ದಿನ ಘರವಾಲಿ "ನಿನಗ ಮನಸ್ಸಿರದಿದ್ದರ ಬ್ಯಾಡ ಬಿಡು ನಾವೇನೂ ಮಾಡಂಗಿಲ್ಲ. ಆರಾಮ ಇರು" ಅಂತ ಪ್ರೀತಿಯಿಂದ ತಲೆ ನೇವರಿಸಿ "ಮಾವಿನಕಾಯಿ ಜೂಸ್ ಕುಡಿತಿಯೇನ" ಅಂತ ಕೇಳಿದಳು. ನನಗೆ ಅವಳ ಮಾತು ವರ್ತನೆ ಹಿತ ಅನ್ನಿಸಿದವು. "ಹೂಂ; ಕುಡಿತೀನಿ" ಅಂದೆ. ಘರವಾಲಿ ತಾನೇ ಎದ್ದು ಹೋಗಿ 'ಮಾವಿನ ಕಾಯಿ ಜ್ಯೂಸ್ ತಂದು ಕೊಟ್ಟಳು. ಅದನ್ನು ಕುಡಿದು ನನಗೆ ಮತ್ತಷ್ಟು ಕುಡಿಯಬೇಕೆನಿಸಿತು. ಮತ್ತೆ ತಂದು ಕೊಟ್ಟರು. ಮತ್ತೂ ಕುಡಿಯಬೇಕೆನಿಸಿ ಕೇಳಿದಾಗ, ಮತ್ತೂ ತಂದು ಕೊಟ್ಟರು. ನಂತರ ಏನಾಯಿತೆಂದೇ ನನಗೆ ತಿಳಿಯಲಿಲ್ಲ. ಮೂರು ದಿನ ಬಂದು ಮರಳಿ ಹೋಗಿದ್ದ ಮನುಷ್ಯ ಅಂದು ಬಂದು ಎಲ್ಲವನ್ನೂ ಮುಗಿಸಿ ಹೋಗಿದ್ದ. ನನಗೆ ಕುಡಿಯಲು ಕೊಟ್ಟ ಜ್ಯೂಸ್‌ನಲ್ಲಿ ಮತ್ತು ಬರುವ ಸಾರಾಯಿ ಹಾಕಿ ಕೊಟ್ಟಿದ್ದರು. ಕುಡಿದ ಅಮಲಿನಲ್ಲಿ ನನಗೆ ಏನಾಯಿತೆಂಬುದು ತಿಳಿಯಲೇ ಇಲ್ಲ. ತೂರಾಡುತ್ತಿದ್ದ ನನ್ನನ್ನು ಹಿಡಿದು ಬಚ್ಚಲ ಮನೆಗೆ ಕರೆದುಕೊಂಡು ಹೋಗಿ ಬಿಸಿ ಬಿಸಿ ನೀರು ಸುರುವಿದರು. ಅದರಲ್ಲಿ ಅರಿಶಿನ, ಬೇವಿನ ಎಲೆ ಕೂಡಿಸಲಾಗಿತ್ತು. ನಜ್ಜು ಗಜ್ಜಾದ ದೇಹಕ್ಕೆ ಹಿತವೆನಿಸಿತು. ಸಾಯಂಕಾಲದವರೆಗೆ ಹಾಗೇ ಮಲಗಿದ್ದೆ. ಮತ್ತೆ ರಾತ್ರಿಗೆ ನನ್ನ ಮೇಕಪ್ ಮಾಡಲಾಯಿತು. ಹಿಂದಿನ ದಿನದಂತೆ ಮತ್ತೆ ಮಾವಿನಕಾಯಿ ಜೂಸ್ ಕುಡಿಸಿದರು. ಆತ ಮತ್ತೆ ಬಂದ. ಹೀಗೆ ೮-೧೦ ದಿನ ಕಳೆದಿರಬೇಕು. ನಾನು ಮಾವಿನಕಾಯಿ ಜೂಸ್ ಬಿಟ್ಟು ಅದರಲ್ಲಿದ್ದ ಸಾರಾಯಿಗೆ ಹೊಂದಿಕೊಂಡಿದ್ದೆ. ಸಾರಾಯಿ ಕುಡಿದರೆ ಮಾತ್ರ ದಂಧೆ ಮಾಡುವ ಹಂತಕ್ಕೆ ಬಂದೆ. ಗಿರಾಕಿಗಳಿಗೂ ನನ್ನಂತವರೇ ಬೇಕಾಗುತ್ತಿತ್ತು. ಇದೇ ಸ್ಥಿತಿಯಲ್ಲಿಯೇ ದಿನ ಕಳೆದ ನನಗೆ ಎರಡು ಹೆಣ್ಣುಮಕ್ಕಳು ಮತ್ತು ಒಂದು ಗಂಡು ಮಗು ಜನಿಸಿದ್ದವು. ನನ್ನದು ಬರೀ ಮಕ್ಕಳನ್ನು ಹೆರುವುದೊಂದೇ ಕೆಲಸ ಆಗಿತ್ತು. ಉಳಿದ ಕಾಳಜಿ ಜವಾಬ್ದಾರಿಯನ್ನೆಲ್ಲ ನನ್ನ ತಾಯಿ ಮತ್ತು ತಂಗಿ ತೆಗೆದುಕೊಂಡಿದ್ದರು.

ನನ್ನ ಅತಿಯಾದ ಮದ್ಯಪಾನದಿಂದಾಗಿ ಗಳಿಸಿದ ಹಣವೆಲ್ಲ ಚಟಗಳಿಗೆ ಹರಿದು ಹೋಗಿ ಬಿಡುತ್ತಿತ್ತು. ಒಂದೊಂದು ಸಾರಿ ಸಾಲವೂ ಆಗುತ್ತಿತ್ತು. ಹೀಗೆ ಒಂದು ಸಾರಿ ಸಾಲದ ಹೊರೆ ಜಾಸ್ತಿಯಾದಾಗ ಅದನ್ನು ತೀರಿಸಲು ನಾನು ನನ್ನ ಎಂಟು ತಿಂಗಳ ಮಗನನ್ನೇ ೮೦೦೦ ರೂಪಾಯಿಗಳಿಗೆ ಜೋಗಪ್ಪನಿಗೆ ಮಾರಾಟ ಮಾಡಲು ಯೋಜಿಸಿದ್ದೆ. ನನ್ನ ಮಗು ಅವರ ಕೈಗೆ ಸೇರುವ ಮೊದಲೇ ನಮ್ಮ ಊರಿನ ಹೆಣ್ಣುಮಕ್ಕಳಿಗೆ ವಿಷಯ ತಿಳಿದು ಮಗುವನ್ನು ನನ್ನಿಂದ ಕಸಿದುಕೊಂಡು, ತಮ್ಮ ಕಡೆ ಇಟ್ಟುಕೊಂಡರು. ನಂತರ ಊರಿನಲ್ಲಿರುವ ನಮ್ಮ ತಾಯಿಯ ಕಡೆಗೆ ಕಳಿಸಿದರು. ನನ್ನ ತಾಯಿ

*ಸಂಸ್ಥೆಯೊಂದರ ಸಹಾಯದಿಂದ ಆತನಿಗೆ ವಿದ್ಯಾಭ್ಯಾಸ ಕೊಡಿಸಿದಳು. ನನ್ನ ಎರಡೂ ಹೆಣ್ಣುಮಕ್ಕಳ ಮದುವೆಯನ್ನೂ ಅವಳೇ ಮಾಡಿದಳು.*

**ಜೀತದಿಂದ ಹೊರಬಂದ ಸ್ಥಿತಿ**

*ನಾನು ಈಗ ಎಚ್.ಐ.ವಿ. ಪೀಡಿತೆ. ಮುಂಬಯಿಯಿಂದ ಮರಳಿ ಊರಿಗೆ ಬಂದಿದ್ದೇನೆ. ಈಗಲೂ ಸಹ ಮಕ್ಕಳ ಯಾವ ಜವಾಬ್ದಾರಿಯೂ ನನಗೆ ಇಲ್ಲ. ಮಕ್ಕಳು ನನ್ನನ್ನು ಇಷ್ಟಪಡುವುದಿಲ್ಲ. ನನ್ನ ಮಗ ನನ್ನನ್ನು ತನ್ನ ತಾಯಿ ಎಂದು ಹೇಳುವುದಕ್ಕೆ ಬೇಸರಪಟ್ಟುಕೊಳ್ಳುತ್ತಾನೆ. "ಬರೀ ರೊಕ್ಕದ ಹಿಂದೆ ಹೋದವಳು. ನಮ್ಮನ್ನ ಬೀದಿಗೆ ತಂದವಳು. ಅವಳು ನನಗೆ ಹಿಡಿಸಂಗಿಲ್ಲ" ಎಂದು ಹೇಳುತ್ತಾನೆ. ಡಿಗ್ರಿ ಮುಗಿಸಿಕೊಂಡು ಈಗ ಒಳ್ಳೆಯ ಕೆಲಸಕ್ಕೆ ಸೇರಿಕೊಂಡಿದ್ದಾನೆ. ನನ್ನ ಜೊತೆ ಈಗ ಹುಮನಾಬಾದ್‌ನ ಒಬ್ಬ ಖಾಯಂ ಪಾರ್ಟನರ್ ಇದ್ದಾನೆ. ಈಗಲೂ ನನ್ನ ಹತ್ತಿರವೇ ಬರುತ್ತಾನೆ.*

"ಇಷ್ಟೆಲ್ಲ ಆದರೂ ಸಹ ಮೀನಾ ಮುಂಬಯಿಗೆ ಹೋಗುವುದನ್ನು ಬಿಟ್ಟಿಲ್ಲ. ಒಂದೆರಡು ತಿಂಗಳು ಊರಲ್ಲಿ ಇದ್ದರೆ ಮತ್ತೆರಡು ತಿಂಗಳು ಮುಂಬಯಿಯಲ್ಲಿ ಇರುತ್ತಾಳೆ. ನಿರೋಧ ಬಳಸಿ ದಂಧೆ ಮಾಡುತ್ತಾಳೆ. ಕುಡಿತವಿಲ್ಲದೆ ಬದುಕುವುದೇ ಇಲ್ಲ ಅನ್ನುವ ಹಂತಕ್ಕೆ ಬಂದಿದ್ದಾಳೆ. ಕುಡಿಯಲು ಬೇಕಾಗುವ ಹಣ ಹೊಂದಿಸಲೆಂದೇ ದಂಧೆ ಮಾಡುತ್ತಾಳೆ. ಊರಿಗೆ ಬಂದಾಗ ಕೆಲಸಕ್ಕೆ ಹೋಗುವುದಿಲ್ಲ. ತಾಯಿಯೇ ದುಡಿದು ಹಾಕುತ್ತಾಳೆ" ಎಂದು ಸಮುದಾಯದವರು ಹೇಳುತ್ತಾರೆ.

## ಪ್ರಕರಣ–೭: ಸುಜಾತಾ ಪ್ರಕರಣ

**ಸುಜಾತಾ** ಬಿಜಾಪೂರ ತಾಲೂಕಿನ ದೇವದಾಸಿ ಹೆಣ್ಣು ಮಗಳು. ಅವಳ ತಂದೆ ಕೊಂಬು ಊದುತ್ತಿದ್ದರು. ಇದು ಒಂದು ರೀತಿಯ ಜಾನಪದ ವಾದನವಾಗಿದೆ. ಗ್ರಾಮೀಣ ಭಾಗದಲ್ಲಿ ಮದುವೆ ಇದ್ದಾಗ, ಅಮವಾಸ್ಯೆ ದಿನ, ಹುಣ್ಣಿಮೆಯ ದಿನ, ದೇವರಿಗೆ ಉಡಿ ತುಂಬುವ ದಿನ ಹೀಗೆ ವಿಶೇಷವಾದ ದಿನಗಳಲ್ಲಿ ಭಕ್ತರ ಮನೆಯ ಮುಂದೆ, ದೇವಸ್ಥಾನಗಳ ಮುಂದೆ ಈ ಕೊಂಬನ್ನು ಊದುತ್ತಿದ್ದರು. ಹಾಗೆಯೇ ಯಾರಾದರೂ ಮರಣ ಹೊಂದಿದಾಗಲೂ ಸಹ ಈ ಕೊಂಬನ್ನು ಊದುವುದು ವಾಡಿಕೆ ಯಾಗಿತ್ತು. ಇದೇ ಆತನ ಉದ್ಯೋಗವೂ ಆಗಿತ್ತು. ಅದಕ್ಕೆ ಆದಾಯ ಅಂತ ಏನೂ ಇರಲಿಲ್ಲ. ಜನರು ಖುಷಿಯಿಂದ ಏನನ್ನೂ, ಎಷ್ಟನ್ನೂ ಕೊಡಬಹುದಿತ್ತು. ಹೀಗಾಗಿ ಸುಜಾತಾಳ ತಾಯಿ ಕೂಲಿ ಮಾಡಿ ತಂದದ್ದೇ ಮನೆಯ ಹಸಿವಿಗೆ ಆಧಾರವಾಗಿತ್ತು. ಸುಜಾತಾಳನ್ನು ಸೇರಿಸಿ ಇವರು ಒಟ್ಟು ೪ ಮಕ್ಕಳು. ಎರಡು ಗಂಡು ಮತ್ತು ಎರಡು ಹೆಣ್ಣು. ಕುಟುಂಬಕ್ಕೆ ಭೂಮಿ ಇರಲಿಲ್ಲ. ಗಂಡು ಮಕ್ಕಳು ಚಿಕ್ಕವರಿದ್ದರು. ಇಂತ ಮನೆಯಲ್ಲಿ ಹಸಿವನ್ನು ನೀಗಿಸಲು ಸುಜಾತಾಳನ್ನೂ ಮತ್ತು ಇವಳ ತಂಗಿಯನ್ನೂ ದೇವದಾಸಿ ಮಾಡಿದ್ದರು. ಆ ಚಿಕ್ಕ ವಯಸ್ಸಿಗೆ ಪೂಣಾ ಸೇರಿದ ಅಕ್ಕ ತಂಗಿ ಇಬ್ಬರೂ ಲೈಂಗಿಕ ದಂಧೆಗೆ ನಿಂತರು. ಹಾಗೆ ಲೈಂಗಿಕ ದಂಧೆ ಮಾಡಿ ಮರಳಿ ಊರಿಗೆ ಬಂದು ನೆಲೆ ನಿಂತ ಸುಜಾತಾಳನ್ನು ಭೇಟಿಯಾಗಲು ಅವರ ಮನೆಗೆ ಹೋಗಿದ್ದೆವು. ಸುಜಾತಾ ಪ್ರೀತಿಯಿಂದಲೇ ಮಾತನಾಡಿಸಿ ತನ್ನ ಜೀವನದಲ್ಲಿ ನಡೆದ ವಿಷಯಗಳನ್ನು ನಮ್ಮೊಡನೆ ಹಂಚಿಕೊಂಡಳು. ಹೀಗೆ ಹಂಚಿಕೊಂಡ ವಿಷಯಗಳನ್ನು ಈ ಕೆಳಗೆ ಅವಳದೇ ಮಾತಿನಲ್ಲಿ ವಿವರಿಸಲಾಗಿದೆ.

**ಪೂರ್ವ**

ನಾನು ಮತ್ತು ನನ್ನ ತಂಗಿ ನಮ್ಮ ದೇಹವನ್ನು ಜೀತಕ್ಕಿಟ್ಟು ಗಳಿಸಿ ಕಳಿಸಿದ ಹಣವನ್ನು ಮನೆ ಮಂದಿಯೆಲ್ಲ ಉಂಡುಟ್ಟು ಸುಖವಾಗಿದ್ದರು. ನಾನು ಮೂರು ವರ್ಷ ಪೂಣಾದಲ್ಲಿದ್ದೆ. ಆದರೆ ಅಲ್ಲಿ ಘರವಾಲಿಯೊಂದಿಗೆ ಹಣದ ವಿಷಯವಾಗಿ ನಾನು ಜಗಳ ಮಾಡಿ ಊರಿಗೆ ಬಂದಿದ್ದೆ. ಪೂಣೆಯ ವೇಶ್ಯಾಗೃಹಗಳಲ್ಲಿ ಇದ್ದಾಗ ನಾವು ದಿನವೂ ಗಳಿಸಿದ ಹಣವನ್ನು ಒಂದು ಗಲ್ಲೆಯೊಳಗೆ ಹಾಕಬೇಕಿತ್ತು. ಅದರ ಕೀಲಿ ಘರವಾಲಿಯ ಕೈಯಲ್ಲಿ ಇರುತ್ತಿತ್ತು. ಹೀಗೆ ಪ್ರತಿದಿನ ಒಂದು ತಿಂಗಳವರೆಗೆ, ಆ ಗಲ್ಲೆಯಲ್ಲಿ ಹಣವನ್ನು ಹಾಕುತ್ತಿದ್ದೆವು. ತಿಂಗಳ ಕೊನೆಯಲ್ಲಿ ಆ ಗಲ್ಲೆಯನ್ನು ತೆರೆಯಲಾಗುತ್ತಿತ್ತು. ಅದರಲ್ಲಿ ಇರುವ ಹಣದಲ್ಲಿ ಅರ್ಧ ಘರವಾಲಿಗೆ ಅರ್ಧ ಹುಡುಗಿಗೆ ಬರುತ್ತಿತ್ತು. ಹೀಗೆ ಗಲ್ಲೆಯಲ್ಲಿ ಹಾಕಿದ ಹಣವನ್ನು ಘರವಾಲಿ ಹುಡುಗಿಯರಿಗೆ ಗೊತ್ತಾಗದಂತೆ ಕದಿಯುತ್ತಿದ್ದಳು. ಅದನ್ನು ನಾನು ಕೇಳಿದ್ದಕ್ಕೆ ಘರವಾಲಿ ನನ್ನ ಜೊತೆಗೆ ಜಗಳವಾಡಿದ್ದಳು. ಹಾಗಾಗಿ ನನಗೂ ಅಲ್ಲಿ ಇರಲಾಗದೇ ಮರಳಿ ಊರಿಗೆ ಬಂದಿದ್ದೆ.

ನಾನು ಊರಿಗೆ ಬಂದಿದ್ದಾಗ, ನಮ್ಮ ಊರಲ್ಲಿ ಏಡ್ಸ್ ಜಾಗೃತಿ ಸಂಸ್ಥೆಯಿಂದ ಆರೋಗ್ಯ ತಪಾಸಣಾ ಶಿಬಿರವನ್ನು ಆಯೋಜಿಸಿದ್ದರು. ಆಗ ನಾನೂ ಸಹ ಆರೋಗ್ಯವನ್ನು ತಪಾಸಣೆಗೊಳಪಡಿಸಿ ರಕ್ತವನ್ನು ತಪಾಸಣೆ ಮಾಡಿಸಿಕೊಂಡಿದ್ದೆ. ಆ ತಪಾಸಣೆಯಲ್ಲಿ ನನಗೆ ಎಚ್.ಐ.ವಿ. ಸೋಂಕು ಇರುವುದು ಕಂಡುಬಂದಿತು. ಚಿಕಿತ್ಸೆ ನೀಡಿದ ವೈದ್ಯರು ಸೂಕ್ತ ಸಲಹೆಗಳು ಮತ್ತು ಮಾತ್ರೆಗಳನ್ನು ನೀಡಿ ನಿರಂತರವಾಗಿ ತೆಗೆದುಕೊಳ್ಳಲು ಸೂಚಿಸಿದ್ದರು. ವೈದ್ಯರ ಸಲಹೆಗಳನ್ನು ಪಾಲಿಸುತ್ತಿದ್ದ ನನಗೆ, ನನ್ನ ತಂದೆ "ನೋಡಾಕ ನೀ ಆರಾಮ ಆಗೇ ಅದಿ, ಯಾರ ನಿನಗ ಸುಳ್ಳು ಹೇಳ್ಯಾರ. ನಿನಗೇನು ಯಾವುದೂ ರೋಗ ಇಲ್ಲ, ಒಗೀ ಅವನ್ನ" ಅಂತ ಮಾತ್ರೆ ತೆಗೆದು ತಿಪ್ಪೆಗೆ ಎಸೆದಿದ್ದರು. ಹಾಗೇನೇ "ನಿನಗೇನೂ ಆಗಿಲ್ಲ, ನೀ ದಂಧೆಗೆ ನಡಿ" ಎಂದು ನನ್ನ ತಂದೆಯೆ ಅನಾರೋಗ್ಯವಾಗಿದ್ದ ನನ್ನನ್ನು ದಂಧೆ ಮಾಡಲು ಮತ್ತೆ ಮುಂಬಯಿಗೆ ಕಳಿಸಿದ್ದರು.

**ಜೀತದಿಂದ ಹೊರಬಂದ ಸ್ಥಿತಿ**

ನಾನು ನನ್ನ ತಂದೆ ಹೇಳಿದಂತೆ ಮತ್ತೆ ಎರಡು ವರ್ಷ ಮುಂಬಯಿಲಿ ಇದ್ದು ಊರಿಗೆ ಬಂದಿದ್ದೆ. ನನ್ನನ್ನು ನೋಡಿ. ಊರ ಜನರು ಹೌಹಾರಿದ್ದರು. ನಾನು ಸೊರಗಿ ಹೋಗಿ ನನ್ನ ದೇಹ ಕಟ್ಟಿಗೆ ಬಣ್ಣಕ್ಕೆ ತಿರುಗಿತ್ತು. ನಾನು ತುಂಬಾ ಅಶಕ್ತಳಾಗಿದ್ದೆ. ಮತ್ತೆ ನನ್ನನ್ನು ಆರೋಗ್ಯ ತಪಾಸಣೆಗೆ ಒಳಪಡಿಸಿದಾಗ ಎಚ್ ಐ ವಿ ಸೊಂಕು ತೀವ್ರ ಸ್ವರೂಪಕ್ಕೆ ಬಂದಿರುವುದು ಕಂಡುಬರುತ್ತದೆ. ಅಂದಿನಿಂದ ಹೆದರಿದ ನಾನು ಔಷಧ ಮಾತ್ರೆಗಳನ್ನ ಸರಿಯಾಗಿ ತೆಗೆದುಕೊಳ್ಳಲಾರಂಭಿಸಿದೆ. ಈಗ ದಿನವೂ ವ್ಯಾಯಾಮ ಮಾಡುತ್ತಿದ್ದೇನೆ. ಉತ್ತಮ ಆಹಾರ ಸೇವಿಸುತ್ತೇನೆ. ಮತ್ತೆ ವೇಶ್ಯಾಗೃಹಕ್ಕೆ ಮರಳುವ ವಿಚಾರವನ್ನೇ ಮನಸ್ಸಿನಿಂದ ತೆಗೆದುಹಾಕಿದ್ದೇನೆ. ಆದರೆ ಊರಲ್ಲಿಯೇ ದಂಧೆ ಮುಂದುವರೆಸಿದ್ದೇನೆ. ಗಿರಾಕಿಗಳೂ ಬರುತ್ತವೆ. ಪ್ರತಿ ತಿಂಗಳೂ ೧೫೦೦ ನಿರೋಧಗಳನ್ನು ತೆಗೆದುಕೊಂಡು ಹೋಗುತ್ತಾಳೆ ಎಂದು ಪೀಯರ್ ವರ್ಕರ್ ಹೇಳುತ್ತಾರೆ.

ನನ್ನ ತಂದೆ ಮರಣ ಹೊಂದಿದ್ದಾರೆ. ತಾಯಿ ಇದ್ದಾಳೆ. ನನಗೆ ಮಕ್ಕಳಾಗಿಲ್ಲ. ನನ್ನ ಜೊತೆಗೆ ಮುಂಬಯಿಗೆ ಲೈಂಗಿಕ ದಂಧೆಗೆ ಬಂದಿದ್ದ ನನ್ನ ತಂಗಿ ಏಡ್ಸ್ ರೋಗದಿಂದಲೇ ಮರಣ ಹೊಂದಿದ್ದಾಳೆ.

*ಅವಳ ಎರಡು ಹೆಣ್ಣುಮಕ್ಕಳನ್ನು ನಾನೇ ನೋಡಿಕೊಳ್ಳುತ್ತಿದ್ದೇನೆ. ಆ ಮಕ್ಕಳಿಗೆ ನನ್ನ ಪರಿಸ್ಥಿತಿ ಬರಬಾರದೆಂದು ಶಿಕ್ಷಣ ಕೊಡಿಸುತ್ತಿದ್ದೇನೆ.*

## ಪ್ರಕರಣ-೮: ನೀತು ಪ್ರಕರಣ

**ನೀತು** ಬಿಜಾಪೂರ ತಾಲೂಕಿನ, ೨೫ ವರ್ಷದ ದೇವದಾಸಿ ಮಹಿಳೆ. ಎರಡನೇ ಇಯತ್ತೆ ಶಾಲೆಗೆ ಹೋದರೂ ಸಹ ಓದಲು ಬರೆಯಲು ಬರುವುದಿಲ್ಲ. ಇವಳು ತಂದೆ ತಾಯಿಗೆ ಹುಟ್ಟಿದ ೪ ಹೆಣ್ಣು ಮತ್ತು ೨ ಗಂಡುಮಕ್ಕಳಲ್ಲಿ ಹಿರಿಯವಳು. ದುಡಿಯಲು ಕುಟುಂಬಕ್ಕೆ ಸ್ವಂತ ಭೂಮಿ ಇಲ್ಲ. ಇವಳ ತಂದೆ ವೀಳ್ಯದೆಲೆ ವ್ಯಾಪಾರ ಮಾಡುತ್ತಿದ್ದರು. ಈ ವೀಳ್ಯೆದೆಲೆಯನ್ನು ಅವರು ಬೇರೆಯವರ ಹತ್ತಿರ ಕೊಂಡು ತಂದು ತಮ್ಮ ಮತ್ತು ತಮ್ಮ ಊರಿನ ಸುತ್ತಲಿನ ಹಳ್ಳಿಗಳಲ್ಲಿ ಮಾರಾಟ ಮಾಡುತ್ತಿದ್ದರು. ತಾಯಿ ಕೂಲಿ ಕೆಲಸಕ್ಕೆ ಹೋಗುತ್ತಿದ್ದಳು. ಮನೆಯ ಕಷ್ಟಕ್ಕೆ ನೀತುಳನ್ನು ಅವಳ ೧೩ ವರ್ಷಕ್ಕೆ ದೇವದಾಸಿ ಮಾಡಿ ಮಹಾರಾಷ್ಟ್ರದ ಥಾಣೆ ಜಿಲ್ಲೆಯ ಬೀವಂಡಿಗೆ ಮನೆಯವರೇ ಇವಳನ್ನು ಕಳಿಸಿರುತ್ತಾರೆ. ಹನ್ನೊಂದು ವರ್ಷ ಕೆಂಪು ದೀಪದಲ್ಲಿ ಜೀವನ ಕಳೆದ ನೀತು, ಈಗ ೪-೫ ತಿಂಗಳಿನಿಂದ ಊರಿಗೆ ಬಂದಿದ್ದಾಳೆ. ಇವಳನ್ನು ಭೇಟಿಯಾಗಲು ಹೋದಾಗ ಹಳ್ಳಿಯ ಕೇರಿಯಲ್ಲಿರುವ ಒಂದು ಕಟ್ಟೆಯ ಮೇಲೆ ಕೇರಿಯ ಹೆಣ್ಣುಮಕ್ಕಳೊಂದಿಗೆ ಮಾತನಾಡುತ್ತಾ ಕುಳಿತಿದ್ದಳು. ಅವಳ ಮಗನೂ ಜೊತೆಯಲ್ಲಿ ಇದ್ದ. ಅವಳ ಜೊತೆ ಮಾತನಾಡಬೇಕೆಂದಾಗ ಅಲ್ಲಿಯೇ ಹತ್ತಿರದಲ್ಲಿದ್ದ ತನ್ನ ಮನೆಗೆ ಕರೆದುಕೊಂಡು ಹೋದಳು. ಹೀಗೆ ಮಾತನಾಡುತ್ತಿದ್ದ ಸಂದರ್ಭದಲ್ಲಿ ಅವಳು ಹಂಚಿಕೊಂಡ ಕೆಲವು ವಿಚಾರಗಳನ್ನು ಇಲ್ಲಿ ವಿವರಿಸಲಾಗಿದೆ.

**ಪೂರ್ವ**

*ಈಗಲೂ ನನ್ನ ತಾಯಿ ಕೂಲಿ ಕೆಲಸ ಮಾಡುತ್ತಿದ್ದು, ಬೆಳಗ್ಗೆ ೮ಕ್ಕೆ ಹೋದರೆ ರಾತ್ರಿ ೮ಕ್ಕೆ ಮರಳಿ ಬರುತ್ತಾಳೆ. ಅವಳಿಗೆ ೧೨೦ ರೂ ಕೂಲಿ ಕೊಡುತ್ತಾರೆ. ನನ್ನ ತಂದೆಯ ಆರೋಗ್ಯ ಈಗ ಸರಿ ಇಲ್ಲ. ಅಪರೇಶನ್ ಆಗಿದೆ. ಮನೆಯಲ್ಲಿಯೇ ಇರುತ್ತಾನೆ. ನನ್ನ ತಾಯಿಯೊಬ್ಬಳೇ ದುಡಿಯುತ್ತಾಳೆ.*

*ನಾನು ಚಿಕ್ಕವಳಿರುವಾಗ ಶಾಲೆಗೆ ಹೋಗುತ್ತಿದ್ದೆ. ಮನೆಯಲ್ಲಿ ನಾನೇ ದೊಡ್ಡವಳಾದ್ದರಿಂದ ಕಸ, ಮುಸುರೆ, ಅಡುಗೆ ಮಾಡಿ ಶಾಲೆಗೆ ಹೋಗಬೇಕಿತ್ತು. ನಾನು ೭-೮ ವರ್ಷದವಳಿದ್ದಾಗಲೇ ನನಗೆ ಅಡುಗೆ ಮಾಡಲು ಬರುತ್ತಿತ್ತು. ಮಕ್ಕಳನ್ನ ಶಾಲೆಗೆ ಕಳಿಸಬೇಕು, ಓದಿಸಬೇಕು ಎಂಬ ಧಾವಂತ ತುಡಿತ ನನ್ನ ತಂದೆ ತಾಯಿಗೆ ಇರಲೇ ಇಲ್ಲ. ಮನೆಯ ಎಲ್ಲ ಕೆಲಸ ಮುಗಿಸಿಕೊಂಡು ಶಾಲೆಗೆ ಹೋಗುವಾಗ ದಾರಿಯಲ್ಲಿ ಯಾರದಾದರೂ ಮನೆಯಲ್ಲಿ ಟಿ ವಿ ಹಚ್ಚಿದ್ದರೆ, ಅದನ್ನು ನೋಡುತ್ತಾ ನಿಂತು ಬಿಡುತ್ತಿದ್ದೆ. ಹಾಗೆ ದಾರಿಯಲ್ಲಿ ಆಟ ಆಡ್ತಾ ಆಡ್ತಾ ಶಾಲೆಗೆ ಹೋಗೋ ಹೊತ್ತಿಗೆ ತಡವಾಗಿರುತ್ತಿತ್ತು. ಹಾಗಾಗಿ ಶಿಕ್ಷಕರು ನನ್ನನ್ನು ಹೊಡೆಯುತ್ತಿದ್ದರು. ಬೈದು ಹೊರಗೆ ನಿಲ್ಲಿಸುತ್ತಿದ್ದರು. ನನ್ನ ಸ್ಥಿತಿ ಪ್ರತಿದಿನ ಇದೇ ಆಗುತ್ತಿತ್ತು. ಆ ಹೊಡೆತ ಅವಮಾನಗಳಿಗೆ ಹೆದರಿ ನಾನು ಶಾಲೆ ಬಿಟ್ಟೆ. ನಾವು ಬಡವರು. ತಿಳುವಳಿಕೆ ಇಲ್ಲದವ್ರು. ನಮಗಂತೂ ಕಲೀಬೇಕು ಅನ್ನುವುದು ಇರುವುದಿಲ್ಲ. ಆದರೆ ಶಿಕ್ಷಕರು ತಿಳಿದವರು ಇದ್ದರು. ಅವರು ನಮಗೆ ತಿಳಿ ಹೇಳಿ ಕಲಿಸಬೇಕಿತ್ತು. ಆದರೆ ಅವರಿಗೂ ನನಗೆ ಕಲಿಸಬೇಕು ಅಂತ ಏನೂ ಇರಲಿಲ್ಲ. ಇಂದಿಗೂ ಸಹ ನಮ್ಮ ಕೇರಿಯೊಳಗಿನ ಮಕ್ಕಳು ಓದಿದರೆ ಓದುತ್ತವೆ. ಇಲ್ಲದಿದ್ರ ಇಲ್ಲ. ನಮ್ಮ ಹಾಗೇನೇ ಅವರಿಗಾಗಿ ಮರುಗೋರು ಯಾರೂ ಇಲ್ಲ.*

ನಾನು ಶಾಲೆ ಬಿಟ್ಟ ಮೇಲೆ ಮನೆ ಕೆಲಸ ಮಾಡಿಕೊಂಡು ಕೂಲಿ ಕೆಲಸಕ್ಕೂ ಹೋಗಲಾರಂಭಿಸಿದೆ. ನಮ್ಮ ಮನೆಯಲ್ಲಿ ಜನ ಜಾಸ್ತಿ ಇದ್ದೆವು. ಆದರೆ ದುಡಿಯುವವರು ಕಡಿಮೆ ಇದ್ದರು. ಆದಾಯ ಸಾಕಾಗುತ್ತಿರಲಿಲ್ಲ. ಹಾಗಾಗಿ ನನ್ನನ್ನು ದೇವದಾಸಿ ಮಾಡಿದರೆ ಮನೆಯ ಕಷ್ಟಕ್ಕೆ ಆಗುತ್ತಾಳೆ ಎಂದು ನನಗೆ ಮುತ್ತು ಕಟ್ಟಿದ್ದರು. ನಂತರ ಬೀವಂಡಿಯಲ್ಲಿ ಘರವಾಲಿಯಾಗಿರುವ ಕೇರಿಯಲ್ಲಿರುವ ದೇವದಾಸಿಯೊಬ್ಬಳ ಜೊತೆಗೆ ನನ್ನನ್ನು ಬೀವಂಡಿಗೆ ಕಳಿಸಿದ್ದರು.

**ಜೀತದ ಸ್ಥಿತಿ**

ನನ್ನನ್ನು ಇಟ್ಟುಕೊಂಡಿದ್ದ ಘರವಾಲಿಯು ನಮಗೆ ಮೊದಲೆ ಪರಿಚಯದವಳಾಗಿದ್ದು, ಅವಳು ಒಳ್ಳೆಯವಳಾಗಿದ್ದಳು. ನಾನು ಅಲ್ಲಿಗೆ ಹೋದ ಕೂಡಲೇ ನನ್ನನ್ನು ದಂಧೆಗೆ ಕೂಡಿಸಲಿಲ್ಲ. ನಾನು ೫-೬ ತಿಂಗಳು ಅಲ್ಲಿಯೇ ಕಸ ಮುಸುರೆ ಮಾಡುತ್ತಾ ಕಾಲ ಕಳೆದಿದ್ದೆ. ಅಲ್ಲಿಯ ವಾತಾವರಣ ಪರಿಚಯವಾದ ಮೇಲೆ, ನಾನೇ ಒಪ್ಪಿಕೊಂಡ ನಂತರ ಅವರು ನನ್ನನ್ನು ದಂಧೆಗೆ ಹಚ್ಚಿದರು. ನಾನು ವಯಸ್ಸಿನಲ್ಲಿ ಚಿಕ್ಕವಳಾದ್ದರಿಂದ ಒಂದೆರಡು ಸಾರಿ ಪೊಲೀಸರು ಹಿಡಿದಿದ್ದರು. ಆದರೆ ನಾನು ಪಾತ್ರೆ ತೊಳೆಯುತ್ತಾ ಕುಳಿತಿದ್ದರಿಂದ ಪೊಲೀಸರಿಗೆ, ನಾನು ಇಲ್ಲಿ ಕಸಾ ಮುಸುರಿ ಸ್ವಚ್ಛ ಮಾಡೋಳ ಇದ್ದೀನಿ, ದಂಧೆ ಮಾಡುವವಳು ಅಲ್ಲ. ಅಂದಾಗ ಅವರು ನನ್ನನ್ನು ಬಿಟ್ಟು ಹೋಗಿದ್ದರು. ಒಂದು ವೇಳೆ ಗಂಡಸರ ಜೊತೆ ಸಿಕ್ಕಿದ್ದರೆ ಮಾತ್ರ ನನ್ನನ್ನು ಬಿಡುತ್ತಿರಲಿಲ್ಲ. ಮನಸ್ಸಿಗೆ ಬಂದಷ್ಟು ದಂಡ ಕಟ್ಟಿಸಿಕೊಂಡು ಬಿಡುತ್ತಿದ್ದರು. ಅವರು ಕೇಳಿದಷ್ಟು ದಂಡ ಕೊಡದಿದ್ದರೆ, ಜೈಲಿಗೆ ಹಾಕುತ್ತಿದ್ದರು. ಹಾಗೇನಾದರೂ ಸಿಕ್ಕರೆ ಅಲ್ಲಿಯ ಘರವಾಲಿಯರು ಹಣ ಕೊಟ್ಟು ಬಿಡಿಸಿಕೊಳ್ಳುತ್ತಿದ್ದರು. ಹಾಗೆ ಜೈಲು ಪಾಲಾಗಲು ಬಿಡುತ್ತಿರಲಿಲ್ಲ.

ದಂಧೆ ಮನೆಯಲ್ಲಿ ಈಗ ಮೊದಲಿನಂತೆ ಏನೂ ಉಳಿದಿಲ್ಲ. ಆದರೂ ಬದುಕಲೇಬೇಕು. ನಮಗೆ ಅದನ್ನು ಬಿಟ್ಟರೆ ಬೇರೆ ಗೊತ್ತಿಲ್ಲ. ಗಳಿಕೆ ಮಾಡಿದ್ದರಲ್ಲಿ ಅರ್ಧ ಘರವಾಲಿಗೇ ಕೊಡಬೇಕು. ಉಳಿದಿದ್ದರಲ್ಲಿ ನಮ್ಮ ಊಟ, ಮೇಕಪ್ಪು, ಆರೋಗ್ಯ ಎಲ್ಲಾನೂ ನೋಡ್ಕೋಬೇಕು. ಅವೆಲ್ಲ ಹೋಗಿ ಬಾಳ ಕಡಿಮೆ ನಮಗೆ ಉಳಿಯುತ್ತದೆ. ಒಂದೊಂದು ಸಾರಿ ಏನೂ ಉಳಿಯುವುದಿಲ್ಲ. ಗಿರಾಕಿಗಳು ಒಂದೊಂದು ದಿನ ಸಿಗ್ತಾರ, ಒಂದೊಂದು ದಿನ ಬೋಣಿಗೀನೂ(ಪ್ರಾರಂಭ) ಆಗುವುದಿಲ್ಲ. ಆ ದಿನದ ಖರ್ಚೆಲ್ಲ ಮೈಮೇಲೆ ಬಿದ್ದ ಹಾಗೇನೆ. ಅದಕ್ಕ  ಘರವಾಲಿ ಬಿಟ್ಟು, ನಾನೇ ಸ್ವಂತ ಬೇರೆ ಬಾಡಿಗೆ ಮನಿ ಹಿಡಿದು, ದಂಧೆ ಮಾಡಾಕ ಚಾಲೂ ಮಾಡಿದ್ದೆ. ಬಹಳ ಒಳ್ಳೆಯ ಲಾಭ ಆಗತೊಡಗಿತ್ತು. ಒಂದೊಂದು ಸಾರಿ ನನಗೆ ಗಿರಾಕಿಗಳು ಇರದಿದ್ದರೂ, ಬೇರೆ ಹೆಣ್ಣುಮಕ್ಕಳು ತಮ್ಮ ಗಿರಾಕಿ ಕರೆದುಕೊಂಡು ಬಂದು ಇದ್ದು ಹೋಗುತ್ತಾರೆ. ತಮ್ಮ ಗಳಿಕೆಯಲ್ಲಿ ನನಗೆ ಅರ್ಧ ಕೊಟ್ಟು ಹೋಗುತ್ತಿದ್ದರು. ಇತ್ತಿತ್ತಲಾಗಿ ಅಡಗಿಯನ್ನೂ ನಾನೇ ಮಾಡಿಕೊಳ್ಳುತ್ತಿದ್ದೆ. ಅದರಿಂದ ಲಾಭ ಸಿಗುತ್ತಿತ್ತು. ಆದರೂ ಈಗ ನೇಪಾಳಿ ಮತ್ತು ಬಂಗಾಲಿ ಹುಡುಗಿಯರು ಜಾಸ್ತಿ ಬಂದಾಗಿನಿಂದ ನಮಗೆ ಡಿಮ್ಯಾಂಡ್ ಕಡಿಮೆ ಆಗಿದೆ.

**ಜೀತದಿಂದ ಹೊರಬಂದ ಸ್ಥಿತಿ**

ಈಗ ಊರೊಳಗ ನಮ್ಮ ಸಂಬಂಧಿಕರ ಮದುವೆಗೆಂದು ಬಂದಿದ್ದೆ. ಮರಳಿ ಮುಂಬಯಿಗೆ ಹೋಗಲು ಮನಸ್ಸಿಲ್ಲ. ಇಲ್ಲಿಯೇ ಊರಲ್ಲಿ ಉಳಿದರೆ ಸರಕಾರದವರು ಸಹಾಯ ಮಾಡುತ್ತಾರೆಂದು ಕಾಯುತ್ತಿದ್ದೇನೆ. ಪೆನ್ಶನ್, ಮನೆ ಕೊಡುತ್ತಾರೆಂದು ಕುಳಿತಿದ್ದೇನೆ. ಆದರೆ ಏನೂ ಸಿಗುತ್ತಿಲ್ಲ. ಎಷ್ಟು ದಿನ

*ಅಂತ ಹೀಗೆ ಕುಳಿತು ತಿನ್ನಬೇಕು. ಇನ್ನೂ ಸ್ವಲ್ಪ ದಿನ ನೋಡುತ್ತೇನೆ. ಏನೂ ಸಹಾಯ ಸಿಗದಿದ್ದರೆ ಮತ್ತೆ ಬೀವಂಡಿಗೇ ಹೋಗುತ್ತೇನೆ. ನನ್ನ ಮಗನನ್ನು ಇಷ್ಟು ದಿನ ನನ್ನ ಹತ್ತಿರವೆ ಇಟ್ಟುಕೊಂಡಿದ್ದೆ. ಆದರೆ ಈಗ ಅವನು ದೊಡ್ಡವನಾಗಿದ್ದಾನೆ. ಆದ್ದರಿಂದ ಅವನನ್ನು ನಮ್ಮ ತಾಯಿಯ ಹತ್ತಿರ ಬಿಟ್ಟು ಹೋಗುತ್ತೇನೆ. ನನಗೆ ಎಚ್.ಐ.ವಿ. ರೋಗದ ಸಲುವಾಗಿ ಬಹಳಾನೇ ಹೆದರಿಕೆ ಬರುತ್ತದೆ. ಇರೋದು ಒಬ್ಬನೇ ಮಗ. ಏನಾದರೂ ಆದರೆ ಏನು ಮಾಡುವುದು. ಅದಕ್ಕೆ ನಾನು ಹೆಚ್ಚಿಗೆ ದಂಧೆ ಮಾಡುವುದಿಲ್ಲ. ನನ್ನ ಲಿಮಿಟ್ಟನೊಳಗ ನಾನು ಇರುತ್ತೇನೆ.*

## ಪ್ರಕರಣ–೯: ಮಲ್ಲಿಕಾ ಪ್ರಕರಣ

**ಮಲ್ಲಿಕಾ** ೪೨ ವರ್ಷದ ಅನಕ್ಷರಸ್ಥ ದೇವದಾಸಿ ಮಹಿಳೆ. ಇವಳು ಬಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿಯವರು. ಮಲ್ಲಿಕಾಳಿಗೆ ಒಬ್ಬಳೇ ಮಗಳಿದ್ದಾಳೆ. ಮಲ್ಲಿಕಾ ತನ್ನ ಅಪ್ರಾಪ್ತ ವಯಸ್ಸಿನಲ್ಲಿ ಮುಂಬಯಿಯ ಕಾಮಾಟಿಪೂರಕ್ಕೆ ತನ್ನ ತಂದೆಯಿಂದಲೇ ಸಾಗಿಸಲ್ಪಟ್ಟಿದ್ದಳು. ಅಲ್ಲಿಂದ ಪಾರಾಗಿ ಬಂದು ಇಂದು 'ಏಡ್ಸ ಜಾಗೃತಿ ಸಂಸ್ಥೆ' ಎಂಬ ಹೆಸರಿನ ತಮ್ಮದೇ ಸಿಬಿಓ(ಸಮುದಾಯ ಆಧಾರಿತ ಸಂಸ್ಥೆ) ನಡೆಸುತ್ತಿದ್ದಾರೆ. ಅದರಲ್ಲಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಇವರಿಗೆ ಕರ್ನಾಟಕ ಸರಕಾರದ ರಾಣಿ ಚೆನ್ನಮ್ಮಾ ಪ್ರಶಸ್ತಿ ದೊರೆತಿದೆ. ಈ ಸಂಸ್ಥೆಯ ಮೂಲಕ ಮಹಿಳೆಯರಿಗೆ ಆರೋಗ್ಯವನ್ನು ಕಾಯ್ದುಕೊಳ್ಳುವ ಕುರಿತು ಸಲಹೆ ಮಾರ್ಗದರ್ಶನ ನೀಡಲಾಗುತ್ತದೆ. ಇವರೇ ಕಟ್ಟಿಕೊಂಡಿರುವ ಮಹಿಳಾ ಕೋ ಅಪರೇಟಿವ್ ಸೊಸಾಯಿಟಿಯೂ ಒಂದಿದೆ. ಅದರ ಮೂಲಕ ಲೈಂಗಿಕ ದಂಧೆಯಲ್ಲಿರುವ ಮಹಿಳೆಯರಿಗೆ ಉದ್ಯೋಗ ಪ್ರಾರಂಭಿಸಲು ಸಾಲ ನೀಡುತ್ತಾರೆ. ಎಷ್ಟೋ ಮಹಿಳೆಯರು ಲೈಂಗಿಕ ಚಟುವಟಿಕೆ ತೊರೆದು ಕಾಯಿಪಲ್ಲೆ ವ್ಯಾಪಾರ. ಹಣ್ಣಿನ ವ್ಯಾಪಾರ, ಹೈನುಗಾರಿಕೆಯಂತ ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಓದು ಬರಹ ಬರದ, ದೇವದಾಸಿ ಪದ್ಧತಿಗೆ ಒಳಗಾದ, ಸಾಗಾಣಿಕೆ ಮಾಡಲ್ಪಟ್ಟ ಮಹಿಳೆಯೊಬ್ಬರು ಇಂದು ಸರಕಾರದ ಯೊಜನೆಗಳಿಗೆ, ವಿಶ್ವವಿದ್ಯಾಲಯದ ಯೋಜನೆಗಳಿಗೆ ಸಲಹೆಗಾರರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರನ್ನು ಭೇಟಿಯಾಗಲು ಇವರ ಸಂಸ್ಥೆಗೆ ನಾವು ಹೋದಾಗ, ಮಲ್ಲಿಕಾ ತನ್ನ ಸಂಸ್ಥೆಯ ಸಿಬ್ಬಂದಿಯ ಸಭೆಯಲ್ಲಿ ಇದ್ದರು. ನಂತರ ಬಿಡುವು ಮಾಡಿಕೊಂಡು ಬಂದು ನಮ್ಮ ಆಶಯದಂತೆ ತಮ್ಮ ಜೀವನದ ನೋವುಗಳನ್ನು ಆಗು ಹೋಗುಗಳನ್ನು ಹಂಚಿಕೊಂಡರು. ಅವರು ಹಂಚಿಕೊಂಡ ವಿಷಯಗಳನ್ನು ಅವರ ಮಾತಿನಲ್ಲಿಯೇ ಇಲ್ಲಿ ವಿವರಿಸಲಾಗಿದೆ.

### ಪೂರ್ವಸ್ಥಿತಿ

*ನಾನು ಬಡತನದ ಕುಟುಂಬದಲ್ಲಿ ಹುಟ್ಟಿದವಳು. ನಾವು ನಮ್ಮ ತಂದೆ ತಾಯಿಗೆ ಒಟ್ಟು ಮೂರು ಮಕ್ಕಳು. ನಾನೇ ಹಿರಿಯಳು. ಒಬ್ಬಳು ತಂಗಿ ಮತ್ತು ಒಬ್ಬನು ತಮ್ಮ ಇದ್ದಾರೆ. ನಮ್ಮ ತಂದೆ ರೈತರ ಹೊಲಗಳನ್ನು ಪಾಲಿಗೆ ತೆಗೆದುಕೊಂಡು ತಾನೇ ಉಳಿಮೆ ಮಾಡುತ್ತಿದ್ದ. ಇದರಲ್ಲಿ ಮೂರು ಭಾಗ ಮಾಲಿಕರಿಗೆ ಮತ್ತು ಒಂದು ಭಾಗ ನಮಗೆ ಬರುತ್ತಿತ್ತು. ಇದಕ್ಕಾಗಿ ನಾವು ನಮ್ಮ ಎತ್ತುಗಳನ್ನು ಬಳಸಬೇಕಾಗಿತ್ತು. ಹಾಗಾಗಿ ನಮ್ಮ ಮನೆಯಲ್ಲಿ ಎರಡು ಎತ್ತುಗಳು ಇದ್ದವು.*

*ನನ್ನ ತಂದೆಗೆ ಪಕ್ಕದ ಹಳ್ಳಿಯಲ್ಲಿ ಒಬ್ಬಳು ದೇವದಾಸಿ ಮಹಿಳೆಯೊಂದಿಗೆ ಲೈಂಗಿಕ ಸಂಬಂಧವಿತ್ತು. ಹಾಗಾಗಿ ನನ್ನ ತಾಯಿ ಮೇಲಿಂದ ಮೇಲೆ ನಮ್ಮ ತಂದೆಯೊಂದಿಗೆ ಜಗಳವಾಡುತ್ತಿದ್ದಳು. ಮನೆಯಲ್ಲಿ*

ನಮ್ಮ ಅಜ್ಜಿಯೂ ಇರುತ್ತಿದ್ದಳು. ಒಂದು ದಿನ ಅಪ್ಪನ ಅನೈತಿಕ ಸಂಬಂಧದ ಕುರಿತು ನಮ್ಮ ತಾಯಿಗೂ ಮತ್ತು ನಮ್ಮ ತಂದೆಗೂ ಜೋರಾಗಿ ಜಗಳವಾಯಿತು. ಆಗ ನನ್ನ ತಾಯಿ ಮೂರನೇ ಮಗುವಿಗೆ ಏಳು ತಿಂಗಳ ಗರ್ಭಿಣಿ ಆಗಿದ್ದಳು. ಆಗ ನಾನು ಎರಡು ವರ್ಷದವಳು ಮತ್ತು ನನ್ನ ತಂಗಿ ೯ ತಿಂಗಳಿನವಳಾಗಿದ್ದಳು. ಆ ಜಗಳದಲ್ಲಿ ನಮ್ಮ ಅಪ್ಪ ಮತ್ತು ಅಜ್ಜಿ ನನ್ನ ತಾಯಿಯನ್ನು ಹೊಡೆದು, ನನ್ನನ್ನೂ ಮತ್ತು ನನ್ನ ತಂಗಿಯನ್ನೂ ಕಸಿದುಕೊಂಡು ಹೊರಹಾಕಿದರು. ನನ್ನ ತಾಯಿ ಕೋಪದಿಂದ "ನಿನಗೆ ಒಬ್ಬಾಕಿ ಗೆಣತಿ ಇದ್ದರ, ನನಗೊಬ್ಬ ಗೆಣ್ಯಾ ಸಿಕ್ಕ ಸಿಗ್ತಾನ" ಅಂತ ನಮ್ಮನ್ನೆಲ್ಲ ಬಿಟ್ಟು ತವರು ಮನೆ ಸೇರಿದಳು.

ನಮ್ಮ ಅಜ್ಜಿಯ ಆಸರೆಯಲ್ಲಿಯೇ ಬೆಳೆದ ನಮಗೆ ಅಜ್ಜಿಯೇ ತಾಯಿಯಾಗಿ ಹಾಲು ಹಾಕಿ ಬೆಳೆಸಿದಳು. ನಾನು ೮ ವರ್ಷದವಳಿರುವಾಗ ನನ್ನನ್ನೂ ಮತ್ತು ನನ್ನ ತಂಗಿಯನ್ನೂ ಬಡತನದ ಕಾರಣಕ್ಕಾಗಿ ನಮ್ಮ ತಂದೆ ಮತ್ತು ಅಜ್ಜಿ ದೇವದಾಸಿ ಮಾಡಿದರು. ನಮ್ಮ ಸಂಬಂಧಿಕರು ಮತ್ತು ನಮ್ಮ ಹಳ್ಳಿಯ ಬಹಳಷ್ಟು ದೇವದಾಸಿ ಹೆಣ್ಣುಮಕ್ಕಳು ಈಗಾಗಲೇ ಮುಂಬಯಿಯಲ್ಲಿ ದಂಧೆಯಲ್ಲಿ ತೊಡಗಿಕೊಂಡಿದ್ದರು. ಅವರ ಗುರುತಿನಿಂದಲೇ ನನ್ನ ತಂದೆ ೬೦೦೦ ರೂಪಾಯಿ ಸಾಲ ಪಡೆದು, ನನ್ನನ್ನು ಒಬ್ಬಳು ಪರಿಚಯದ ಮತ್ತು ಸಂಬಂಧದ ಘರವಾಲಿಯೊಬ್ಬಳ ಹತ್ತಿರ ಬಿಟ್ಟು ಬಂದಿದ್ದ.

**ಜೀತದ ಸ್ಥಿತಿ**

ನಮ್ಮ ತಂದೆ, ತನ್ನ ಮಗಳು ಗಂಧೆ ಮಾಡಿ ತಮಗೆ ಹಣ ಕಳಿಸುತ್ತಾಳೆಂದುಕೊಂಡಿದ್ದ. ಆದರೆ ನಮ್ಮ ಅಪ್ಪ ಮತ್ತು ಅಜ್ಜಿಯ ಲೆಕ್ಕಾಚಾರ ನಡೆಯುವುದಿಲ್ಲ. ನಾನು ಘರವಾಲಿಯ ಮನೆಯಲ್ಲಿಯೇ ಇದ್ದರೂ ದಂಧೆ ಮಾಡಲು ಮನಸ್ಸು ಬಾರದೇ, ಒಪ್ಪಿಕೊಂಡಿರಲಿಲ್ಲ. ನನ್ನ ವಯಸ್ಸು ಆಗ ತುಂಬಾ ಚಿಕ್ಕದಿತ್ತು. ಅದೇ ಆಗ ಋತುಮತಿಯಾಗಿದ್ದೆ. ಘರವಾಲಿ ನನಗೆ ಸಂಬಂಧಿಕಳಾಗಿದ್ದರಿಂದ ನನ್ನನ್ನು ಹಿಂಸಿಸದೇ ಹಾಗೇ ಬಿಟ್ಟಿದ್ದಳು. ನಾನು ಅಲ್ಲಿ ೮ ತಿಂಗಳು ಕಳೆದರೂ ಸಾಲಕ್ಕೆ ಬಡ್ಡಿಯೇ ಹೆಚ್ಚಾಯಿತೇ ವಿನಃ ೧೦ ರೂಪಾಯಿ ಗಳಿಸಲಿಲ್ಲ. ಅದರ ಬದಲಿಗೆ ನನ್ನ ಊಟ ವಸತಿಗೆ ಆದ ಖರ್ಚನ್ನೂ ಸಹ ಘರವಾಲಿ ಸಾಲದ ಪಟ್ಟಿಗೆ ಏರಿಸತೊಡಗಿದ್ದಳು. ದಂಧೆ ಮಾಡುವುದಿಲ್ಲ ಅಂದ ಬಳಿಕ ನಮಗೆ ಅಲ್ಲಿ ಮಲಗಲು ಮಂಚ ಇರಲಿಲ್ಲ. ಗಿರಾಕಿಗಳೊಂದಿಗೆ ಹುಡುಗಿಯರು ಮಂಚದ ಮೇಲೆ ಇರುತ್ತಿದ್ದರು. ಅದರ ಕೆಳಗೆ ಕಣ್ಣು ಮುಚ್ಚಿಕೊಂಡು ನಾನು ಮಲಗಬೇಕಿತ್ತು. ಅವರ ಗದ್ದಲಕ್ಕೆ ನಿದ್ರೆಯೇ ಬರುತ್ತಿರಲಿಲ್ಲ. ತುಂಬಾ ಹೆದರಿಕೆ ಆಗುತ್ತಿತ್ತು.

ನನಗೆ ಅಲ್ಲಿ ಯಾವುದೇ ರೀತಿಯ ಒತ್ತಡ ಹಿಂಸೆ ಇರಲಿಲ್ಲ. ಆದರೆ ನನಗೆ ಆ ವಾತಾವರಣ ಅಸಹ್ಯ ಹುಟ್ಟಿಸಿತ್ತು. ಘರವಾಲಿಗಳು ಚಿಕ್ಕ ಮಕ್ಕಳನ್ನು ಕಾಡುವ ರೀತಿ ಹೆದರಿಕೆ ಉಂಟು ಮಾಡಿತ್ತು. ನಾನು ಅಲ್ಲಿಗೆ ಹೋದ ಹೊಸದರಲ್ಲಿ ಗಿರಾಕಿಯೊಬ್ಬ ೧೫ ವರ್ಷದ ಹುಡುಗಿಗೆ ಮಾಡಿದ್ದ ಹಿಂಸೆ ಭಯವನ್ನು ಹುಟ್ಟಿಸಿತ್ತು. ಆ ಹುಡುಗಿಯ ಹತ್ತಿರ ದಿನವೂ ಬರುತ್ತಿದ್ದ ಒಬ್ಬ ಗಿರಾಕಿ ಅವಳನ್ನು ಪ್ರೀತಿಸುತ್ತೇನೆಂದು ದುಂಬಾಲು ಬಿದ್ದಿದ್ದ. ಕಾರಣ ಅವಳು ದಂಧೆಗೆ ನಿಲ್ಲದೇ ಅವನೊಬ್ಬನಿಗೆ ಮಾತ್ರ ಇರಬೇಕೆಂದು ಅವನು ಹೇಳುತ್ತಿದ್ದ. ಇದರಿಂದ ಅವಳ ಮೇಲಿರುವ ಸಾಲ ತೀರುತ್ತಿರಲಿಲ್ಲ. ಹಾಗಾಗಿ ಘರವಾಲಿ ಅದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಇದರಿಂದಾಗಿ ಅವಳು ದಂಧೆಗೆ ನಿಲ್ಲಲೇಬೇಕಿತ್ತು.

ಒಂದು ದಿನ ಆ ಹುಡುಗಿಯ ಆ ಗಿರಾಕಿ ಸೋಡಾ ಬಾಟಲಿಯ ಬಾಯಿಗೆ ಕುದುರೆ ಬಾಲದ ಕೂದಲುಗಳನ್ನು ಚುಚ್ಚಿಟ್ಟುಕೊಂಡು ಬಂದಿದ್ದ. ಆ ಹುಡುಗಿಯ ಜೊತೆ ರೂಮಿನಲ್ಲಿ ಹೋದವನು ಅವಳ ಯೋನಿಯೊಳಗೆ ಆ ಕುದುರೆ ಬಾಲದ ಕೂದಲು ಚುಚ್ಚಿದ ಸೋಡಾ ಬಾಟಲಿಯನ್ನು ತೂರಿಸಿ ಪರಾರಿಯಾಗಿದ್ದ. ತನ್ನ ಮಾತನ್ನು ಕೇಳದ ಅವಳು ಯಾರ ಜೊತೆಗೂ ಲೈಂಗಿಕ ಸಂಪರ್ಕ ಮಾಡಲು ಸಾಧ್ಯವಾಗಬಾರದು ಎಂಬುದು ಅವನ ಉದ್ದೇಶವಾಗಿತ್ತು. ಅದನ್ನೆಲ್ಲ ತೆಗೆದು ಅವಳ ಆರೋಗ್ಯ ಸುಧಾರಿಸಬೇಕಾದರೆ ತಿಂಗಳುಗಳೆ ಹಿಡಿದವು. ಇದರ ಪರಿಣಾಮ ಆ ಎರಡು ಮೂರು ತಿಂಗಳು ಆಕೆ ದಂಧೆ ಮಾಡದೇ ಇದ್ದುದರಿಂದ ಮತ್ತೆ ಸಾಲ ಹೆಚ್ಚಾಗಿತ್ತು. ಅವಳಿಗೆ ನೋವಿನಲ್ಲೂ ದಂಧೆ ಮಾಡಬೇಕಾದ ಪರಿಸ್ಥಿತಿ ಬಂದೊದಗಿತ್ತು. ಇದನ್ನು ಕಣ್ಣಾರೆ ಕಂಡಿದ್ದ ನಾನು ಯಾವಾಗ ಅಲ್ಲಿಂದ ನಮ್ಮ ಊರಿಗೆ ಹೋದೆನೋ ಮತ್ತು ಯಾವಾಗ ನನ್ನನ್ನು ಊರಿಗೆ ಕಳಿಸುತ್ತಾರೋ? ಎಂಬ ಭಾವ ನನ್ನ ಮನದಲ್ಲಿ ಬೇರೂರಿತ್ತು. ಅಲ್ಲಿಂದ ಹೋದರೆ ಸಾಕು ಎಂಬಂತಾಗಿತ್ತು.

ನಾನು ಘರವಾಲಿಗೆ ಸಂಬಂಧಿಕಳಾದುದರಿಂದ ಮತ್ತು ದಂಧೆಗೆ ಕುಳಿತಿಲ್ಲವಾದ್ದರಿಂದ ನನ್ನನ್ನು ಒಳಗೆ ಇರಿಸುವ ಮುಚ್ಚಿಡುವ ಅವಶ್ಯಕತೆ ಇರಲಿಲ್ಲ, ಹಾಗಾಗಿ ನಾನು ದಂಧೆಯ ಗಲ್ಲಿಯಲ್ಲಿ ಓಡಾಡಿಕೊಂಡೇ ಇದ್ದೆ. ಒಂದು ದಿನ ನಾನು ಗಲ್ಲಿಯಲ್ಲಿ ಹೊರಗೆ ಇದ್ದಾಗ ಪೊಲೀಸ್ ರೇಡ್ ಬಿದ್ದಿತ್ತು, ಆಗ ನನ್ನನ್ನೂ ಹಿಡಿದು ಗಾಡಿಯಲ್ಲಿ ಕೂಡ್ರಿಸಿದ್ದರು. ಜೈಲಿಗೆ ಹಾಕಿ ಬಿಡುತ್ತಾರೆಂದು ಹೆದರಿ ಕಂಗಾಲಾಗಿಬಿಟ್ಟಿದ್ದೆ. ಆಗ ಹಿರಿಯ ಹೆಣ್ಣುಮಗಳೊಬ್ಬಳು, "ಆಕೀ ದಂಧೆಯ ಹುಡುಗಿ ಅಲ್ಲ. ಘರವಾಲಿಯ ಮಗಳ ಅದಾಳ. ಸುಮ್ಮನೇ ಸ್ವಲ್ಪ ದಿನ ಇದ್ದು ಹೋಗಲು ಬಂದಾಳ". ಎಂದು ಹೇಳಿ ಬಿಡಿಸಿ ನನ್ನನ್ನು ಗಾಡಿಯಿಂದ ಇಳಿಸಿ ಕಳಿಸಿದ್ದರು. ಈ ಎರಡು ಪ್ರಸಂಗಗಳು ನನಗೆ ಅಲ್ಲಿರುವ ತನಕ ಜೀವ ಕೈಯಲ್ಲಿ ಹಿಡಿದುಕೊಂಡೇ ಬದುಕುವಂತೆ ಮಾಡಿದ್ದವು. ನನ್ನನ್ನು ಒಲೈಸಲಾಗದ ಘರವಾಲಿಯು "ಇವಳು ಗಂಡ್ರಾಮಿ ಇದ್ದಂಗ ಅದಾಳ. ಕಲ್ಲನ್ನ ಕಟದ್ರ ಮೂರ್ತಿ ಆಗುತ್ತಿತ್ತು. ಆದರ ಇದು ಅದಕ್ಕಿಂತ ಕಡೀ ಐತಿ. ನಿಮಗ ಕೊಟ್ಟದ್ದು, ಮಾರವಾಡಿ ಸಾಲ ಐತಿ. ಸುಖಾಸುಮ್ಮನ ಬೆಳಕೋತ ಹೋಗತೈತೆಪಾ. ಬಂದು ಇಕೀನ್ನ ಕರಕೊಂಡು ಹೋಗು". ಅಂತ ಘರವಾಲಿ ನನ್ನ ತಂದೆಗೆ ಹೇಳಿ ಕಳಿಸಿದ್ದಳು.

**ಜೀತದಿಂದ ಹೊರಬಂದ ಸ್ಥಿತಿ**

ನಾನು ದಂಧೆ ಮಾಡಿ ಹಣ ಗಳಿಸುತ್ತೇನೆಂದು ನಮ್ಮ ತಂದೆ ನನ್ನನ್ನು ಇಟ್ಟು ೬,೦೦೦ ಸಾವಿರ ರೂಪಾಯಿ ಸಾಲ ತೆಗೆದುಕೊಂಡು ಹೋಗಿದ್ದ. ಆದರೆ ನಮ್ಮ ತಂದೆಯು. ತಾನು ತೆಗೆದುಕೊಂಡಿದ್ದ ಅಸಲಿಗೆ, ಬಡ್ಡಿ ಸೇರಿ ಒಟ್ಟು ೧೧,೦೦೦ ಸಾವಿರ ರೂಪಾಯಿಗಳನ್ನು ಕೊಡಬೇಕಾಗಿ ಬಂತು. ಗರೀಬ ನಾಗಿದ್ದ ನನ್ನ ತಂದೆ ಉಳಿಮೆಗಾಗಿ ನಮ್ಮ ಮನೆಯಲ್ಲಿದ್ದ ರಾಮ-ಭೀಮ ಎಂಬ ಎರಡೂ ಎತ್ತುಗಳನ್ನು ಮಾರಿ ನನ್ನನ್ನು ಬಿಡಿಸಿಕೊಂಡು ಬಂದಿದ್ದ(ಇದನ್ನು ಹೇಳುವಾಗ ಮಲ್ಲಿಕಾ ಕಣ್ಣಲ್ಲಿ ನೀರಾಡುತ್ತಿತ್ತು).

ನಾನು ಬರಿಗೈಲಿ ಬಂದದ್ದು ಮನೆಯಲ್ಲಿ ಯಾರಿಗೂ ಹಿಡಿಸಲಿಲ್ಲ. ನಮ್ಮ ಅಜ್ಜಿ ನನ್ನನ್ನು ವಿಚಾರಿಸಿಕೊಂಡು. ನಮ್ಮ ತಂದೆಯ ಹತ್ತಿರ "ಆಕೀ ಕಚ್ಚಿ ಹಾಕಿ ದುಡುದು ತಿಂತಾಳ ಅಂತಾಳ ಮತ್ಯಾಕ ಹಚ್ಚಿ" ಅಂತ ಹೇಳಿತು. ಆಗ ಆಲಮಟ್ಟಿ ಅಣೆಕಟ್ಟಿನ ಕಾಮಗಾರಿ ಪ್ರಾರಂಭವಾಗಿತ್ತು. ದಿನಕ್ಕೆ ೭ ರೂಪಾಯಿ ಸಿಗುತ್ತಿತ್ತು. ನಾನು ತುಂಬಾ ಖುಷಿಯಿಂದಲೇ ಅಲ್ಲಿಯ ಕೆಲಸಕ್ಕೆ ಹೋಗುತ್ತಿದ್ದೆ. ಅದರ

ಜೊತೆಗೆ ದಾಬಾಗಳಲ್ಲಿಯೂ ಕೆಲಸಕ್ಕೆ ಹೋಗುತ್ತಿದ್ದೆ. ಈ ಸಂದರ್ಭದಲ್ಲಿ ನನಗೊಬ್ಬ ಕೆ.ಇ.ಬಿ.ಯಲ್ಲಿ ಕೆಲಸ ಮಾಡುವ ವ್ಯಕ್ತಿ ಸ್ನೇಹಿತನಾಗಿ ಸಿಕ್ಕಿದ್ದ. ನನಗೆ ಆತನಿಂದಲೇ ಒಬ್ಬಳು ಹೆಣ್ಣುಮಗಳು ಜನಿಸಿದ್ದಾಳೆ. ಅವಳಿಗೆ ನರ್ಸಿಂಗ್ ಶಿಕ್ಷಣ ಕೊಡಿಸಿ ಮದುವೆ ಮಾಡಿದ್ದೇನೆ. ನಾನು ಆಲಮಟ್ಟಿ ಮತ್ತು ದಾಬಾಗಳಲ್ಲಿ ಕೆಲಸ ಮಾಡುವಾಗ, ಗೋಕಾಕದ ಬರ್ಡ್ಸ್ ಸಂಸ್ಥೆಯವರು ಎಚ್. ಐ. ವಿ. ಏಡ್ಸ್ ತಡೆಗಟ್ಟುವ ಯೋಜನೆಯನ್ನು ಹಲವಾರು ಜಿಲ್ಲೆಗಳಲ್ಲಿ ಹಮ್ಮಿಕೊಂಡಿದ್ದರು. ಅದರಲ್ಲಿ ಬಿಜಾಪೂರ ಜಿಲ್ಲೆಯೂ ಒಂದು. ಈ ಸಂದರ್ಭದಲ್ಲಿ ಕಾರ್ಯಕರ್ತರೊಬ್ಬರು ನನ್ನನ್ನು ಗುರುತಿಸಿ ಪೀಯರ್ ವರ್ಕರ್ ಆಗಿ ಕೆಲಸ ಮಾಡುವಂತೆ ಪ್ರೋತ್ಸಾಹಿಸಿದರು. ಆಗ ನನಗೆ ಒಂದು ತಿಂಗಳಿಗೆ ೧೫೦೦ ರೂಪಾಯಿ ಗೌರವಧನ ಕೊಡುತ್ತಿದ್ದರು. ಲೈಂಗಿಕ ಚಟುವಟಿಕೆಯಲ್ಲಿರುವವರನ್ನು ಗುರುತಿಸಿ ಅವರಿಗೆ ಸುರಕ್ಷಿತ ಲೈಂಗಿಕ ಕ್ರಿಯೆ ಮತ್ತು ಅದರ ಮಹತ್ವ ತಿಳಿಸಿ ಹೇಳುವುದು ನನ್ನ ಕೆಲಸವಾಗಿತ್ತು. ಅದರ ಜೊತೆಗೆ ನಿರೋಧ್ ಉಪಯೋಗಿಸುವಂತೆ ಮನವರಿಕೆ ಮಾಡುವುದು ಮತ್ತು ನಿರೋಧಗಳನ್ನು ಸಹ ಮಹಿಳೆಯರಿಗೆ ಹಂಚುವ ಕೆಲಸ ಇದಾಗಿತ್ತು. ಅದೇ ಕೆಲಸವನ್ನು ತುಂಬಾ ಶ್ರದ್ಧೆಯಿಂದ ನಾನು ಮಾಡಿದ್ದೆ. ನಾನು ಇಂದು ಏನಾಗಿದ್ದೀನಿ ಎಂಬುದನ್ನು ನೀವು ನೋಡುತ್ತಿದ್ದೀರಿ. ಇದೆಲ್ಲ ನನ್ನ ಪರಿಶ್ರಮ ಮತ್ತು ಆತ್ಮ ವಿಶ್ವಾಸದ ಫಲ.

ನಾನು ಕಾಮಾಟಿಪುರದಿಂದ ತಿರುಗಿ ಬಂದ ಕೂಡಲೇ, ನನ್ನ ಜೊತೆಗೇ ದೇವದಾಸಿ ಮಾಡಿದ್ದ ನನ್ನ ತಂಗಿಯನ್ನು ನಮ್ಮ ತಂದೆ ಮತ್ತು ಅಜ್ಜಿ ಕಾಮಾಟಿಪುರಕ್ಕೆ ಕಳಿಸಿರುತ್ತಾರೆ. ಅವಳು ೪-೫ ವರ್ಷ ಅಲ್ಲಿದ್ದು ಮರಳಿ ಊರಿಗೆ ಬಂದಿದ್ದಾಳೆ. ನನ್ನ ತಂದೆ ಸಾವನ್ನಪ್ಪಿ ೨೦ ವರ್ಷಗಳಾದವು. ಇಷ್ಟು ವರ್ಷಗಳಾದ ಮೇಲೆ ಈಗ ನನ್ನ ತಾಯಿ ಮತ್ತು ತಮ್ಮನನ್ನು ಭೇಟಿಯಾಗುವ ಅವಕಾಶ ಬಂದೊದಗಿದೆ. ಅವರು ಇನ್ನೂ ತಮ್ಮ ತವರು ಮನೆಯಲ್ಲಿಯೇ ಇದ್ದಾರೆ. ಆಗಾಗ ಬಂದು ನಮ್ಮನ್ನು ಭೇಟಿಯಾಗಿ ಕಷ್ಟ ಸುಖ ಹಂಚಿಕೊಂಡು ಹೋಗುತ್ತಾರೆ.

ಚಿಕ್ಕವಯಸ್ಸಿನಲ್ಲಿಯೇ ಮುಂಬಯಿಯ ಕೆಂಪು ದೀಪ ಕಂಡುಬಂದ ಮಲ್ಲಿಕಾ ಇವರಿಗೆ, ದೇವದಾಸಿ ಪದ್ಧತಿ ಮತ್ತು ಲೈಂಗಿಕ ದಂಧೆ ಕುರಿತು ಅವರ ಅಭಿಪ್ರಾಯ ಕೇಳಿದಾಗ "ದೇವದಾಸಿ ಪದ್ಧತಿಯಂತೂ ಮುಗಿದು ಹೋಗುವ ಹಂತಕ್ಕೆ ಬಂದಿದೆ. ಅದಕ್ಕೆ ಸಂಬಂಧಿಸಿದ ಕಾನೂನು ಇನ್ನೂ ಬಿಗಿಯಾಗಬೇಕು. ಈಗ ನಾವು ಯಾರನ್ನೂ ದೇವದಾಸಿ ಮಾಡಲು ಬಿಡುವುದಿಲ್ಲ. ಹಾಗೆಯೇ ಬಾಲ್ಯ ವಿವಾಹವನ್ನೂ ನಿರ್ಬಂಧಿಸುತ್ತಿದ್ದೇವೆ. ಈಗಾಗಲೇ ದೇವದಾಸಿಯಾದವರಿಗೆ ಲೈಂಗಿಕ ಚಟುವಟಿಕೆಯಲ್ಲಿ ಇರುವವರಿಗೆ ರಕ್ಷಣೆ ದೊರೆಯಬೇಕು" ಎಂದು ನುಡಿಯುತ್ತಾರೆ.

## ಪ್ರಕರಣ-೧೦: ಜಯಶ್ರೀ ಪ್ರಕರಣ

ಜಯಶ್ರೀ ೨೩ ವರ್ಷದ ದೇವದಾಸಿ ಯುವತಿ. ಬಿಜಾಪೂರ ತಾಲೂಕಿನವಳಾಗಿದ್ದು, ಅನಕ್ಷರಸ್ಥಳಾಗಿದ್ದಾಳೆ. ಇವಳು ತನ್ನ ಅಪ್ರಾಪ್ತ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡು, ಮದ್ಯಪಾನಿಯಾದ ತನ್ನ ತಂದೆಯೊಂದಿಗೆ ಬದುಕಲಾಗದೇ ಲೈಂಗಿಕ ದಂಧೆಗೆ ಮಹಾರಾಷ್ಟ್ರದ ಹಲವಾರು ವೇಶ್ಯಾಗೃಹಗಳಲ್ಲಿ ಇದ್ದು ಈಗ ತನ್ನ ಊರಿಗೆ ಮರಳಿ ಬಂದಿದ್ದಾಳೆ. ಅವಳನ್ನು ಭೇಟಿಯಾಗಲು ಅವಳ ಊರಿಗೆ ಹೋದಾಗ, ಕೇರಿಯ ಹುಡುಗಿಯರೊಂದಿಗೆ ಚೌಕಾ ಬಾರಾ ಆಡುತ್ತ ಕುಳಿತಿದ್ದಳು. ನಾವು ಅವಳನ್ನು

ಭೇಟಿಯಾದ ಉದ್ದೇಶವನ್ನು ತಿಳಿಸಿದಾಗ, ತುಂಬಾ ಮುಜುಗರಗೊಂಡಿದ್ದಳು. ತುಂಬಾ ಹಿಂಜರಿಯುತ್ತಲೇ ತನ್ನ ಜೀವನದ ವಿಷಯವನ್ನು ನಮ್ಮ ಜೊತೆಗೆ ಹಂಚಿಕೊಂಡಳು. ಅವಳ ಜೊತೆಗೆ ಚರ್ಚಿಸಿದ ವಿಷಯಗಳನ್ನು ಅವಳದೇ ಮಾತಗಳಲ್ಲಿ ಈ ಕೆಳಗೆ ವಿವರಿಸಲಾಗಿದೆ.

**ಪೂರ್ವಸ್ಥಿತಿ**

*ನನ್ನ ಅಪ್ಪನಿಗೆ ಎರಡು ಜನ ಹೆಂಡತಿಯರಿದ್ದರು. ಈತನ ಅತಿಯಾದ ಕುಡಿತದಿಂದಾಗಿ ಮೊದಲನೆಯವಳು ಜಗಳ ಮಾಡಿ ಓಡಿ ಹೋಗಿದ್ದಳು. ನಂತರ ಮಹಾರಾಷ್ಟ್ರಕ್ಕೆ ದುಡಿಯಲು ಬಂದಾಗ ನನ್ನ ತಾಯಿಯನ್ನು ಮದುವೆ ಮಾಡಿಕೊಂಡು ಬಂದಿದ್ದ. ನಾನು ಮತ್ತು ನನ್ನ ತಂಗಿಯು. ನನ್ನ ತಾಯಿಗೆ ಅವಳ ಮೊದಲ ಸಂಬಂಧದಲ್ಲಿ ಹುಟ್ಟಿದವರಾಗಿದ್ದೆವು. ಆದರೂ ನನ್ನ ತಂದೆ ನಮ್ಮನ್ನು ತನ್ನ ಮಕ್ಕಳಂತೆಯೇ ನೋಡಿಕೊಂಡಿದ್ದ. ಸ್ವಲ್ಪ ದಿನಗಳಾದ ಮೇಲೆ ನನ್ನ ತಾಯಿ ಅನಾರೋಗ್ಯದಿಂದ ಮರಣ ಹೊಂದಿದಳು. ಆಗ ನಾನು ಮತ್ತು ನನ್ನ ತಂಗಿ ತುಂಬಾ ಚಿಕ್ಕವರು. ನನ್ನ ತಂದೆಗೆ ನಮ್ಮ ಬಗ್ಗೆ ಯಾವುದಕ್ಕೂ ಕಾಳಜಿ ಇರಲಿಲ್ಲ. ನಾನು ಆರನೇ ಇಯತ್ತೆಯವರೆಗೆ ಶಾಲೆಗೆ ಹೋದರೂ ಓದಲು ಬರೆಯಲು ಬರುತ್ತಿರಲಿಲ್ಲ. ಎರಡು ದಿನ ಶಾಲೆಗೆ ಹೋದರೆ, ಎರಡು ದಿನ ಕೇರಿಯಲ್ಲಿ ತಿರುಗಾಡುತ್ತಿದ್ದೆ. ನಾನು ನನ್ನ ತಂಗಿ ಕಂಡವರ ಮನೆಯಲ್ಲಿ ಊಟಮಾಡಿ ಹೊತ್ತು ಕಳೆಯುತ್ತಿದ್ದೆವು. ನಾನು ಋತುಮತಿಯಾದ ನಂತರ ಒಂದು ದಿನ ತಂದೆಯ ಜೊತೆ ಜಗಳ ಮಾಡಿ, ಅವನ ಜೇಬಿನಿಂದಲೆ ಹಣವನ್ನು ತೆಗೆದುಕೊಂಡು ಮನೆ, ಊರು ಎರಡನ್ನೂ ಬಿಟ್ಟು ಹೊರ ಬಂದಿದ್ದೆ. ನಮ್ಮ ಊರಿನಲ್ಲಿದ್ದಾಗ ಬಹಳಷ್ಟು ಜನ ಹೆಣ್ಣುಮಕ್ಕಳು ದಂಧೆಗೆ ಊರು ಬಿಟ್ಟು ಹೋಗುವುದನ್ನು ನಾನು ನೋಡುತ್ತಿದ್ದೆ. ಹಾಗಾಗಿ ಯಾವುದೇ ಅಳುಕಿಲ್ಲದೇ ನಾನು ಅಲ್ಲಿಂದ ಮಹಾರಾಷ್ಟ್ರದ ಕರಾಡಕ್ಕೆ ಬಂದು ಘರವಾಲಿಯೊಬ್ಬರ ಮನೆಯಲ್ಲಿ ಆಶ್ರಯ ಪಡೆದಿದ್ದೆ(ಇವಳ ತಾಯಿ ಇದೇ ಕರಾಡದ ರೆಡ್‌ಲೈಟ್ ಏರಿಯಾದಲ್ಲಿದ್ದಾಗಲೇ ಜಯಶ್ರೀಯ ತಂದೆಯಾದವನ ಜೊತೆ ಬಂದಿದ್ದಳು). ಘರವಾಲಿಯ ಸಹಾಯದಿಂದ ನಾನು ದಂಧೆಯನ್ನೂ ಮಾಡತೊಡಗಿದೆ. ಹಾಗೆ ದಿನಗಳೆದ ನಾನು ಸ್ವಲ್ಪ ದಿನಗಳಲ್ಲಿಯೆ ತನ್ನ ತಂಗಿಯನ್ನೂ ಅಲ್ಲಿಗೇ ಕರೆಸಿಕೊಂಡಿದ್ದೆ. ಈಗಲೂ ಅವಳು ಅಲ್ಲಿಯೇ ದಂಧೆ ಮಾಡುತ್ತಿದ್ದಾಳೆ.*

*ನಮ್ಮ ಹಳ್ಳಿಗಳಲ್ಲಿ ದೇವದಾಸಿಯರಾಗದೇ ಹಾಗೇ ದಂಧೆ ಮಾಡುವುದು ಅವಮಾನವೆನಿಸುತ್ತದೆ. ಹಾಗೆ ಮಾಡುವವರನ್ನು ಸೂಳೆ ಅನ್ನುತ್ತಾರೆ. ಮಾಡುವುದು ಅದೇ ಕೆಲಸವಾದರೂ ದೇವದಾಸಿಯರಿಗೂ ಸೂಳೆಯರಿಗೂ ಬಾಳ ಅಂತರವಿದೆ. ಹಾಗಾಗಿ ನಾನು ಮತ್ತು ನನ್ನ ತಂಗಿ ನಾವು ದೇವದಾಸಿಯರಾಗುವುದು ಒಳ್ಳೆಯದೆಂದು ಭಾವಿಸಿ, ಸ್ವಲ್ಪ ದಿನಗಳ ನಂತರ ಊರಿಗೆ ಬಂದಿದ್ದೆವು. ಆದರೆ ದೇವದಾಸಿಯರಾಗುವುದಕ್ಕಿಂತ ಮೊದಲೇ ನಾವು ದಂಧೆಯನ್ನು ಮಾಡಿದ್ದರಿಂದ ನಮ್ಮ ಊರಿನ ದೇವದಾಸಿ ಹೆಣ್ಣುಮಕ್ಕಳು ತಮ್ಮ ಸಮಾಜದೊಳಗೆ ನಮ್ಮನ್ನು ಸೇರಿಸಿಕೊಳ್ಳುವುದಿಲ್ಲವೆಂದರು. ಆಗ ಊರಿನ ದೈವಕ್ಕೆ ನಾನು ಹನ್ನೊಂದು ಸಾವಿರ ಮತ್ತು ನನ್ನ ತಂಗಿ ಹನ್ನೊಂದು ಸಾವಿರ ಹಣ ಕೊಟ್ಟೆವು. ದೇವದಾಸಿ ಸಮುದಾಯಕ್ಕೂ ಸೆಪರೇಟ್ ಆಗಿ ೨೦೦೦ ರೂಪಾಯಿಯಂತೆ ಇಬ್ಬರೂ ಸೇರಿ ೪೦೦೦ ರೂಪಾಯಿಗಳನ್ನು ಕೊಟ್ಟು ಅವರ ಸಮಾಜದಲ್ಲಿ ಸೇರಿಕೊಂಡೆವು. ನಾವು ಹೀಗೆ ಮಾಡದಿದ್ದಲ್ಲಿ ದೈವದವರು ನಮ್ಮನ್ನು ಊರಿನಿಂದ ಬಹಿಷ್ಕರಿಸಬಹುದಿತ್ತು ಅಥವಾ ಪೋಲೀಸರಿಗೆ ಕಂಪ್ಲೇಂಟ್ ಕೊಡಬಹುದಿತ್ತು. ಹೀಗೆ ದೈವಕ್ಕೆ, ಸಮಾಜಕ್ಕೆ*

ದಂಡ ಕಟ್ಟಿ ಅವರೊಂದಿಗೆ ಹೊಂದಿಕೊಳ್ಳುವುದನ್ನೇ ನಾವು "ಶುದ್ಧ ಮಾಡಿಕೊಳ್ಳುವುದು" ಎಂದು ಕರೆಯುತ್ತೇವೆ.

ನಮ್ಮ ಹಳ್ಳಿಯಲ್ಲಿಯ ಎಲ್ಲ ಕಾರ್ಯಕ್ರಮ ಮುಗಿದ ಮೇಲೆ ನಾವು ಮತ್ತೆ ಕರಾಡಕ್ಕೆ ಹೋಗಿದ್ದೆವು. ನಾನು ಎರಡು ವರ್ಷಗಳ ಕಾಲ ಕರಾಡದಲ್ಲಿಯೆ ಇದ್ದು, ಹಣದ ವಿಷಯದಲ್ಲಿ ವ್ಯತ್ಯಾಸವಾದ್ದರಿಂದ ಘರವಾಲಿಯ ಜೊತೆ ಜಗಳ ಮಾಡಿ ಮುಂಬಯಿಗೆ ಹೊರಟು ಹೋಗಿದ್ದೆ. ಮುಂಬಯಿಯ ಕಾಮಾಟಪೂರದಲ್ಲಿ ಒಂದು ವರ್ಷವಿದ್ದು, ಅಲ್ಲಿಂದ ಪೂಣಾದ ಬುಧವಾರ ಪೇಟೆಗೆ ಬಂದಿದ್ದೆ. ಅಲ್ಲಿ ಮೂರು ವರ್ಷವಿದ್ದು, ನಂತರ ಮತ್ತೆ ಮುಂಬಯಿಗೆ ಹೋಗಿದ್ದೆ. ಈಗ ೬ ತಿಂಗಳಿನಿಂದ ನನ್ನ ಎರಡು ಮಕ್ಕಳೊಂದಿಗೆ ಇಲ್ಲಿ ನಮ್ಮ ಊರಲ್ಲಿ ಇದ್ದೇನೆ.

ಕರಾಡ, ಕಾಮಾಟಪುರ ಮತ್ತು ಪೂಣಾದ ರೆಡ್‌ಲೈಟ್ ಏರಿಯಾಗಳಲ್ಲಿ, ನನ್ನ ದಂಧೆ ಚೆನ್ನಾಗಿಯೇ ನಡೆದಿತ್ತು. ಆದರೆ ಇದ್ದಕ್ಕಿದ್ದ ಹಾಗೆ ನನಗೆ ಹೊಟ್ಟೆ ನೋವು ಪ್ರಾರಂಭವಾಗಿಬಿಟ್ಟಿತ್ತು. ನನಗೆ ಯಾಕೆ ಹೀಗಾಗುತ್ತಿದೆ ಎಂಬುದೇ ತಿಳಿಯದಾಗಿತ್ತು. ಅದೇ ನೋವಲ್ಲಿ ದಂಧೆ ಮಾಡುತ್ತಿದ್ದೆ. ಒಂದು ರವಿವಾರದ ದಿನ ೨೦-೨೫ ಗಿರಾಕಿಗಳು ಬಂದು ಹೋಗಿದ್ದರು. ಅಂದಿನ ದಿನ ಹೇಗೆ ಹೋಗಿತ್ತು ಎಂಬುದೇ ನನಗೆ ಗೊತ್ತಾಗಲಿಲ್ಲ. ಹೊಟ್ಟೆನೋವು ತಡೆದುಕೊಳ್ಳಲಾಗದೇ ನಮ್ಮ ಊರಿಗೆ ಬಂದು ಬಿಟ್ಟೆ. ಊರಿಗೆ ಬಂದ ಮೇಲೂ, ಕಾಲು ದುಂಡಗೆ ಮಾಡಿಕೊಂಡು ಮಲಗಿ ಬಿಟ್ಟಿದ್ದೆ. ನನ್ನನ್ನು ಕಾಳಜಿ ಮಾಡಿ ಆಸ್ಪತ್ರೆಗೆ ತೋರಿಸುವವರು ಯಾರೂ ಇರಲಿಲ್ಲ. ಅದೇ ಸಂದರ್ಭದಲ್ಲಿ ಒಂದು ದಿನ ಬಿಜಾಪೂರದ ಏಡ್ಸ್ ಜಾಗೃತಿ ಸಂಸ್ಥೆಯವರು, ನಮ್ಮ ಊರಲ್ಲಿ ರಕ್ತ ತಪಾಸಣೆಗೆ ಬಂದಿದ್ದರು. ನಮ್ಮ ಕೇರಿಯ ಬಹಳಷ್ಟು ಹೆಣ್ಣುಮಕ್ಕಳು ಆರೋಗ್ಯ ತಪಾಸಣೆಗೆ ಹೋಗಿದ್ದರು. ಆದರೆ ನಾನು ಮಾತ್ರ ಹೋಗಿರಲಿಲ್ಲ. ನನಗೆ ಹೀಗೆ ತೊಂದರೆಯಾಗುತ್ತಿದೆ ಎಂದು ತಿಳಿದ ಒಬ್ಬರು ಬಂದು ಕರೆದುಕೊಂಡು ಹೋಗಿದ್ದರು. ವೈದ್ಯರು ತಪಾಸಣೆ ನಡೆಸಿ ನೋಡಿದಾಗ ನನ್ನ ಗರ್ಭಾಶಯದ ಹತ್ತಿರ ನಿರೋಧ ಅಂಟಿಕೊಂಡಿತ್ತು. ಅತಿಯಾದ ದಂಧೆಯಿಂದ ಏಡ್ಸ್ ಬರದಂತೆ ತಡೆಯಲು ಬಳಸುವ ನಿರೋಧ, ಜಾರಿ ಹೋಗಿ ಗರ್ಭಾಶಯಕ್ಕೆ ಅಂಟಿಕೊಂಡು ಬಿಟ್ಟಿತ್ತು. ಅದನ್ನು ವೈದ್ಯರು ತಪಾಸಣೆ ನಡೆಸಿ ತೆಗೆದು ಹಾಕಿದ ತಕ್ಷಣವೇ ನೋವೆಲ್ಲ ಹೊರಟು ಹೋಯಿತು. ನಿಜವಾಗಿಯೂ ನನಗೆ ಆ ದಿನ ಸ್ವರ್ಗ ಸಿಕ್ಕಂತ ಅನುಭವ ಆಗಿತ್ತು.

ಇಷ್ಟು ದಿನ ದಂಧೆಯಿಂದ ಜೀವನ ನಡೆಯುತ್ತಿತ್ತು. ಈಗ ಇಲ್ಲಿ ಹೇಗೆ ಜೀವನ ನಡೆಸುತ್ತೀ? ಎಂದು ಜಯಶ್ರೀಯನ್ನು ಕೇಳಿದಾಗ, ಸದ್ಯಕ್ಕೆ ನನ್ನ ತಂಗಿ ಇಲ್ಲಿ ಕಟ್ಟಿಸಿದ ಮನೆಯಲ್ಲಿ ನಾನು ನನ್ನ ಮಗಳೊಂದಿಗೆ ಇದ್ದೇನೆ. ಇಲ್ಲಿಯೇ ದಂಧೆ ಮಾಡುತ್ತಿದ್ದೇನೆ. ಬೇರೆಯ ಊರಿನಿಂದ ಗಿರಾಕಿಗಳು ಬರುತ್ತಾರೆ. ಮುಂಬಯಿ, ಪೂಣಾ ಮತ್ತು ಕರಾಡಗಳಲ್ಲಿ ಸಿಗುವಂತೆ ಇಲ್ಲಿ ಲಾಭ ಇಲ್ಲ. ಆದರೂ ನಡೆಯುತ್ತದೆ. ಸದ್ಯಕ್ಕೆ ತನ್ನ ತಂಗಿ ಗಳಿಸಿದ್ದರಲ್ಲೇ ಮತ್ತು ತಾನು ಅಷ್ಟಿಷ್ಟು ಗಳಿಸಿದ್ದರಲ್ಲಿ ಜೀವನ ನಡೆಯುತ್ತಿದೆ. ನಾನು ಇನ್ನೂ ಚಿಕ್ಕವಳಿರುವುದರಿಂದ ಮತ್ತೆ ದಂಧೆಯ ಮನೆಗೆ ಹೋಗುತ್ತೇನೆ. ಇದೇ ತಿಂಗಳ ಒಳಗೆ ಹೋಗುತ್ತೇನೆ.

*ನೀನು ಚಿಕ್ಕವಳಿರುವಾಗಲೇ ದಂಧೆಯ ಮನೆಗಳಿಗೆ ಹೋಗಿದ್ದೆ, ಅಲ್ಲಿ ನಿನ್ನನ್ನು ಪೊಲೀಸರು ಹಿಡಿಯಲಿಲ್ಲವೇ? ಎಂದು ಕೇಳಿದಾಗ, ಜಯಶ್ರೀ ತುಂಬಾ ನಗುತ್ತಾ, "ಜುಪರು ಹಿಡಿದು ಎಳಕೊಂಡ ಹೋಗಿದ್ದರೀ, ೧೨೦೦ ರೂಪಾಯಿ ದಂಡ ಕಟ್ಟಿಸಿಕೊಂಡು ಬಿಟ್ಟ ಬಿಟ್ಟರು" ಎಂದು ನಗುತ್ತಲೇ ಹೇಳುವ ಜಯಶ್ರೀ, "ಮುಂಬಯನ್ಯಾಗ ಅಷ್ಟ ಹಿಂಗ, ಪೂಣಾ ಮತ್ತ ಕರಾಡದಾಗ ಪೊಲೀಸರು ಹಿಡಂಗಿಲ್ಲ". ಅಂತಲೂ ಹೇಳುತ್ತಾಳೆ.*

ಜಯಶ್ರೀಯ ಊರಿನ ಸಮುದಾಯ ಕಾರ್ಯಕರ್ತರು, *"ಜಯಶ್ರೀ ಮದ್ಯಪಾನಿಯಾಗಿದ್ದು, ತುಂಬಾ ಕುಡಿಯುತ್ತಾಳೆ. ಅವಳ ತಂಗಿ ಇವಳಿಗಿಂತ ವ್ಯವಹಾರದಲ್ಲಿ ತುಂಬಾ ಜಾಣೆ. ವೇಶ್ಯಾಗೃಹದಲ್ಲಿದ್ದರೂ ಕೆಟ್ಟ ಚಟಗಳಿಗೆ ದಾಸಳಾಗಿಲ್ಲ. ೧೯ ವರ್ಷದ ಅವಳು ಊರಲ್ಲಿ ಜಾಗ ಖರೀದಿ ಮಾಡಿ ಎರಡು ರೂಮಿನ ಮನೆ ಕಟ್ಟಸಿದ್ದಾಳೆ. ಮೊದಲಿನಿಂದಲೂ ಕರಾಡದಲ್ಲಿಯೇ ಇದ್ದಾಳೆ. ಘರವಾಲಿಯ ಜೊತೆ ಹೊಂದಿಕೊಂಡು ಪ್ರೀತಿಯಿಂದ ಇದ್ದಾಳೆ. ಅವಳ ರೀತಿ ಜಯಶ್ರೀ ಅಲ್ಲ. ತುಂಬಾ ದುಂದು ವೆಚ್ಚ ಮಾಡುತ್ತಾಳೆ"* ಎಂದು ಜಯಶ್ರೀಯ ಕುರಿತು ವಿವರಿಸುತ್ತಾರೆ.

## ಪ್ರಕರಣ–೧೧: ಮಾಧವಿ ಪ್ರಕರಣ

**ಮಾಧವಿ** *೨೫* ವರ್ಷದ ಅನಕ್ಷರಸ್ಥ ದೇವದಾಸಿ ಹೆಣ್ಣುಮಗಳು. ಇವಳು ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನವಳು. ಲೈಂಗಿಕ ಜೀತಕ್ಕಾಗಿ ಮಹಾರಾಷ್ಟ್ರದ ಸಾಂಗ್ಲಿಗೆ ಹೋಗಿ ಬಂದಿದ್ದಾಳೆ. ಅವಳನ್ನು ನಾವು ಭೇಟಿಯಾಗಲು ಅವಳ ಮನೆಗೆ ಹೋದಾಗ, ಅವಳು ನಮ್ಮನ್ನು ಮನೆಯ ಒಳಗೆ ಬಿಟ್ಟುಕೊಳ್ಳುವುದಕ್ಕೆ ನಿರಾಕರಿಸಿದಳು. ನಾವು ನಮ್ಮ ಉದ್ದೇಶವನ್ನು ಅವಳಿಗೆ ತಿಳಿಸಿ ಹೇಳಿದಾಗಲೂ ಅವಳು ನಂಬಲಿಲ್ಲ. ನಿಮ್ಮಂತವರು ಬಾಳ ಮಂದಿ ಬರ್ತಾರ್ರೀ, ಏನಾರ ಕೇಳಕೊಂಡು ಹೋಗಿ, ಏನಾರ ಬರ್ರ್ಕೊತಾರ. ನಾ ಏನೂ ಹೇಳಂಗಿಲ್ಲ. ನೀವು ಎದ್ದು ಹೋಗ್ರಿ. ಅಂತ ಹೇಳಿದಳು. ನಾವು ಬಿಡದೇ ಮತ್ತೆ ತಿಳಿಸಿ ಹೇಳಿ ಅವಳ ಮನೆಯಲ್ಲಿಯೆ ಕುಳಿತಾಗ, ಒಂದಿಷ್ಟು ತನ್ನ ಕುರಿತು ಮಾತನಾಡಿದಳು. ಅವಳು ನಮ್ಮೊಡನೆ ಹಂಚಿಕೊಂಡ ವಿಷಯವನ್ನು ಇಲ್ಲಿ ವಿವರಿಸಲಾಗಿದೆ.

**ಪೂರ್ವ**

*ನನ್ನ ತಂದೆ–ತಾಯಿಗೆ ೨ ಹೆಣ್ಣು ಮತ್ತು ೩ ಗಂಡುಮಕ್ಕಳು. ಅವರಲ್ಲಿ ನಾನೂ ಒಬ್ಬಳು. ನಾವು ಎಸ್.ಸಿ ಜನರಾದರೂ ಸಹ ನಮ್ಮ ತಂದೆಗೆ ತೋಟ–ಹೊಲಗಳು ಇವೆ. ನಮ್ಮದು ರೈತಾಪಿ ಕುಟುಂಬ. ನಾನು ನನ್ನ ಹದಿಹರೆಯದ ವಯಸ್ಸಿನಲ್ಲಿ ದೊಡ್ಡ ಜಾತಿಯ ಯುವಕನೊಬ್ಬನ ಪ್ರೀತಿಗೆ ಬಿದ್ದಿದ್ದೆ. ಆತನೊಂದಿಗೆ ದೈಹಿಕ ಸಂಪರ್ಕವನ್ನೂ ಹೊಂದಿದ್ದೆ. ಆತನ ಜಾತಿ ಹೆಚ್ಚಿನದಾಗಿರುವುದರಿಂದ ಆತನ ಮನೆಯವರು ನಮ್ಮ ಪ್ರೀತಿಯ ಸಂಬಂಧವನ್ನು ಒಪ್ಪಿಕೊಳ್ಳಲಿಲ್ಲ. ಆದ್ದರಿಂದ ಆತ ಬೇರೆ ಮದುವೆಯಾದ.*

*"ನೈತಿಕವಾಗಿ ಕೆಟ್ಟು ಹೋದ ನಮ್ಮ ಮಗಳನ್ನು ಯಾರು ಮದುವೆ ಮಾಡಿ ಕೊಳ್ಳುತ್ತಾರೆ. ಮದುವೆ ಯಾದ ಮೇಲೆಯೂ ಇವಳ ಮೊದಲ ಜೀವನದ ಬಗ್ಗೆ ತಿಳಿದರೆ, ಅವಳ ಸಂಸಾರ ಕೆಟ್ಟು ಹೋಗಬಹುದು" ಎಂದು ತಂದೆ ತಾಯಿ ವಿಚಾರಿಸಿ, ನನ್ನನ್ನು ದೇವದಾಸಿ ಮಾಡಿದರು. ಹೀಗೆ ದೇವದಾಸಿ ಮಾಡುವುದು ಅಪರಾಧವಾದ್ದರಿಂದ, ಅದನ್ನು ಮುಚ್ಚಿ ಹಾಕಲು ದೈವದವರಿಗೆ ದಂಡ ಕಟ್ಟಬೇಕಾಗುತ್ತದೆ. ಸಮಾಜದ ಜನರಿಗೆ ಊಟ ಹಾಕಿಸಬೇಕಾಗುತ್ತದೆ. ದೇವದಾಸಿಯರ ಬಳಗಕ್ಕೆ ದುಡ್ಡು ಕೊಟ್ಟು ಅವರಿಗೆ ಊಟದ ವ್ಯವಸ್ಥೆ ಮಾಡಬೇಕಾಗುತ್ತದೆ. ಇಷ್ಟೆಲ್ಲ ಮಾಡಿ ನನ್ನ ತಂದೆಯೇ ಮುಂದೆ ನಿಂತು ಮುತ್ತು ಕಟ್ಟಿಸಿದರು.*

*ನಾನು ದೇವದಾಸಿಯಾದ ಮೇಲೆ ನಮ್ಮ ಮನೆಯ ತೋಟದಲ್ಲಿ, ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದೆ. ನಮ್ಮ ಊರಲ್ಲಿ ಸೂಳೆಯರು ಬಹಳ. ಬಹುತೇಕರು ಮಿರಜ್-ಸಾಂಗ್ಲಿ, ಪುಣೆ, ಮುಂಬಯಿಗಳಲ್ಲಿ ಇದ್ದಾರೆ. ಅವರು ಊರಿಗೆ ಬಂದಾಗ ಹೋದಾಗ ನಾನು ಅವರನ್ನು ನೋಡುತ್ತಿದ್ದೆ. ಅವರು ಬಾಳ ಬೆಳ್ಳಗೆ, ಚೆಂದ ಆಗಿ ಬರುತ್ತಿದ್ದರು. ಅವರನ್ನು ನೋಡಿ ನನಗೂ ಸಾಂಗ್ಲಿಗೆ ಹೋಗಬೇಕೆನ್ನಿಸಿ ಹೋಗಿದ್ದೆ.*

**ಜೀತದ ಸ್ಥಿತಿ**

*ನನಗೆ ಲೈಂಗಿಕ ದಂಧೆಯ ಜೀವನ ಹಿಡಿಸಲಿಲ್ಲ. ಹಾಗಾಗಿ ಅಲ್ಲಿ ಉಳಿಯದೇ ಕೆಲವೇ ತಿಂಗಳುಗಳಲ್ಲಿ ತಿರುಗಿ ಊರಿಗೆ ಬಂದೆ. ಊರಿಗೆ ಬಂದ ಮೇಲೆ ಒಬ್ಬರೊಡನೆ ಸ್ನೇಹ ಬೆಳೆದು ಗರ್ಭಿಣಿಯಾದೆ. ಮಗ ಹುಟ್ಟಿದ ಮೇಲೆ ತಿರುಗಿ ಸಾಂಗ್ಲಿಗೆ ಹೋಗುವ ವಿಚಾರವೇ ನನಗೆ ಬರಲಿಲ್ಲ.*

**ಜೀತದ ಹೊರಗಿನ ಸ್ಥಿತಿ**

*ನಾನು ತೋಟದ ಮನೆ ಬಿಟ್ಟು ಊರಲ್ಲಿ ನನಗಾಗಿ ಒಂದು ಮನೆ ಕಟ್ಟಿಸಿಕೊಂಡಿದ್ದೇನೆ. ಅಲ್ಲಿಯೇ ನಾನು ದಂಧೆಯನ್ನು ಮಾಡುತ್ತಿದ್ದೇನೆ. ಬೇರೆ ಹುಡುಗಿಯರು ಗಿರಾಕಿ ಕರೆದುಕೊಂಡು ಬಂದರೆ ಅವರಿಗೂ ಅವಕಾಶ ಕೊಡುತ್ತೇನೆ. ಅವರು ನನಗೆ ಒಂದು ಗಿರಾಕಿಯ ಹಿಂದೆ ೩೦ ರೂ ಕೊಡುತ್ತಾರೆ. ಮುಧೋಳದ ಒಬ್ಬ ವ್ಯಕ್ತಿಯೊಡನೆ ಬಹಳ ದಿನಗಳವರೆಗೆ ನನ್ನ ದೈಹಿಕ ಸಂಬಂಧ ಇತ್ತು. ನನ್ನ ಮಗ ಹುಟ್ಟಿದ್ದೂ ಆತನಿಗೇನೇ. ಈಗ ಎರಡು ವರ್ಷಗಳಿಂದ ನಾನೇ ಆತನಿಂದ ದೂರವಾಗಿದ್ದೇನೆ. ಅವನಿಗೆ ಇನ್ನೂ ಮದುವೆ ಆಗಿರಲಿಲ್ಲ. ಹಾಗಾಗಿ ಆತ ಯಾವಾಗಲೂ ಇಲ್ಲಿಯೇ ಇರುತ್ತಿದ್ದರೆ, ಇದರಿಂದ ಅವರ ಅಪ್ಪ-ಅಮ್ಮಗೂ ನೋವಾಗುತ್ತಿರಬಹುದು. ಅವರ ಶಾಪ ತನಗೆ ತಟ್ಟಬಾರದು. ಆತನೂ ಮದುವೆಯಾಗಿ ತನ್ನದೆ ಸಂಸಾರ ಮಾಡಿಕೊಳ್ಳಲಿ ಎಂದು ಹಾಗೆ ಮಾಡಿದ್ದೇನೆ. ನನ್ನ ಹತ್ತಿರ ಈಗ ಬೇರೆ ಗಿರಾಕಿಗಳು ಬರುತ್ತವೆ. ಹಣದ ಬೆನ್ನು ಹತ್ತಿ, ಊರು ಬಿಟ್ಟು ಹೋಗಿ, ರೋಗ ಹಚ್ಚಿಕೊಂಡು ಬರುವುದಕ್ಕಿಂತ ನಮ್ಮೂರಾಗ ಬಂದಷ್ಟು ಮಾಡಿ ಆರೋಗ್ಯದಿಂದ ಇರೋದು ಒಳ್ಳೆಯದು. ನನ್ನ ಮಗನನ್ನು ಚೆನ್ನಾಗಿ ಓದಿಸಬೇಕೆಂಬ ಆಸೆ ಇದೆ. ನನ್ನ ವಯಸ್ಸು ಚಿಕ್ಕದಿರುವುದರಿಂದ ಸರಕಾರದಿಂದ ಯಾವುದೇ ಸೌಲಭ್ಯ ದೊರೆತಿಲ್ಲ. ಮುಂದೆ ಎಂದಾದರೂ ದೊರೆತೀತು ಎಂಬ ಆಶೆ ಇದೆ.*

## ಪ್ರಕರಣ-೧೨: ಸುಮಿತ್ರಾ ಪ್ರಕರಣ

**ಸುಮಿತ್ರ**ಳನ್ನು ಭೇಟಿಯಾಗಲು ಹೋದಾಗ ಮನೆಯ(ಗುಡಿಸಲು) ಮುಂದಿನ ಜೋಳದ ಹೊಲದಲ್ಲಿ ಕಳೆ ಕೀಳುತ್ತಿದ್ದಳು. ಮೊಮ್ಮಕ್ಕಳಿಗೆ ಎಮ್ಮೆಗೆ ಮೇವು ಹಾಕ್ರಿ ಅಂತ ಹೇಳುತ್ತಿದ್ದಳು. ೪-೫ ವರ್ಷದ ಹಿಂದೆ ಕ್ಯಾನ್ಸರ್ ರೋಗ ಪತ್ತೆಯಾಗಿ. ಅದನ್ನು ಆಪರೇಶನ್ ಮಾಡಬೇಕು ಅಂದಾಗ ಎರಡು ದಿನ ಧೈರ್ಯ ಗೆಟ್ಟಿದ್ದ ಸುಮಿತ್ರ ಕೊನೆಗೂ ಮಾನಸಿಕವಾಗಿ ತಯಾರಿ ಆಗಿದ್ದಳು. ಸಣ್ಣ ಮಗ ಸದಾಶಿವ ೪-೫ ಲಕ್ಷ ರೂಪಾಯಿ ಖರ್ಚು ಮಾಡಿ ತಾಯಿಯನ್ನ ಉಳಿಸಿಕೊಂಡಿದ್ದ. ಸುಮಿತ್ರಾಳಿಗೆ ೬ ತಿಂಗಳು ಮೂಗಿನಲ್ಲಿ ನಳಿಕೆ ತೂರಿಸಿ ಅದರಿಂದಲೇ ಗಂಜಿ ಹಾಕುತ್ತಿದ್ದರು. ಅದೇ ಊಟವಾಗಿತ್ತು. ಅದೆಲ್ಲ ಸಹಿಸಿಕೊಂಡು ಇಂದು ಓಡಾಡುವಂತಾಗಿದ್ದಾಳೆ. "ಇಷ್ಟು ದಿನ ಪಟ್ಟ ಕಷ್ಟಕ್ಕೆ ಫಲವಾಗಿ ಜೀವ ಉಳಿದು ಬಂದಿದೆ" ಅನ್ನುತ್ತಾಳೆ ಸುಮಿತ್ರಾ. ಸುಮಿತ್ರಾಳ ತಂಗಿ ಪ್ರೇಮಾ ನಮ್ಮನ್ನು ಅವಳ ಹತ್ತಿರ ಕರೆದುಕೊಂಡು ಹೋಗಿದ್ದಳು. ಸುಮಿತ್ರಾ ಮತ್ತು ಪ್ರೇಮಾ ಇಬ್ಬರೂ ಉತ್ತರ ಪ್ರದೇಶದ ಅಲಹಾಬಾದ್‌ನಲ್ಲಿ ಲೈಂಗಿಕ

ದಂಧೆಯಲ್ಲಿ ಇದ್ದು ಬಂದವರು. ಅವರು ನಮ್ಮೊಡನೆ ಹಂಚಿಕೊಂಡ ವಿಷಯಗಳನ್ನು ಇಲ್ಲಿ ಅವಳ ಮಾತಿನಲ್ಲಿಯೇ ವಿವರಿಸಲಾಗಿದೆ.

**ಪೂರ್ವಸ್ಥಿತಿ**

*ನಾನು, ಏಳು ಹೆಣ್ಣುಮಕ್ಕಳು ಮತ್ತು ಒಬ್ಬ ಗಂಡು ಮಗನಿದ್ದ ಕುಟುಂಬದ ಹಿರಿಯ ಹೆಣ್ಣು ಮಗಳು. ಎಷ್ಟೇ ಬಡವರಿದ್ದರೂ ಇಷ್ಟು ಮಕ್ಕಳು ಇದ್ದೇ ಇರುತ್ತಿದ್ದವು. ನಮಗೆ ಹೊಟ್ಟೆ ತುಂಬ ಊಟ ಮೈ ತುಂಬಾ ಬಟ್ಟೆ ಇರುತ್ತಿರಲಿಲ್ಲ. ಅಶಕ್ತನಾಗಿದ್ದ ನಮ್ಮ ತಂದೆಗೆ ಕಣ್ಣು ಸರಿಯಾಗಿ ಕಾಣಿಸುತ್ತಿರಲಿಲ್ಲ. ಆಗಿನ ಸಮಯಕ್ಕೆ ಗಂಡಸರಿಗೆ ೧ ರೂ.೫೦ ಪೈಸೆ ಕೂಲಿ ಸಿಗುತ್ತಿತ್ತು. ಆದರೆ ನಮ್ಮ ತಂದೆಗೆ ಕಣ್ಣು ಸರಿಯಾಗಿ ಕಾಣುತ್ತಿರಲಿಲ್ಲವೆಂಬ ಕಾರಣಕ್ಕೆ, ಅವನಿಗೆ ೪೦ ಪೈಸೆ ಕೂಲಿ ಕೊಡುತ್ತಿದ್ದರು. ನನ್ನ ತಾಯಿಯಂತೂ ಮೈಮುರಿದು ದುಡಿಯುತ್ತಿದ್ದಳು. ಅವಳಿಗೂ ೪೦ ಪೈಸೆ ಕೊಡುತ್ತಿದ್ದರು. ನಮ್ಮ ತಂದೆ ಕಸ ತೆಗೆಯುತ್ತಾ ಮುಂದೆ ಹೋಗುತ್ತಿದ್ದರೆ, ಅವನ ಕಣ್ಣಿಗೆ ಕಾಣದೇ ಉಳಿದಿದ್ದನ್ನು ನನ್ನ ತಾಯಿ ತೆಗೆಯುತ್ತಾ ಸಾಗುತ್ತಿದ್ದಳು. ಇಷ್ಟು ಕಷ್ಟ ಪಟ್ಟರೂ ಹೊಟ್ಟೆ ತುಂಬುವಷ್ಟು ಊಟ ನಮಗೆ ಸಿಗುತ್ತಿರಲಿಲ್ಲ. ಬಟ್ಟೆ ಬರೆಯದಂತೂ ಕನಸಿನ ಮಾತೆ ಆಗಿರುತ್ತಿತ್ತು.*

*ಶೇಂಗಾದ ಸುಗ್ಗಿಯಲ್ಲಿ, ಸುಗ್ಗಿಯಾದ ಮೇಲೆ ಹೊಲದಲ್ಲಿ ತಳಕ್ಕೆ ಉಳಿದ ಶೇಂಗಾವನ್ನ ಕೆದರಿ ಆರಿಸಿ ತರಲು ಮನೆ ಮಂದಿಯೆಲ್ಲ ಹೋಗುತ್ತಿದ್ದೆವು. ಎಲ್ಲರೂ ಸೇರಿ ೬ ರಿಂದ ೭ ಚೀಲ(ಸಕ್ಕರೆ ಚೀಲ) ಶೇಂಗಾ ಕೂಡಿಸುತ್ತಿದ್ದೆವು. ಅದು ೨೦ ರೂಪಾಯಿಗೆ ಒಂದು ಚೀಲದಂತೆ ಮಾರಾಟವಾಗುತ್ತಿತ್ತು. ಅದನ್ನು ಮಾರಿ ಬಂದ ಹಣದಿಂದ ಮನೆ ಮಂದಿಗೆಲ್ಲ ಹೊಸ ಬಟ್ಟೆ ತರುತ್ತಿದ್ದರು. ನಮಗೆ ಅಂದೊಂದು ದಿನ ಮಾತ್ರ ಹೊಸ ಬಟ್ಟೆ. ಮುಂದಿನ ವರ್ಷ ಮತ್ತೆ ಶೇಂಗಾದ ಸುಗ್ಗಿ ಬರೋವರೆಗೂ ಅದೇ ಬಟ್ಟೆ ಹಾಕಿಕೊಳ್ಳಬೇಕಿತ್ತು. ಒಂದೆರಡು ತಿಂಗಳು ಹಾಕಿದರೆ ಆ ಹೊಸ ಬಟ್ಟೆ ಹರಿದು ಹೋಗುತ್ತಿತ್ತು. ಆ ನಂತರ ಮತ್ತೆ ನಾವು ನಮ್ಮ ತಾಯಿಯ ಹರಿದ ಸೀರೆಯ ತುಕುಡಿಗಳನ್ನೇ ಸುತ್ತಿಕೊಂಡು ದಿನ ಕಳೆಯುತ್ತಿದ್ದೆವು. ನಮ್ಮ ತಾಯಿ ಕೆಲಸಕ್ಕೆ ಹೋದಾಗ ಉಳ್ಳವರ ಮನೆಗಳಿಂದ ಹಳೆಯ ಹರಿದ ಬಟ್ಟೆಗಳನ್ನು ತರುತ್ತಿದ್ದಳು. ಅವುಗಳನ್ನೇ ಸರಿ ಪಡಿಸಿಕೊಂಡು ನಾವು ಸುತ್ತಿಕೊಳ್ಳುತ್ತಿದ್ದೆವು. ಊರಲ್ಲಿ ಉಳ್ಳವರ ಮನೆಗಳಲ್ಲಿ ಮದುವೆ ಇದ್ದರೆ, ನನ್ನ ತಾಯಿ ಹೋಗಿ ಎಲ್ಲರಿಗೂ ಊಟ ತೆಗೆದುಕೊಂಡು ಬರುತ್ತಿದ್ದಳು.*

*ನನ್ನ ತಮ್ಮನೊಬ್ಬನನ್ನು ವರ್ಷಕ್ಕೆ ೨೦ ಸಾವಿರ ರೂಪಾಯಿಗೆ ರೈತರ ಮನೆಯಲ್ಲಿ ಜೀತಕ್ಕೆ ಇಟ್ಟಿದ್ದೆವು. ನನ್ನ ತಾಯಿಯೂ ಅವರ ಮನೆಯಲ್ಲಿಯೇ ಕೆಲಸಕ್ಕೆ ಹೋಗುತ್ತಿದ್ದಳು. ರೈತರ ಮನೆಯಲ್ಲಿ ಕಾಳಿನ ಸುಗ್ಗಿ ನಡೆದಾಗ ಎತ್ತುಗಳನ್ನು ಕಟ್ಟಿ ಹಂತಿ ಹೊಡೆಸುತ್ತಿದ್ದರು. ಎತ್ತುಗಳು ತೆನೆಗಳನ್ನು ತುಳಿದು ಕಾಳು ಮಾಡುತ್ತಿದ್ದವು. ಈ ಸಂದರ್ಭದಲ್ಲಿ ಎತ್ತುಗಳು ತೆನೆಗಳನ್ನು ತಿಂದು, ಅವುಗಳನ್ನು ಜೀರ್ಣಿಸಿಕೊಳ್ಳಲಾಗದೇ, ಅವು ಹಾಕಿದ ಸೆಗಣಿಯಲ್ಲಿ ಕಾಳುಗಳು ಬಿದ್ದಿರುತ್ತಿದ್ದವು. ನಮ್ಮ ತಾಯಿ ಆ ಸೆಗಣಿಯನ್ನು ಬಳಿದು ತಂದು, ತೊಳೆದು, ಬಟ್ಟೆಯಲ್ಲಿ ಸೋಸಿ, ಕಾಳು ತೆಗೆದು, ಬಿಸಿಲಲ್ಲಿ ಒಣಗಿಸಿ, ಬೀಸಿ ತಂದು ರೊಟ್ಟಿ ಮಾಡುತ್ತಿದ್ದಳು. ಆ ರೊಟ್ಟಿಗಳು ಸೆಗಣಿಯ ವಾಸನೆಯಿಂದ ಇರುತ್ತಿದ್ದವು. ಇದರ ಜೊತೆಗೆ ಹಂತಿಯನ್ನು ಮಾಡುವಾಗ, ಕಣದ ಮಗ್ಗುಲಿನ ಮಣ್ಣಲ್ಲಿ ಕಾಳುಗಳು ಬಿದ್ದಿರುತ್ತಿದ್ದವು. ಅವುಗಳಿಗೆ '*

ಮಣಕಾಳು' ಎಂದು ನಾವು ಕರೆಯುತ್ತೇವೆ. ಆ ಮಣ್ಣನ್ನು ತೊಳೆದು ಸೋಸಿ, ಕಾಳನ್ನು ತೆಗೆದು, ಬೀಸಿ ನುಚ್ಚು ಮಾಡಿ ತಿನ್ನುತ್ತಿದ್ದೆವು. ಒಂದು ಪೂರ್ಣ ರೊಟ್ಟಿಯನ್ನು ಯಾವತ್ತಾದರೂ ಬಾಯಿ ತುಂಬಾ ಮುರಿದು ತಿಂದೆವೋ ಏನೋ ಅನ್ನಿಸುತ್ತಿತ್ತು. ಕರುಳುಗಳು ಹಸಿವಿನಿಂದ ಒದರುವುದು ಕಿವಿಗೆ ಕೇಳುತ್ತಿತ್ತು. ಹಳ್ಳಿಯಲ್ಲಿ ಎಲ್ಲರ ಪರಿಸ್ಥಿತಿಯೂ ಹೀಗೆ ಇತ್ತು. ಭೂಮಿ, ಹಸು, ಕರು ಇದ್ದ ರೈತರದೂ ಕೂಡ ಬಡತನದ ಸ್ಥಿತಿಯೇ ಇತ್ತು. ಇಂತ ಸ್ಥಿತಿಯಲ್ಲಿ ನಮ್ಮ ಪಕ್ಕದ ಹಳ್ಳಿಯ ಹುಡುಗನ ಜೊತೆ ನನ್ನ ಮದುವೆಯಾಯಿತು. ನನಗಾಗ ಹನ್ನೊಂದು ವರ್ಷ. ಆಗಿನ್ನೂ ನಾನು ಋತುಮತಿಯಾಗಿರಲಿಲ್ಲ. ನಾನು ಋತುಮತಿಯಾಗುವವರೆಗೆ ತವರು ಮನೆಯಲ್ಲಿ ಇಟ್ಟುಕೊಂಡು ನಂತರ ಗಂಡನ ಮನೆಗೆ ಕಳಿಸಿಕೊಟ್ಟದ್ದರು. ನನ್ನ ಗಂಡನ ಮನೆಯಲ್ಲಿಯೂ, ತವರು ಮನೆಯಲ್ಲಿಯೂ ಒಂದೇ ಸ್ಥಿತಿ. ಎಲ್ಲರೂ ದುಡಿದಾಗಲೆ ಬದುಕು ಸಾಗುತ್ತಿತ್ತು. ನಾನು ಗಂಡನ ಮನೆಗೆ ಹೋಗುವಾಗ ನಮ್ಮ ತಾಯಿಯ ಕೊರಳಲ್ಲಿ ಬಂಗಾರದ ತಾಳಿ ಇತ್ತು. ಅದನ್ನೇ ನನಗೆ ಹಾಕಿದ್ದಳು.

ನನ್ನ ಗಂಡ ಮತ್ತು ಮಾವ ಹಳ್ಳಿ ಹಳ್ಳಿಗೆ ತಿರುಗಾಡಿ ಕೋಳಿಯ ತತ್ತಿಗಳನ್ನು ತುಂಬಿಕೊಂಡು ಬರುತ್ತಿದ್ದರು. ನಮ್ಮ ಊರಿನಿಂದ ಮುಂಬಯಿಗೆ ವೀಳ್ಯೆದೆಲೆ ಮತ್ತು ಕೋಳಿಯ ತತ್ತಿಗಳ ಸರಬರಾಜು ಆಗುತ್ತಿತ್ತು. ಅವುಗಳನ್ನು ತೆಗೆದುಕೊಂಡು ಹೋಗಲು ಮುಂಬಯಿನಿಂದಲೇ ಒಂದು ಟ್ರಕ್ ಬರುತ್ತಿತ್ತು. ನನ್ನ ಗಂಡ ಮತ್ತು ಮಾವ ತಾವು ಹಳ್ಳಿಯಿಂದ ಸಂಗ್ರಹಿಸಿ ತಂದ ತತ್ತಿಗಳನ್ನು, ಆ ಟ್ರಕ್ ಮೂಲಕ ಮುಂಬಯಿಗೆ ಕಳಿಸುತ್ತಿದ್ದರು. ಎರಡು-ಮೂರು ವರ್ಷದವರೆಗೆ ನನ್ನ ಗಂಡನೊಂದಿಗಿನ ನನ್ನ ಜೀವನ ಚೆನ್ನಾಗಿಯೇ ಇತ್ತು. ಆದರೆ ನನ್ನ ಗಂಡ ಹೀಗೆ ಊರೂರು ತಿರುಗಿ ಕೆಲಸ ಮಾಡುವಾಗ ಒಂದು ಹಳ್ಳಿಯಲ್ಲಿ ಅವನಿಗೆ ಹೆಣ್ಣು ಮಗಳೊಬ್ಬಳ ಪರಿಚಯವಾಗಿತ್ತು. ಆಕೆ ತನ್ನ ಗಂಡನನ್ನು ಬಿಟ್ಟು ಬಂದು ತನ್ನ ತವರಲ್ಲಿ ಇದ್ದಳು. ಅವಳೊಂದಿಗಿನ ಇವನ ಸ್ನೇಹ ದೈಹಿಕ ಸಂಬಂಧಕ್ಕೆ ತಿರುಗಿ ಆಕೆ ಗರ್ಭಿಣಿಯೂ ಆದಳು. ಹಾಗಾಗಿ ನನ್ನ ಗಂಡ ದೇವಸ್ಥಾನವೊಂದರಲ್ಲಿ ಹಾರ ಬದಲಾಯಿಸಿಕೊಂಡು ಅವಳೊಡನೆ ಮದುವೆಯೂ ಆಗಿದ್ದ. ಆಕೆಗೆ ಹೆಣ್ಣುಮಗು ಜನಿಸಿತು. ನನ್ನ ಗಂಡ ಇತ್ತೀಚಿತಲಾಗಿ ಆಕೆಯ ಜೊತೆಗೇ ಹೆಚ್ಚು ಇರತೊಡಗಿದ್ದ. ಇದರಿಂದಾಗಿ ನನಗೆ ತುಂಬಾ ಚಿಂತೆಯಾಗತೊಡಗಿತ್ತು. ಹಾಗಾಗಿ ನಾನು ತವರಿಗೆ ಹೋಗುವುದಾಗಿ ನನ್ನ ಅತ್ತೆ ಮಾವನಿಗೆ ಹೇಳಿದಾಗ, ಅವರು "ಅವಳ ಜೊತೆ ಎಷ್ಟು ದಿನ ಅಂತ ಇರ್ತಾನ. ಹ್ಯಾಂಗ್ತಿ ಹ್ಯಾಂಗ್ತೀನ. ಕಟ್ಟೆಯ ಕಲ್ಲು ಕಟ್ಟಿಗೇ ಕುಂತ್ರಬೇಕು. ನಾವು ನಿನ್ನ ಜೊತೆ ಇರ್ತೀವಿ" ಅಂತ ಹೇಳಿದರು. ಈ ನಡುವೆ ನನಗೆ, ನನ್ನ ಗಂಡನಿಗೆ ಇಷ್ಟವಾಗುವ ಅವಳನ್ನು ನನ್ನ ಮನೆಗೆ ಕರೆದುಕೊಂಡು ಬಂದರೆ ಗಂಡನಿಗೆ ತನ್ನ ಮೇಲೆ ಪ್ರೀತಿ ಹುಟ್ಟಬಹುದು ಎಂದು ಅನ್ನಿಸತೊಡಗಿತ್ತು. ಹಾಗಾಗಿ ನಾನು ಆಕೆಯನ್ನು ಮತ್ತು ಆಕೆಯ ಕೂಸನ್ನು ಕರೆದುಕೊಂಡು ಬಂದು ಮನೆ ಸೇರಿಸಿಕೊಂಡೆ. ಆದರೆ ಪರಿಸ್ಥಿತಿ ನಾನು ಅಂದುಕೊಂಡಂತೆ ಆಗಲಿಲ್ಲ. ನನ್ನ ಗಂಡ ಆಕೆ ಮನೆಗೆ ಬಂದ ಮೇಲೆ ಮೊದಲಿಗಿಂತ ಹೆಚ್ಚಾಗಿ ಆಕೆಯ ಜೊತೆಗೆ ಇರತೊಡಗಿದ. ನನ್ನ ಜೊತೆ ಮಾತನಾಡುವುದನ್ನೂ ನಿಲ್ಲಿಸಿ ಬಿಟ್ಟಿದ್ದ. ಇದರಿಂದ ರೋಸಿ ಹೋದ ನಾನು ಒಂದು ದಿನ ನನ್ನ ಗಂಡನಿಲ್ಲದ ಸಮಯದಲ್ಲಿ ಆಕೆಯ ಜೊತೆಗೆ ತುಂಬಾ ಜಗಳ ಮಾಡಿ ಬಿಟ್ಟಿದ್ದೆ. ಇದರಿಂದಾಗಿ ಆಕೆ ತನ್ನ ಮಗುವನ್ನು ಕರೆದುಕೊಂಡು ಮನೆಯಿಂದ ಹೊರಟು ಹೋಗಿ ಬಿಟ್ಟಳು. ಸಾಯಂಕಾಲ ನನ್ನ ಗಂಡ ಬಂದು ಅವಳು ಇರದೇ ಇರುವುದನ್ನು ಕಂಡು, ನನ್ನನ್ನು ಹೊಡೆಯಬಹುದೆಂದು ಹೆದರಿ ನಮ್ಮ ಪಕ್ಕದ ಮನೆಯಲ್ಲಿ ಅಡಗಿ

ಕುಳಿತುಕೊಂಡೆ. ನನ್ನ ಗಂಡ ಬಂದು ಅವಳನ್ನು ಹುಡುಕಿ, ಅವಳು ಇರದಿದ್ದನ್ನು ಕಂಡು ಏನೂ ಹೇಳದೇ, ಅವಳ ಸಂಗಡವೇ ಇರಲು ಹೊರಟು ಹೋಗಿ ಬಿಟ್ಟ. ಹಾಗೆ ಹೋದವನು ತಿರುಗಿ ಬರಲೇ ಇಲ್ಲ.

ಒಂದು ದಿನ ನನ್ನ ತವರಿನಿಂದ, "ಸುಮಿತ್ರಾಳ ತಾಯಿ ಬಸುರಿ ಆಗಿದ್ದಾಳೆ. ದಿನಗಳು ತುಂಬಿವೆ. ಬಾಣಂತನ ಮಾಡಲು ಸುಮಿತ್ರಾಳನ್ನು ಕಳಿಸಿರಿ", ಎಂದು ಪತ್ರ ಬಂದಿತು. "ನಿನ್ನ ಜೊತೆ ನಾವಿರ್ತೀವಿ", ಅಂದಿದ್ದ ಅತ್ತೆ ಮಾವನಿಗೆ ಹರೆಯದ ನನ್ನ ಜೀವವನ್ನು ಕಾಯುವುದು ದೊಡ್ಡ ತಲೆನೋವಾಗಿತ್ತು. ಪತ್ರ ಬಂದೊಡನೆ ನನ್ನನ್ನು ನನ್ನ ತವರಿಗೆ ಕಳಿಸಿದ್ದರು.

ನನ್ನ ತವರು ಮನೆಯಲ್ಲಿ ನನ್ನ ತಾಯಿಯ ದುಡಿತವೇ ಮೇಲಾದದ್ದು. ಅವಳೇ ಬಸುರಿಯಾಗಿ ಹಡೆಯಲು ಕುಳಿತಾಗ, ಇಡೀ ಮನೆಯೇ ಉಪವಾಸ ಅನುಭವಿಸುತ್ತಿತ್ತು. ಹಾಗಾಗಿ ನಾನು ತವರಿಗೆ ಬಂದದ್ದು ನನ್ನ ತಾಯಿಗೆ ಆಸರೆ ಆದಂತೆ ಆಗಿತ್ತು. ನನ್ನ ತಾಯಿಗೆ ಹೆರಿಗೆ ಆದಾಗ ಬಾಣಂತನ ಮಾಡತೊಡಗಿದ್ದೆ. ಬಡತನದ ಬದುಕಿಗೆ ಬಾಣಾಂತನವಾದರೂ ಏನೂ ವ್ಯವಸ್ಥೆ ಇರಲಿಲ್ಲ. ಹೊಲದಲ್ಲಿಯ ಹಕ್ಕರಕಿ ಪಲ್ಲೆ ತಂದು ಅದನ್ನೇ ಕುದಿಸಿ ತಾಯಿಗೆ ತಿನ್ನಿಸುತ್ತಿದ್ದೆ. ಪುಂಡಿಪಲ್ಲೆ ತಂದು ಗಡಗಿಯಲ್ಲಿ ಹಾಕಿ ತಿರುವಿ ತಿನ್ನಲು ಕೊಡುತ್ತಿದ್ದೆ. ಎಷ್ಟೊಂದು ದಿನಗಳು ಕಳೆದರೂ ನನ್ನ ಗಂಡ ತಿರುಗಿ ಬರಲೇ ಇಲ್ಲ. ಹಾಗಾಗಿ ನನಗೆ ಮತ್ತೆ ತವರು ಮನೆಯೇ ಗತಿಯಾಯಿತು. ನಾನು ಕೆಲಸಕ್ಕೆ ಹೋಗತೊಡಗಿದ್ದೆ. ಗಂಡನನ್ನು ಬಿಟ್ಟು ಬಂದ ಹರೆಯದ ನಾನು ಕೆಲಸಕ್ಕೆ ಹೋಗತೊಡಗಿದಾಗ, ಕೆಟ್ಟ ಜನರ ಕಣ್ಣಿಗೆ, ಬಾಯಿಗೆ ಆಹಾರವಾಗತೊಡಗಿದ್ದೆ. ದುಷ್ಟ ಜನರು ನಮ್ಮ ಮನೆಯ ಸುತ್ತ ಸುತ್ತುವುದು. ರಾತ್ರಿ ಬಾಗಿಲು ಬಡಿಯುವುದು, ಕಲ್ಲು ಎಸೆಯುವುದು ಮಾಡುತ್ತಿದ್ದರು. ಇದನ್ನೆಲ್ಲ ತಾಳಿಕೊಳ್ಳುವುದು ತುಂಬಾ ಕಷ್ಟದ ಕೆಲಸವಾಗಿತ್ತು. ಆ ಸಂದರ್ಭದಲ್ಲಿ ನನಗೆ ದಿನಕ್ಕೆ ೨ ರೂ. ೩೦ ಪೈಸೆ ಕೂಲಿ ಸಿಗುತ್ತಿತ್ತು. ಮನೆಯ ತಾಪತ್ರಯಗಳಿಗೆ ಈ ಕೂಲಿ ಯಾವುದಕ್ಕೂ ಸಾಕಾಗುತ್ತಿರಲಿಲ್ಲ.

ಇದೇ ಸಮಯದಲ್ಲಿ ನಮ್ಮ ಊರಿನ ದೇವದಾಸಿ ಮಹಿಳೆಯೊಬ್ಬಳು ದಂಧೆ ಮಾಡಲೆಂದೇ ಮುಂಬಯಿಗೆ ಹೋಗುತ್ತಿದ್ದಳು. ನಮ್ಮ ಮನೆಯ ಕಷ್ಟ ತೀರಬೇಕೆಂದರೆ, ನಾನೂ ಆಕೆಯೊಡನೆ ಮುಂಬಯಿಗೆ ಹೋಗಬೇಕೆಂದು ನಿರ್ಧರಿಸಿಕೊಂಡು, ಮನೆಯಲ್ಲಿ ಯಾರಿಗೂ ಹೇಳದೇ ಮುಂಬಯಿಯ ದಂಧೆ ಮನೆಗೆ ಹೋಗಿದ್ದೆ.

**ಜೀತದ ಸ್ಥಿತಿ**

ನಾನು ಮುಂಬಯಿಗೆ ಹೋಗಿರುವ ಸುದ್ದಿ ನಮ್ಮ ಮನೆಯವರಿಗೆ ವರ್ಷ ಕಳೆದರೂ ಗೊತ್ತಾಗುವುದಿಲ್ಲ. ಅದಕ್ಕೆ ಅವರು ನಾನು ಎಲ್ಲೋ ಸತ್ತು ಹೋಗಿರಬಹುದೆಂದು ಭ್ರಮಿಸಿ ಸುಮ್ಮನಾಗಿದ್ದರು. ನಮ್ಮ ಊರಿನವರು ಮುಂಬಯಿಯಲ್ಲಿ ಬಹಳ ಜನ ಇದ್ದರು. ಆದರೂ ನನ್ನ ತಂದೆ ತಾಯಿಗೆ ನಾನು ಮುಂಬಯಿಯಲ್ಲಿರುವ ವಿಚಾರ ಗೊತ್ತಾಗಿರಲಿಲ್ಲ. ನಾನು ಅಲ್ಲಿಗೆ ಹೋಗಿ ಒಂದು ವರ್ಷದ ನಂತರ ಪಕ್ಕದ ಊರಿನ ಮಹಿಳೆಯೊಬ್ಬಳ ಕೈಯಲ್ಲಿ ಸ್ವಲ್ಪ ಹಣ, ತಂಗಿಯರಿಗೆ ಪಾವ್, ಬಿಸ್ಕತ್ ಕೊಟ್ಟು ನನ್ನ ಮನೆಯವರಿಗೆ ಕೊಟ್ಟು ಬರಲು ತಿಳಿಸಿದ್ದೆ. ನಾನು ಮುಂಬಯಿಯಲ್ಲಿ ಇರುವ ಸುದ್ದಿ ತಾಯಿಗೆ ಗೊತ್ತಾಗಿ

ಅವಳು ನನ್ನನ್ನು ಭೇಟಿಯಾಗಲು ಮುಂಬಯಿಗೆ ಬಂದಿದ್ದಳು. ನನ್ನ ತಾಯಿಗೆ ನಾನು ಇಂತಹ ದಂಧೆ ಮಾಡುತ್ತಿದ್ದೇನೆ ಅನ್ನುವುದಕ್ಕಿಂತ, "ನನ್ನ ಮಗಳು ಬದುಕಿದ್ದಾಳಲ್ಲಾ" ಎಂಬುದೇ ಸಂತಸವಾಗಿತ್ತು.

ಇವೆಲ್ಲ ನೋವುಗಳ ನಡುವೆ ಒಂದು ದಿನ ನನ್ನ ಗಂಡ ಮುಂಬಯಿಗೆ ನನ್ನನ್ನು ಹುಡುಕಿಕೊಂಡು ಬಂದಿದ್ದ. "ಆಕೀನ್ನ ನಾನ ಇಟಕೊಳ್ಳಾವ ಇದ್ದೆ, ಯಾರಿಗೂ ಹೇಳದಂಗನ ಮನೆಯಿಂದ ಓಡಿ ಬಂದಾಳ" ಎಂದು ಗಲಾಟೆ ಮಾಡಿ, "ಅಕೀ ಮದುವಿ ಖರ್ಚ ಕೊಡಬೇಕು ಇಲ್ಲದಿದ್ದರೆ, ನಿಮ್ಮ ಮ್ಯಾಲ ಪೋಲೀಸ್ ಕಂಪ್ಲೆಂಟ್ ಕೊಡ್ತೀನಿ". ಎಂದು ಘರವಾಲಿಯನ್ನು ಹೆದರಿಸಿದ. ನಾನು ಅಪ್ರಾಪ್ತಳಾಗಿದ್ದರಿಂದ ಹೆದರಿದ ಘರವಾಲಿ, ಕಾಗದದ ಮೇಲೆ ಬರೆಯಿಸಿಕೊಂಡು, ತಾನೇ ೬೦೦ ರೂ.ಗಳನ್ನು ಕೊಟ್ಟು ಅವನನ್ನು ಕಳಿಸಿದ್ದಳು. ಅಂದಿನಿಂದ ಗಂಡನೆಂಬ ಪ್ರಾಣಿ ನನ್ನ ಜೀವನದಿಂದ ಹೊರಟು ಹೋಗಿತ್ತು. ಘರವಾಲಿ ಅವನಿಗೆ ಕೊಟ್ಟ ೬೦೦ ರೂ. ಸಾಲವನ್ನು ನಾನು ಎರಡು ವರ್ಷ ತೀರಿಸಬೇಕಾಯಿತು. ಮುಂಬಯಿಯಲ್ಲಿ ನನಗೆ ಚೆನ್ನಾಗಿ ಗಳಿಕೆ ಆಗಲಿಲ್ಲ. ಬರೀ ಸಾಲದಲ್ಲೇ ಮುಳುಗಬೇಕಾಯಿತು. ಹಾಗಾಗಿ ಅಲ್ಲಿರುವುದೇ ಬೇಡವೆಂದು, ಸಾಲದಿಂದ ಮುಕ್ತಳಾಗಿ ಊರಿಗೆ ಬಂದೆ. ಊರಲ್ಲಿ ಅದೇ ಬಡತನ, ಹಸಿವು ಕಾಡುತ್ತಲೇ ಇದ್ದವು. ಮುಂಬಯಿಯಲ್ಲಿ ಬಿಸಿಲು ಕಾಣದ ನನಗೆ, ಊರಲ್ಲಿ ಬಿಸಿಲಿನ ತಾಪದಲ್ಲಿ ಕೆಲಸ ಮಾಡುವುದು ಕಷ್ಟವಾಗತೊಡಗಿತು.

ನಮ್ಮ ಊರಿನಿಂದ ಉತ್ತರಪ್ರದೇಶದ ಅಲಹಾಬಾದ್‌ಗೂ ಹೆಣ್ಣುಮಕ್ಕಳು ದಂಧೆಗೆ ಹೋಗುತ್ತಿದ್ದರು. ಹಾಗೆ ಹೋದ ಒಬ್ಬಳು ಘರವಾಲಿಯ ಕೂಡ ನಾನೂ ಅಲಾಹಾಬಾದ್‌ಗೆ ಹೋದೆ. ಅಲ್ಲಿ ನನಗೆ ಗಳಿಕೆ ಚೆನ್ನಾಗಿ ಆಗತೊಡಗಿತು. ಒಂದು ಗಿರಾಕಿಯ ಹಿಂದೆ ನನಗೆ ೨ ರೂಪಾಯಿ ಸಿಗುತ್ತಿತ್ತು. ಹೀಗೆ ಬಂದ ಆದಾಯದಿಂದ ಊರಿಗೂ ಸ್ವಲ್ಪ ಹಣ ಕೊಟ್ಟು ಕಳಿಸತೊಡಗಿದೆ. ಅದರಂತೆ ತಂಗಿಯರ ಮದುವೆಯನ್ನೂ ಮಾಡಿದೆ. ನಾನು ಎರಡು ವರ್ಷಗಳ ನಂತರ ಮತ್ತೆ ಊರಿಗೆ ವಾಪಸ ಬಂದೆ.

ಘರವಾಲಿಯರ ಕೈಕೆಳಗೆ ಇದ್ದು ಪಾಠ ಕಲಿತಿದ್ದ ನಾನು. ಈ ಸಾರಿ ನಾನೊಬ್ಬಳೇ ಸ್ವಂತ ಬಾಡಿಗೆ ಮನೆ ಮಾಡಿಕೊಂಡು ಇರಬೇಕೆಂದು ವಿಚಾರಿಸಿದ್ದೆ. ಆದ್ದರಿಂದ ತನ್ನ ಜೊತೆಗೆ ಈ ಸಾರಿ ನನ್ನ ೭ ವರ್ಷದ ತಂಗಿ ಪ್ರೇಮಾಳನ್ನು ಕರೆದುಕೊಂಡು ಹೋದೆ. ಉತ್ತರಪ್ರದೇಶದಲ್ಲಿ ತವಾಯಫ್ ಪದ್ಧತಿ ಆಚರಣೆ ಇದೆ. ತವಾಯಫ್ ಅಂದರೆ ನಮ್ಮೂರೊಳಗ ದೇವದಾಸಿಯರಿದ್ದ ಹಾಗೆ. ಆದರ ಇವರ ಮುಖ್ಯ ಕೆಲಸ ಅಂದರ ಕುಣಿಯೋದು. ಇವರನ್ನು ತಯಾರು ಮಾಡಲು ತರಬೇತಿಗಳು ನಡೆಯುತ್ತಿದ್ದವು. ಇಂತಹ ತವಾಯಫ್ ತರಬೇತಿಗಳು ನಡೆಯುತ್ತಿದ್ದ ಒಂದು ಮನೆಯ ಕಿಟಕಿಯಲ್ಲಿ ನನ್ನ ಏಳು ವರ್ಷದ ತಂಗಿ ಪ್ರೇಮಾ ಹೊರಗಿನಿಂದ ಜೋತುಬಿದ್ದು ನೋಡುತ್ತಿದ್ದಳು. ತುಂಬಾ ಆಸಕ್ತಿಯಿಂದ ಕುಣಿತ ನೋಡುತ್ತಿದ್ದ ಪ್ರೇಮಾಳನ್ನು ಗಮನಿಸಿದ್ದ ನಾನು ಅವಳಿಗೆ, ನೀನು ಆ ಡ್ಯಾನ್ಸ್ ಕಲಿತೀಯ. ಅಂತ ಕೇಳಿದಾಗ, ಶೈಲ ಅದಕ್ಕೆ ಗೋಣಾಡಿಸಿ ಒಪ್ಪಿಗೆ ನೀಡಿದ್ದಳು. ಆ ಕುಣಿತ ಕಲಿಯಬೇಕಾದರೆ, ಅದರ ಜೊತೆಗೆ ಸಂಗೀತವನ್ನು ಕಲಿಯಬೇಕು. ಸಂಗೀತ ಕಲಿಯಲು ಅಕ್ಷರ ಜ್ಞಾನವೂ ಬೇಕು ಎಂದು ವಿಚಾರಿಸಿ ನಾನು ಪ್ರೇಮಾಳಿಗೆ ನನ್ನ ಮನೆಯಲ್ಲಿಯೇ ಅಕ್ಷರ, ನೃತ್ಯ ಮತ್ತು ಸಂಗೀತ ಮೂರನ್ನೂ ವ್ಯವಸ್ಥೆ ಮಾಡಿದೆ. ನೃತ್ಯದ ಶಿಕ್ಷಕರಿಗೆ ದಿನಕ್ಕೆ ೨ ರೂಪಾಯಿ ಸಂಗೀತದ ಶಿಕ್ಷಕರಿಗೆ ದಿನಕ್ಕೆ ೨ ರೂಪಾಯಿ ಮತ್ತು ಅಕ್ಷರ ಕಲಿಸುವವರಿಗೆ ದಿನಕ್ಕೆ ೨ ರೂಪಾಯಿ. ಒಟ್ಟು ೬ ರೂಪಾಯಿ ಮತ್ತು ಒಂದು ಸಿಗರೇಟ್.

ಅದರ ಮೇಲೆ ಒಂದು ಕಪ್ ಚಹಾ. ಅಡಿಕೆ, ಎಲೆ ಕೊಟ್ಟು ಮೂರು ವರ್ಷಗಳವರೆಗೆ ಪ್ರೇಮಾಳಿಗೆ ಅಕ್ಷರಾಭ್ಯಾಸ, ನೃತ್ಯ ಮತ್ತು ಸಂಗೀತ ಮೂರನ್ನೂ ಕಲಿಸಲಾಯಿತು.

ಮೊದಮೊದಲು ಪ್ರೇಮಾ ಒಬ್ಬಳು ನೃತ್ಯದವಳ ಜೊತೆಗೆ ಸಹನೃತ್ಯ ಮಾಡುತ್ತಿದ್ದಳು. ಹಾಗೆ ನೃತ್ಯ ಮಾಡಿಯೇ ಮೊದಲ ವರ್ಷ ಪ್ರೇಮಾ ನಾಲ್ಕು ತಿಂಗಳಲ್ಲಿ ೧೫,೦೦೦ ಸಾವಿರ ರೂಪಾಯಿ ಗಳಿಸಿದ್ದಳು. ಅದರ ಮುಂದಿನ ವರ್ಷ ಪ್ರೇಮಾ ತಾನೊಬ್ಬಳೇ ನೃತ್ಯ ಮಾಡಲಾರಂಭಿಸಿದಳು. ಆಗ ಪ್ರೇಮಾಳಿಗೆ ೧೦ ವರ್ಷ ವಯಸ್ಸು. ಈ ಹೊತ್ತಿಗೆ ಪ್ರೇಮಾಳಿಗೆ ಕಮಲಾಬಾಯಿ ಎಂದು ನಾಮಕರಣ ಮಾಡಲಾಗಿತ್ತು. ಕಮಲಾಬಾಯಿ/ಪ್ರೇಮಳ ಹಾಡು ನೃತ್ಯಗಳಿಗೆ ತುಂಬಾ ಬೇಡಿಕೆ ಬರತೊಡಗಿತು. ಒಂದು ಮದುವೆ ಕಾರ್ಯಕ್ರಮಕ್ಕೆ ೩೦೦೦ ರಿಂದ ೪೦೦೦ ರೂ.ಗಳವರೆಗೆ ಸಿಗುತ್ತಿತ್ತು. ಒಂದು ಸಮಾರಂಭ ಮುಗಿದ ಕೂಡಲೇ ಮತ್ತೊಂದು ಸಮಾರಂಭಗಳು ಇರುತ್ತಿದ್ದವು. ಅವಳಿಗೆ ಸ್ನಾನ ಮಾಡಲೂ ಸಹ ಸಮಯ ದೊರೆಯುತ್ತಿರಲಿಲ್ಲ. ಈ ಸಂಭಾವನೆ ಜೊತೆಗೆ ನೃತ್ಯ ನಡೆದಾಗ ಖುಷಿಯಿಂದ ಪ್ರೇಮಾಳ ಮೇಲೆ ಜನರು ನೋಟುಗಳನ್ನು ತೂರುತ್ತಿದ್ದರು. ಅಂತಹ ಹಣವೇ ೧೦-೨೦ ಸಾವಿರ ರೂಪಾಯಿ ಆಗುತ್ತಿತ್ತು. ಈ ಎಲ್ಲ ಹಣದಲ್ಲಿ ತಂಡದ ನಾಲ್ಕು ಜನರಿಗೂ ಸಮನಾಗಿ ಹಣ ಹಂಚಿಕೆಯಾಗುತ್ತಿತ್ತು. ಈ ನಡುವೆ ನಾನು ದಂಧೆ ಮಾಡುವುದನ್ನು ಬಿಟ್ಟು ಬಿಟ್ಟಿದ್ದೆ. ಪ್ರೇಮಾಳನ್ನು ಕಾಳಜಿಯಿಂದ ನೋಡಿಕೊಳ್ಳುವುದೇ ನನ್ನ ಕೆಲಸವಾಗಿತ್ತು.

ನಮ್ಮ ಜೊತೆ ಈ ನಡುವೆ ಪ್ರೇಮಾ ಮಾತನಾಡಲು ಪ್ರಾರಂಬಿಸಿದ್ದಳು. ಅವಳು ಹೇಳುವಂತೆ, "ರಾತ್ರಿ ಊಟವನ್ನು ಮುಗಿಸಿ ಡಾನ್ಸ್‌ಗೆ ಹತ್ತಿದರೆ, ಬೆಳಗಿನ ಜಾವದವರೆಗೆ ಕುಣಿಯಬೇಕಿತ್ತು. ಸುತ್ತಲೂ ಗನ್ ಹಿಡಿದುಕೊಂಡ ಗಂಡಸರು ಕುಳಿತಿರುತ್ತಿದ್ದರು. ಅಲ್ಲಿ ಕುಡಿತ, ಮೋಜು ಎಲ್ಲವೂ ನಡೆಯುತ್ತಿತ್ತು. ಇಂತಹ ಸಂದರ್ಭಗಳಲ್ಲಿ ನನಗೆ ತೊಂದರೆಯೂ ಆಗುತ್ತಿತ್ತು. ಜೊತೆಗಿರುವ ಕಲಾವಿದರು ರಕ್ಷಣೆಗೆ ಬರುತ್ತಿದ್ದರು ಆದರೂ ಸಹ ಕಷ್ಟವೇ ಇರುತ್ತಿತ್ತು" ಎಂದು ಪ್ರೇಮಾ ಹೇಳುತ್ತಾಳೆ.

ಈ ಮಧ್ಯ ಪ್ರೇಮಾ ಋತುಮತಿಯಾಗಿದ್ದಳು. ಹಾಗಾಗಿ ಅವಳನ್ನು ಕರೆದುಕೊಂಡು ಊರಿಗೆ ಹೋಗಿದ್ದೆ. ಆಗ ಪ್ರೇಮ ೧೨ ವರ್ಷದವಳಿದ್ದಳು ಋತುಮತಿಯಾಗಿರುತ್ತಾಳೆ. ಪ್ರೇಮ ಚಿಕ್ಕವಳಿರುವಾಗ ಅವಳಿಗೆ ಬಿಳಿಮುಟ್ಟು ತುಂಬಾ ಆಗುತ್ತಿತ್ತು ಮತ್ತು ಆಕೆಯ ಶರೀರವೂ ಹೊರಗೆ ಬರುತಿತ್ತು. ಹಾಗಾಗಿ ಯಲ್ಲಮ್ಮದೇವರಿಗೆ ಹರಸಿಕೊಂಡು ಭಂಡಾರ ಹಚ್ಚಿದ್ದೆವು. ಹಾಗಾಗಿ ಅವಳನ್ನು ಮುತ್ತು ಕಟ್ಟಿ ದೇವದಾಸಿ ಮಾಡಿದೆವು. ದೇವದಾಸಿಯಾದ ನಂತರ ಹೆಣ್ಣು ಮಾಡುವ ಕಾರ್ಯಕ್ರಮವೂ ಊರಲ್ಲಿಯೇ ನಡೆಯಿತು.

ನಾನು ಮತ್ತೆ ಪ್ರೇಮಳನ್ನು ಕರೆದುಕೊಂಡು ತಿರುಗಿ ಅಲಹಾಬಾದ್‌ಗೆ ಹೋಗಿ, ದಂಧೆ ಪ್ರಾರಂಭಿಸಿದ್ದೆವು. ಈಗ ನನ್ನ ಮನೆಯಲ್ಲಿ ಹಾಡು, ಸಂಗೀತ ನಡೆಯುತ್ತಿದ್ದವು. ಅದರ ಜೊತೆಗೆ ನಮ್ಮ ಊರಿನಿಂದ ಕರೆದುಕೊಂಡು ಹೋದ ೫-೬ ಜನ ದಂಧೆಯ ಹುಡುಗಿಯರೂ ಇದ್ದರು. ನಮ್ಮ ಮನೆಗೆ ಪ್ರೇಮಳ ಸಂಗೀತ, ನೃತ್ಯ ನೋಡಲು ಗಂಡಸರ ಗುಂಪುಗಳು ಬರುತ್ತಿದ್ದವು. ಒಂದು ದಿನಕ್ಕೆ ಅಂತಹ ೪-೫ ಗುಂಪುಗಳು ಬರುತ್ತಿದ್ದವು. ನೃತ್ಯ ನೋಡುವ ಸಂದರ್ಭದಲ್ಲಿ ಕುಡಿಯುವುದು, ತಿನ್ನುವುದು ಎಲ್ಲವೂ ನಡೆಯುತ್ತಿತ್ತು. ಅವರು ಅಶ್ಲೀಲವಾದ ಪದಗಳನ್ನು ಬಳಸಿ ಪ್ರೇಮಳನ್ನು ತಮ್ಮ ಹತ್ತಿರ ಕರೆಯುತ್ತಿದ್ದರು. ಆದರೂ ಪ್ರೇಮ ಯಾವುದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಕುಣಿಯುವುದೊಂದೆ ಅವಳ ಕೆಲಸವಾಗಿತ್ತು.

ಹಾಡು ಮುಗಿದ ಮೇಲೆ ಅವರನ್ನು ಮನೆಯಿಂದ ಹೊರಗೆ ಹಾಕುವುದು ನಮ್ಮ ಒಂದು ದೊಡ್ಡ ಕೆಲಸವಾಗಿರುತ್ತಿತ್ತು. ಅಂತ ಸಮಯದಲ್ಲಿ ಮನೆಯಲ್ಲಿ ಇದ್ದ ದಂಧೆಯ ಹುಡುಗಿಯರ ಹತ್ತಿರ ಇವರನ್ನು ಕಳಿಸುತ್ತಿದ್ದೆವು. ತುಂಬಾ ಖಾಸಗಿಯಾಗಿದ್ದವರ ಹತ್ತಿರ ಪ್ರೇಮಳೇ ಹೋಗುತ್ತಿದ್ದಳು. ಇಂತ ಒಂದು ಗುಂಪಿನ ಹಿಂದೆ ೩ ರಿಂದ ೪ ಸಾವಿರ ರೂ.ಗಳವರೆಗೆ ನಮಗೆ ಸಿಗುತ್ತಿತ್ತು. ಈ ಮಧ್ಯ ರೌಡಿಗಳೂ ಇರುತ್ತಿದ್ದರು. ಅವರು ಚಾಕು, ಚೂರಿ, ಗನ್ನುಗಳನ್ನೇ ಎತ್ತಿಕೊಂಡು ಬಂದು ಮಗ್ಗಲಿಗೆ ಇಟ್ಟು ಮಲಗಲು ಹೇಳುತ್ತಿದ್ದರು. ಜೀವದಾಸೆಗಾಗಿ ಭಯದಿಂದ ಅವರು ಹೇಳಿದಂತೆ ಕೇಳಬೇಕಾಗುತ್ತಿತ್ತು. ಪ್ರೇಮಾಳ ನೃತ್ಯ ಅಲ್ಲಿ ತುಂಬಾ ಹೆಸರು ಮಾಡಿತ್ತು. ಮದುವೆ ಸೀಸನ್ ಬಂದರೆ ನಾಲ್ಕೈದು ತಿಂಗಳು ಮೊದಲೇ ಪ್ರೇಮಾಳ ಡಾನ್ಸ್ ಬುಕ್ ಆಗಿರುತ್ತಿತ್ತು. ಒಂದು ದಿನವೂ ಬಿಡುವಿರುತ್ತಿರಲಿಲ್ಲ. ಎಷ್ಟೋ ಸಾರಿ ಇವಳ ಬಿಡುವಿನ ದಿನ ನೋಡಿ ಹೋಗಿ ಮದುವೆ ದಿನ ನಿಶ್ಚಯಿಸಿದವರೂ ಇದ್ದಾರೆ. ಮನೆಯ ಹೊರಗೆ 'ಕಮಲಾಬಾಯಿ ಡಾನ್ಸರ್' ಎಂದು ಬೋರ್ಡ್ ಸಹ ಹಾಕಿದ್ದೆವು.

ಪ್ರೇಮಾಳ ಬೆಳೆಯುವ ವಯಸ್ಸು, ಆರೋಗ್ಯ, ದೇಹಸಿರಿ ಚೆನ್ನಾಗಿರಲೆಂದು ಬಾದಾಮಿ, ಕಾಜು ಎಲ್ಲವನ್ನು ತೇಯ್ದು ಅದರಲ್ಲಿ ಹಾಲನ್ನು ಕೂಡಿಸಿ ಅವಳಿಗೆ ಕುಡಿಸುತ್ತಿದ್ದೆ. ಒಂದು ಪ್ರೋಗ್ರಾಂ ಮುಗಿಸಿ ಬಂದಾಗ, ನೋಯುವ ಅವಳ ಕಾಲನ್ನು ಒತ್ತುವುದರಲ್ಲೇ ನಾನು ರಾತ್ರಿ ಕಳೆಯುತ್ತಿದ್ದೆ. ನಾವು ಹೀಗೆ ಗಳಿಸಿದ ಹಣದಿಂದಲೇ ಊರ ಕಡೆಗೆ ಎಲ್ಲವೂ ಚೆನ್ನಾಗಿ ಆಗ ತೊಡಗಿತು. ನಮ್ಮ ಎಲ್ಲ ತಂಗಿಯರ ಮದುವೆ ಮಾಡಿದೆವು. ತಮ್ಮನಿಗೆ ಗಿರಣಿ ಹಾಕಿಕೊಟ್ಟು ಉದ್ಯೋಗಕ್ಕೆ ಹಚ್ಚಿದ್ದೆವು. "ನಾವು ಮೈಮಾರಿ, ಕುಣಿದು ಕಷ್ಟದಿಂದ ದುಡಿದ ಹಣವನ್ನು, ನನ್ನ ತಮ್ಮ ಹೆಂಗಸರು, ಸರಾಯಿಗೆ ಹಾಳು ಮಾಡುತ್ತಿದ್ದ. ಕೊನೆಗೆ ಕ್ಯಾನ್ಸರ್ ಆಗಿ ಸತ್ತು ಹೋದ".

ನಾವು ಊರಲ್ಲಿ ೧'೫೫.೦೦೦ ಸಾವಿರ ರೂಪಾಯಿ ಕೊಟ್ಟು ಇಬ್ಬರ ಮಧ್ಯದಲ್ಲಿ ಭೂಮಿ ಕೊಂಡುಕೊಂಡೆವು. ಈ ಹೊತ್ತಿಗೆ ನನಗೆ ಇಬ್ಬರು ಗಂಡು ಮಕ್ಕಳು ಮತ್ತು ಪ್ರೇಮಾಳಿಗೆ ಒಂದು ಹೆಣ್ಣುಮಗು ಜನಿಸಿದ್ದವು. ಇಂತ ಕಷ್ಟದ ಜೀವನದ ನಡುವೆ, ಮದುವೆ ಸಮಾರಂಭಕ್ಕೆ ಹೋದಾಗ ಪ್ರೇಮಾಳಿಗೆ ಒಬ್ಬ ರಜಪೂತ ವ್ಯಕ್ತಿಯೊಡನೆ ಪ್ರೇಮವಾಯಿತು. ಆತನಿಗೆ ಪ್ರೇಮಾ ಹಾಡುವುದು, ಕುಣಿಯುವುದು, ಲೈಂಗಿಕ ಹಿಂಸೆ ಅನುಭವಿಸುವುದು ಇಷ್ಟವಾಗುತ್ತಿರಲಿಲ್ಲ. ಹಾಗಾಗಿ ಅವನು ಅವಳನ್ನು ಯಾರಿಗೂ ಗೊತ್ತಾಗದಂತೆ ಅಲ್ಲಿಂದ ಕರೆದುಕೊಂಡು ಸಾಂಗ್ಲಿಗೆ ಬಂದು ಬಿಟ್ಟ. ಅಲ್ಲಿ ತಮ್ಮ ವಿವಾಹ ನೋಂದಣಿ ಮಾಡಿಸಿಕೊಂಡು, ನಂತರ ನಮ್ಮ ಊರಲ್ಲಿ ಒಂದು ಬಾಡಿಗೆ ಮನೆ ಮಾಡಿ ಪ್ರೇಮಾಳೊಂದಿಗೆ ತನ್ನ ಸಂಸಾರ ಪ್ರಾರಂಭಿಸಿದ್ದ.

ಈ ಘಟನೆಯಿಂದ ನನಗೆ ತುಂಬಾ ಬೇಸರವಾಯಿತು. ಬಡತನವ ಮೆಟ್ಟಿ ನಿಲ್ಲುವ ಹೊತ್ತಿನಲ್ಲಿ ಪ್ರೇಮ ಈ ರೀತಿ ಮದುವೆ ಮಾಡಿಕೊಂಡು ಹೋದದ್ದು ನಮಗೆ ನಾವೇ ಮಾಡಿಕೊಂಡ ದೊಡ್ಡ ಮೋಸವೆನಿಸಿತ್ತು. ಅವಳು ನನ್ನ ಜೊತೆ ಇನ್ನೂ ಅಲ್ಲಿಯೇ ಇದ್ದಿದ್ದರೆ ಏನೆಲ್ಲಾ ಗಳಿಸಬಹುದಿತ್ತು. ನಾವು ಇರುವ ಬಂಗಲೆಯನ್ನೇ ೧.೨೫ ಲಕ್ಷ ರೂಪಾಯಿಗಳಿಗೆ ಮಾರಾಟ ಮಾಡಲು ತೆಗೆದಿದ್ದರು. ಅದನ್ನು ಕೊಂಡು ಕೊಳ್ಳಬೇಕೆಂದು ಅವರಿಗೆ ನಾನು ಮುಂಗಡ ಹಣವನ್ನು ಸಹ ಕೊಟ್ಟಿದ್ದೆ. ಅವರ

ಪ್ರೇಮಳ ಈ ನಡೆಯಿಂದ ಅದ್ಯಾವುದೂ ಫಲಿಸಲಿಲ್ಲ. ಅದಾದ ಒಂದೆರಡು ವರ್ಷದ ಮೇಲ್ ನಾವು ಅಲ್ಲಿಂದ  ಮರಳಿ ಊರಿಗೆ ಬಂದೆ.

**ಜೀತದಿಂದ ಹೊರಬಂದ ಸ್ಥಿತಿ**

ನನ್ನ ತಂಗಿ ರಜಪೂತನೊಂದಿಗೆ ವಿವಾಹವಾಗಿ ಬಂದ ನಂತರ ಒಂದು ದೊಡ್ಡ ಸಮಸ್ಯೆ ಎದುರಾಗಿತ್ತು. ನಾವು ಅಲಹಾಬಾದ್‌ನಲ್ಲಿ ತಮ್ಮ ಜಾತಿ 'ಕುರುಬ' ಎಂದು ಹೇಳಿಕೊಂಡಿದ್ದೆವು. (ಕುರುಬರು–ಗಳರಿಯಾ) ಉತ್ತರಪ್ರದೇಶದಲ್ಲಿ ಹರಿಜನ ಜಾತಿಯವರೆಂದರೆ ತುಂಬಾ ಕೀಳಾಮಟ್ಟದ್ದು. ಇಂದಿಗೂ ಸಹ ಅವರನ್ನು ತುಂಬಾ ಹೀನವಾಗಿ  ಕಾಣುತ್ತಾರೆ. ಹರಿಜನ ಹುಡುಗಿಯರು ತವಾಯಫ್• ಆಗಿ ಹಾಡು, ಕುಣಿತ ಮಾಡಿದರೆ ಯಾರೂ ನೋಡಲು ಬರುತ್ತಿರಲಿಲ್ಲ. ಹಾಗಾಗಿ ನಾವು ಕುರುಬರೆಂದು ಹೇಳಿಕೊಂಡಿದ್ದೆವು. ರಜಪೂತಸಿಂಗ್‌ನಿಗೆ ನಮ್ಮ ಜಾತಿ ಹರಿಜನವೆಂದು ಊರಿಗೆ ಬಂದ ಮೇಲೆ ಗೊತ್ತಾಗಿ, ಪ್ರೇಮಾಳೊಂದಿಗೆ ಬಹಳ ಜಗಳ ಮಾಡಿದ. ತಾನು ಮಾಡಿದ್ದ ಬಾಡಿಗೆ ಮನೆಯಲ್ಲಿ ನಮ್ಮನ್ನು ಸೇರಿಸಿಕೊಳ್ಳುತ್ತಿರಲಿಲ್ಲ. ನಮಗಾಗಿ ಒಂದು ತಂಬಿಗೆ ಲೋಟ ಬೇರೆಯೇ ಇಟ್ಟಿದ್ದ. ಆ ನಂತರ ಪ್ರೇಮಾಳಿಗೆ ಮತ್ತೊಂದು ಹೆಣ್ಣುಮಗು ಜನಿಸಿತು. ಅದಕ್ಕೆ ರಜಪೂತ ಸಿಂಗ್‌ನ ಹೆಸರನ್ನೇ ತಂದೆಯಾಗಿ ದಾಖಲಿಸಿದ್ದೇವೆ. ಆದರೆ ಜಾತಿ ಮಾತ್ರ ಹರಿಜನ ಎಂಬುದೇ ಆಗಿದೆ. ಪ್ರೇಮ ಮಗುವಿನ ಹೆಸರನ್ನು ಅವನ ಜಾತಿಗೆ ಬದಲಾಯಿಸದೇ ಅವನನ್ನೇ ತನ್ನ ಜಾತಿಗೆ ತಂದಿದ್ದಳು. ಇದು ಗೊತ್ತಾದ ಮೇಲೆಯೂ ಸಹ ಸಿಂಗ್ ತುಂಬಾ ಜಗಳ ಮಾಡಿದ್ದ. ಈ ಕುರಿತು ಶೈಲಾಳನ್ನು ಕೇಳಿದರೆ "ಏನು ಮಾಡ್ತೋದ್ರಿ, ಅವನ ಜಾತಿ ಹಚ್ಚಿಕೊಂಡ್ರ ಸರ್ಕಾರದಿಂದ ಏನೂ ಸೌಲಭ್ಯ ಸಿಗಂಗಿಲ್ಲ. ಅದಕ್ಕ ಅವನನ್ನೇ ನಮ್ಮ ಜಾತಿಗೆ ತಂದು ಬಿಟ್ಟೆವಿ" ಅನ್ನುತ್ತಾಳೆ.

ಸುಮಿತ್ರಾ ತನ್ನ ಮಾತುಗಳನ್ನು ಮುಂದುವರೆಸಿ, ನಾನು ಊರಿಗೆ ಬಂದ ಮೇಲೆ ನನ್ನ ಮಗನ ಜೊತೆಗೂಡಿ ಒಕ್ಕಲುತನ ಮಾಡುತ್ತಿದ್ದೇನೆ. ಕಬ್ಬು, ಗೋಧಿ, ಜೋಳ, ಗೋಂಜಾಳ, ಅರಿಶಿಣ ಬೆಳೆಯುತ್ತೇವೆ. ಹಿರಿಯ ಮಗ ಅತಿಯಾದ ಮದ್ಯಪಾನದಿಂದ ಸಾವನ್ನಪ್ಪಿದ್ದಾನೆ. ಪ್ರೇಮಾ ವಿಮೋಚನಾ ಸಂಸ್ಥೆಯ ಸದಸ್ಯಳಾಗಿದ್ದಳೆ. ಅವರ ಸಹಾಯದಿಂದಲೇ ಹಿರಿಯ ಮಗಳಿಗೆ ನರ್ಸಿಂಗ್ ತರಬೇತಿ ಕೊಡಿಸಿದ್ದಾಳೆ. ಕಿರಿಯ ಮಗಳನ್ನು ಇಂಜನೀಯರ್ ಮಾಡಿದ್ದಾಳೆ. ತಾನೂ ಸಹ ಗ್ರಾಮದ ಎಲ್ಲ ಕಾರ್ಯಚಟುವಟಿಕೆಗಳಲ್ಲಿ ಮುಂದಿದ್ದು ಗ್ರಾಮದ ರಾಜಕಾರಣದಲ್ಲಿ ಪಾಲ್ಗೊಂಡಿದ್ದಾಳೆ. ಹಾಗೆಯೇ ಒಂದು ಅವಧಿಗೆ ಪಂಚಾಯತಿ ಅಧ್ಯಕ್ಷಳೂ ಆಗಿ ಕಾರ್ಯನಿರ್ವಹಿಸಿದ್ದಾಳೆ. ಹಾಗೆಯೇ ರೈತರ ಸಹಕಾರಿ ಸಂಘದ ಸದಸ್ಯಳಾಗಿಯೂ ಕಾರ್ಯನಿರ್ವಹಿಸಿದ್ದಾಳೆ. ಸದ್ಯಕ್ಕೆ ವಿಮೋಚನಾ ಸಂಸ್ಥೆಯ ಸಹಾಯದಿಂದ ಒಂದು ಕಿರಾಣಿ ಅಂಗಡಿ ಇಟ್ಟುಕೊಂಡಿದ್ದಾಳೆ. ಅದನ್ನು ಬೃಹತ್ ಪ್ರಮಾಣದಲ್ಲಿ ಬೆಳೆಸಿದ್ದಾಳೆ. ಇಂದು ಅದರ ಅಂದಾಜು ವಹಿವಾಟು ಮೂರರಿಂದ ನಾಲ್ಕು ಲಕ್ಷ ಆಗಿರಬಹುದೇನೋ.

ಮಾತಿನ ಕೊನೆಯಲ್ಲಿ ಸುಮಿತ್ರ, "ಏನೋ ಬಡತನಕ್ಕಾಗಿ, ಊಟ–ಅರಿವೆ ಇರದಿದ್ದಕ, ಆಸರೀ ಅಂತ ಈ ದಾರೀಗೆ ಹೋಗಿದ್ವಿ ಅಲ್ಲಿ ಎಷ್ಟೊ ಗಳಿಸಿರಬಹುದು. ಆದ್ರ ಅದರಿಂದ ಸುಖ ಇಲ್ಲ. ಗೌರವ ಇಲ್ಲ. ಒಂದು ರೊಟ್ಟಿನ ಖಾರ ಹಚ್ಕೊಂಡು ತಿಂದು, ಗಂಡನ ಜೋಡಿ ಇದ್ರ ಅದರ ಸುಖಾನ ಬ್ಯಾರೆ. ಸಮಾಜದಾಗ ಮಂದಿ ಮಕ್ಕಳ ನಡುವೆ ಗೌರವ ಸಿಗತೈತಿ. ಇದು ದೇಹ ಸುಟ್ಟುಕೊಂಡು, ಮನಸ್ಸು ವಿಲವಿಲ

ಅನ್ನಿಸಿಕೊಂಡು, ಎಲ್ಲೋ ಕಾಣದ ಊರಲ್ಲಿ ಬದುಕು ಸವೆಸುವುದು ನೋವಿನ ಸ್ಥಿತಿ. ಗಳಿಸಿದ್ದ ರೊಕ್ಕದಾಗ ಒಂದು ಹತ್ತರ ನೋಟು ಮುರಿಸಲಿಕ್ಕೆ ನಂಗ ನೋವಾಗ್ತಿತ್ತು. ಹಂಗ ರೊಕ್ಕಾ ಕೂಡಿಟ್ಟು ಇವತ್ತು ಭೂಮಿ ಜೋಡಿ ಅದನಿ. ಕಿರಿಮಗ ದೇವರ ಪ್ರಸಾದ. ಕಬ್ಬಿಣದಂತಾ ಮಗ ಅದಾನ. ಅವಾ ನೆಲಕ್ಕೆ ಒದ್ರ ನೀರು ಬರ್ತೈತಿ. ಹಂಗದಾನ. ಹಗಲು-ರಾತ್ರಿ ದುಡೀತಾನ. ತಂಗಿಯರದೆಲ್ಲ ಮದುವಿ ಆಗೈತಿ, ಅಪ್ಪ ಅವ್ವ ಸುಖದಿಂದ ಸತ್ತಾರ. ಅಷ್ಟು ಸಾಕು. ಪ್ರೇಮ ಅಲ್ಲಿಂದ ಮರಳಿ ಬರದಿದ್ದರ, ಅಲ್ಲಿಯೇ ಮನೆ, ಬಂಗಲೆಗಳನ್ನು ಸ್ವಂತಕ್ಕೆ ಖರೀದಿಸಬಹುದಿತ್ತು" ಅನ್ನುತ್ತಾಳೆ.

ಹಾಗೇ ಮಾತನಾಡುತ್ತಾ ಕೊನೆಯಲ್ಲಿ ಶೈಲಾ "ದಿನಕ್ಕೆ ಸಾವಿರಗಟ್ಟಲೇ ಗಳಿಸುತ್ತಿದ್ವ್ಯಾ, ಆದ್ರ ನೆಮ್ಮದಿ ಇರಲಿಲ್ಲ. ಅದು ದುಃಖದ ದುಡ್ಡು, ಇವತ್ತು ದಿನಕ್ಕೆ ೧೦೦ ರೂ. ಗಳಿಸಿದರೂ ಇದರಾಗ ತೃಪ್ತಿ ಐತಿ. ಇದು ಸಂತೋಷದ ದುಡ್ಡು. ಇಲ್ಲಿ ಬೇಕಾದ ಹಾಂಗ ಕೆಲಸ ಮಾಡಬಹುದು. ಬ್ಯಾಸರ ಆದ್ರ ಅಂಗಡಿ ಮುಚ್ಚಿ ಮಲಗಬಹುದು. ಆದ್ರ ಅಲ್ಲಿ ಹಂಗಿರಲಿಲ್ಲ, ನಾವು ಬಂಧನದಲ್ಲಿಯೇ ಇದ್ದೆವು. ಮದುವೀ ಸಮಾರಂಭದಾಗ ಮೂರು ದಿನ ಅವರ ಆಳುಗಳೇ ಆಗಿರುತ್ತಿದ್ದೆವು. ಕುಂದ್ರು ಅಂದ್ರ ಕುಂದ್ರಬೇಕು, ಕುಣಿ ಅಂದ್ರ ಕುಣೀಬೇಕು. ಮನೆಯಲ್ಲಿ ನಡೆಯುವ ಡ್ಯಾನ್ಸ್ ನೋಡಲು ಬಂದವರು ಹೋಗುವ ತನಕ, ನಮ್ಮನ್ನು ಅವರ ಕಸ್ಪಡಿಯಲ್ಲಿಯೇ ಇಟ್ಟುಕೊಳ್ಳುತ್ತಿದ್ದರು. ಅವರು ಅಂದಿದ್ದನ್ನು ಅನ್ನಿಸಿಕೊಳ್ಳಬೇಕು. ಮೈಕೈ ಮುಟ್ಟುತ್ತಿದ್ದರೂ ಸಹಿಸಿಕೊಳ್ಳಬೇಕು. ಒಂದು ದಿನ ಒಂದು ತಾಸ್ ಬಂದ್ ಮಾಡುವಂತಿರಲಿಲ್ಲ. ನಿರಾಕರಣೆ ಮಾಡುವಂತಿರಲಿಲ್ಲ. ಒಂದು ವೇಳೆ, ಒಂದೇ ಒಂದು ದಿನ ಕೆಲಸ ಬಂದ್ ಮಾಡಿದರೂ ಅದನ್ನ ಸರಿ ಮಾಡಿಕೊಳ್ಳಲು ತುಂಬಾ ಕಷ್ಟವಾಗುತ್ತಿತ್ತು. ಗುಂಡಾ ರೌಡಿ ಜನರಿಗೆ ಹೆದರಬೇಕು. ಜೀವ ಕೈಯಲ್ಲಿಟ್ಟುಕೊಂಡು ಬದುಕಬೇಕು. ಅವರು ಏನೂ ಕೊಡದಿದ್ದರೂ ಅವರಿಗೆ ಸೆರಗ ಹಾಸಬೇಕು. ನನ್ನನ್ನು ಒಂದು ವಸ್ತುವಿನಂತೆ ನೋಡುತ್ತಿದ್ದರು. ತಮ್ಮ ತಮ್ಮಲ್ಲೇ ನನಗಾಗಿ ಜಗಳಾಡುತ್ತಿದ್ದರು. ಯಾರೊಬ್ಬರ ಜೊತೆಗೂ ಇರುವಂತೆ ಇರಲಿಲ್ಲ, ಜೀವಭಯ ಕಾಡುತ್ತಿತ್ತು"

*"ನಾವು ಮೈಮಾರಿ, ಕುಣಿದು ಕಷ್ಟದಿಂದ ದುಡಿದ ಹಣವನ್ನು. ನನ್ನ ತಮ್ಮ ಹೆಂಗಸರು. ಸರಾಯಿಗೆ ಹಾಳು ಮಾಡುತ್ತಿದ್ದ. ಕೊನೆಗೆ ಕ್ಯಾನ್ಸರ್ ಆಗಿ ಸತ್ತು ಹೋದ".* ಎಂದು ಕಣ್ಣುಗಳಲ್ಲಿ ನೀರು ತಂದು ನುಡಿಯುತ್ತಾಳೆ ಪ್ರೇಮಾ.

---

* ಉತ್ತರ ಪ್ರದೇಶದಲ್ಲಿ 'ತವಾಯಫ್' ಎಂಬ ಸಾಂಪ್ರದಾಯಿಕ ಆಚರಣೆ ಜಾರಿಯಲ್ಲಿದೆ. ತವಾಯಫ್ ಎಂದರೆ ನೃತ್ಯ ಮಾಡುವವಳು ಎಂದರ್ಥ. ಉತ್ತರ ಪ್ರದೇಶದ ಮದುವೆ ಸಮಾರಂಭಗಳಲ್ಲಿ ಅತ್ಯವಶ್ಯವಾಗಿರುವುದು ನೃತ್ಯಕೂಟ. ೩-೪ ದಿನಗಳ ಮದುವೆ ಕೂಟಗಳಲ್ಲಿ ೧ ಪೇಟಾ, ೧ ತಬಲಾ ಮತ್ತು ಒಂದು ಸಾರಂಗಿ ಈ ನಾಲ್ಕು ಜನರ ಮೇಳ ಅತ್ಯವಶ್ಯಕ. ವರ್ಷದ ನಾಲ್ಕು ತಿಂಗಳ ಮದುವೆ ಸಮಯದಲ್ಲಿ ಇವರಿಗೆ ಕೈತುಂಬಾ ಕೆಲಸವಿರುತ್ತದೆ. ಈ ಕೆಲಸ ಮಾಡಲು ಉತ್ತರ ಪ್ರದೇಶದಲ್ಲಿ ಒಂದು ಸಮುದಾಯವೇ ಇದೆ. ಅಂತ ಸಮುದಾಯಗಳಲ್ಲಿ ತಲೆತಲಾಂತರಗಳಿಂದ ಈ ಪದ್ಧತಿ ನಡೆದುಬಂದಿದೆ. ಹೆಣ್ಣುಮಕ್ಕಳಿಗೆ ಅತೀ ಚಿಕ್ಕವಯಸ್ಸಿನಿಂದಲೇ ನೃತ್ಯದ ತರಬೇತಿ ಕೊಡಿಸಲಾಗುತ್ತದೆ. ಇವರೂ ಸಹ ನೃತ್ಯದ ಜೊತೆಗೆ ತಮ್ಮ ಜೀವನ ಕೊನೆಗಾಣಿಸಬೇಕಾಗುತ್ತದೆ. ತವಾಯಫ್ ಸಂಪ್ರದಾಯದ ಪ್ರಕಾರ ಅವರು ಮದುವೆಯಾಗುವಂತಿಲ್ಲ.

ಸುಂದರಿ ಈಗ ೫೦ ವರ್ಷದ ಅನಕ್ಷರಸ್ಥ ಮಹಿಳೆ. ತನ್ನ ೧೨-೧೬ನೇ ವಯಸ್ಸಿನಲ್ಲಿಯೇ ಮುಂಬಯಿಯ ವೇಶ್ಯಾಗೃಹಕ್ಕೆ ಸಾಗಾಣೆಗೊಂಡು ೧೫ ವರ್ಷ ಅಲ್ಲಿ ಕಳೆದು, ತನ್ನ ೩೦ನೇ ವಯಸ್ಸಿನಲ್ಲಿ ತನ್ನ ಊರಿಗೆ ವಾಪಾಸ್ಸಾಗಿದ್ದಾಳೆ. ಎರಡು ಹೆಣ್ಣುಮಕ್ಕಳು ಇವೆ. ಅವರಿಗೆ ಮದುವೆ ಮಾಡಿದ್ದಾಳೆ. ನಾಲ್ಕು ಮೊಮ್ಮಕ್ಕಳು ಇವೆ. ಅನಕ್ಷರಸ್ಥಳಾದರೂ ಸಹ ಸುಂದರಿಗೆ ಉತ್ತಮವಾದ ವ್ಯವಹಾರ ಜ್ಞಾನವಿದೆ. ಮಾತನಾಡುವ ಕೌಶಲ್ಯವಿದೆ. ಅದಕ್ಕಾಗಿ ಸಂಸ್ಥೆಯೊಂದರಲ್ಲಿ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿದ್ದಾಳೆ. ತನ್ನ ಅನಾರೋಗ್ಯ ಮತ್ತು ಮನೆಯ ಖರ್ಚಿಗಾಗಿ ಸಾಲ ಮಾಡಿದ್ದಾಳೆ. ಈಗ ತೀರಿಸಲು ಸಾಧ್ಯವಾಗುತ್ತಿಲ್ಲ. "ಇದ್ನೆಲ್ಲ ನೋಡಿದ್ರ, ಮೊದಲ ಬಾಳ ಚುಲೋ ಇತ್ತು" ಎಂದು ಹಲಬುತ್ತಾಳೆ. "ಕುಡ್ಯಾಕ ರೊಕ್ಕ ಬೇಕು, ಮಟ್ಕಾ ನಂಬರ್ ಹಚ್ಚಾಕ ರೊಕ್ಕಾ ಬೇಕು. ಜೀವ್ನಾನ ಸಾಕಾಗಿ ಹೋಗ್ಯೆತಿ". ಎಂದು ನೀರು ತುಂಬಿದ ಕಣ್ಣಿನಿಂದ ನಗುತ್ತಾಳೆ ಸುಂದರಿ. ಇವಳನ್ನು ನಾವು ಭೇಟಿಯಾಗಲು ಹೋದಾಗ ಭಾರತ ಹುಣ್ಣಿಮೆಗಾಗಿ ದೇವರಿಗೆ ನೈವೇದ್ಯ ತಯಾರಿಸುತ್ತಿದ್ದಳು. "ಮೇಡಂ, ನಾನೇನು ದೇವದಾಸಿ ಅಲ್ಲ ಖರೆ, ಆದ್ರ ಅವರಿಗಿಂತ ಹೆಚ್ಚು ಎಲ್ಲವ್ವನ ಮ್ಯಾಲೆ ಭಕ್ತಿ ಇಟಕೊಂಡೇನಿ" ಅನ್ನುತ್ತಾ ನಮ್ಮ ಜೊತೆ ಮಾತಿಗೆ ಕುಳಿತಳು. ಹಾಗೆ ಅವಳು ಮಾತನಾಡುದ ವಿಷಯಗಳನ್ನು ಇಲ್ಲಿ ಅವಳ ಮಾತಿನಲ್ಲಿಯೇ ವಿವರಿಸಲಾಗಿದೆ.

**ಪೂರ್ವ**

*ನನ್ನ ತಂದೆ ಮುನ್ಸಿಪಾಲಿಟಿಯಲ್ಲಿ ಕೆಲಸ ಮಾಡುತ್ತಿದ್ದರು. ನನ್ನ ತಾಯಿ ಕೂಲಿ ಕೆಲಸ ಮತ್ತು ಮನೆಗೆಲಸ ಮಾಡಿಕೊಂಡಿರುತ್ತಿದ್ದಳು. ನನಗೆ ಇಬ್ಬರು ತಂಗಿಯಂದಿರು ಮತ್ತು ಮೂರು ಜನ ತಮ್ಮಂದಿರು. ಒಟ್ಟು ಆರು ಮಕ್ಕಳು. ಅವರಲ್ಲಿ ನಾನೇ ದೊಡ್ಡ ಮಗಳು. ಹಾಗೆ ನೋಡಿದರೆ ಕೇರಿಯಲ್ಲಿ ನಮ್ಮದು ಸುಖೀ ಕುಟುಂಬ. ಆದರೆ ನಮ್ಮ ಅಪ್ಪನಿಗೆ ಕುಡಿತ, ಜೂಜು ಚಟಗಳು ಇದ್ದವು. ಜೊತೆಗೆ ಮತ್ತೊಬ್ಬ ಮಹಿಳೆಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದ. ಹೀಗಾಗಿ ದುಡಿದ ಹಣ ಮನೆ ಸೇರುತ್ತಿರಲಿಲ್ಲ. ಅವ್ವನೇ ಕೂಲಿ-ನಾಲಿ ಮಾಡಿ ಹೊಟ್ಟೆ ತುಂಬಿಸುತ್ತಿದ್ದಳು. ನಮ್ಮ ಮನೆಯ ಹತ್ತಿರದಲ್ಲೇ ಇರುವ ಸಂಬಂಧಿಕರ ಹುಡುಗನೊಬ್ಬನ ಜೊತೆ ನನ್ನ ಮದುವೆ ಮಾಡಬೇಕು ಎಂದು ಮನೆಯವರು ಮಾತನಾಡುತ್ತಿದ್ದರು. ಅವನಿಗೂ ನಾನು ಅಂದರೆ ಇಷ್ಟ. ಆದರೆ ಅದೇನೋ ಸಮಸ್ಯೆಯಾಗಿ ಆತ ಜೈಲು ಪಾಲಾದ. ಆತ ಜೈಲಿಗೆ ಹೋದ ಮೇಲೂ ನಾನು ಅವರ ಮನೆಯಿಂದ ಊಟಕ್ಕೆ ತೆಗೆದುಕೊಂಡು ಹೋಗಿ ಜೈಲಿನಲ್ಲಿದ್ದ ಆತನಿಗೆ ಕೊಟ್ಟು ಬರುತ್ತಿದ್ದೆ. ಆದರೆ ನನ್ನ ಮನೆಯಲ್ಲಿ ಜೈಲಿಗೆ ಹೋದವನ ಕಥೆ ಏನು? ಬಿಡುತ್ತಾರೋ ಇಲ್ಲವೋ ಎಂದುಕೊಂಡು ಪಕ್ಕದ ಹಳ್ಳಿಯ ವ್ಯಕ್ತಿಯೊಂದಿಗೆ. ನಾನು ೧೨ ವರ್ಷದವಳಿದ್ದಾಗ ನನ್ನ ಮದುವೆ ಮಾಡಿದರು.*

*ಮದುವೆ ದಿನದ ಹೊತ್ತಿಗೆ ಜೈಲು ಪಾಲಾಗಿದ್ದ ನನ್ನ ಸಂಬಂಧಿಕರ ಹುಡುಗ ಬಿಡುಗಡೆಗೊಂಡು ಬಂದಿದ್ದ. ನನ್ನ ಮದುವೆ ನಿಬ್ಬಣದ ಮುಂದೆಲ್ಲ ಬಂದು ಮದುವೆಗೂ ಅಡೆತಡೆಯನ್ನು ಒಡ್ಡಿದ್ದ. ಆದರೆ ನನ್ನ ಮದುವೆ ಆಯಿತು. ನಾನು ಗಂಡನ ಮನೆಗೂ ಹೋಗಿದ್ದೆ. ಆದರೆ ನನ್ನನ್ನು ಮದುವೆ ಯಾಗಬೇಕಿದ್ದ ಸಂಬಂಧಿಕರ ಹುಡುಗ. ಎಷ್ಟೋ ಸಾರಿ ನನ್ನ ಗಂಡನ ಮನೆಯ ಹತ್ತಿರವೂ ಬಂದು ನಿಲ್ಲುತ್ತಿದ್ದ. ಆದರೆ ನಾನು ಇದ್ಯಾವುದಕ್ಕೂ ತಲೆಕೆಡಿಸಿಕೊಳ್ಳಲಿಲ್ಲ. ಚಿಕ್ಕವಳಾಗಿದ್ದ ನನಗೆ ಗಂಡ, ಗಂಡನ*

ಮನೆ ಅಂದರೆ ಏನೆಂದು ತಿಳಿದಿರಲಿಲ್ಲ. ನನ್ನ ಗಂಡ ನನಗಿಂತ ೧೫-೨೦ ವರ್ಷ ದೊಡ್ಡವನಿದ್ದ. ಅವನು ತನಗಾಗಿ ಮಹಾರಾಷ್ಟ್ರ ಮೂಲದ ಲಿಂಗಾಯತ ವಿಧವಾ ಹೆಣ್ಣುಮಗಳನ್ನು ಮನೆಯಲ್ಲಿ ತಂದಿಟ್ಟುಕೊಂಡಿದ್ದ. ನಾನು ಅಡುಗೆ ಮಾಡುವುದು, ಪಾತ್ರೆ ತೊಳೆಯುವುದು, ಬಟ್ಟೆ ತೊಳೆಯುವುದು ಹೀಗೆ ಮನೆಯ ಕೆಲಸಗಳನ್ನು ಮಾಡಿಕೊಂಡಿರಬೇಕಿತ್ತು. ನನ್ನ ಗಂಡ ಆ ಹೆಂಗಸಿನೊಂದಿಗೆ ಮಜವಾಗಿರುತ್ತಿದ್ದ. ಆದರೆ ಮೇಲಿಂದ ಮೇಲೆ ನನ್ನನ್ನು ಹೊಡೆಯುವುದು ಬೈಯುವುದು ಮಾಡುತ್ತಿದ್ದ. ನನ್ನ ಮೇಲೆ ಸಂಶಯ ಮಾಡುತ್ತಿದ್ದ. ನಾನು ಮದುವೆಯಾಗಬೇಕಿದ್ದ ನಮ್ಮ ಸಂಬಂಧಿ ವ್ಯಕ್ತಿಯೊಂದಿಗೆ ನಾನು ಸಂಬಂಧ ಹೊಂದಿದ್ದೇನೆಂದು ಸಂಶಯ ಪಟ್ಟು ಹೊಡೆಯುತ್ತಿದ್ದ. ಚಿಕ್ಕವಳಾದ ನನಗೆ ಇದು ಹಿಂಸೆಯಾಗಿತ್ತು. ದಿನವೂ ನೋವು ಬೈಗುಳ ತಿಂದು ರೋಸಿ ಹೋಗಿತ್ತು. ನಾನು ಒಂದು ದಿನ ನನ್ನ ಪಕ್ಕದ ಮನೆಯವರಿಗೆ ಹೇಳಿ ನನ್ನ ಅಪ್ಪನನ್ನು ಕರೆಯಿಸಿಕೊಂಡೆ. ನನ್ನ ಅಪ್ಪನಿಗೆ ನನ್ನ ಸ್ಥಿತಿ ನೋಡಿ, ನಾನು ಅಲ್ಲಿ ಚೆನ್ನಾಗಿಲ್ಲವೆಂದು ಅರಿವಾಯಿತು. ನನ್ನ ಗಂಡನಿಗೆ ಎರಡು ದಿನ ಊರಿಗೆ ಕರೆದುಕೊಂಡು ಹೋಗಿ ಬರುತ್ತೇನೆಂದು, ನನ್ನನ್ನು ಕರೆದುಕೊಂಡು ಬಂದವನು ತಿರುಗಿ ಗಂಡನ ಮನೆಗೆ ಕಳಿಸಲೇ ಇಲ್ಲ.

ನಾನು ತವರಿಗೆ ಬಂದ ನಂತರ ನನ್ನನ್ನು ಪ್ರೀತಿಸಿ ಹಿಂದೆ ಬಿದ್ದಿದ್ದ ಯುವಕನ ಹಿಂದೆ ನಾನೂ ಹೋಗತೊಡಗಿದೆ. ಆತನೊಂದಿಗೆ ನನ್ನ ದೈಹಿಕ ಸಂಬಂಧವೂ ಏರ್ಪಟ್ಟಿತು. ಅವನೊಂದಿಗೆ ಮತ್ತೆ ಮದುವೆ ಪ್ರಸ್ತಾಪ ಬಂದಾಗ ಅವನ ಮನೆಯವರು, ಇವಳಿಗೆ ಈಗಾಗಲೇ ಮದುವೆಯಾಗಿದೆ. ಗಂಡನನ್ನು ಬಿಟ್ಟು ಬಂದವಳು ಎಂದು ನನ್ನನ್ನು ಒಪ್ಪಿಕೊಳ್ಳಲಿಲ್ಲ. ಹೀಗಾಗಿ ಆತನೂ ದೂರವಾದ. ಇಷ್ಟೊತ್ತಿಗಾಗಲೇ ನನಗೆ ೧೩ ಮುಗಿದು ೧೪ನೇ ವಯಸ್ಸು ಪ್ರಾರಂಭವಾಗಿತ್ತು. ನನ್ನ ಮನೆಯಲ್ಲಿ ಎಲ್ಲರೂ ಅಸಮಾಧಾನ ತೋರಿಸಲಾರಂಭಿಸಿದ್ದರು. ನಾನು ಅಂದರೆ ಅಷ್ಟಕ್ಕಷ್ಟೆ ಅನ್ನುವಂತಾಗಿತ್ತು. ಮನೆಯಲ್ಲಿ ಬಡತನ ಬೇರೆ. ನನ್ನ ಗೆಳತಿಯ ಅಕ್ಕ ಮುಂಬಯಿಯಲ್ಲಿ ಇದ್ದಳು. ನನ್ನ ತಾಯಿ ಇವಳು ಊರಲ್ಲಿಯೇ ಇದ್ದರೆ, ಏನೂ ಉಪಯೋಗವಿಲ್ಲ ಎಂದು, ನನ್ನ ಗೆಳತಿಯ ಅಕ್ಕನ ಜೊತೆ ನನ್ನನ್ನೂ ಮುಂಬಯಿಗೆ ದಂಧೆ ಮಾಡಲು ಕಳಿಸಿದ್ದಳು.

**ಜೀತದ ಸ್ಥಿತಿ**

ಮುಂಬಯಿಯಲ್ಲಿ ಫಾರಸ್ ರೋಡಿನ ಶಿವುಬಾಯಿಯ ವೇಶ್ಯಾಗೃಹವೆಂದರೆ ಪ್ರಖ್ಯಾತವಾದುದಾಗಿತ್ತು. ತುಂಬಾ ದೊಡ್ಡ ಮಟ್ಟದ ದಂಧೆಯು ಅಲ್ಲಿ ನಡೆಯುತ್ತಿತ್ತು. ಅತೀ ಚಿಕ್ಕ ವಯಸ್ಸಿನ ಹುಡುಗಿಯರಿರುವ ದಂಧೆಯ ಮನೆ ಅದಾಗಿತ್ತು. ಮುಂಬಯಿಗೆ ಕರೆದು ತಂದಿದ್ದ ನನ್ನ ಗೆಳತಿಯ ಅಕ್ಕ ಅದೇ ಮನೆಯಲ್ಲಿ ನನ್ನನ್ನು ಇಟ್ಟು ಹೋಗಿದ್ದಳು. ೧೧-೧೨ರ ವಯಸ್ಸಿಗೆ ಮದುವೆಯಾಗಿ, ಗಂಡ ಬಿಟ್ಟು, ಮತ್ತೊಬ್ಬನೊಡನೆ ಲೈಂಗಿಕ ಸಂಬಂಧ ಹೊಂದಿ, ಮನೆಯವರ ತಿರಸ್ಕಾರಕ್ಕೆ ಒಳಗಾದ, ನನ್ನನ್ನು ತಾಯಿಯೇ ದಂಧೆಯ ಮನೆಗೆ ಕಳಿಸಿದ್ದಳು. ಆದ್ದರಿಂದ ನನಗೆ ಅಲ್ಲಿ ಅಂಜಿಕೆ ಇರಲಿಲ್ಲ. ಬದಲಿಗೆ ಹಣ ಗಳಿಸಬಹುದೆಂಬ ಖುಷಿ ಇತ್ತು. ನಾನು ಇದ್ದ ದಂಧೆಯ ಮನೆಯು ದೊಡ್ಡ ಬಂಗಲೆಯಾಗಿತ್ತು. ಅಲ್ಲಿ ಎಪ್ಪತ್ತು ಹುಡುಗಿಯರಿದ್ದರು. ಅಲ್ಲಿ ನಾನೇ ಚಿಕ್ಕವಳೆಂದರೆ ನನಗಿಂತಲೂ ಚಿಕ್ಕ ಹುಡುಗಿಯರಿದ್ದರು. ಆ ದಂಧೆಯ ಮನೆಯಲ್ಲಿ ೨೦-೨೧ ವಯಸ್ಸಿನ ಹುಡುಗಿಯರೇ ದೊಡ್ಡವರು. ಅದಕ್ಕಿಂತ ದೊಡ್ಡವರಿರಲಿಲ್ಲ. ನನಗೆ ಊರಲ್ಲಿದ್ದಾಗ ಕಷ್ಟ ಅನುಭವಿಸಿ ಸಾಕಾಗಿ ಹೋಗಿತ್ತು. ಆದ್ದರಿಂದ ಅಲ್ಲಿಯ ಜೀವನ ನೆಮ್ಮದಿ

ನೀಡಿತ್ತು. ಐದು ಜನ ಹುಡುಗಿಯರು ಒಂದು ರೂಮಿನಲ್ಲಿ ಇರುತ್ತಿದ್ದೆವು. ರಾತ್ರಿ ೧೦-೦೦ ರಿಂದ ಬೆಳಗಿನ ಜಾವ ೩-೦೦ರವರೆಗೆ ದಂಧೆಯು ನಡೆಯುತ್ತಿತ್ತು.

ನಾನು ಅಲ್ಲಿಗೆ ಹೋದ ಆರು ತಿಂಗಳಲ್ಲಿ ಎಲ್ಲ ಖರ್ಚು ಕಳೆದು ೪೦ ಸಾವಿರ ರೂಪಾಯಿ ಗಳಿಸಿದ್ದೆ. ದುರಂತವೆಂದರೆ ನಾನು ಊರಿನಿಂದ ಬರುವಾಗ, ನನ್ನ ಸಂಬಂಧಿ ಗೆಳೆಯನ ಸಹವಾಸದಿಂದ ಗರ್ಭಿಣಿಯಾಗಿದ್ದೆ. ಅದು ಗರ್ಭ ನಿಂತಿದ್ದು ನನಗೆ ಗೊತ್ತೇ ಆಗಿರಲಿಲ್ಲ. ಹೊಟ್ಟೆಯಲ್ಲಿ ಮಗುವನ್ನು ಇಟ್ಟುಕೊಂಡೇ ಆರು ತಿಂಗಳು ದಂಧೆ ಮಾಡಿದ್ದೆ. ನಂತರ ಹೆರಿಗೆಗಾಗಿ ಊರಿಗೆ ಹೋಗಿದ್ದೆ. ಮಗಳು ಹುಟ್ಟಿದ ನಂತರ ಮೂರು ತಿಂಗಳು ಕೂಸಿನ ಜೊತೆಗಿದ್ದು, ನಂತರ ಮರಳಿ ಮುಂಬಯಿಗೆ ಬಂದು ಅದೇ ಶಿವುಬಾಯಿ ಬಂಗ್ಲೆಯಲ್ಲಿ ೪-೫ ವರ್ಷ ದಂಧೆ ಮಾಡಿದ್ದೆ. ಮತ್ತೆ ನಾನು ಎರಡನೇಯ ಸಾರಿ ಗರ್ಭಿಣಿ ಆದಾಗ ಹೆರಿಗೆಗಾಗಿ ಊರಿಗೆ ಬಂದು, ಬಾಣಂತನ ಮುಗಿಸಿಕೊಂಡು, ಮತ್ತೆ ದಂಧೆಗಾಗಿ ಮುಂಬಯಿಗೆ ಹೋಗಬೇಕೆನ್ನುವ ಹೊತ್ತಿಗೆ, ಶಿವುಬಾಯಿ ಬಂಗ್ಲೆಯ ಮೇಲೆ ಪೊಲೀಸ್ ರೇಡ್ ಆಗಿ ಅದು ಬಂದ್ ಆಗಿತ್ತು. ಹಾಗಾಗಿ ಕೂಸನ್ನು ತಂದೆ ತಾಯಿಯ ಹತ್ತಿರ ಬಿಟ್ಟು ನಾನು ಪೂನಾದ ಬುಧವಾರ ಪೇಟೆಗೆ ಹೋಗಿದ್ದೆ. ಮುಂಬಯಿಯ ಜೀವನಕ್ಕೂ ಪುಣೆಯ ಜೀವನಕ್ಕೂ ತುಂಬಾನೇ ವ್ಯತ್ಯಾಸವಿತ್ತು. ಮುಂಬಯಿಯಲ್ಲಿ ಇದ್ದಷ್ಟು ಆದಾಯ ಇಲ್ಲಿರಲಿಲ್ಲ. ಅಲ್ಲಿ ೪-೫ ವರ್ಷ ಇದ್ದು ಮತ್ತೆ ಊರಿಗೆ ವಾಪಸ್ಸಾಗಿದ್ದೆ.

ಆದರೆ ಊರಲ್ಲಿ ಯಾವುದೇ ಕೆಲಸ, ಗಳಿಕೆ ಇರದೆ ಮನೆಯಲ್ಲಿ ಹಾಗೇ ಇರುವುದು ನನ್ನ ತಮ್ಮಂದಿರಿಗೆ ಮತ್ತು ಸ್ವತಃ ನನ್ನ ತಾಯಿಗೆ ಹಿಡಿಸುವುದಿಲ್ಲ. ನಮ್ಮಗಳ ನಡುವೆ ಜಗಳಗಳು ಪ್ರಾರಂಭ ವಾಗತೊಡಗಿದ್ದವು. ಹಾಗಾಗಿ ನಾನು ಮತ್ತೆ ಮುಂಬಯಿಯ ಬೀವಂಡಿಯ ದಾರಿ ಹಿಡಿದಿದ್ದೆ. ಅಲ್ಲಿ ನನ್ನ ಪರಿಚಯದವಳ ಮನೆಯಲ್ಲಿ ಉಳಿದುಕೊಂಡಿದ್ದೆ. ಬೀವಂಡಿಯಲ್ಲಿ ನನಗೆ ತುಂಬಾ ಬೇಸರವಾಗುತ್ತಿತ್ತು. ಗಿರಾಕಿಗಳೆ ಬರುತ್ತಿರಲಿಲ್ಲ. ದಂಧೆಗಾಗಿ ಹೊರಗೆ ಕುಳಿತರೆ, "ಲಡಕಿ ಹೈ ಕ್ಯಾ? ಲಡಿಕಿ ಚಾಹಿಯೆ ಥಾ" ಎಂದು ನನ್ನನ್ನೇ ಕೇಳುತ್ತಿದ್ದರು. ಇದರಿಂದ ನನಗೆ ತುಂಬಾ ಸಿಟ್ಟು ಬರುತ್ತಿತ್ತು. ನಾನೇ ಗಿರಾಕಿಗಾಗಿ ಕಾದು ಕುಳಿತರೆ, ನನ್ನನ್ನು ಬಿಟ್ಟು ಬೇರೆ ಹುಡುಗಿಯರನ್ನು ಕೇಳುತ್ತಿದ್ದರು. ಆಗ ನನ್ನ ವಯಸ್ಸು ೨೭-೨೮ ಆಗಿತ್ತು. ಆ ವಯಸ್ಸಿಗಾಗಲೇ ನನ್ನ ದೇಹದ ಆಕರ್ಷಣೆಯೂ ಕಡಿಮೆ ಆಗಿತ್ತು ಅನ್ನಿಸುತ್ತದೆ. ಇದರಿಂದಾಗಿ ತಿರುಗಿ ಊರಿಗೆ ಬಂದು ಬಿಡಬೇಕೆಂದುಕೊಂಡಿದ್ದೆ.

ಇದೇ ಸಂದರ್ಭದಲ್ಲಿ ನಾನು ಇದ್ದ ಮನೆಯ ಎದುರಿಗೆ ಇದ್ದ ಒಬ್ಬಳು ಹೆಣ್ಣು ಮಗಳೊಂದಿಗೆ ನನ್ನ ಸ್ನೇಹ ಬೆಳೆದಿತ್ತು. ನನ್ನ ನೋವು, ಗಿರಾಕಿಗಳು ಇಲ್ಲದೇ ಇರುವುದು ಎಲ್ಲವನ್ನೂ ನಾನು ಅವಳ ಹತ್ತಿರ ಹೇಳಿಕೊಂಡಿದ್ದೆ. ಅವಳು ಮದುವೆಯಾದ ಹೆಣ್ಣು ಮಗಳಿದ್ದರೂ ಸಹ ಮನೆಯಿಂದ ಹೊರಗೆ ಲಾಡ್ಜಗಳಲ್ಲಿ ಲೈಂಗಿಕ ದಂಧೆ ಮಾಡುತ್ತಿದ್ದಳು. ಬೆಳಗಿನ ಹೊತ್ತು ಲಾಡ್ಜಗಳಿಗೆ ಹೋಗಿ, ದಿನವೆಲ್ಲ ದಂಧೆ ಮಾಡಿ ರಾತ್ರಿ ಮನೆಯಲ್ಲಿ ಇರುತ್ತಿದ್ದಳು. ಬಹಳ ಜನಕ್ಕೆ ಅವಳು ಆ ಕೆಲಸ ಮಾಡುತ್ತಾಳೆಂದು ಗೊತ್ತೇ ಇರಲಿಲ್ಲ. ಅವಳು ನನ್ನನ್ನು ತನ್ನ ಜೊತೆಗೆ ಕರೆದುಕೊಂಡು ಹೋಗಲು ಒಪ್ಪಿಕೊಂಡಳು. ನನ್ನನ್ನು ಇಟ್ಟುಕೊಂಡಿದ್ದ ಘರವಾಲಿ ತನಗೂ ಗಳಿಸಿದ್ದರಲ್ಲಿ ಅರ್ಧ ಕೊಡಬೇಕೆಂಬ ಕರಾರಿನ ಮೇಲೆ ನನ್ನನ್ನು ಕಳಿಸಲು ಒಪ್ಪಿಕೊಂಡಳು. ನನಗೆ ಅಲ್ಲಿ ತುಂಬಾ ಚೆನ್ನಾಗಿ ಆದಾಯ ಬರತೊಡಗಿತು. ಲಾಡ್ಜ

*ಮಾಲೀಕ ಕೊಡುವ ಹಣವಲ್ಲದೇ, ಗಿರಾಕಿಗಳೂ ಸಹ ಟಿಪ್ಸ್ ಎಂದು ಹಣ ಕೊಡುತ್ತಿದ್ದರು. ಅಲ್ಲಿಯೇ ಊಟದ ವ್ಯವಸ್ಥೆ ಆಗುತ್ತಿತ್ತು. ಗಿರಾಕಿಗಳಿಗಾಗಿ ಹುಡುಕಾಟವಿರಲಿಲ್ಲ. ಅಲ್ಲಿಯೇ ಗಿರಾಕಿಗಳು ಬರುತ್ತಿದ್ದರು. ಒಂದು ಗಿರಾಕಿಗೆ ಅರ್ಧ ತಾಸಿಗೆ ೨೫ ರೂಪಾಯಿ ಸಿಗುತ್ತಿತ್ತು. ಒಂದು ವೇಳೆ ರಾತ್ರಿ ಕಳೆಯುವ ಅವಕಾಶ ಸಿಕ್ಕರೆ ೧೦೦೦ ದಿಂದ ೧೫೦೦ ರೂಪಾಯಿ ಸಿಗುತ್ತಿತ್ತು. ಹೀಗಾಗಿ ೪ ತಿಂಗಳು ಕೆಲಸ ಮಾಡಿ ೫೦ ಸಾವಿರ ರೂಪಾಯಿ ಗಳಿಸಿದ್ದೆ. ಈ ಎಲ್ಲ ಆದಾಯವನ್ನು ಇವಳಿಗೆ ಆಶ್ರಯ ಕೊಟ್ಟಿದ್ದ ಬೀವಂಡಿಯ ಘರವಾಲಿ ಗಮನಿಸಿ, ತನಗೆ ಹೆಚ್ಚು ಹೆಚ್ಚು ಹಣ ಕೊಡುವಂತೆ ಪೀಡಿಸತೊಡಗಿದ್ದಳು. ಹಾಗಾಗಿ ನಾನು ಒಂದು ದಿನ ಅವಳನ್ನು ಬಿಟ್ಟು ಬೇರೆ ರೂಮಿನ ವ್ಯವಸ್ಥೆ ಮಾಡಿಕೊಂಡಿದ್ದೆ. ಆದರೆ ಮುಂದೆ ಕೆಲವೇ ದಿನಗಳಲ್ಲಿ ಆ ಲಾಡ್ಜ್‌ಗೆ ರೇಡ್ ಬಿದ್ದಿದ್ದರಿಂದ ಆ ಕೆಲಸ ನಿಂತು ಹೋಯಿತು. ಹೀಗಾಗಿ ನಾನು ಮತ್ತೆ ಊರಿಗೆ ವಾಪಸ್ಸಾಗಲೇ ಬೇಕಾಯಿತು. ಹೀಗೆ ನನ್ನ ೧೫ ವರ್ಷಗಳ ಮುಂಬಯಿ, ಪುಣೆ, ಬೀವಂಡಿಗಳ ಜೀವನಕ್ಕೆ ತೆರೆ ಎಳೆದಿತ್ತು.*

**ಜೀತದಿಂದ ಹೊರಬಂದ ಸ್ಥಿತಿ**

*ಮುಂಬಯಿ, ಪೂಣೆ, ಬೀವಂಡಿಗಳಲ್ಲಿ ೧೫ ವರ್ಷ ಲೈಂಗಿಕ ದಂಧೆ ಮಾಡಿ ಬಂದ ನನಗೆ ಎಲ್ಲ ರೀತಿಯ ಚಟಗಳೂ ಅಂಟಿಕೊಂಡಿದ್ದವು. ದಿನವೂ ಸಾರಾಯಿ ಬೇಕಾಗುತ್ತಿತ್ತು. ತಂಬಾಕಂತೂ ದಿನ ಪೂರ್ತಿ ಬೇಕಾಗುತ್ತಿತ್ತು. ಇದಲ್ಲದೇ ಮಟಕಾ ಆಡುವ ಹವ್ಯಾಸವಿತ್ತು. ಊರಲ್ಲಿ ಇವೆಲ್ಲ ನಡೆಯುವುದು ದುಸ್ತರವಾಗತೊಡಗಿತು. ಹಾಗಾಗಿ ನಾನು ಇದ್ದ ಊರಲ್ಲಿಯೇ ದಂಧೆ ನಡೆಯಬಹುದೇನೋ ಎಂದು ಪ್ರಯತ್ನಿಸಿ, ಜಮಖಂಡಿಯ ಲಾಡ್ಜ್ ಜೊತೆ ಸಂಪರ್ಕ ಏರ್ಪಟ್ಟು ಅಲ್ಲಿಗೆ ಹೋಗುವುದು ಬರುವುದು ಮಾಡತೊಡಗಿದೆ. ಆದರೆ ಅದು ಅಷ್ಟು ಚೆನ್ನಾಗಿ ಆಗಲಿಲ್ಲ. ಊರಿನಲ್ಲಿಯೇ ಬರುವ ಒಬ್ಬೊಬ್ಬರೊಂದಿಗೆ ಇರಲೇಬೇಕಾಗುತ್ತಿತ್ತು. ಬಹಳ ದಿನಗಳಿಂದ ಇಂದಿಗೂ ಒಬ್ಬ ಪಾರ್ಟನರ್ ಜೊತೆಗಿದ್ದಾನೆ. ಅವನ ಸಹಾಯದಿಂದ ಜೀವನ ನಡೆಯುತ್ತಿದೆ.*

*ಮೊದಲಿನ ನನ್ನ ಜೀವನಕ್ಕೂ ಇಂದಿನ ಜೀವನಕ್ಕೂ ತುಂಬಾ ವ್ಯತ್ಯಾಸವಿದೆ. ಅಲ್ಲಿ ನೋವು. ಚಿಂತೆ. ಇರಲಿಲ್ಲ. ಆದರೆ ಇಲ್ಲಿ ಇವುಗಳನ್ನು ಬಿಟ್ಟರೆ ಬೇರೆ ಏನೂ ಇಲ್ಲ. ಇಟ್ಟುಕೊಂಡವನಿಗೆ ಸಾಲ ಮಾಡಿ ದುಡ್ಡು ಕೊಡಬೇಕು. ಆತ ಸರಿಯಾಗಿ ಮರಳಿಸದೇ ಹೋದಾಗ ತುಂಬಾ ಪರದಾಡಬೇಕು. ಸಾಲ ಕೊಟ್ಟವರ ಹತ್ತಿರ ಏನೆಲ್ಲ ಅನ್ನಿಸಿಕೊಳ್ಳಬೇಕು.*

## ಪ್ರಕರಣ–೧೪: ಸರಸೂ ಪ್ರಕರಣ

**ಸರಸು** ಎಪ್ಪತ್ತು ವರ್ಷ ದಾಟಿರುವ ಅನಕ್ಷರಸ್ಥ ಹೆಣ್ಣುಮಗಳು. ಇವಳು ಅಥಣಿ ತಾಲೂಕಿನವಳಾಗಿದ್ದಾಳೆ. ತನ್ನ ಅಪ್ರಾಪ್ತ ವಯಸ್ಸಿನಲ್ಲಿ ಮುಂಬಯಿಯ ಕಾಮಾಟಿಪುರಕ್ಕೆ ಸಾಗಾಣಿಕೆಗೊಂಡು, ತನ್ನ ಜೀವಿತದ ಬಹಳಷ್ಟು ಕಾಲ ಅಲ್ಲಿಯೆ ಇದ್ದು, ನಂತರ ಊರಿಗೆ ವಾಪಸ್ಸಾಗಿದ್ದಳು. ಅವಳ ಪ್ರಕರಣವನ್ನು ಅರ್ಥಮಾಡಿಕೊಳ್ಳುವ ಉದ್ದೇಶದಿಂದ ಅವಳ ಮನೆಗೆ ಹೋದಾಗ, ಸರಸು ಮನೆಯಲ್ಲಿಯೆ ಇದ್ದಳು. ತುಂಬ ಪ್ರೀತಿಯಿಂದಲೇ ನಮ್ಮನ್ನು ಸ್ವಾಗತಿಸಿಕೊಂಡ ಸರಸೂ, ತನ್ನ ಜೀವನ ವೃತ್ತಾಂತವನ್ನೆಲ್ಲ ನಮ್ಮೊಡನೆ ಹಂಚಿಕೊಂಡಳು. ಅವಳು ನಮ್ಮೊಡನೆ ಹಂಚಿಕೊಂಡ ವಿಷಯವನ್ನು ಅವಳದೇ ದಾಟಿಯಲ್ಲಿ ಇಲ್ಲಿ ವಿವರಿಸಲಾಗಿದೆ.

**ಪೂರ್ವಸ್ಥಿತಿ**

*ನನಗೆ ಚಿಕ್ಕವಳಿರುವಾಗ ಶಾಲೆಗೆ ಹೋಗಬೇಕು, ಅಕ್ಷರ ಕಲಿಯಬೇಕು ಎಂಬ ಕಲ್ಪನೆಯೇ ಇರಲಿಲ್ಲ. ಆಗ ನಮ್ಮ ಊರಿನಲ್ಲಿ ಒಂದು ಚಿಕ್ಕ ಮನೆಯಲ್ಲಿ ಶಾಲೆ ಇತ್ತು. ಅಲ್ಲಿ ಗಂಡು ಮಕ್ಕಳಿಗಷ್ಟೇ ಶಾಲೆ ಕಲಿಸುತ್ತಿದ್ದರು. ಅಂತಹ ದಿನಗಳಲ್ಲಿ ಕೆಳಜಾತಿಯವರಾದ, ಅದರಲ್ಲೂ ಹೆಣ್ಣುಮಕ್ಕಳಾದ ನಮಗೆ ಶಾಲೆ ಎಂಬುದೇ ಇರಲಿಲ್ಲ. ನಮ್ಮ ತಂದೆ ಗಿಡಗಳನ್ನು ಕಡಿದು ಕಟ್ಟಿಗೆ ಮಾಡಿ ಮಾರುವ ಕೆಲಸ ಮಾಡುತ್ತಿದ್ದ. ಆಗ ಅವರಿಗೆ ದಿನಕ್ಕೆ ೫ ರೂಪಾಯಿ ಸಿಗುತ್ತಿತ್ತು. ಅಷ್ಟರಲ್ಲಿಯೇ ನಮ್ಮ ಜೀವನ ನಡೆಯಬೇಕಿತ್ತು. ಬರುವ ಆದಾಯ ಎಲ್ಲರ ಹೊಟ್ಟೆ ತುಂಬಿಸುತ್ತಿರಲಿಲ್ಲ. ನಮ್ಮ ಹಿರಿಯ ಅಕ್ಕನನ್ನು ಮದುವೆ ಮಾಡಿಕೊಟ್ಟಿದ್ದರು. ಎರಡನೆಯವಳು ಕೈ ಮುರಿದುಕೊಂಡು ಅಂಗವಿಕಲೆ ಆಗಿದ್ದಳು. ಹಾಗಾಗಿ ಅವಳನ್ನು ದೇವದಾಸಿ ಮಾಡಿದ್ದರು. ಅವಳು ಮುಂಬಯಲಿ ಇರುತ್ತಿದ್ದಳು. ನಾನು ಮೂರನೇಯವಳು. ನಮ್ಮ ತಾಯಿ ತೀರಿ ಹೋದ ನಂತರ, ನಮ್ಮ ತಂದೆ ಮೂರನೇಯ ಮದುವೆ ಮಾಡಿಕೊಂಡಿದ್ದರು. ನಮ್ಮ ತಂದೆ ಹತ್ತಿರ ತನ್ನ ಮಕ್ಕಳ ಮದುವೆ ಮಾಡಲೂ ಸಹ ಹಣವಿರಲಿಲ್ಲ. ನನ್ನ ೧೨-೧೩ ವರ್ಷಕ್ಕೆ ನಾನು ಋತುಮತಿಯಾಗಿದ್ದೆ. ಆಗ ನನ್ನ ಮಲತಾಯಿ ಗರ್ಭಿಣಿಯಾಗಿದ್ದಳು. ಹೆರಿಗೆಗಾಗಿ ತನ್ನ ತವರು ಮನೆಗೆ ಹೋಗುತ್ತಿರುವಾಗ, ಅವಳ ಜೊತೆಗೆ ಬಾಣಂತನ, ಮಗುವಿನ ಆರೈಕೆ ಮಾಡಲು ನನ್ನನ್ನೂ ಸಹ ಕಳಿಸಿದ್ದರು.*

**ಲೈಂಗಿಕ ಜೀತಕ್ಕೆ ಸಾಗಾಣಿಕೆ ಮತ್ತು ಲೈಂಗಿಕ ಜೀತದ ದಿನಗಳು**

*ನನಗೆ ಆ ಊರಲ್ಲಿ ಒಬ್ಬ ಬ್ಯಾಡರ ವ್ಯಕ್ತಿ ಪರಿಚಯವಾಗಿದ್ದ. ಆತ ನನ್ನನ್ನು ಪುಸಲಾಯಿಸಿ ಯಾರಿಗೂ ಗೊತ್ತಾಗದಂತೆ ಮುಂಬಯಿಗೆ ಕರೆದುಕೊಂಡು ಹೋಗಿದ್ದ. ಕಾಮಾಟಿಪುರದ ಗ್ಯಾರಾ ಗಲ್ಲಿಯಲ್ಲಿ ನನ್ನನ್ನು ದಂಧೆಯ ಮನೆಗೆ ಮಾರಾಟ ಮಾಡಿ ಹೊರಟು ಹೋಗಿದ್ದ. ಆಗ ನನಗೆ ದಿಕ್ಕೇ ತೋಚದಂತಾಗಿತ್ತು. ಈ ಸುದ್ದಿ ನಮ್ಮ ಮನೆಯಲ್ಲಿ ಯಾರಿಗೂ ಗೊತ್ತಿರುವುದಿಲ್ಲ. ನನ್ನ ವಯಸ್ಸು ಚಿಕ್ಕದಿರುವುದರಿಂದ ಮತ್ತು ಘರವಾಲಿ ನನ್ನನ್ನು ದುಡ್ಡು ಕೊಟ್ಟು ಖರೀದಿಸಿದ್ದರಿಂದ ಅಕ್ಷರಶಃ ನನ್ನನ್ನು ಕೂಡಿ ಹಾಕಿದ್ದಳು. ಎಲ್ಲಿಯೂ ನನ್ನನ್ನು ಹೊರಗೆ ಬಿಡುತ್ತಿರಲಿಲ್ಲ. ಹಾಗಾಗಿ ನಾನು ಘರವಾಲಿ ಕಳಿಸಿದ ಗಿರಾಕಿಗಳನ್ನು ಕರೆದುಕೊಳ್ಳಲೇ ಬೇಕಾಗುತ್ತಿತ್ತು. ಹೀಗೆ ಒಂದು ವರ್ಷ ಅಲ್ಲಿಯೇ ಕಳೆದೆ. ಇತ್ತ ನನ್ನ ತಂದೆ ನನ್ನನ್ನು ಹುಡುಕಿ ಹುಡುಕಿ ಸುಸ್ತಾಗಿದ್ದರು. ನನ್ನ ಅಕ್ಕ ಈಗಾಗಲೇ ಮುಂಬಯಲಿ ಇರುತ್ತಿದ್ದಳು. ಅವಳ ಹತ್ತಿರ ನಾನು ಹೋಗಿರಬಹುದೆಂಬ ಅಂದಾಜಿನ ಮೇಲೆ ನನ್ನ ತಂದೆ ಮುಂಬಯಿಗೆ ಬಂದಿದ್ದರು. ನನ್ನ ಅಕ್ಕನನ್ನು ಜೊತೆಗೂಡಿಸಿಕೊಂಡು ಘರವಾಲಿಗಳ ಮನೆಯಲ್ಲಿ ಹುಡುಕಾಟ ನಡೆಸಿ ನನ್ನನ್ನು ಹುಡುಕಿದ್ದರು. ಘರವಾಲಿ ನನ್ನನ್ನು ಇವರೊಂದಿಗೆ ಕಳಿಸಲು ಒಪ್ಪದೇ ಹೋದಾಗ, ತಾವು ಪೊಲೀಸ್ ಕಂಪ್ಲೇಂಟ್ ಕೊಡುತ್ತೇವೆಂದು ನನ್ನ ತಂದೆ ಅವರಿಗೆ ಎಚ್ಚರಿಕೆ ನೀಡಿ, ಅವಳನ್ನು ಹೆದರಿಸಿ ನನ್ನನ್ನು ಕರೆದುಕೊಂಡು ಬಂದಿದ್ದ. ನಂತರ ನನ್ನ ತಂದೆ ನನ್ನನ್ನು ಕರೆದುಕೊಂಡು ಊರಿಗೆ ಹೊರಡಲು ತಯಾರಾಗುತ್ತಿದ್ದಂತೆ, ನಾನೇ ನನ್ನ ತಂದೆಗೆ ಹೇಳಿದೆ. ಹೇಗಿದ್ದರೂ ನಾನು ಕೆಟ್ಟೇ ಹೋಗಿರುವೆ. ಊರಲ್ಲಿ ಇದ್ದಾದರೂ ನಾನು ಏನು ಮಾಡುವುದು? ಎಲ್ಲಿದ್ದರೂ ಇನ್ನು ಮೇಲೆ ನನ್ನ ಬದುಕು ಹೀಗೆ ನಡೆಯುವುದು, ಎಂದು ಹೇಳಿದಾಗ, ನನ್ನ ತಂದೆ ಮನಸ್ಸು ನೋಯಿಸಿಕೊಂಡು, ಕಣ್ಣೀರು ಸುರಿಸಿದ್ದ. ನಂತರ ನನ್ನ ಮಾತೆ ಸರಿ ಅಂದುಕೊಂಡು, ನಮ್ಮ ಊರಿನ ಘರವಾಲಿಯೊಬ್ಬರ ಹತ್ತಿರವೇ ನನ್ನನ್ನು*

ಬಿಟ್ಟು ಹೋಗುತ್ತಾರೆ. ಹೋಗುವಾಗ ನನ್ನನ್ನು ಇಟ್ಟುಕೊಳ್ಳುತ್ತಿರುವ ಘರವಾಲಿ ನನ್ನ ತಂದೆಗೆ ರೇಲ್ವೆ ಟಿಕೇಟ್‌ಗೆ ಹಣ ಕೊಟ್ಟು ಕಳಿಸಿದ್ದಳು.

ನಾನು ಮತ್ತು ನಮ್ಮ ಅಕ್ಕ ಒಂದೆ ಮನೆಯಲ್ಲಿ ಇರತೊಡಗಿದ ಮೇಲೆ ನಾವು ತುಂಬಾ ಚೆನ್ನಾಗಿದ್ದೆ. ಘರವಾಲಿಯೂ ತುಂಬಾ ಒಳ್ಳೆಯವಳಿದ್ದುದರಿಂದ ನನಗೆ ಒಳ್ಳೆಯ ಗಳಿಕೆ ಸಿಗುತ್ತಿತ್ತು. ಆಗೆಲ್ಲ ನಾನು ಮುಂಬಯಿನಿಂದ ಊರಿಗೆ ಒಬ್ಬಳೇ ಬರುತ್ತಿದ್ದೆ. ಒಂದೊಂದು ಸಾರಿ ನಮ್ಮ ಅಕ್ಕನ ಜೊತೆ ಬರುತ್ತಿದ್ದೆ. ಮುಂಬಯಿಯಿಂದ ಶೇಡ್‌ಬಾಳ್‌ವರೆಗೆ ಟ್ರೇನ್ ವ್ಯವಸ್ಥೆ ಇರುತ್ತಿತ್ತು. ಶೇಡ್‌ಬಾಳದಿಂದ ಅಥಣಿಯವರೆಗೆ ಬಸ್  ವ್ಯವಸ್ಥೆ ಇರುತ್ತಿತ್ತು. ಆದರೆ ನಮ್ಮ ಹಳ್ಳಿಗೆ ಬಸ್ ಇರ್ತಿರಲಿಲ್ಲ. ಹಮಾಲಿಗೆ ೧೦ ರೂಪಾಯಿ ಕೊಟ್ಟರೆ, ಊರಿನವರೆಗೆ ನಡೆದುಕೊಂಡು ಬಂದು ಬಿಟ್ಟು ಹೋಗುತ್ತಿದ್ದ(೧೦ ಕಿ.ಮೀ). ಊರಲ್ಲಿ ನಮ್ಮ ಮನೆಯವರು ಕೇರಿಯೊಳಗಿನವರು ನಾವು ಬರುವ ದಾರಿಯನ್ನೇ ಕಾಯುತ್ತಾ ಕುಳಿತಿರುತ್ತಿದ್ದರು. "ನೀವು ಬರ್ತೀರೆಂದ್ರ ಸಾಕ ನಮಗೆಲ್ಲ ಹಬ್ಬ ಅನ್ನಿಸ್ತಿತ್ತು. ನಿಮ್ಮ ಬಳಿ, ಸರಾ, ಬಂಗಾರ, ಸೀರಿ, ಚಪ್ಪಲ್ಲು ನೋಡಾಕ ಬಂದ ನಿಲ್ತಿದ್ವಿ ನಿಮ್ಮ ಸುನೋ ಪೌಡರ್, ನಿಮ್ಮ ಬೆಳ್ಳಗಾದ ಚೆಂದನ ಮಾರಿ ನಮಗ ನಿಮ್ಮನ್ನ ನೋಡ್ಕೋತ ನಿಲ್ಲುವಂಗ ಮಾಡ್ತಿದ್ವು. ನೀವು ತರ್ತಿದ್ದ ಗೋಳಿ, ಬಿಸ್ಕೀಟು ಬಾಳ ಚುಲೋ ಇರ್ತಿದ್ವು" ಅಂತ ನಮ್ಮ ಕೇರಿಯೊಳಗಿನ ರಾಜವ್ವ ಈಗಲೂ ನೆನಪು ಮಾಡಿಕೊಳ್ಳುತ್ತಿರುತ್ತಾಳೆ.

ಆಗ ಪೊಲೀಸರ ಪಹರೆ ತುಂಬಾ ಇರುತ್ತಿತ್ತು. ಹಗಲು ರಾತ್ರಿ ಪೊಲೀಸರು ಇರುತ್ತಿದ್ದರು. ಶನಿವಾರ ರವಿವಾರ ದಾಡ್ ಬೀಳುತ್ತಿದ್ದವು. ಸಣ್ಣ ವಯಸ್ಸಿನ  ಹುಡುಗಿಯರನ್ನು ಇಟ್ಟುಕೊಳ್ಳೋ ಹಾಗೆ ಇರಲಿಲ್ಲ. ನಾವು ಮನೆ ಹೊರಗೆ ನಿಂತು ಗಿರಾಕಿಗಳನ್ನ ಕರೆಯೋ ಹಾಗಿರಲಿಲ್ಲ. ಅಂತವರನ್ನು ಹಿಡಿದುಕೊಂಡು ಹೋಗುತ್ತಿದ್ದರು. ಗಲ್ಲಿಯಲ್ಲಿ ಸಣ್ಣ ವಯಸ್ಸಿನ ಹುಡುಗಿಯರು ಇದ್ರ ಖಬರಿ (ಇನ್ಫಾರ್ಮರ್)ಗಳು ಪೊಲೀಸರಿಗೆ ಸುದ್ದಿ ಮುಟ್ಟಿಸುತ್ತಿದ್ದರು. ಅಲ್ಲದೇ ಘರವಾಲಿಯು ಪೊಲೀಸರಿಗೆ ಪ್ರತಿ ತಿಂಗಳೂ ಹಫ್ತಾ ಕೊಡುತ್ತಿದ್ದಳು. ಆದರೂ ದೊಡ್ಡ ಸಾಹೇಬ ಹೇಳಿದಷ್ಟು ಹುಡುಗಿಯರನ್ನು ಹಿಡಕೊಂಡು ಹೋಗುತ್ತಿದ್ದರು. ಆಗೆಲ್ಲ ಕುರಿ ತುಂಬಿದಂತೆ ಪೊಲೀಸ್ ಗಾಡಿಯಲ್ಲಿ ಹುಡುಗಿಯರನ್ನು ತುಂಬಿಕೊಂಡು ಹೋಗುತ್ತಿದ್ದರು. ಚಿಕ್ಕ ಹುಡುಗಿಯರು ಸಿಕ್ಕರೆ, ಒಂದೊಂದು ಸಾರಿ ಆಕೆಯ ತಂದೆ ತಾಯಿಯನ್ನು ಕರೆಸಿ ತಾಕೀತು ಮಾಡಿ ಅವರ ಜೊತೆ ಕಳಿಸುತ್ತಿದ್ದರು. ಆದರೂ ಬಹಳ ಸಾರಿ ಘರವಾಲಿಯು ಪೊಲೀಸರಿಗೆ ಹಣ ಕೊಟ್ಟು ಬಿಡಿಸಿಕೊಳ್ಳುತ್ತಿದ್ದಳು.

ನನ್ನನ್ನೂ ೪-೫ ಸಾರಿ ಜೈಲಿಗೆ ಹಾಕಿದ್ದರು. ಕೋರ್ಟಿಗೂ ಹೋಗಿದ್ದೆ. ಗಲ್ಲಿಯೊಳಗಿನ ಸ್ಟೇಶನ್‌ಗೆ ಹೋದಾಗ ೨೦ ರೂಪಾಯಿ ದಂಡ ಕಟ್ಟಿ ಬರುತ್ತಿದ್ದೆವು. ಒಂದೊಂದು ಸಾರಿ ಮುಂಬೈ ಸೆಂಟ್ರಲ್‌ದಲ್ಲಿರೋ ಕೋರ್ಟಿಗೆ ಕರೆದುಕೊಂಡು ಹೋಗುತ್ತಿದ್ದರು. ಅಲ್ಲಿ ದೊಡ್ಡ ಸಾಹೇಬ್ರು ಮುಂದೆ ನಮ್ಮನ್ನು ನಿಲ್ಲಿಸುತ್ತಿದ್ದರು. ಸಾಹೇಬರು ನಮ್ಮ ಹೆಸರು ಕೇಳಿ, "ನೀನು ಪೊಲೀಸನವರನ್ನ ಕರೆದಿದ್ದೆಯಾ?" ಅಂತ ಕೇಳುತ್ತಿದ್ದರು. ಅದಕ್ಕೆ ನಾವು 'ಜೀ ಹಾಂ ಸಾಬ್' ಅನ್ನಬೇಕಿತ್ತು. ನಂತರ ದೊಡ್ಡ ಸಾಹೇಬ್ರು 'ದಸ್ ರೂಪಯೇ' ಅನ್ನುತ್ತಿದ್ದರು. ಆಗ ನಾವು ಮೊದಲು ಸ್ಟೇಶನ್ನಿನಲ್ಲಿ ತುಂಬಿದ್ದ ೨೦ ರೂಪಾಯಿಯಲ್ಲಿ, ೧೦ ರೂಪಾಯಿ ಮರಳಿ ಕೊಡುತ್ತಿದ್ದರು. ದೊಡ್ಡ ಸಾಹೇಬರು ಬಂದರೆ, ಅವರು ಜೀನ್ ಡ್ರೆಸ್ ಮೇಲೆ ಇರುತ್ತಿದ್ದರು.

ನಮಗೆ ಗೊತ್ತಾಗದನೆ ಒಂದೊಂದ ಸಾರಿ ಅವರನ್ನೂ ಕರೆಯುತ್ತಿದ್ದೆವು. ಆದರೆ ಬಹಳಷ್ಟು ಸಾರಿ ಸುಳ್ಳು ಕೇಸ್ ಮಾಡಿರುತ್ತಿದ್ದರು. ಅದಕ್ಕೆ ನಾವು ಪೊಲೀಸರ್ನ ಕರೆಯಲಿ ಜಡಲಿ "ಜೀ ಹಾಂ" ಅಂತಲೇ ಅನ್ನಬೇಕಾಗಿತ್ತು. ಒಂದು ವೇಳೆ ನಾವು ಖಬೂಲ್ ಆಗಲಿಲ್ಲ ಅಂದರೆ, ಗುನಾ ಖಬೂಲ್ ಆಗದೇನೇ ನಮ್ಮನ್ನು ಜೈಲಿಗೆ ಹಾಕುತ್ತಿದ್ದರು. ಹಾಗೆ ಕೇಸ್ ನಡೆಯುತಿತ್ತು. ಅದನ್ನೆಲ್ಲ ತಪ್ಪಿಸಲು ಹಾಗೆ ಹೇಳಬೇಕೆಂದು ಘರವಾಲಿ ಕಡೆಯ ವಕೀಲರು ಹೇಳಿರುತ್ತಿದ್ದರು.

ನಾನು ಮೊದಲು ಇದ್ದ ಘರವಾಲಿ ಮನೆಯ ದಿನಗಳಿಗಿಂತ ,ಆಮೇಲೆ ಇದ್ದ ಮನೆಯಲ್ಲಿ ತುಂಬಾ ಚೆನ್ನಾಗಿ ಇದ್ದೆ. ಆಗ ೮೦ ರೂಪಾಯಿಗೆ ಒಂದು ತೊಲೆ ಬಂಗಾರ ಮತ್ತು ೨೦ ರೂಪಾಯಿಗೆ ಒಂದು ತೊಲೆ ಬೆಳ್ಳಿ ಸಿಗುತ್ತಿತ್ತು. ನನ್ನ ಹತ್ತಿರ ೨ ತೊಲಿ ಚಿಕ್ಕಿ, ೨ ಉಂಗುರ, ಕಿವಿಯೋಲೆ, ರಿಂಗ್, ಪೈಜಣ, ಗೆಜ್ಜೆ ಹೀಗೆ ಹಲವಾರು ನಮೂನೆಯ ಬಂಗಾರದ ಆಭರಣಗಳು ಇದ್ದವು. ಈ ಮಧ್ಯ ನನ್ನ ಅಪ್ಪ ಕಟ್ಟಗೆ ಒಡೆದು ಒಡೆದು ಎದೆ ನೋವು ಬಂದು ಮಲಗಿದ್ದ. ಊರಲ್ಲಿ ತೋರಿಸಿದಾಗ ಆರೋಗ್ಯ ಸರಿ ಹೋಗಿರಲಿಲ್ಲ. ಆಗ ನಾನೇ ನನ್ನ ಅಪ್ಪನನ್ನು ಮುಂಬಯಿಯ ಜೆ ಜೆ ಆಸ್ಪತ್ರೆಯಲ್ಲಿ ಸೇರಿಸಿ ಚಿಕಿತ್ಸೆ ಕೊಡಿಸಿದ್ದೆ. ಹಾಗಾಗಿ ಹಣದ ಅವಶ್ಯಕತೆ ತುಂಬಾ ಇತ್ತು. ಹಾಗಾಗಿ ನನ್ನ ಹತ್ತಿರ ಇದ್ದ ಬಂಗಾರವನ್ನೆಲ್ಲ ಮಾರಿ ಬಿಟ್ಟೆ. ಆದರೂ ನನ್ನ ತಂದೆ ಉಳಿಯಲಿಲ್ಲ. ನಮ್ಮ ತಂದೆಯ ಸಾವಿನ ನಂತರ ತವರು ಮನೆಯ ಸಂಬಂಧ ಕಡಿಮೆಯಾಗುತ್ತಾ ಬಂದಿತು. ಮಲತಾಯಿ ಮನೆಯಲ್ಲಿ ಇದ್ದಳು. ಅವಳಿಗ್ಯಾಕೆ ನಾನು ಗಳಿಸಿ ಕೊಡಬೇಕು ಎಂದು ನನ್ನ ಪಾಡಿಗೆ ನಾನು ಇದ್ದು ಬಿಟ್ಟಿದ್ದೆ.

**ಲೈಂಗಿಕ ಜೀತದಿಂದ ವಿವಾಹಿತ ಜೀವನಕ್ಕೆ ಸಾಗಿದ್ದು**

ನನ್ನ ಹತ್ತಿರ ಪಠಾಣನೊಬ್ಬ ಗಿರಾಕಿಯಾಗಿ ಖಾಯಂ ಬರುತ್ತಿದ್ದ. ಒಂದು ದಿನ ಅವನು ಬಂದ ಹೊತ್ತಿನಲ್ಲಿ ನಾನು ಬೇರೆ ಯಾರೋ ಗಂಡಸಿನೊಂದಿಗೆ ಇದ್ದಿದ್ದನ್ನು ಕಂಡು ಸಿಟ್ಟಿನಿಂದ ನನ್ನನ್ನು ಹೊಡೆದಿದ್ದಾಗ ನಾನೂ ಸುಮ್ಮನಿರದೇ, "ನಾನು ಇದೇ ದಂಧೆ ಮಾಡುವವಳಿದ್ದೇನೆ. ನನ್ನ ಮೇಲೆ ಕೈ ಮಾಡಲು ನೀನು ಯಾರು? ನನ್ನ ಮೇಲೆ ನಿನಗಷ್ಟು ಪ್ರೀತಿ ಇದ್ದರೆ, ನೀನೇ ನನ್ನ ಮದುವೆ ಮಾಡಿಕೋ. ಈ ದಂಧೆಯನ್ನು ಬಿಟ್ಟು ನಿನ್ನ ಜೊತೀನ ಬರುತ್ತೇನೆ" ಎಂದು ಅಂದಿದ್ದೆ. ಇದೇ ಮಾತಿಗೆ ಪಣ ತೊಟ್ಟವನಂತೆ, ಪಠಾಣ ಮೂರು ಮಕ್ಕಳ ತಂದೆ ಆಗಿದ್ದರೂ ಸಹ, ನನ್ನನ್ನು ಮಸೀದಿಗೆ ಕರೆದುಕೊಂಡು ಹೋಗಿ ವಿಧಿವತ್ತಾಗಿ ಮದುವೆಯಾಗಿದ್ದ. ಈ ವಿಷಯವನ್ನು ನಾನು ನನ್ನ ಅಕ್ಕನಿಗೂ, ಘರವಾಲಿಗೂ ಹೇಳಿರಲಿಲ್ಲ.

ಮದುವೆಯಾದ ಮೇಲೆ ಪಠಾಣ ನನ್ನನ್ನು ತನ್ನ ಮನೆಗೇ ಕರೆದುಕೊಂಡು ಹೋಗಿ ಇಟ್ಟುಕೊಂಡಿದ್ದ. ಆಗಿನ ದಿನಗಳು ತುಂಬಾ ಸುಖದಾಯಕವಾಗಿದ್ದವು. ಪಠಾಣನ ಮನೆಯವರು, ಅವನ ಹೆಂಡತಿ ಮಕ್ಕಳು ಮೊದಲ್ಗೊಂಡು ನನಗೆ ಯಾರೂ ಏನೂ ಅನ್ನುತ್ತಿರಲಿಲ್ಲ. ಅವನ ಹೆಂಡತಿ ನೀನು ಯಾರು, ಯಾಕೆ ಬಂದೆ ಎಂಬ ಪ್ರಶ್ನೆ ಸಹ ಕೇಳಲಿಲ್ಲ. ಬದಲಿಗೆ ಅವನ ತಂದೆ ತಾಯಿ ಮೊದಲಾಗಿ ಎಲ್ಲರೂ ಪ್ರೀತಿಯಿಂದ ಕಾಳಜಿಯಿಂದ ನೋಡಿಕೊಳ್ಳುತ್ತಿದ್ದರು. ಪಠಾಣ ನನ್ನನ್ನು ಕರೆದುಕೊಂಡು ಸಿನೆಮಾಗೆಲ್ಲ ಹೋಗುತ್ತಿದ್ದ. ನಮ್ಮ ಜೋಡಿಯನ್ನು ನೋಡಿದವರೆಲ್ಲ ಪ್ರೀತಿಸುತ್ತಿದ್ದರು. ಆಗೆಲ್ಲ ಪಠಾಣ ನನ್ನನ್ನು ಹಿಂದೆ ಬಿಡಲು ಅನುಮಾನಿಸುತ್ತಿದ್ದ. ನನ್ನ ಜೊತೆಗೇ ಹೆಜ್ಜೆ ಹಾಕುತ್ತಿದ್ದ. ಆದರೆ ಆ ದಿನಗಳಲ್ಲಿ ನನ್ನ

ಪಾಲಿಗೆ ಹಾಗೆ ಉಳಿಯಲಿಲ್ಲ. ಪಠಾಣನಿಗೆ ಹುಚ್ಚು ಹಿಡಿಯಿತು. ಎಷ್ಟು ಚಿಕಿತ್ಸೆ ಕೊಡಿಸಿದರೂ ಸರಿ ಹೋಗಲಿಲ್ಲ. ತನ್ನ ಆಸ್ತಿಯನ್ನೆಲ್ಲ ಕಳೆದುಕೊಳ್ಳತೊಡಗಿದ. ಕಾರಣವಿಲ್ಲದೇನೇ ನನ್ನನ್ನೂ, ಇನ್ನೊಬ್ಬ ಹೆಂಡತಿಯನ್ನೂ ಹೊಡೆಯುತ್ತಿದ್ದ. ಒಂದೊಂದು ಸಾರಿ ನನ್ನನ್ನು ನೋಡಿ "ಬಾಬಾ ಲೊ ಮೇರೆ ಸರ್ ಪರ್ ಮಾರ್ ರಹೇ ಹೈ, ಮಾರ ರಹೇ ಹೈ" ಅಂತಿದ್ದ. ಹಾಗೇನೇ ನನ್ನನ್ನು ತೋರಿಸಿ "ಏ ಚಲೇ ಜಾತಿ ಹೈ, ಮುಝುಕೋ ಛೋಡಕೆ. ಏ ಐಸೇ ಹಾಯ್! ಕಿಯಾ ತೋ, ಲಾಕೊ ಲೋಗ ಇಸಕೆ ಪಾಸ್ ಆತಿ ಹೈ, ಏ ಜಾತಿ ಹೈ". ಅಂತ ಬಡಬಡಾಯಿಸುತ್ತಿದ್ದ.

**ಮುಂಬಯಿಯಿಂದ ಪಾಕಿಸ್ತಾನಕ್ಕೆ**

ನಾನು ಪಠಾಣನನ್ನು ಮದುವೆಯಾದಾಗಿನಿಂದ ದಂಧೆಯ ಕಡೆಗೆ ಮುಖ ಮಾಡಿದವಳಲ್ಲ. ಆದರೂ ಆತ ಯಾಕೆ ಹಾಗೆ ಮಾತನಾಡುತ್ತಾನೆಂದು ನನಗೆ ಚಿಂತೆ ಆಗಿತ್ತು. ಕೊನೆಗೆ ಆತ ತನ್ನ ಎಲ್ಲ ಆಸ್ತಿ ಕಳೆದುಕೊಂಡು ನಮ್ಮನ್ನೆಲ್ಲ ಕರೆದುಕೊಂಡು ತನ್ನ ಮೂಲಸ್ಥಾನವಾದ ಪಾಕಿಸ್ತಾನಕ್ಕೆ ಹೊರಟು ನಿಂತ. ಪಾಸ್ ಪೋರ್ಟ ಸಹ ಸಿಕ್ಕಿತ್ತು. ಆದರೆ ಅದು ಬರಲು ಸಮಯ ಹಿಡಿಯುತ್ತದೆಂದು, ಕಳ್ಳ ದಾರಿಯಿಂದ ಒಂಟೆಯ ಮೇಲೆ ಕೂಡಿಸಿಕೊಂಡು ಕರಾಚಿ ತಲುಪಿದ್ದ. ಇದು ಒಟ್ಟು ೪ ಹಗಲು ೪ ರಾತ್ರಿ ಪ್ರಯಾಣವಾಗಿತ್ತು. ಅಲ್ಲಿಂದ ಮುಂದೆ ಅವನ ಹಳ್ಳಿಗೆ ಹೋಗಲು ದಿನ ಪೂರ್ತಿ ಪ್ರಯಾಣ ಮಾಡಬೇಕಿತ್ತು. ಹಾಗೆ ಅವನೊಂದಿಗೆ ಹೋದ ನಾನು, ಅವನೊಂದಿಗೆ ೩ ವರ್ಷ ಅದೇ ಹಳ್ಳಿಯಲ್ಲಿ ಜೀವನ ಮಾಡಿದೆ. ಅಲ್ಲಿಯೂ ಕೂಡ ಪಠಾಣ ನನಗೆ ತುಂಬಾ ಹಿಂಸೆ ನೀಡುತ್ತಿದ್ದ. ಆನಂತರ ನನ್ನನ್ನು ಕರೆದುಕೊಂಡು ಮತ್ತೆ ಮುಂಬಯಿಗೇ ಬಂದ. ಅವನ ಜೊತೆ ಇದ್ದರೆ ನನ್ನ ಜೀವ ಉಳಿಯುವುದಿಲ್ಲವೆಂದು, ೧೫ ದಿನ ಅವನ ಜೊತೆ ಇದ್ದು, ಅಲ್ಲಿಂದ ತಪ್ಪಿಸಿಕೊಂಡು, ನಾನು ಮತ್ತೆ ದಂಧೆಯ ಮನೆಗೆ ಬಂದೆ. ಘರವಾಲಿಯೊಬ್ಬಳು ನನಗೆ ಟ್ರೇನ್ ಟಿಕೇಟ್ ತೆಗೆಸಿಕೊಟ್ಟಳು. ಅಲ್ಲಿಂದ ನಮ್ಮ ಊರಿಗೆ ಹೋದರೆ, ಆತ ನನ್ನನ್ನು ಹುಡುಕಿಕೊಂಡು ಬರಬಹುದೆಂದು, ನಾನು  ನನ್ನ ಅಕ್ಕನ ಮನೆಗೆ  ಹೋಗಿದ್ದೆ.

**ಪುನರ್ನೆಲೆಗೊಳಿಸಿಕೊಂಡ ಬದುಕು**

ನಾನು ಅಂದುಕೊಂಡಂತೆ, ಆತ ನನ್ನನ್ನು ಹುಡುಕಿಕೊಂಡು ೩ ಸಾರಿ ನಮ್ಮ ಹಳ್ಳಿಗೆ ಬಂದ. ನಮ್ಮ ಊರವರು, "ಅವಳು ಇಲ್ಲಿ ಇಲ್ಲ. ಸತ್ತು ಹೋಗಿದ್ದಾಳೆ" ಎಂದು ಹೇಳಿದ್ದರು. "ಸತ್ತು ಹೋಗಿದ್ದರೆ ಅವಳ ಶವಸಂಸ್ಕಾರ ಮಾಡಿದ ಜಾಗ ತೋರಿಸಿರಿ" ಎಂದು ನಮ್ಮ ಊರಿನವರಿಗೆ ದುಂಬಾಲು ಬಿದ್ದಾಗ, ಅವರು ಯಾರದೊ ಶವ ಸುಟ್ಟ ಜಾಗೆ ತೋರಿಸಿದ್ದನ್ನು ನೋಡಿ ನಂಬಿ ಹೊರಟು ಹೋಗಿದ್ದ. ಅವನಿನ್ನು ಬರುವುದಿಲ್ಲವೆಂದು ಖಚಿತ ಪಡಿಸಿಕೊಂಡ ಮೇಲೆ ನಾನು ನಮ್ಮ ಊರಿಗೆ ಬಂದಿದ್ದೆ. ಈಗ ೩೫ ವರ್ಷದಿಂದ ನಾನು ನಮ್ಮ ಊರಲ್ಲೇ ಇದ್ದೇನೆ. ಹೊಟ್ಟೆಪಾಡಿಗಾಗಿ ಹೊಲದ ಕೆಲಸಕ್ಕೆ ಹೋಗುತ್ತೇನೆ. ದಿನಕ್ಕೆ ಒಂದು ನೂರು ರೂಪಾಯಿ ಸಿಗುತ್ತದೆ. ಒಬ್ಬಳೇ ಇರುವುದರಿಂದ ಏನೂ ಸಮಸ್ಯೆ ಇಲ್ಲ. ನಾನೇನೂ ದೇವದಾಸಿ ಅಲ್ಲ. ಆದರೆ ಊರಲ್ಲಿ ದೇವದಾಸಿ ಮಹಿಳೆಯರ ಸಮೀಕ್ಷೆ ನಡೆದಾಗ ನಾನೂ ದೇವದಾಸಿ,  ಎಂದು ದಾಖಲಿಸಿಕೊಂಡಿದ್ದರು. ಅದಕ್ಕಾಗಿ ಮಾಶಾಸನ ಬರುತ್ತದೆ. ಅವರೇ ಮನೆಯನ್ನೂ ಸಹ  ಕಟ್ಟಿಸಿಕೊಟ್ಟಿದ್ದಾರೆ.

ಮುಂಬಯಿಯಲ್ಲಿ ಅಷ್ಟೊಂದು ಐಷಾರಾಮದ ಜೀವನ ಮಾಡಿದವಳು, ಹಳ್ಳಿ ಜೀವನಕ್ಕೆ ಹೇಗೆ ಹೊಂದಿಕೊಂಡೆ? ಎಂದು ಸರಸೂನ ಕೇಳಿದರೆ, *"ನನ್ನ ಹಣೆಬರಹದಲ್ಲಿ ಹಾಗೆ ಬರೆದಿತ್ತು. ಹಳೆಯದಕ್ಕಾಗಿ ಮರುಗಿ ಏನು ಮಾಡುವುದು. ಪಠಾಣನ ಕೂಡ ಮದುವೆ ಆಗಿದ್ದೆ. ಅವನು ಆರೋಗ್ಯದಿಂದ ಇದ್ದಿದ್ದರೆ ನನ್ನ ಬದುಕು ಬಂಗಾರದ ಹಾಗೆ ಇರುತ್ತಿತ್ತು. ಆದರೆ ದೇವರು ಹಾಗೆ ಇರಲು ಬಿಡಲಿಲ್ಲ. ಈಗ ನನ್ನ ಆರೋಗ್ಯ ಚೆನ್ನಾಗಿ ಇಲ್ಲ. ದೇವದಾಸಿ ಪಗಾರ ಸಾಕಾಗುವುದಿಲ್ಲ"* ಎಂದು ಸರಸೂ ಹೇಳುತ್ತಾಳೆ.

## ಪ್ರಕರಣ-೧೫: ಸುರೇಖಾ ಪ್ರಕರಣ

ಸುರೇಖಾ ೪೫ ವರ್ಷದ ಅನಕ್ಷರಸ್ಥ ಹೆಣ್ಣುಮಗಳು. ೧೩-೧೪ ವರ್ಷಕ್ಕೆ ಮದುವೆಯಾಗಿ, ಒಂದು ಗಂಡು ಎರಡು ಹೆಣ್ಣುಮಕ್ಕಳು ಜನಿಸಿದ್ದಾರೆ. ಸುರೇಖಾ ಹೇಳುವಂತೆ, ಗಂಡನ ಮನೆಯಲ್ಲಿ ಗಂಡ ಒಳ್ಳೆಯವನೇ ಇದ್ದ. ಬಡತನ ಇತ್ತು. ಭೂಮಿ ಇರಲಿಲ್ಲ. ಎಲ್ಲರೂ ದುಡಿಯಲೇ ಬೇಕಿತ್ತು. ಹಾಗಾಗಿ ಎಲ್ಲರೂ ಬೇರೆಯವರ ಹೊಲಗಳಲ್ಲಿ ಕೂಲಿಯಾಳುಗಳಾಗಿ ದುಡಿಯುತ್ತಿದ್ದರು. ಕೂಲಿಗೆ ಹೋದಾಗ ಸುರೇಖಾಳಿಗೆ ಊರಿನ ಬೇರೆ ಬೇರೆ ಹೆಣ್ಣು ಮಕ್ಕಳ ಪರಿಚಯವೂ ಆಗಿರುತ್ತದೆ. ಅದರಲ್ಲಿ ಲೈಂಗಿಕ ವಿಷಗಳಲ್ಲಿ ಆಸಕ್ತರಾಗಿದ್ದ, ಕೆಲವರ ಪರಿಚಯ ಇವಳಿಗೆ ಆಗುತ್ತದೆ. ಆಗ ಇವಳಿಗೆ ೧೭ ವರ್ಷ. ಹದಿ ಹರೆಯದ ವಯಸ್ಸು. ಮನೆಯಲ್ಲಿ ಗಂಡ ಚೆನ್ನಾಗಿ ನೋಡಿಕೊಳ್ಳತ್ತಿದ್ದರೂ ಸಹ, ತಾವೂ ಮೋಜು ಮಸ್ತಿ ಮಾಡಬಹುದು ಎಂದು ಇವಳಂತೆಯೇ ಇರುವ ಇನ್ನೂ ಮೂರ್‍ನಾಲ್ಕು ಹುಡುಗಿಯ ರೊಂದಿಗೆ ಸೇರಿ ಬಿಜಾಪೂರಕ್ಕೆ ಹೋಗುತ್ತಾಳೆ. ಅಲ್ಲಿಂದ ಮಹಾರಾಷ್ಟ್ರದ ಲೈಂಗಿಕ ದಂಧೆಯ ಮನೆಗಳಲ್ಲಿದ್ದು ಮರಳಿ ಬಂದಿದ್ದಾಳೆ. ನಾವು ಅವಳ ಗೆಳತಿಯ ಮನೆಗೆ ಹೋದಾಗ ಸುರೇಖಾಳೂ ನಮಗೆ ಸಿಕ್ಕು ತನ್ನ ವಿಷಯವನ್ನು ನಮ್ಮ ಜೊತೆಗೆ ಹಂಚಿಕೊಂಡಳು. ಅವಳು ಹಂಚಿಕೊಂಡ ವಿಷಯವನ್ನು ಇಲ್ಲಿ ವಿವರಿಸಲಾಗಿದೆ.

### ಲೈಂಗಿಕ ಜೀತದ ಸ್ಥಿತಿ

*ನಾನು ದಂಧೆ ಮಾಡಲು ಮನೆ ಬಿಟ್ಟು ಹೊರಗೆ ಹೋದಾಗ ನನಗೆ ಮೂರು ಚಿಕ್ಕ ಚಿಕ್ಕ ಮಕ್ಕಳಿದ್ದರು. ಅವರನ್ನೂ ಸಹ ಬಿಟ್ಟು ಹೋಗಿದ್ದೆ. ಬಿಜಾಪೂರದಲ್ಲಿ ಬಸ್ ನಿಲ್ದಾಣ ಇಳಿದ, ನಮ್ಮೆಲ್ಲರ. ಮುಖ. ಹಾವ ಭಾವ. ಹೆದರಿಕೆಗಳನ್ನು ಗುರುತಿಸಿದ ಕೆಲವು ಜನರು. ನಮ್ಮನ್ನು ವೇಶ್ಯಾಮನೆಗಳಿಗೆ ಕರೆದುಕೊಂಡು ಹೋಗಿದ್ದರು. ಅದೇ ವಿಷಯವಲ್ಲಿ ಆಸಕ್ತರಾಗಿದ್ದ ನನಗೆ ಮತ್ತು ನನ್ನ ಗೆಳತಿಯರಿಗೆ ಅದು ನೋವಿನ ಸಂಗತಿಯಾಗಿರಲಿಲ್ಲ. ನಾನು ಒಂದು ವರ್ಷ ಬಿಜಾಪೂರದಲ್ಲಿ ಇದ್ದು. ನಂತರ ಅಲ್ಲಿಂದ ಕೋಲ್ಹಾಪೂರದ ವೇಶ್ಯಾಗೃಹಕ್ಕೆ ಹೋಗಿ. ಅಲ್ಲಿ ಒಂದು ವರ್ಷ ಇದ್ದೆ. ಅಲ್ಲಿಂದ ನಾನು ಪೂಣೆ ಮತ್ತು ಮುಂಬಯಿಯ ವೇಶ್ಯಾಗೃಹಗಳಿಗೆ ಹೋಗಿದ್ದೆ. ಅಲ್ಲಿ ೧೨ ವರ್ಷ ಕಳೆದಿದ್ದೇನೆ. ಈ ಯಾವ ಸಂದರ್ಭಗಳಲ್ಲಿಯೂ ನನಗೆ. ನನ್ನ ಮನೆ. ಗಂಡ. ಮಕ್ಕಳ ವಿಚಾರ ನೆನಪಿಗೇ ಬರಲಿಲ್ಲ. ಇಷ್ಟು ವರ್ಷಗಳಲ್ಲಿ ನಾನು ಯಾವ ಪೋಲೀಸರ ಕೈಗೂ ಸಿಕ್ಕಿರಲಿಲ್ಲ. ಆದರೆ ಯಾವಾಗ ನನಗೆ ಎಚ್.ಐ.ವಿ./ಏಡ್ಸ ತಗುಲಿ. ಸಾಯುವ ಸ್ಥಿತಿಗೆ ಬಂದೆನೋ ಆಗ ಊರಿಗೆ ಬರಲೇಬೇಕಾಗುತ್ತದೆ. ಆದರೆ ನನಗೆ ಗಂಡನ ಮನೆಗೆ ಹೋಗುವ ಧೈರ್ಯ ಬರಲಿಲ್ಲ. ತವರು ಮನೆಗೆ ಬಂದು ನೆಲೆಸಿದ್ದೇನೆ.*

**ಜೀತದಿಂದ ಹೊರ ಬಂದ ಸ್ಥಿತಿ**

*ನಾನಿದ್ದ ಪರಿಸ್ಥಿತಿಯಲ್ಲಿ ತವರು ಮನೆಯಲ್ಲಿಯೂ ಕೂಡ ಕುಟುಂಬದೊಂದಿಗೆ ಇರಲು ಸಾಧ್ಯವಾಗಲಿಲ್ಲ. ಆದ್ದರಿಂದ ಅದೇ ಮನೆಯ ಒಂದು ಭಾಗದಲ್ಲಿ ಬೇರೆ ಇರತೊಡಗಿದೆ. ನಮ್ಮ ಊರಿನ ಸಮುದಾಯ ಕಾರ್ಯಕರ್ತರು ನನ್ನ ರೋಗವನ್ನು ಗುರುತಿಸಿ, ಚಿಕಿತ್ಸೆ ಕೊಡಿಸಿದ್ದಾರೆ. ನಿಯಮಿತವಾದ ಆರೋಗ್ಯ ಉಪಚಾರದಿಂದ ಇಂದು ನಾನು ಏಡ್ಸ ರೋಗದವಳ ಹಾಗೆ ಅನ್ನಿಸುವುದೇ ಇಲ್ಲ. ಈಗ ನನ್ನ ಆರೋಗ್ಯ ತುಂಬಾ ಸುಧಾರಿಸಿದೆ. ಊರಲ್ಲಿ ಆಸ್ಪತ್ರೆ ಬ್ಯಾಂಕ್‌ಗಳಲ್ಲಿ ಕಸ ಗುಡಿಸುವ ಕೆಲಸ ಮತ್ತು ಊರಿನ ಕೆಲವು ಮನೆಗಳಲ್ಲಿ ಪಾತ್ರೆ ಮತ್ತು ಬಟ್ಟೆ ತೊಳೆಯುವ ಕೆಲಸ ಮಾಡುತ್ತಿದ್ದೇನೆ. ಆದರೆ ಇಷ್ಟೆಲ್ಲ ಆದರೂ ನಾನು ದಂಧೆ ಮಾಡುವುದನ್ನು ಬಿಟ್ಟಿಲ್ಲ. ಕಾಂಡೋಮ್‌ಗಳನ್ನು ಉಪಯೋಗಿಸಿ ಬಿಜಾಪೂರ, ಅಥಣಿ, ಜಮಖಂಡಿಯ ಲಾಡ್ಜಗಳಲ್ಲಿ ದಂಧೆ ಮಾಡಿ ಬರುತ್ತೇನೆ. ಹೀಗೆ ವ್ಯವಹಾರ ಮಾಡುವ ನಮ್ಮ ಒಂದು ಗುಂಪೇ ಇದೆ. ಒಬ್ಬರಿಗೊಬ್ಬರು ಫೋನ್ ಮೂಲಕ ಸಂಪರ್ಕಿಸಿ ದಂಧೆ ನಡೆಸುತ್ತೇವೆ. ಈಗಲೂ ಸಹ ನನಗೆ ಮಿರಜ್ ಸಾಂಗ್ಲಿಯ ಜೊತೆ ಉತ್ತಮ ಸಂಪರ್ಕವಿದೆ. ಅಲ್ಲಿಗೂ ಹೋಗಿ ಬರುತ್ತೇನೆ. ಈಗಲೂ ಅಲ್ಲಿಂದ ಗಂಡಸರು ನನ್ನನ್ನು ಹುಡುಕಿಕೊಂಡು ಬರುತ್ತಾರೆ. ಪೋಲೀಸರೇ ನಮ್ಮ ಹತ್ತಿರ ಬಂದು ಹೋಗುವುದರಿಂದ ಅವರ ಹೆದರಿಕೆ ನಮಗೆ ಇಲ್ಲ.*

ಯಾವುದೇ ಆರ್ಥಿಕ ಸಮಸ್ಯೆ, ಸಾಮಾಜಿಕ ಸಮಸ್ಯೆಗಳಿಂದಾಗಿ ಲೈಂಗಿಕ ವ್ಯವಹಾರಕ್ಕೆ ಸಿಲುಕಿ ಕೊಂಡಿರದ ಸುರೇಖಾ, ಸ್ವತಃ ತನ್ನ ವೈಯಕ್ತಿಕ ಅಭಿಲಾಶೆಗಾಗಿ ದಂಧೆ ನಡೆಸುತ್ತಿದ್ದಾಳೆ. ಹಾಗಾಗಿ ತನ್ನ ಮಕ್ಕಳನ್ನು ಕಳೆದುಕೊಂಡ, ಕುಟುಂಬವನ್ನು ಕಳೆದುಕೊಂಡ ಕುರಿತು ಯಾವುದೇ ನೋವು ಕಾಣಿಸುವುದಿಲ್ಲ. ತುಂಬಾ ಖುಷಿಯಿಂದಲೇ ಜೀವನ ನಡೆಸುತ್ತಿದ್ದಾಳೆ. ತನ್ನ ಅಶ್ಲೀಲ ಭಾಷೆಯಿಂದ ಸುತ್ತ ಮುತ್ತಲಿನ ಮಹಿಳೆಯರನ್ನು ನಗಿಸುತ್ತ ತಾನೂ ನಗುತ್ತಾ ಊರೆಲ್ಲ ಓಡಾಡಿಕೊಂಡಿರುತ್ತಾಳೆ. ಇವಳ ಗಂಡ ಮತ್ತೊಂದು ಮದುವೆ ಆಗಿಲ್ಲ. ಇರುವ ಮಕ್ಕಳನ್ನೇ ನೋಡಿಕೊಂಡು ಇದ್ದಾನೆ. ಮಕ್ಕಳು ಇವಳನ್ನೂ ಭೇಟಿಯಾಗಲು ಆಗಾಗ ಬಂದಿರುತ್ತಾರೆ ಎಂದು ಹೇಳುತ್ತಾಳೆ.

## ಅನುಬಂಧ-೨

## ಅಧ್ಯಾಯ -೮ರಲ್ಲಿ ಚರ್ಚಿಸಲಾಗಿರುವ ಪ್ರಕರಣಗಳ ವಿವರಣಾತ್ಮಕ ವಿವರ

### ಪುನರ್ನೆಲೆ ಪ್ರಕರಣ-೧: ರಂಜನಾ

**ರಂಜನಾ** ೧೫ ವರ್ಷದ ಅನಕ್ಷರಸ್ಥ ಹೆಣ್ಣುಮಗಳು. ಮೂಲತಃ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನವಳು. ೨೭.೨.೨೦೦೩ರಲ್ಲಿ ಮುಂಬಯಿಯ ಕಾಮಾಟಿಪುರದ ರೆಡ್‌ಲೈಟ್ ಏರಿಯಾದಿಂದ ಬಾಲನ್ಯಾಯ ಕಾಯಿದೆ ೨೦೦೦ದ ಸೆಕ್ಷನ್ ೩೩ರ ಅಡಿಯಲ್ಲಿ ರಕ್ಷಣೆಗೊಂಡವಳು. ಸುಮಾರು ನಾಲ್ಕುವರೆ ತಿಂಗಳು ಮಹಾರಾಷ್ಟ್ರ ಸರ್ಕಾರದಿಂದ ಹೆಣ್ಣುಮಕ್ಕಳಿಗಾಗಿ ನಡೆಸುತ್ತಿರುವ ವಿಶೇಷ ಪುನರ್ವಸತಿ ಕೇಂದ್ರ ದೇವನಾರ್‌ದ ವಿಶೇಷ ಗೃಹದಲ್ಲಿ ಇದ್ದು ಬಂದಿದ್ದಳು. ಪುನರ್ವಸತಿಯ ನಂತರ ಅವಳನ್ನು ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಗೆ ಪುನರ್ನೆಲೆಗಾಗಿ ಒಪ್ಪಿಸಲಾಗಿತ್ತು. ರಂಜನಾ ಆ ಸಂಸ್ಥೆಯಲ್ಲಿ ಎರಡು ತಿಂಗಳು ಕಳೆಯುತ್ತಾಳೆ. ಅಲ್ಲಿ ಸಮಾಲೋಚನೆಗೆ ಒಳಪಟ್ಟು ರಬಕವಿ ಪೋಲೀಸ್ ಕಛೇರಿಯ ಮುಖಾಂತರ ತನ್ನ ತಂದೆ-ತಾಯಿಯನ್ನು ಸೇರುತ್ತಾಳೆ.

ಪುನರ್ನೆಲೆಗೊಳಿಸಿದ ಸಂಸ್ಥೆಯು ನೀಡಿದ ಮಾಹಿತಿಯ ಪ್ರಕಾರ ನಾವು ರಂಜನಾಳನ್ನು ಭೇಟಿಯಾಗಲು ಅವರ ಮನೆಗೆ ಹೋದಾಗ, ರಂಜನಾ ಮನೆಯಲ್ಲಿ ತನ್ನ ತಾಯಿಯ ಜೊತೆಗೆ ಅಡುಗೆ ಮಾಡುತ್ತಿದ್ದಳು. ಹೊಲದಲ್ಲಿ ಕೂಲಿ ಕೆಲಸಕ್ಕೆ ಹೋಗುವ ತರಾತುರಿಯಲ್ಲಿ ಇದ್ದಳು. ನಾವು ಹೋಗಿದ್ದಕ್ಕೆ ಅವಳಿಗೆ ತೊಂದರೆ ಅನ್ನಿಸಿದರೂ, 'ಸ್ವಲ್ಪ ತಡ ಮಾಡಿ ಹೋದರಾಯಿತು' ಎಂದು ನಮ್ಮ ಜೊತೆಗೆ ಮಾತಿಗೆ ಕುಳಿತಳು. ಈ ಸಂದರ್ಭದಲ್ಲಿ ರಂಜನಾ ನಮ್ಮ ಜೊತೆಗೆ ಹಂಚಿಕೊಂಡ ವಿಷಯಗಳನ್ನು ಈ ಕೆಳಗೆ ವಿವರಿಸಲಾಗಿದೆ.

### ಪೂರ್ವ

*ನಾನು ಅತ್ಯಂತ ಬಡ ಕುಟುಂಬದ ಹರಿಜನ ಸಮಾಜಕ್ಕೆ ಸೇರಿದವಳು. ಈ ಮನೆಯ ಹಿರಿಯ ಮಗಳು. ನನಗೆ ಇಬ್ಬರು ತಮ್ಮಂದಿರು. ನಮ್ಮ ಕುಟುಂಬಕ್ಕೆ ಭೂಮಿಯಾಗಲಿ, ಮನೆಯಾಗಲಿ ಇರಲಿಲ್ಲ. ಹಿರಿಯರ ಜಾಗದಲ್ಲಿರುವ ಗುಡಿಸಲೇ ಆಧಾರವಾಗಿತ್ತು. ಮನೆಯ ಆದಾಯಕ್ಕಾಗಿ ಕೂಲಿಗೇ ಹೋಗ ಬೇಕಾಗಿತ್ತು. ನನ್ನ ತಂದೆ ಅತಿಯಾದ ಮದ್ಯಪಾನಿಯಾಗಿದ್ದ. ನನ್ನ ತಾಯಿಯ ಗರ್ಭಕೋಶಕ್ಕೆ ದೊಡ್ಡ ಗಂಟಾಗಿ, ಅವಳು ಚಿಕಿತ್ಸೆಗಾಗಿ ಹಣವಿಲ್ಲದೇ ಬಳಲುತ್ತಿದ್ದಳು. ಇನ್ನು ಉಳಿದವರು ಚಿಕ್ಕ ತಮ್ಮಂದಿರು. ಸಹಜವಾಗಿ ಅವರನ್ನೆಲ್ಲ ಸಾಕಬೇಕಾದ ಜವಾಬ್ದಾರಿ ನನ್ನ ಹೆಗಲಿಗೆ ಬಿದ್ದಿತ್ತು. ಆಗ ನನಗೆ ೧೨ ವರ್ಷ ಇರಬಹುದು ಅನ್ನಿಸುತ್ತದೆ. ಅಕ್ಷರವಿಲ್ಲ. ವಯಸ್ಸಿಲ್ಲ. ವ್ಯವಹಾರವೆಂದರೆ ಗೊತ್ತಿಲ್ಲ. ಕೇರಿಯ ಕೂಲಿ*

ಮಾಡುವ ದೊಡ್ಡ ಹೆಂಗಸರ ಹಿಂದೆ ಕೆಲಸಕ್ಕಾಗಿ ಹೋಗಲಾರಂಭಿಸಿದ್ದೆ. ಆದರೆ ಅದರಿಂದ ಏನೂ ದಕ್ಕಲಿಲ್ಲ. ಹಾಗಾಗಿ ಅದನ್ನು ಬಿಟ್ಟು ಊರಲ್ಲಿ ಓಡಾಡಿ, ಎತ್ತು, ಆಕಳು, ಹಾಕಿದ ಸೆಗಣಿಯನ್ನು ಹಿಡಿದು ತಂದು ಕುಳ್ಳು(ಬೆರಣಿ) ಮಾಡುತ್ತಿದ್ದೆ. ಅವುಗಳನ್ನು ಒಣಗಿಸಿ ತಲೆ ಮೇಲೆ ಹೊತ್ತುಕೊಂಡು ಊರೂರು ಸುತ್ತಿ ಮಾರಾಟ ಮಾಡುತ್ತಿದ್ದೆ. ಹೀಗೆ ಒಂದು ಸಾರೆ ಕುಳ್ಳು(ಬೆರಣಿ) ಮಾರಾಟ ಮಾಡಲು ರಬಕವಿಗೆ ಹೋದಾಗ ನನಗೆ ಜೋಗತಿಯೊಬ್ಬಳು ಭೇಟಿಯಾಗಿದ್ದಳು. ಆಕೆಯ ಮುಂದೆ ನನ್ನ ಎಲ್ಲ ಸಮಸ್ಯೆ, ಪರಿಸ್ಥಿತಿಯನ್ನು ಹೇಳಿಕೊಂಡಿದ್ದೆ. ಅದನ್ನೆಲ್ಲ ಕೇಳಿದ ಆ ಜೋಗತಿ, "ನೀನು ನನ್ನ ಜೋಡಿ ಮಿರಜಕ್ಕರ ಇಲ್ಲ ಮುಂಬೈಗೇರ ಬಂದ್ರ ನಿನಗ ಕೆಲಸ ಕೊಡಿಸ್ತೈನಿ. ಇದ್ರಿಂದ ನಿನ್ನ ಎಲ್ಲಾ ಸಮಸ್ಯೆಗಳು ಬಗೆ ಹರೀಬಹುದು" ಎಂದು ಹೇಳಿ ನನ್ನನ್ನು ಮಿರಜಕ್ಕ ಕರೆದುಕೊಂಡು ಬಂದಳು.

ನಮ್ಮ ಅಪ್ಪನ ಕುಡಿತ, ಅವ್ವನ ಅನಾರೋಗ್ಯಕ್ಕೆ, ಚಿಕ್ಕ ತಮ್ಮಂದಿರ ಹೊಟ್ಟೆಯ ಹಸಿವಿನ ಮುಂದೆ ಅವಳ ಜೊತೆ ಹೋಗಿ ಕೆಲಸ ಮಾಡುವುದೇ ಒಳ್ಳೆಯದು ಎಂದು ನನಗೆ ಅನಿಸಿತ್ತು. ಆದರೆ ಅಲ್ಲಿ ಇಂತಾ ಕೆಲಸ ಮಾಡಬೇಕಾಗಬಹುದೆಂದು ನನಗೆ ಗೊತ್ತಿರಲಿಲ್ಲ. ಆದರೆ ಅದೆಲ್ಲ ನನಗೆ ಕೆಲಸ ಕೊಡಿಸುತ್ತೇನೆಂದು ಕರೆದುಕೊಂಡು ಹೋಗಿದ್ದ, ಜೋಗತಿ ಅಲ್ಲಿ ಘರವಾಲಿಯೊಬ್ಬಳಿಗೆ ನನ್ನನ್ನು ಮಾರಾಟ ಮಾಡಿಬಿಟ್ಟಿದ್ದಳು. ಅದು ನನಗೆ ತಿಳಿಯುವ ಹೊತ್ತಗೆ ಘರವಾಲಿ ನನ್ನನ್ನು ಕಲ್ಲಲಿನ ಕೋಣೆಯೊಳಗೆ ಕೂಡಿ ಹಾಕಿದ್ದಳು. ಹಾಗೆಯೇ ಅಲ್ಲಿ ಒಂದು ವರ್ಷ ದಿನ ಕಳೆದ ನನ್ನನ್ನು ಅಲ್ಲಿಂದು ಮುಂಬಯಿಗೆ ಕರೆದುಕೊಂಡು ಬರುತ್ತಾರೆ. ಅಲ್ಲಿ ಮೂರು ವರ್ಷ ಕಳೆಯುವುದರೊಳಗೆ ಒಂದು ದಿನ ಪೋಲೀಸರ ಕೈಗೆ ಸಿಕ್ಕಿ ಬಿದ್ದಿದ್ದೆ.

**ಪುನರ್ವಸತಿ**

ನನ್ನ ಜೊತೆ ಕರ್ನಾಟಕದ ೪–೫ ಹುಡುಗಿಯರು ಸಿಕ್ಕಿದ್ದರು. ಅದರಲ್ಲಿ ಒಬ್ಬಳು ನಮ್ಮ ಊರಿಗೆ ಸಮೀಪದವಳೂ ಇದ್ದಳು. ಪೊಲೀಸರು ನಮ್ಮನ್ನು ಹಿಡಿದುಕೊಂಡು ಹೋಗಿ ಒಂದು ಹಾಸ್ಟೆಲ್‌ನಲ್ಲಿ ಇಟ್ಟಿದ್ದರು. ಪುನರ್ವಸತಿ ಕೇಂದ್ರದಲ್ಲಿ ಆರಾಮಾಗಿ ಓಡಾಡಿಕೊಂಡಿರಬಹುದಾಗಿತ್ತಾದರೂ ಸಹ ಒಂದು ದೊಡ್ಡ ಕಟ್ಟಡದಲ್ಲಿ ಮುಚ್ಚಿದ ಬಾಗಿಲಿನಲ್ಲೇ ನಮ್ಮನ್ನು ಇರಿಸಲಾಗಿತ್ತು. ಹಾಗಾಗಿ ಅದು ಜೈಲಿನಂತೆಯೇ ಗೋಚರಿಸುತ್ತಿತ್ತು. 'ಅವರೆಷ್ಟೇ ಪ್ರೀತಿ ಮಾಡಿದರೂ ಮನಸ್ಸಿಗೆ ನೆಮ್ಮದಿ ಇರಲಿಲ್ಲ'. ನನ್ನ ಹಾಗೆ ೫೦–೬೦ ಹುಡುಗಿಯರಿದ್ದರು. ಅಲ್ಲಿ ಊಟ ತುಂಬಾ ಚೆನ್ನಾಗಿ ಕೊಡುತ್ತಿದ್ದರು ತರಬೇತಿ ಹೇಳಿಕೊಡುತ್ತಿದ್ದರು. ಆದರೂ ಮನಸಿಟ್ಟು ಕಲಿಯಲು ಆಗುತ್ತಿರಲಿಲ್ಲ. ಅಲ್ಲಿರುವ ನೀರು ಒಳ್ಳೆಯದಾಗಿರಲಿಲ್ಲ. ಮೈಮೇಲೆ ಅಗಲ ಅಗಲ ಗುಳ್ಳೆಗಳು ಆಗಿದ್ದವು. ಅವು ಜೀವ ಹೋಗುವಷ್ಟು ಕೆರೆಯುತ್ತಿದ್ದವು. ಔಷಧ ಕೊಡುತ್ತಿದ್ದರು. ಆದರೂ ಕಡಿಮೆ ಅನ್ನಿಸುತ್ತಲೇ ಇರಲಿಲ್ಲ. ಒಟ್ಟಿನಲ್ಲಿ ಊರನ್ನು ಯಾವಾಗ ಕಂಡೇನೋ ಅನ್ನುವಂತಾಗಿತ್ತು.

ಅಲ್ಲಿಂದ ನಮ್ಮನ್ನು ಅಥಣಿಯ ಸಂಸ್ಥೆಗೆ ಒಪ್ಪಿಸಿದರು. ಅಲ್ಲಿ ಎರಡು ತಿಂಗಳು ಇದ್ದ ನಮಗೆ ಊರಿಗೆ ಹೋದ ಮೇಲೆ ಚೆನ್ನಾಗಿ ಇರುವಂತೆ ತಿಳಿಸುತ್ತಿದ್ದರು. ಸರಕಾರದಿಂದ ನಮಗಾಗಿ ಇರುವ ಸಹಾಯ ಸವಲತ್ತುಗಳನ್ನು ತಿಳಿಸಿದರು. ಸರಕಾರದಿಂದ ಹೀಗೆಲ್ಲ ಸೌಲಭ್ಯಗಳು ಇರುತ್ತವೆ ಎಂದು

ನಮಗೆ ಗೊತ್ತಿರಲಿಲ್ಲ. ಸರ್ಕಾರ ನಮ್ಮ ಕೈಹಿಡಿದರೆ ನಾನೆಂದೂ ಮುಂಬಯಿಯ ಕಾಮಾಟಿಪುರದಂತಹ ಅಸಹ್ಯ ಜಾಗಕ್ಕೆ ಕಾಲಿಡುವುದಿಲ್ಲ. ಎಂದು ನಾನು ಅವರ ಎದುರಿಗೆ ಹೇಳಿದ್ದೆ. ಎರಡು ತಿಂಗಳು ತಮ್ಮ ಹತ್ತಿರ ಇಟ್ಟುಕೊಂಡ ಅವರು ಪೊಲೀಸ್ ಠಾಣೆಯ ಮುಖಾಂತರ ನಮ್ಮ ತಂದೆ ತಾಯಿಗೆ ಒಪ್ಪಿಸಿದರು.

**ಪುನರ್ನೆಲೆ**

ನಮ್ಮನ್ನು ಊರಿಗೆ ಕಳಿಸಿದ ಸಂಸ್ಥೆಯವರು ಮರಳಿ ಲೈಂಗಿಕ ದಂಧೆಗೆ ಹೋಗದಂತೆ ಮನವರಿಕೆ ಮಾಡಿದ್ದರು. ಪೋಲೀಸ್ ಅಧಿಕಾರಿಗಳು "ಇದೇ ಕೊನೆ ಇನ್ನೊಂದು ಸಾರೆ ಏನಾದರೂ ಇವಳು ಊರು ಬಿಟ್ಟು ಲೈಂಗಿಕ ದಂಧೆಗೆ ಹೋದರೆ, ನಿಮ್ಮ ಮನೆಯ ಎಲ್ಲರನ್ನೂ ಎಳೆದು ತಂದು ಜೈಲಿಗೆ ಹಾಕುತ್ತೇವೆ" ಎಂದು ನಮ್ಮ ತಂದೆ ತಾಯಿಗೆ ಎಚ್ಚರಿಕೆ ನೀಡಿದ್ದರು. ಹಾಗಾಗಿ ಮರಳಿ ಮುಂಬಯಿಗೆ ಹೋಗುವ ಧೈರ್ಯ ಮಾಡಿಲ್ಲ.

ಮುಂಬಯಿನಿಂದ ಬಿಡುಗಡೆಯಾಗಿ ಬಂದ ಮೇಲೆ ನಮ್ಮ ಊರಲ್ಲಿಯೇ ಅದೇ ದಂಧೆಯನ್ನು ಮುಂದುವರಿಸಬೇಕೆಂಬ ಹಂಬಲ ನನಗೆ ಇತ್ತು. ಆದರೆ ಊರಿನ ಪರಿಸ್ಥಿತಿ ಅದಕ್ಕೆ ಆಸ್ಪದ ಕೊಡುತ್ತಿರಲಿಲ್ಲ. ಕೇರಿಯ ಯುವಕರು ಎಲ್ಲ ಕುಟುಂಬಗಳಿಗೆ ತುಂಬಾ ಬಿಗಿ ಮಾಡಿದ್ದರು. ಹುಡುಗಿಯರಿರುವ ಮನೆಗೆ ಹೊರಗಿನ ಅವರಿಗೆ ಸಂಬಂಧವಿರದ ಗಂಡಸರು ಅನಾವಶ್ಯಕವಾಗಿ ಪದೇ ಪದೇ ಹೋಗುತ್ತಿದ್ದರೆ ಅವರ ಮೇಲೆ ನಿಗಾ ಇಟ್ಟು, ಅಂತಹ ದಂಧೆಗಳು ನಡೆಯದಂತೆ ಮಾಡುತ್ತಿದ್ದರು.

**ಪ್ರಸ್ತುತ ಬದುಕು**

ನಮ್ಮನ್ನು ಸಂಸ್ಥೆಯವರು ಊರಿಗೆ ಕರೆದುಕೊಂಡು ಬಂದದ್ದು ತುಂಬಾ ಒಳ್ಳೆಯದಾಯಿತು. ಇಲ್ಲದಿದ್ದರೆ ಇಷ್ಟ ಹೊತ್ತಿಗೆ ದೊಡ್ಡ ದೊಡ್ಡ ರೋಗ ಅಂಟಿಸಿಕೊಳ್ಳುತ್ತಿದ್ದೆವು. ಇನ್ನೂ ದುಡಿಯಲು ಶಕ್ತಿ ಇದೆ. ಬದುಕು ಕಟ್ಟಿಕೋಬಹುದು. ಅದಕ್ಕಾಗಿ ಸಂಸ್ಥೆಗೆ ಎಷ್ಟು ಧನ್ಯವಾದ ಹೇಳಿದರೂ ಕಡಿಮೇಯೇ.

ನಾನು ಈಗ ರೈತರ ಹೊಲಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದೇನೆ. ಒಂದು ದಿನಕ್ಕೆ ೧೦೦ ರೂ. ಕೂಲಿ ಸಿಗುತ್ತದೆ. ಅದರ ಜೊತೆಗೆ ಒಂದು ಎಮ್ಮೆಯನ್ನು ಸಾಕಿಕೊಂಡಿದ್ದೇನೆ. ಅದರಿಂದಲೂ ಸ್ವಲ್ಪ ಆದಾಯ ಬರುತ್ತದೆ. ಪಂಚಾಯತಿಯವರು ನನ್ನ ತಾಯಿಯ ಹೆಸರಲ್ಲಿ ಮನೆ ಕಟ್ಟಿಕೊಟ್ಟಿದ್ದಾರೆ. ಅವರ ಜೊತೆಯೇ ಇರುತ್ತೇನೆ. ನಮ್ಮ ತಂದೆ ದುಡಿಯಲು ಮಿರಜ್ ಹತ್ತಿರದ ಒಂದು ಊರಿಗೆ ಹೋದವರು ತಿರುಗಿ ಬಂದಿಲ್ಲ. ಒಬ್ಬ ತಮ್ಮ ಅಪಘಾತವಾಗಿ ತೀರಿಕೊಂಡಿದ್ದಾನೆ. ಇನ್ನೊಬ್ಬ ತಮ್ಮ ಗೌಂಡಿಯ ಕೈಕೆಳಗೆ ಕೆಲಸಕ್ಕೆ ಹೋಗುತ್ತಾನೆ.

ನನ್ನನ್ನು ಮದುವೆಯಾಗಬೇಕೆಂದಿದ್ದ ಸೋದರಮಾವನಿಗೆ ಮತ್ತೊಂದು ಬೇರೆ ಮದುವೆಯಾಗಿದೆ. ಆದರೆ ಅದೇ ಸೋದರಮಾವನ ಜೊತೆ ಈಗ ನನ್ನ ಲೈಂಗಿಕ ಜೀವನ ಮುಂದುವರೆದಿದೆ. ಎರಡು ಹೆಣ್ಣುಮಕ್ಕಳು ಹುಟ್ಟಿವೆ. ದಿನವೂ ಶಾಲೆಗೆ ಹೋಗುತ್ತವೆ. ಮಕ್ಕಳನ್ನು ಜವಾಬ್ದಾರಿಯಿಂದ ನೋಡಿಕೊಳ್ಳುತ್ತಿದ್ದೇನೆ. ಸಾಲ ಮಾಡಿ ನನ್ನ ತಾಯಿಯ ಗರ್ಭಾಶಯದ ಆಪರೇಶನ್ ಮಾಡಿಸಿದ್ದೇನೆ. ಆರು ತಿಂಗಳ ಹಿಂದೆ ನನ್ನ ಗರ್ಭಕೋಶದ ಆಪರೇಶನ್ ಸಹ ಆಗಿದೆ.

*ನನ್ನ ಜೊತೆಗಿರುವ ನಮ್ಮ ಸೋದರಮಾವ ಒಳ್ಳೆಯವನಿದ್ದಾನೆ. ನನ್ನ ಕಷ್ಟಗಳಲ್ಲಿ ಭಾಗಿಯಾಗುತ್ತಾನೆ. ಹಾಗಾದರೆ ನಿನ್ನ ಮಕ್ಕಳಿಗೆ ಅವನ ಹೆಸರನ್ನೇ ಹಚ್ಚಿದ್ದೀಯಾ? ಎಂಬ ಪ್ರಶ್ನೆಗೆ "ಇಲ್ಲ ಅವನ ಹೆಸರು ಯಾಕೆ? ಅವನು ಅಪ್ಪ ಇರಬಹುದು. ಆದರೆ ನಾನು ಅವನನ್ನು ಮದುವೆಯಾಗಿಲ್ಲ. ಅವನ ಹೆಸರು ಹಚ್ಚಿಕೊಳ್ಳುವುದರಿಂದ ಏನು ಸಿಗುತ್ತದೆ? ಇನ್ನೂ ನನ್ನ ಹೆಸರನ್ನು ಹಚ್ಚಿಕೊಳ್ಳುವುದರಿಂದ ದೇವದಾಸಿ ಮಕ್ಕಳು ಎಂದು, ಸರ್ಕಾರದಿಂದ ಏನಾದರೂ ಸಹಾಯ, ಸೌಲಭ್ಯಗಳು ದೊರೆಯಬಹುದು. ಅದಕ್ಕೆ ನನ್ನ ಹೆಸರನ್ನೇ ಹಚ್ಚಿದ್ದೇನೆ. ಎಂದು ಹೇಳುವಾ ರಂಜನಾ ಮುಂದುವರೆದು, ನಾನು ದೇವದಾಸಿಯಲ್ಲ. ಆದರೆ ದೇವದಾಸಿ ಎಂದು ಹೇಳಿದರೆ ಲೈಂಗಿಕ ಚಟುವಟಿಕೆ ಮಾಡಿದರೂ ಯಾರೂ ಕೇಳುವುದಿಲ್ಲ. ಅದಕ್ಕಾಗಿ ತಾನು ದೇವದಾಸಿ ಎಂದೇ ಹೇಳಿಕೊಂಡಿದ್ದೆ. ನಾನು ದೇವದಾಸಿ ಅಂತ ಹೇಳಿಕೊಂಡಿದ್ದರೂ ಸಹ ನನ್ನ ಹೆಸರು ದೇವದಾಸಿಯರ ಪಟ್ಟಿಯಲ್ಲಿ ದಾಖಲಾಗಿಲ್ಲ.  ಹಾಗಾಗಿ ದೇವದಾಸಿ ಸಮರ್ಪಣಾ ಯೋಜನೆಯಿಂದ ಯಾವುದೇ ಸೌಲಭ್ಯ ದೊರೆತಿಲ್ಲ. ಸಮಾಜದಲ್ಲಿ ಹೆಣ್ಣೊಬ್ಬಳು ಮದುವೆಯಾಗದೇ, ದೇವದಾಸಿಯೂ ಆಗದೇ ಹಾಗೆ ಸೂಳೆಯಾಗಿ ಬದುಕುವುದು ತುಂಬಾ ಕಷ್ಟವಿದೆ.  ಅದಕ್ಕಾಗಿ ಸೂಳೆ ಮುತ್ತು ಬಿಟ್ಟು ಗರತಿ ಮುತ್ತಾದರೂ ಕಟ್ಕೋಬೇಕು ಅಂತ ವಿಚಾರ ಮಾಡುತ್ತಿದ್ದೇನೆ.*

### ಪ್ರಕರಣ–೨: ಚಿನ್ನವ್ವ

**ಚಿನ್ನವ್ವ** ೧೬ ವಯಸ್ಸಿನ ಅನಕ್ಷರಸ್ಥ ಹೆಣ್ಣುಮಗಳು. ಮೂಲತಃ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನವಳು. ೨೭.೨.೨೦೦೩ರಲ್ಲಿ ಮುಂಬಯಿಯ ಕಾಮಾಟಿಪುರದಿಂದ ಬಾಲನ್ಯಾಯ ಕಾಯಿದೆ ೨೦೦೦ದ ಸೆಕ್ಷನ್ ೩೩ರ ಅಡಿಯಲ್ಲಿ ರಕ್ಷಣೆಗೊಂಡವಳು. ಸುಮಾರು ನಾಲ್ಕೂವರೆ ತಿಂಗಳು ಮುಂಬಯಿಯ ದೇವನಾರ್‌ದ ಸರ್ಕಾರಿ ವಿಶೇಷ ಬಾಲಗೃಹದಲ್ಲಿ ಇವಳನ್ನು ಇಡಲಾಗಿತ್ತು. ಈ ಅವಧಿಯಲ್ಲಿ, ಒಂದು ಕಡೆ ಇವಳ ಬಿಡುಗಡೆಗಾಗಿ, ನ್ಯಾಯಾಲಯದ ಮುಂದೆ ವಕಾಲತ್ತುಗಳು ನಡೆಯುತ್ತಿದ್ದವು. ಮತ್ತೊಂದೆಡೆಗೆ ಬಾಲಗೃಹದಲ್ಲಿ ಇವರ ಪುನರ್ವಸತಿಗೆ ಸಂಬಂಧಿಸಿದಂತೆ ಸ್ವಯಂ ಉದ್ಯೋಗ ತರಬೇತಿಗಳು ಸಮಾಲೋಚನೆ ಗಳು ನಡೆಯುತ್ತಿದ್ದವು. ಸಮಾಲೋಚನೆಯಲ್ಲಿ ಇವಳು ಕರ್ನಾಟಕದ ಮುಧೋಳ ತಾಲೂಕಿನವಳೆಂದು ತಿಳಿದು ಬಂದಿತ್ತು. ಹಾಗಾಗಿ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಯೊಂದಕ್ಕೆ ಮುಂದಿನ ಪುನರ್ವಸತಿಗಾಗಿ ಚಿನ್ನವ್ವಳನ್ನು ಒಪ್ಪಿಸಲಾಯಿತು. ಅಲ್ಲಿಂದ ಚಿನ್ನವ್ವಳನ್ನು ದಿನಾಂಕ ೬.೮.೨೦೦೩ರಿಂದ ೨೨.೧೦.೨೦೦೩ರ ವರೆಗೆ ಅಂದರೆ ಎರಡು ತಿಂಗಳು ಬೆಳಗಾವಿ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಯಲ್ಲಿ ಒಪ್ಪಿಸಲಾಗಿತ್ತು. ಈ ಅವಧಿಯಲ್ಲಿ ಅವಳ ಮತ್ತು ಅವಳ ತಾಯಿಯ ಜೊತೆ ಸಮಾಲೋಚನೆ ನಡೆಸಿ, ಲೋಕಾಪೂರ ಪೋಲೀಸ್ ಸ್ಟೇಶನ್ನಿನ ಮೂಲಕ ಚಿನ್ನವ್ವಳನ್ನು ಅವಳ ತಾಯಿಯ ಸುಪರ್ದಿಗೆ ಒಪ್ಪಿಸಲಾಗಿತ್ತು.

ಪುನರ್ವಸತಿಗೊಳಿಸಿದ ಸಂಸ್ಥೆಯು ನೀಡಿದ ಮಾಹಿತಿಯ ಪ್ರಕಾರ ಚಿನ್ನವ್ವಳನ್ನು ಭೇಟಿಯಾಗಲು ನಾವು ಅವರ ಊರಿಗೆ ಹೋದಾದ, ಚಿನ್ನವ್ವಳ ತಾಯಿ ನಮಗೆ ಸಿಕ್ಕಿದ್ದರು. ಅವರು ಬಸ್ ನಿಲ್ದಾಣದಲ್ಲಿ ಇರುವ ತಮ್ಮ ಪಟ್ಟಿ  ಅಂಗಡಿ(ಪಾನ್ ಶಾಪ್)ಯಲ್ಲಿ ಕುಳಿತ್ತಿದ್ದರು. ಅವರ ಜೊತೆ ಚಿನ್ನವ್ವಳ ಕುರಿತು ವಿಚಾರಿಸಿದಾಗ, ಅವರು ಮಾಹಿತಿ ನೀಡಲು ಹಿಂಜರಿದರು. ಅದು ಸಾಧ್ಯವಾಗುವುದಿಲ್ಲ ಅನ್ನುವ ಮಾತನ್ನು

ಮಾತನಾಡಿದಳು. "ಅಕೀ ಈಗ ಕೆಲಸಕ್ಕ ಹೋಗ್ಯಾಳ ಬರೋದು ರಾತ್ರಿ ೭-೮ರ ತನಕ ಆಕ್ಕೈತಿ" ಅಂದಳು. ನಾವು ಅಲ್ಲಿಗೆ ಹೋದ ಉದ್ದೇಶದ ಬಗ್ಗೆ ಹೇಳಿದಾಗ, "ಅಕೀ ಮುಧೋಳದಗ ಗಾರ್ಮೆಂಟ್ ಕೆಲಸ ಮಾಡತಾಳ್ರೀ. ಕೆಲಸ ಮುಗಿಸ್ಕೊಂಡು ಬರದು ಬಾಳ ತಡ ಆಕ್ಕೈತಿ. ಅದಕ್ಕ ಅಕೀ ಇರೋ ಜಾಗ ನಾನ ತೋರಸ್ತಿನಿ ಬರ್ರೀ" ಅಂತ ಅವಳೇ ಮುಧೋಳದವರೆಗೂ ನಮ್ಮ ಜೊತೆ ಬಂದಳು.

ಮುಧೋಳಕ್ಕೆ ಹೋಗುವಾಗ ದಾರಿಯಲ್ಲಿ ಚಿನ್ನವ್ವಳ ತಾಯಿ "ಅಕೀ ವಿಷಯ ಹೀಂಗ ಅಂತ ಗಾರ್ಮೆಂಟ್ ಅಂಗಡ್ಯಾನವರಿಗೆ ಯಾರಿಗೂ ಗೊತ್ತಿಲ್ರೀ. ಗೊತ್ತಾದ್ರ ಆಕೀಗಿ ಅವಮಾನ ಆಗ್ತೈತಿ. ಅದ್ಕ ಆ ವಿಷಯ ಅಲ್ಲಿದ್ದವ್ರಿಗೆ ಗೊತ್ತಾಗದಂಗ ಅಕಿನ್ನ ಹೊರಗ ಕರದು ಮಾತಾಡಸ್ರೀ. ಅವರಿಗೆ ಗೊತ್ತಾದ್ರ ಅಕೀನ್ನ ಕೆಲಸದಿಂದನೂ ತೆಗೀಬಹುದು" ಅಂತ ಹೇಳಿದಳು. ಹೌದು, ನಮಗೂ ಅದು ನಿಜ ಅನ್ನಿಸಿತ್ತು.

ಗಾರ್ಮೆಂಟ್ ನಡೆಯುವ ಜಾಗಕ್ಕೆ ಹೋಗುವ ಮೊದಲೇ ಚಿನ್ನವ್ವಳ ಜೊತೆ ಕೆಲಸ ಮಾಡುತ್ತಿದ್ದ, ಅವಳ ತಂಗಿ ಅಂಗಡಿಯ ಹೊರಗೆ ಬಂದು ನಿಂತಿದ್ದಳು. ಊರಿನವರಾರೋ ಅವರಿಗೆ ಫೋನ್ ಮಾಡಿ ಹೇಳಿದ್ದರೆನ್ನನಿಸುತ್ತದೆ. ಅವಳು ನಮ್ಮ ದಾರಿಯನ್ನೇ ಕಾಯುತ್ತಿದ್ದಳು. ಅವಳು ಚಿನ್ನವ್ವಳನ್ನು ಗಾರ್ಮೆಂಟ್‌ನಿಂದ ಹೊರಗೆ ಕರೆದುಕೊಂಡು ಬಂದು ಒಂದು ಟೇಲರಿಂಗ್ ಅಂಗಡಿಯಲ್ಲಿ ಕೂಡ್ರಿಸಿದ್ದಳು. ಚಿನ್ನವ್ವಳೊಂದಿಗೆ ಮಾತನಾಡುತ್ತಾ ಒಂದು ಆತ್ಮೀಯತೆಯ ವಾತಾವರಣವು(ರ್‍ಯಾಪೋರ್ಟ್) ಅಲ್ಲಿ ನಿರ್ಮಾಣವಾಗಿತ್ತು. ಆ ಸಂದರ್ಭಗಲ್ಲಿ ಚಿನ್ನವ್ವ ನಮ್ಮೊಂದಿಗೆ ಹಂಚಿಕೊಂಡ ವಿಷಯಗಳನ್ನು ಅವಳದೇ ದಾಟಿಯಲ್ಲಿ ಕೆಳಗೆ ವಿವರಿಸಲಾಗಿದೆ.

**ಪೂರ್ವ**

*ನಾವು ನಮ್ಮ ತಾಯಿ ತಂದೆಗೆ ಇಬ್ಬರು ಮಕ್ಕಳು. ನಾನೇ ದೊಡ್ಡವಳು ಇನ್ನೊಬ್ಬಳು ನನ್ನ ತಂಗಿ ಇದ್ದಾಳೆ. ನಾನು ನನ್ನ ತಂಗಿ ಇಬ್ಬರೂ ಓದಿದವರಲ್ಲ. ತಾಯಿ ಯಾವುದೋ ಕಾರಣಕ್ಕೆ ನಾವು ಚಿಕ್ಕವರಿರುವಾಗಲೇ ನಮ್ಮ ತಂದೆಯ ಜೊತೆ ಜಗಳವಾಗಿ ಮನೆ ಬಿಟ್ಟು ಬಂದು ತನ್ನ ತಾಯಿಯ ಮನೆಯಲ್ಲಿ ಇದ್ದಳು. ಹಾಗಾಗಿ ನಾವು ತಾಯಿಯ ಜೊತೇಗಷ್ಟೇ ಅವಳ ಮನೆಯಲ್ಲಿ ಬೆಳೆದದ್ದು.*

*ನಾನು ಮುಂಬಯಲಿ ಮತ್ತು ಅಥಣಿಯಲ್ಲಿ ಇದ್ದಾಗ ಅವರು ನನ್ನ ಕುರಿತು ಕೇಳಿದಾಗ, ನಾನು ನನ್ನ ತಾಯಿ ದೇವದಾಸಿ ಎಂದೂ ಮತ್ತು ನಾನು ವಿಧವೆ ಎಂದೂ ಹೇಳಿಕೊಂಡಿದ್ದೆ. ಗಂಡ ಮತ್ತು ಮಗ ಇದ್ದೂ, ಅವರನ್ನು ಬಿಟ್ಟು ದಂಧೆ ಮಾಡುವುದೆಂದರೆ, ಬೇರೆಯವರ ಮುಂದೆ ನನಗೆ ಅವಮಾನದ ಸಂಗತಿಯಾಗಿತ್ತು. ಹಾಗಾಗಿ ಆ ರೀತಿ ಹೇಳಿದ್ದೆ. ನಾನು ಚಿಕ್ಕವಳಿದ್ದಾಗಲೆ ನನ್ನ ಮದುವೆಯಾಗಿತ್ತು. ನನ್ನ ಗಂಡ ಡ್ರೈವರ್ ಆಗಿದ್ದ. ಅದ್ಯಾಕೋ ಗೊತ್ತಿಲ್ಲ ನಮ್ಮ ಮಗ ಮೂರ್‍ನಾಲ್ಕು ತಿಂಗಳುದವನಿದ್ದಾಗಲೇ ನಮ್ಮನ್ನು ಬಿಟ್ಟು ಹೋಗಿದ್ದ. ನಾನು ನನ್ನ ತಾಯಿಯ ಜೊತೆಗೆ ಇರತೊಡಗಿದ್ದೆ.*

*ನನ್ನನ್ನೇನು ಯಾರೂ ಮೋಸ ಮಾಡಿ ಮುಂಬಯಿಗೆ ಕರೆದುಕೊಂಡು ಹೋಗಿರಲಿಲ್ಲ. ನಮ್ಮ ಮನೆಯಲ್ಲಿ ಬಹಳ ಬಡತನವಿತ್ತು. ತಾಯಿಯೇ ಎಲ್ಲದಕ್ಕೂ ಜೀವ ತೇಯಬೇಕಿತ್ತು. ಹಾಗಾಗಿ ನಮ್ಮ*

*ಊರಿನಲ್ಲಿ ಮುಂಬಯಿಗೆ ದಂಧೆ ಮಾಡಲು ಹೋಗುತ್ತಿದ್ದವರ ಜೊತೆ ನನ್ನ ತಾಯಿ ಕಳಿಸಿಕೊಟ್ಟಿದ್ದರು. ನಮ್ಮ ಊರಿನಲ್ಲಿ ದಂಧೆ ಮಾಡಲು ಬಹಳ ಮಂದಿ ಹೋಗುತ್ತಿದ್ದರು. ಹಾಗಾಗಿ ಹಾಗೆ ಹೋಗುವುದು ನಮಗೇನು ತಪ್ಪು ಅಂತ ಅನಿಸುತ್ತಿರಲಿಲ್ಲ. ಬಡತನದಲ್ಲಿದ್ದ, ಗಂಡ ಬಿಟ್ಟು ಹೋಗಿದ್ದ, ಜಾತಿಯಿಂದ ಕೆಳಸ್ತರದಲ್ಲಿ ಇದ್ದ ನಮ್ಮಂತವರು ಕೂಲಿ ಕೆಲಸಕ್ಕೆ ಹೋದಾಗಲೇ ಹೊಟ್ಟೆ ತುಂಬುತ್ತಿತ್ತು. ಊರಲ್ಲಿಯೂ ಒಳ್ಳೆಯ ಜನರು ಇದ್ದಿದ್ದಿಲ್ಲ. ಇಲ್ಲೇ ಊರೊಳಗ ಇದ್ದಿದ್ದರೂ ಅದನ್ನೇ ಮಾಡಲು ಹಚ್ಚುತ್ತಿದ್ದರು. ಆದ್ದರಿಂದ ನಮ್ಮ ತಾಯಿ ನನ್ನನ್ನು ಮುಂಬಯಿಗೆ ದಂಧೆಗೆ ಕಳಿಸಿದ್ದರು. ಆಗ ನಾನು ೧೪ ವರ್ಷದವಳು.*

*ಅಲ್ಲಿ ನಮ್ಮ ಪರಿಚಯದವರಿದ್ದದ್ದರಿಂದ ನನಗೇನೂ ಕಷ್ಟವಾಗಲಿಲ್ಲ. ನಾನಾಗಿಯೆ ಹೋಗಿದ್ದರಿಂದ ನನ್ನನ್ನು ಕೂಡಿಯೂ ಇಟ್ಟಿರಲಿಲ್ಲ. ಸ್ವಲ್ಪ ದಿನ ಘರವಾಲಿಯ ಕೈಯಲ್ಲಿ ದಂಧೆಯನ್ನೇ ಮಾಡಿದ್ದೆ. ಆದರೆ ಇನ್ನೂ ಹೆಚ್ಚಿನ ಲಾಭಗಳಿಸುವುದಕ್ಕಾಗಿ ಬಾರ್‌ನಲ್ಲಿ ಸಪ್ಲೈಯರ್ ಗರ್ಲ್ ಆಗಿ ಸೇರಿಕೊಂಡಿದ್ದೆ. ಅದರಿಂದಲೂ ಚೆನ್ನಾಗಿ ಆದಾಯ ಬರತೊಡಗಿತ್ತು. ನಾನು ಮುಂಬಯಿಗೆ ಬಂದನಂತರ ಮನಿ ಆರ್ಡರ್ ಮೂಲಕ ಪ್ರತಿ ತಿಂಗಳೂ ನನ್ನ ತಾಯಿಗೆ ಹಣವನ್ನು ಕಳಿಸುತ್ತಿದ್ದೆ. ಕೆಲವೊಮ್ಮೆ ನಾನೇ ಊರಿಗೆ ಹೋಗಿ ಬರುತ್ತಿದ್ದೆ. ಹೀಗೆ ಎರಡೂವರೆ ವರ್ಷ ಕಳೆದ ನನ್ನನ್ನು ಒಂದು ದಿನ ಪೋಲೀಸ್ ಹಿಡಿದುಕೊಂಡು ಬಂದು ಬಾಲಗೃಹದಲ್ಲಿ ಇಟ್ಟಿದ್ದರು.*

**ಪುನರ್ವಸತಿ**

ಮುಂಬಯಿಯಲ್ಲಿ ನಮ್ಮನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಊಟದ ವ್ಯವಸ್ಥೆ ಚೆನ್ನಾಗಿತ್ತು. ಆದರೂ ಅಲ್ಲಿ ನಮಗೆ ಇರಲು ಮನಸ್ಸು ಬರುತ್ತಿರಲಿಲ್ಲ. ಬಾಲಗೃಹದಲ್ಲಿ ಟೇಲರಿಂಗ್ ತರಬೇತಿಯ ವ್ಯವಸ್ಥೆ ಇತ್ತು. ಬ್ಯಾಗ್ ಹೆಣೆಯುವುದು, ಕಸೂತಿ ಹೆಣೆಯುವುದನ್ನು ಕಲಿಸುತ್ತಿದ್ದರು. ಆದರೆ ನಾನೇ ಕಲಿಯಲು ಮನಸ್ಸು ಮಾಡಿರಲಿಲ್ಲ. ಬಹಳಷ್ಟು ಹುಡುಗಿಯರು "ಅದನ್ನು ಕಲಿತು ಏನು ಮಾಡುವುದು ನಮ್ಮೂರಾಗ ಅವನ್ನೆಲ್ಲ ಯಾರು ತಗೋತಾರ, ನಮ್ಮ ಕಡೀಗೆ ಯಾರ ಅರಿವಿ ಹೊಲಿಸ್ಕೋತಾರ" ಅಂತ ಅನ್ನುತ್ತಿದ್ದರು. ಅದು ಖರೇನೂ ಇತ್ತು. ನಾವು ಮಾದರ ಜನ ಅದೇವಿ. ನಮ್ಮೂರಾಗ ಯಾರೂ ನಮ್ಮನ್ನ ಮುಟ್ಟಿಸಿಕೊಳ್ಳೋದಿಲ್ಲ. ಮಾಡಿವರ ಅವರ ಹೊಲದಾಗ ಕೂಲಿ ಕೆಲಸಾನ ಮಾಡಬೇಕು. ಮುಸುರಿ ಸಹಿತ ತಿಕ್ಕಿಸಿಕೊಳ್ಳೋದಿಲ್ಲ. ಹಂಗಾಗಿ ನಮಗ ಅವರ ಕಲಸೋ ಟೇಲರಿಂಗ್, ಬ್ಯಾಗ್ ಮಾಡೊದು ಇಂತಾದ್ದರಾಗ ಆಸಕ್ತಿ ಇರ್ತಿರಲಿಲ್ಲ. ನಮ್ಮನ್ನ ಅಲ್ಲಿಂದ ನಮ್ಮೂರಿಗೆ ಕಳಸ್ತಾರಂತ ತಿಳಿದುಕೊಂಡಿದ್ದೆವು. ಆದರೆ ಮತ್ತೆ ಅಲ್ಲಿಂದ ಅಥಣಿಯ ಸಂಸ್ಥೆಗೆ ಕಳಿಸಿದರು. ಅಲ್ಲಿ ಎರಡು ತಿಂಗಳು ಇದ್ದ ನನ್ನನ್ನು ಅವರೂ ಚೆನ್ನಾಗಿ ನೋಡಿಕೊಂಡಿದ್ದರು ನಾವು ಮರಳಿ ಮುಂಬಯಿಗೆ ಹೋಗಬಾರದಂತೆ ಮಾಡಲು ತುಂಬಾ ತಿಳುವಳಿಕೆ ಹೇಳುತ್ತಿದ್ದರು. ಅವರ ಮೇಲೆ ನನಗೆ ತುಂಬಾ ಕೋಪವಿತ್ತು. ಅವರೇ ಇದನ್ನೆಲ್ಲ ಮಾಡಿದ್ದು ಎಂದು ಅವರೆಲ್ಲರ ಮೇಲೆ ಸಿಟ್ಟು ಮಾಡಿಕೊಂಡು, ಒಂದೊಂದು ಸಾರೆ ಊಟವನ್ನೇ ಮಾಡುತ್ತಿರಲಿಲ್ಲ. "ಹಿಂಗ ನೀವ್ರ ನಮ್ಮನ್ನು ಹಿಡಕೊಂಡು ಬಂದು ಕುಂತ್ರಿಸಿದ್ರ ನಮ್ಮ ಮನಿ ಹೆಂಗ

ನಡೀಬೇಕು. ನಾವು ದುಡಿದಿದ್ರ ನಮ್ಮ ಮನಿ ನಡಿಯೂದಿಲ್ಲ. ಬಾಳ ಸಮಸ್ಯೆ ಆಗ್ತಾವ" ಅಂತ ಕೂಗಾಡುತ್ತಿದ್ದೆ. ಅವರು ಹೇಳುವ ಯಾವುದೇ ಸಮಾಧಾನ, ತಿಳಿವಳಿಕೆ ಮಾತುಗಳು ನನಗೆ ಹಿಡಿಸುತ್ತಿರಲಿಲ್ಲ. ಯಾವಾಗ ಇಲ್ಲಿಂದ ನಮ್ಮನ್ನು ಮನೆಗೆ ಕಳಿಸುತ್ತಾರೋ ಎಂದು ಎದುರು ನೋಡುತ್ತಿದ್ದೆವು.

ಅಥಣಿಯ ಸಂಸ್ಥೆಯವರು ನಮ್ಮ ಆರೋಗ್ಯ ತಪಾಸಣೆ ಮಾಡಿಸಿ ಊರಿಗೆ ಕಳಿಸಲು, ನಮ್ಮ ಊರಿನ ಪಂಚಾಯತಿಯವರೊಂದಿಗೂ ಮಾತನಾಡಿದ್ದರು. ಲೋಕಾಪೂರ ಪೊಲೀಸ್ ಸ್ಟೇಷನ್ಗೆ ಕರೆದುಕೊಂಡು ಹೋಗಿ, ನನ್ನಿಂದ ಮತ್ತು ನನ್ನ ತಾಯಿಯ ಕಡೆಯಿಂದ, "ಇನ್ನು ಮುಂದೆ ಈ ಚಟುವಟಿಕೆಗೆ ಮರಳುವುದಿಲ್ಲವೆಂದು" ಮುಚ್ಚಳಿಕೆ ಬರೆಸಿಕೊಳ್ಳಲಾಯಿತು. ಅಲ್ಲಿಯ ಪೋಲೀಸರೂ ಸಹ "ಒಂದೊಮ್ಮೆ ಮರಳಿ ಹೋದರೆ, ತಾಯಿಯನ್ನೇ ಬಂಧಿಸಿ ಜೈಲಿಗೆ ಹಾಕಲಾಗುವುದು" ಎಂದು ಎಚ್ಚರಿಕೆ ನೀಡಿದ್ದರು.

ಇನ್ನೊಂದು ವಿಚಾರ ನಾನು ಹೇಳಲೇಬೇಕು. ಅಂದು ಸಂಸ್ಥೆಯವರು ಪೊಲೀಸ್ ಸ್ಟೇಷನ್ನಿಗೆ ಕರೆದುಕೊಂಡು ಹೋದ ದಿನ, ಗಾಡಿಯಿಂದ ಇಳಿಯುತ್ತಲೇ ನನ್ನ ತಾಯಿ, ತನ್ನ ಜೊತೆ ತಂದಿದ್ದ ನನ್ನ ಮಂಗಳ ಸೂತ್ರವನ್ನು ಅವಸರವಸರವಾಗಿ ನನ್ನ ಕೊರಳಿಗೆ ಹಾಕಿದ್ದಳು. ಊರವರ ಮುಂದ ನಾನು ದಂಧೆ ಮಾಡುತ್ತಿದ್ದೆ ಅನ್ನುವುದು ಅವಳ ಆಸೆಯಾಗಿತ್ತು. ಆ ನಂತರ ನನ್ನ ೪ ವರ್ಷದ ಮಗ ಆ ದಿನ, ನನ್ನನ್ನು ಅಪ್ಪಿಕೊಂಡು, ಕಣ್ಣಲ್ಲಿ ನೀರು ತಂದು "ಅವ್ವ ನೀ ಇನ್ನ ಮ್ಯಾಲೆ ನನ್ನ ಬಿಟ್ಟು ಎಲ್ಲೀನೂ ಹೋಗಬ್ಯಾಡ" ಅಂತ ಅಂದಾಗ ನನ್ನ ಜೀವ ಹಿಂಡಿಂದಂತಾಗಿತ್ತು. ಆದರೆ ನನ್ನ ತಾಯಿಗೆ ಇದರ ಯಾವ ಪರಿವೆಯೆ ಇರಲಿಲ್ಲ. ಪೋಲೀಸ್ ಸ್ಟೇಶನ್‌ನ ಎಲ್ಲ ಕೆಲಸಗಳು ಮುಗಿದ ನಂತರ ಮನೆಗೆ ಹೋಗುವಾಗ ನನ್ನ ತಾಯಿ ಸಮಾಲೋಚಕರ ಕಡೆಗೆ ಬಂದು "ಇಷ್ಟು ದಿನ ಆಕಿಮ್ಯಾಲೆ ನಮ್ಮ ಮನಿ ನಡದಿತ್ತು. ತಿಂಗಳಾ ೮೦೦ ರೂ. ಕಳಿಸುತ್ತಿದ್ದಳು. ಈಗ ಆಕಿನ್ನಾ ಕರಕೊಂಡು ಬಂದ ಬಿಟ್ಟೀರಿ. ಅಕೀನ್ನ ತಗೊಂಡು ನಾವು ಏನು ಮಾಡಬೇಕು. ನೀವ ನಿಮ್ಮ ಆಫೀಸಿಗೆ ಒಯ್ಯಿರಿ. ನಮಗೆ ತಿಂಗಳ ೮೦೦ ರೂ. ಕಳಿಸ್ರಿ" ಎಂದು ಸಿಟ್ಟಿನಿಂದ ಲಟಿಕೆ ಮುರಿದಿದ್ದಳು. ಈ ಒಂದು ವಿಚಾರ ನನ್ನ ಮನಸ್ಸಿಗೆ ತುಂಬಾ ಗಾಯ ಮಾಡಿತ್ತು. ಇವರಿಗೆ ನಾನು ಮುಖ್ಯ ಅಲ್ಲವೇ ಅಲ್ಲ. ನಾನು ಗಳಿಸುತ್ತಿದ್ದ ಹಣ ಒಂದೇ ಮುಖ್ಯ ಆಗಿದೆಯಲ್ಲಾ ಎಂದು ತುಂಬಾ ನೋವಾಗಿತ್ತು.

**ಪ್ರಸ್ತುತ ಬದುಕು**

ಊರಿಗೆ ಬಂದ ಮೇಲೆ ನನಗೆ ದಿಕ್ಕೇ ತೋಚದಂತಾಗಿ ಹೊಲಗಳಲ್ಲಿ ಕಸ ತೆಗೆಯಲು ಹೋಗತೊಡಗಿದೆ. ಅದು ಬಿಸಿಲಿನಲ್ಲಿ ಮಾಡುವ ಕೆಲಸವಾದ್ದರಿಂದ ನನಗೆ ಹೊಂದಿಕೊಳ್ಳುವುದು ತುಂಬಾ ಕಷ್ಟವಾಯಿತು. ಅದೇ ಸಮಯದಲ್ಲಿ ಹೆಚ್.ಐ.ವಿ/ಏಡ್ಸ್ ಜಾಗೃತಿಯ ಯೋಜನೆಯವರು ನನ್ನನ್ನು ಗುರುತಿಸಿ ಪೀಯರ್ ವರ್ಕರ್ ಕೆಲಸ ಕೊಟ್ಟರು. ಆ ಯೋಜನೆಯಲ್ಲಿ ನನಗೆ ಎರಡು ಗ್ರಾಮಗಳನ್ನು ಒಪ್ಪಿಸಿಕೊಟ್ಟಿದ್ದರು. ಆ ಗ್ರಾಮಗಳಲ್ಲಿ ಲೈಂಗಿಕ ಚಟುವಟಿಕೆಯಲ್ಲಿ ನಿರತರಾದ ಮಹಿಳೆಯರನ್ನು ಗುರುತಿಸಿ, ಅವರಿಗೆ ಸುರಕ್ಷಿತ ಲೈಂಗಿಕತೆ ಕುರಿತು ತಿಳಿಸಿ ಹೇಳುವುದು ಮತ್ತು ನಿರೋಧ ಹಂಚುವುದು ನನ್ನ ಮುಖ್ಯ ಕೆಲಸವಾಗಿತ್ತು. ಅದಕ್ಕಾಗಿ ನನಗೆ ತಿಂಗಳಿಗೆ ನಾಲ್ಕೂವರೆ ಸಾವಿರ ರೂಪಾಯಿ ಸಂಬಳ

ದೊರೆಯುತ್ತಿತ್ತು. ನಾನು ನಾಲ್ಕು ವರ್ಷ ಅದೇ ಕೆಲಸ ಮಾಡಿದೆ. ಅಲ್ಲಿ ದೊರೆತ ಹಣದಲ್ಲಿ ೨೦೦೦ ರೂ. ಖರ್ಚು ಮಾಡಿ, ಒಂದು ವರ್ಷದವರೆಗೆ ಟೇಲರಿಂಗ್ ತರಬೇತಿ ಪಡೆದುಕೊಂಡೆ. ಈಗ ಅದೇ ಕೌಶಲ್ಯದಿಂದ ಗಾರ್ಮೆಂಟ್‌ನಲ್ಲಿ ಕೆಲಸ ಮಾಡುತ್ತಿದ್ದೇನೆ. ಒಂದು ಪ್ಯಾಂಟ್ ಹೊಲಿಯಲು ೨೫ ರೂ. ಕೊಡುತ್ತಾರೆ. ಶರ್ಟ್ ಹೊಲಿಯಲು ೩೦ ರೂ. ಕೊಡುತ್ತಾರೆ. ಒಟ್ಟಿನಲ್ಲಿ ದಿನಕ್ಕೆ ೧೫೦ ರಿಂದ ೨೦೦ ರೂ.ವರೆಗೆ ಆದಾಯ ಬರುತ್ತದೆ. ಇದರ ಜೊತೆಗೆ ಅಲ್ಲಿಯೇ ಟೇಲರಿಂಗ್ ಅಂಗಡಿ ಇಟ್ಟುಕೊಂಡಿರುವ ನನ್ನ ತಂಗಿಗೆ ಬಂದ ಆರ್ಡರ್‌ಗಳಲ್ಲೂ ಸಹ ಬಟ್ಟೆ ಹೊಲಿಯುತ್ತೇನೆ. ಮುಂದೆ ನನ್ನ ತಂಗಿಯ ಜೊತೆಗೇ ಪಾರ್ಟನರ್ ಆಗಿ ಬಟ್ಟೆ ಹೊಲಿಯಬೇಕೆಂದು ಆಸೆ ಇದೆ.

ನನ್ನ ಮಗ ಈಗ ೧೬ ವರ್ಷದವನಿದ್ದಾನೆ. ಗೌಂಡಿ ಕೈ ಕೆಳಗೆ ಕೆಲಸ ಮಾಡುತ್ತಾನೆ. ಅವನಿಗೂ ದಿನಕ್ಕೆ ೩೦೦ರಿಂದ ೪೦೦ ರೂ. ಕೂಲಿ ಕೊಡುತ್ತಾರೆ. ಹಾಗಾಗಿ ನನಗೇನು ಚಿಂತೆ ಇಲ್ಲ. ನಾನು ದೇವದಾಸಿಯೇನಲ್ಲ. ಆದರೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ನಡೆಸಿದ ದೇವದಾಸಿ ಮಹಿಳೆಯರ ಸಮೀಕ್ಷೆಯಲ್ಲಿ, ಊರಿಗೆ ಬರುವುದಕ್ಕಿಂತ ಮೊದಲೇ ನನ್ನ ತಾಯಿ ಹೆಸರನ್ನು ದಾಖಲಿಸಿದ್ದಳು. ಅದರಿಂದಾಗಿ ನನಗೆ ೨೦,೦೦೦ ರೂಪಾಯಿ ಉದ್ಯೋಗಿನಿ ಯೋಜನೆಯ ಸಾಲ ದೊರೆತಿದೆ. ನಮ್ಮ ಊರಿನಲ್ಲಿರುವ ಪಟ್ಟಿ ಅಂಗಡಿ ನನ್ನ ಹೆಸರಿನ ಮೇಲೆಯೇ ಇದ್ದು, ಅದನ್ನೇ ನನ್ನ ತಾಯಿ ನಡೆಸುತ್ತಾಳೆ.

ಊರಿಗೆ ಬಂದ ಮೊದ ಮೊದಲು ಮರಳಿ ಮುಂಬಯಿಗೆ ಹೋಗಿಬಿಡಬೇಕು. ಈ ಊರಲ್ಲಿ ಇದ್ದು ಏನು ಮಾಡುವುದು ಎಂದು ಬಹಳ ಸಾರೆ ಅನ್ನಿಸುತ್ತಿತ್ತು. ಆದರೆ ಪೋಲೀಸರ ಹೆದರಿಕೆ ತುಂಬಾ ಇತ್ತು. ನಾನು ಹೋದರೆ ತನ್ನ ತಾಯಿಯನ್ನು ಹಿಡಿದುಕೊಂಡು ಹೋಗುತ್ತಾರೆ ಎಂಬ ಹೆದರಿಕೆ ಇತ್ತು. ಹಾಗೆಯೇ ನನ್ನ ಮಗನ ಪ್ರೀತಿ ಇಲ್ಲಿಯೇ ಉಳಿಯುವಂತೆ ಮಾಡಿತು. ಅದಕ್ಕಾಗಿ ಕಷ್ಟವಾದರೂ ಸಹಿಸಿಕೊಂಡು ಸಿಕ್ಕ ಕೆಲಸಗಳನ್ನೆ ಮಾಡುತ್ತಾ ನನ್ನ ತಾಯಿ ಮತ್ತು ತಂಗಿಯರೊಂದಿಗೆ ಬದುಕು ಕಟ್ಟಿಕೊಂಡಿದ್ದೇನೆ.

ಹಳ್ಳಿಗಳಲ್ಲಿ ತಂದೆ-ತಾಯಿಗಳು ಈಗಲೂ ಮಕ್ಕಳನ್ನು ವೇಶ್ಯಾಗೃಹಗಳಿಗೆ ಸಾಗಿಸುತ್ತಿದ್ದಾರೆ. ಅವರಿಗೆ ನೀವೇನು ಹೇಳುತ್ತೀರಿ? ಎಂಬುದಕ್ಕೆ "ಎಂತಾ ಕಷ್ಟ ಇದ್ರೂ ಸಹ ಅಪ್ಪ ಅವ್ವ ಮಕ್ಕಳ ಭವಿಷ್ಯ ಹಾಳ ಮಾಡಬಾರದು. ಈಗ ಸಾಲಿ ವ್ಯವಸ್ಥಾ ಬಾಳಾ ಚಲೋ ಐತಿ. ಎಲ್ಲಾ ಫ್ರೀ ಕೊಡ್ತಾರ. ಕಷ್ಟಪಟ್ಟು ಕಲ್ಸಬೇಕು. ಅಂದ್ರ ಮನೀಗಿ ಮಕ್ಕಳಾಗ್ತಾರ. ಅಲ್ಲೇನ ಐತಿ ರಾತ್ರಿ ಬೆಳತನ ದುಡದ್ರೂ ಸುದ ಹೊಟ್ಟಿ ತುಂಬಗಿಲ್ಲ. ಕಣ್ಣೀಗಿ ನಿದ್ದಿ ಇರಂಗಿಲ್ಲ. ಇಲ್ಲಿ ಇದ್ದಿದ್ದರಾಗ ದುಡುದು, ಸಿಕ್ಕಷ್ಟು ಉಂಡರೂ ಕಣ್ಣುತುಂಬಾ ನಿದ್ದಿ ಬರ್ತಾವ್ರು" ಅಂತ ಚಿನ್ನವ್ವ ಹೇಳುವಾಗ ಅವಳ ಕಣ್ಣಿನಿಂದ ನೀರು ಜಾರುತ್ತಿತ್ತು.

## ಪ್ರಕರಣ-೩: ಲತಾ

ಲತಾ ಅನಕ್ಷರಸ್ಥ ವಿವಾಹಿತ ಹೆಣ್ಣುಮಗಳು. ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನವಳಾಗಿದ್ದು, ಮುಂಬಯಿಯ ಕಾಮಾಟಿಪೂರದಲ್ಲಿ ಲೈಂಗಿಕ ಜೀತಕ್ಕೆ ನೂಕಲ್ಪಟ್ಟಿದ್ದಳು. ಲತಾಳನ್ನು ದಿನಾಂಕ

೧೧.೪.೨೦೦೨ರಂದು ಬಾಲನ್ಯಾಯ ಕಾಯಿದೆ ೨೦೦೦ (ಕಾಳಜಿ ಮತ್ತು ರಕ್ಷಣೆ)ಇದರ ಸೆಕ್ಷನ್ ೩೩ರ ಅಡಿಯಲ್ಲಿ ರಕ್ಷಣೆ ಮಾಡಲಾಗಿರುತ್ತದೆ. ರಕ್ಷಣೆಯ ನಂತರ ಲತಾಳನ್ನು ದೇವನಾರ್‌ದ ಹೆಣ್ಣುಮಕ್ಕಳ ವಿಶೇಷ ಗೃಹದಲ್ಲಿ ಪುನರ್ವಸತಿಗಾಗಿ ಇಡಲಾಗಿರುತ್ತದೆ. ಸುಮಾರು ಆರು ತಿಂಗಳು ಕಾಲ ವಿಶೇಷ ಗೃಹದಲ್ಲಿ ಕಳೆದ ಲತಾ ದಿನಾಂಕ ೧೧-೯-೨೦೦೨ರಂದು ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಯ ಸುಪರ್ದಿಗೆ ಬರುತ್ತಾಳೆ. ಒಂದು ತಿಂಗಳು ಪುನರ್ನೆಗೊಳಿಸಬೇಕಾದ ಸಂಸ್ಥೆಯಲ್ಲಿ ಉಳಿದ ಲತಾ, ಆನಂತರ ಸವದತ್ತಿ ಪೋಲೀಸ್ ಮೂಲಕ ತನ್ನ ತಾಯಿಯನ್ನು ಸೇರುತ್ತಾಳೆ.

ಪುನರ್ನೆಲೆಗೊಳಿಸಿದ ಸಂಸ್ಥೆಯು ನೀಡಿದ ಮಾಹಿತಿಯ ಪ್ರಕಾರ, ಲತಾಳನ್ನು ಭೇಟಿಯಾಗಲು ಅವಳ ಮನೆಗೆ ಹೋದಾಗ, ಅವಳ ಮನೆಯಲ್ಲಿ ಯಾರೂ ಇರಲಿಲ್ಲ. ಮನೆಗೆ ಕೀಲಿ ಹಾಕಿತ್ತು. ಪಕ್ಕದ ಮನೆಯವರ ಹತ್ತಿರ ನಾವು ಲತಾಳ ಕುರಿತು ವಿಚಾರಿಸಿದಾಗ ಅವರು, ಲತಾ ಮರಣ ಹೊಂದಿದ ವಿಷಯವನ್ನು ತಿಳಿಸಿದರು. ಅವಳ ತಾಯಿ ಸಂಬಂಧಿಕರ ಊರಿಗೆ ಹೊಗಿದ್ದಾರೆಂದು ಹೇಳಿ, ಅದೇ ಊರಿನಲ್ಲಿರುವ ಲತಾಳ ತಂಗಿಯ ಮನೆಯನ್ನು ತೋರಿಸಿದರು. ನಾವು ಲತಾಳ ತಂಗಿಯ ಮನೆಗೆ ಹೋಗಿ, ಅವಳ ಕುರಿತು ವಿಚಾರಿಸಿದಾಗ, ಅವಳ ತಂಗಿ ತುಂಬಾ ದುಃಖಿತಳಾದಳು. ನಂತರ ಅವಳು ನಮ್ಮೊಂದಿಗೆ ಮಾತನಾಡುತ್ತಾ, *"ನನ್ನ ಅಕ್ಕ ಲತಾ ನಮ್ಮ ಮನೆಯವರೆಲ್ಲರ ಪಾಲಿಗೆ ತಾಯಿಯಂತೆ ಇದ್ದಳು. ಮನೆಯಲ್ಲಿ ನಮ್ಮ ತಂದೆ ಕಳ್ಳ ಬಟ್ಟಿ ಸರಾಯಿ ಮಾಡುತ್ತಿದ್ದ. ತಾನೂ ಕುಡಿಯುತ್ತಿದ್ದ. ಹಾಗೆಯೇ ನನ್ನ ತಾಯಿಗೆ ಹೆರಿಗೆಯಾದಾಗ, ಹೆರಿಗೆಯ ನೋವು ಬೇಗ ವಾಸಿಯಾಗಲೆಂದು, ಬಾಣಂತಿಯಾದ ನನ್ನ ತಾಯಿಗೂ ಕುಡಿಸುತ್ತಿದ್ದ. ಅದನ್ನೇ ರೂಢಿ ಮಾಡಿಕೊಂಡ ನನ್ನ ತಾಯಿ ತಾಯಿ ಮದ್ಯಪಾನಿಯಾಗುತ್ತಾಳೆ. ತಾನು ಹೆತ್ತ ಮಕ್ಕಳನ್ನೇ ಕಾಳಜಿ ಮಾಡದ ಸ್ಥಿತಿಗೆ ನನ್ನ ತಾಯಿಯ ಕುಡಿತದ ಚಟ ಬಂದು ನಿಲ್ಲುತ್ತದೆ. ನಮ್ಮ ತಂದೆ ತಾಯಿ ಇಬ್ಬರೂ ಹೀಗೆ ಕುಡಿದು ಬೀಳುತ್ತಿರುವಾಗ, ನಾವೆಲ್ಲ ನಮ್ಮ ಅಜ್ಜಿಯ ಪಾಲನೆಯಲ್ಲಿಯೇ ಬೆಳೆದಿದ್ದೇವೆ. ನಮ್ಮ ಅಕ್ಕ ಲತಾ ಹಿರಿಯ ಮಗಳಾದ್ದರಿಂದ ನನ್ನನ್ನು ಮತ್ತು ನನ್ನ ತಮ್ಮನನ್ನು ಪ್ರೀತಿಯಿಂದ ಬೆಳೆಸುತ್ತಾಳೆ. ಬಡತನದ ಜೀವನಕ್ಕೆ ನಮ್ಮ ಅಜ್ಜಿ ಲತಾಳಿಗೆ ೧೨ ವರ್ಷ ತುಂಬುತ್ತಲೇ ಮದುವೆ ಮಾಡಿದ್ದಳು. ಲತಾಳ ದುರಾದೃಷ್ಟ, ಅವಳ ಗಂಡ ಮತ್ತು ಗಂಡನ ಮನೆಯವರು ತುಂಬಾ ಕೆಟ್ಟವರು ಸಿಕ್ಕಿದ್ದರು. ಅಷ್ಟೆಲ್ಲ ನೋವು ಅನುಭವಿಸುತ್ತಿದ್ದರೂ ನಮ್ಮ ಮನೆಯ ಕಡೆಯಿಂದ ಏನೂ ಮಾಡಲು ಸಾಧ್ಯವಾಗಲಿಲ್ಲ. ಕೊನೆಗೆ ನಮ್ಮ ಅಕ್ಕ ಲತಾ ದಂಧೆಗೆ ಬಲಿಯಾಗಬೇಕಾಯಿತು. ಅವಳ ಜೊತೆಗೆ ಇಂತಹ ಅನ್ಯಾಯ ನಡೆದಿದೆ ಎಂಬುದೇ ನಮಗೆ ಗೊತ್ತಿರಲಿಲ್ಲ. ಗಂಡನ ಮನೆಯವರ ಕಾಟಕ್ಕೆ ಬೇಸತ್ತು ಸತ್ತು ಹೋಗಿದ್ದಾಳೆಂದೇ ನಾವೆಲ್ಲ ಭಾವಿಸಿದ್ದೆವು. ಪೋಲೀಸ್ ಕಂಪ್ಲೇಂಟ್ ಕೊಡಲು ನಮ್ಮ ಮನೆಯಲ್ಲಿ ಯಾರೂ ತಿಳಿದವರಾಗಲಿ, ಕಾಳಜಿಯವರಾಗಲೀ ಇರಲಿಲ್ಲ.*

*ಲತಾ ಮನೆಗೆ ಬಂದ ಒಂದೆರಡು ವರ್ಷ ಚೆನ್ನಾಗಿಯೇ ಇದ್ದಳು. ಕೆಲಸಕ್ಕೂ ಹೋಗಲಾರಂಭಿಸಿದ್ದಳು. ಅವಳೆ ನನ್ನ ಮದುವೆಯನ್ನೂ ಮಾಡಿದ್ದಳು. ಆದರೆ ಇತ್ತೀಚಲಾಗಿ ಅವಳಿಗೆ ಹೊಟ್ಟೆ ನೋವು*

*ಬರತೊಡಗಿತ್ತು. ಅದರ ನೋವಿಗೆ ಲತಾ ತುಂಬಾ ಕೃಷವಾಗತೊಡಗಿದ್ದಳು. ಊರಿನ ನೆರೆಹೊರೆಯುವರಿಗೆ ಲತಾ ಮುಂಬಯಿಗೆ ಹೋಗಿ ಬಂದ ಸುದ್ದಿ ಗೊತ್ತಾಗಿತ್ತು. ಇವಳ ಆರೋಗ್ಯ ಕೆಡುತ್ತಾ ಹೋಗುತ್ತಿರುವುದನ್ನು ನೋಡಿ, ಅವಳಿಗೆ ಎಚ್.ಐ.ವಿ/ಏಡ್ಸ್ ಆಗಿದೆ ಎಂದು ಮಾತನಾಡಿಕೊಳ್ಳತೊಡಗಿದರು. ಇದರಿಂದ ಲತಾ ಮಾನಸಿಕವಾಗಿ ತುಂಬಾ ಹಿಂಸೆ ಅನುಭವಿಸತೊಡಗಿದ್ದಳು. ನಾನೇ ಒಂದು ಸಾರಿ ಊರಿನ ಒಬ್ಬ ಪ್ರಸಿದ್ಧ ವೈದ್ಯರ ಬಳಿಗೆ ಕರೆದೊಯ್ದು ತಪಾಸಣೆ ನಡೆಸಿದಾಗ, ಅವಳಿಗೆ ಏಡ್ಸ್ ಇರದಿರುವುದನ್ನು ಕುರಿತು ವೈದ್ಯರು ಖಾತರಿಪಡಿಸಿದರು. ಆದರೆ ಲತಾಳ ಎರಡೂ ಕಿಡ್ನಿಗಳಿಗೆ ಬಾವು ಒಂದು ಆಪರೇಶನ್ ಮಾಡಿಸುವುದು ಅವಶ್ಯವಾಗಿತ್ತು. ಅವಳಿಗೆ ಬದಲಿ ಕಿಡ್ನಿಯ ವ್ಯವಸ್ಥೆಯಾಗಬೇಕಿತ್ತು. ಮುಂಬಯಿಲಿ ಇದ್ದಾಗ, ಮೇಲಿಂದ ಮೇಲೆ ಗರ್ಭಪಾತಕ್ಕೆ ಗುರಿಯಾಗಬೇಕಾದ ಸಂದರ್ಭದಲ್ಲಿ, ಕಿಡ್ನಿಗಳಿಗೆ ನಂಜು ಉಂಟಾಗಿ ಲತಾಳಿಗೆ ಈ ಸ್ಥಿತಿ ಉಂಟಾಗಿತ್ತು. ಆದರೆ ನಮ್ಮಂತಹ ಬಡವರಿಗೆ ಯಾರು ಕಿಡ್ನಿ ಕೊಡಲು ಮುಂದೆ ಬಂದಾರು? ಅದೇ ನೋವು ಉಲ್ಬಣಿಸಿ ನನ್ನ ಅಕ್ಕ ಲತಾ ಸಾವನ್ನಪ್ಪಿದಳು"* ಎಂದು ಲತಾಳ ತಂಗಿ ವಿವರಿಸಿದಳು.

ಲತಾಳ ತಂಗಿ ಹೇಳಿದ ಈ ಮಾತುಗಳಲ್ಲಿ ಲತಾಳ ಲೈಂಗಿಕ ಜೀತದ ನಂತರದ ಬದುಕು ನಮಗೆ ಕಂಡು ಬರುತ್ತದೆ. ಮನೆಯಲ್ಲಿ ಎಲ್ಲರೂ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರೂ, ಸಮುದಾಯದ ಜನರ ವಕ್ರ ದೃಷ್ಟಿಯಿಂದಾಗಿ, ಲೈಂಗಿಕ ದಂಧೆಯ ಮನೆಯಲ್ಲಿ ಅವಳು ಅನುಭವಿಸಿದ ನೋವಿನಿಂದಾಗಿ ಬದುಕುಳಿಯಲು ಸಾಧ್ಯವಾಗಲಿಲ್ಲ. ಅವಳ ಗಂಡನ ಮನೆಯಲ್ಲಿ ಅನುಭವಿಸಿದ್ದ ನೋವನ್ನು, ಅವಳು ಸಾಗಾಣಿಕೆಯಾದ ರೀತಿ ಮತ್ತು ಲೈಂಗಿಕ ಜೀತದ ಬದುಕನ್ನು ವಿವರಿಸುವ ಅವಳ ಪ್ರಕರಣ ಅಧ್ಯಯನವನ್ನು, ಪುನರ್ನೆಲೆಗೊಳಿಸಿದ ಸಂಸ್ಥೆಯ ಸಮಾಲೋಚಕರಿಂದ ಪಡೆದುಕೊಳ್ಳಲಾಯಿತು. ಅವಳು ವಿವರಿಸಿದ ವಿಷಯ ಈ ಕೆಳಗಿನಂತಿದೆ.

*"ನನ್ನನ್ನು ಚಿಕ್ಕವಯಸ್ಸಿನಲ್ಲಿಯೇ ಹುಬ್ಬಳ್ಳಿ ಹತ್ತಿರದ ಹಳ್ಳಿಯೊಂದರ ಯುವಕನೊಡನೆ ಮದುವೆ ಮಾಡಿದ್ದರು. ಮದುವೆಯಾಗುವಾಗ ಕೊಟ್ಟ ಮಾತಿನಂತೆ ನನ್ನ ತಂದೆಗೆ ವರದಕ್ಷಿಣೆ ಕೊಡಲಾಗಿರುವುದಿಲ್ಲ. ಹಾಗಾಗಿ ನಮ್ಮ ಅತ್ತೆ ಮತ್ತು ಗಂಡ ನನಗೆ ತುಂಬಾ ಹಿಂಸೆ ನೀಡುತ್ತಿದ್ದರು. ಒಂದು ಸಾರಿ ವರದಕ್ಷಿಣೆ ತೆಗೆದುಕೊಂಡು ಬರಲೇಬೇಕೆಂದು ಹೊಡೆದು ಮನೆಯಿಂದ ಹೊರ ಹಾಕಿದ್ದರು. ಆದರೆ ನನ್ನ ತಂದೆ-ತಾಯಿ ಮತ್ತೆ ಅದೇ ಗಂಡನ ಮನೆಗೆ ನನ್ನನ್ನು ಮರಳಿ ಕಳುಹಿಸುತ್ತಾರೆ. ಗಂಡನ ಮನೆಯಲ್ಲಿ ನೋವನ್ನು ತಿನ್ನುತ್ತಾ ಕಳೆಯುತ್ತಿರುವಾಗ ಒಂದು ದಿನ ನನ್ನ ಅತ್ತೆ ಮತ್ತು ಗಂಡ ನನಗೆ ಸೀಮೆ ಎಣ್ಣೆ ಸುರಿದು ಸಾಯಿಸಲು ನೋಡುತ್ತಾರೆ. ಅದ್ಹೇಗೋ ತಪ್ಪಿಸಿಕೊಂಡು ಓಡೋಡಿ ಹೊರಗೆ ಬಂದ ನಾನು ಹುಬ್ಬಳ್ಳಿಯ ಹಳೆಯ ಬಸ್ಸ್ಟ್ಯಾಂಡ್ ತಲುಪಿದ್ದೆ. ಅಲ್ಲಿಂದ ನನಗೆ ತವರು ಮನೆಗೆ ಹೋಗಲು ಹಣವಿರಲಿಲ್ಲ.*

*ಬಸ್ ನಿಲ್ದಾಣದಲ್ಲಿ ನಮ್ಮ ಊರಿನವರು ಯಾರಾದರೂ ಬರುತ್ತಾರೇನೋ ಎಂದು ಗಮನಿಸುತ್ತಾ ಕುಳಿತುಕೊಂಡಿದ್ದೆ. ಆಗ ಒಬ್ಬಳು ಬುರ್ಖಾ ಧರಿಸಿದ್ದ ಹೆಣ್ಣುಮಗಳು ನನ್ನ ಹತ್ತಿರ ಬಂದು ಕುಳಿತುಕೊಳ್ಳುತ್ತಾಳೆ.*

ಅವಳ ಜೊತೆ ಒಬ್ಬ ಗಂಡಸೂ ಕೂಡ ಇದ್ದ. ಹಾಗೇ ಕುಳಿತವರು ನನ್ನನ್ನು ಪರಿಚಯ ಮಾಡಿಕೊಳ್ಳುತ್ತಾರೆ. ನಾನು ಒಬ್ಬಳೇ ಇರುವೆನೆಂದು ಖಾತರಿಪಡಿಸಿಕೊಂಡ ಅವರು ನನ್ನ ಬಗ್ಗೆ ಅನುಕಂಪ ತೋರಿಸುತ್ತಾ, ತಾವೇ ನನ್ನನ್ನು ಊರವರೆಗೂ ಬಿಟ್ಟು ಬರುವುದಾಗಿ ಹೇಳುತ್ತಾರೆ. ಬತಾಳ ಸಾಯುವ ಜೀವಕ್ಕೆ ಉಸಿರು ಬಂದಂತಾಗುತ್ತದೆ. ಹಾಗೆಯೇ ಮಾತನಾಡುತ್ತಾ ಕುಳಿತ ಅವರು, ನನ್ನನ್ನು ಚಹಾ ಕುಡಿಯಲು ಹೊಟೇಲ್‌ಗೆ ಕರೆದುಕೊಂಡು ಹೋಗಿದ್ದರು. ಅಲ್ಲಿ ನಾನೂ ಚಹಾ ಕುಡಿದದ್ದಷ್ಟೇ ಗೊತ್ತು. ಎಚ್ಚರಗೊಂಡು ಕಣ್ಣು ಬಿಟ್ಟು ನೋಡಿದಾಗ ನಾನು ಗೊತ್ತಿಲ್ಲದ ಯಾವುದೋ ಊರಿನಲ್ಲಿ ಇದ್ದೆ.

ನಮ್ಮ ಅತ್ತೆ ಮತ್ತು ಗಂಡನಿಂದ ತಪ್ಪಿಸಿಕೊಂಡು ಬಂದಿದ್ದ ನಾನು ಬಸ್ ನಿಲ್ದಾಣದಲ್ಲಿ ಮತ್ತ್ಯಾರೋ ಮೋಸಗಾರರಿಗೆ ಬಲಿಯಾಗಿ ಬಿಟ್ಟಿದ್ದೆ. ನನ್ನನ್ನು ಮುಂಬಯಿಯ ಕಾಮಾಟಿಪೂರದ ದಂಧೆಯ ಮನೆಗೆ ಅವರು ಮಾರಾಟ ಮಾಡಿರುತ್ತಾರೆ. ನಾನು ಅಲ್ಲಿಂದ ತಪ್ಪಿಸಿಕೊಂಡು ಬರಲು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾಗುತ್ತವೆ.

ಹದಿನಾಲ್ಕು ವರ್ಷದ ನಾನು ಕತ್ತಲು ಕೋಣೆಯಲ್ಲಿ ಜೀವಂತ ಶವದಂತೆ ಬಿದ್ದುಕೊಂಡಿರುತ್ತಿದ್ದೆ. ಯಾರೋ ಬರುತ್ತಿದ್ದರು, ಯಾರೋ ಹೋಗುತ್ತಿದ್ದರು. ಅದಕ್ಕೆ ಲೆಕ್ಕವೇ ಇರಲಿಲ್ಲ. ತಿಂಗಳ ಮುಟ್ಟಿನ ದಿನಗಳಲ್ಲಿಯೂ ಸಹ ಅವರು ನನ್ನನ್ನು ಬಿಡಲಿಲ್ಲ. ನನ್ನ ಆರೋಗ್ಯ ತೀರಾ ಹದಗೆಟ್ಟಾಗ ಘರವಾಲಿಯ ಕಡೆಯವರು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಕೆಲವು ಸಾರಿ ಮುಟ್ಟು ನಿಂತು ಹೋಗಿ ಗರ್ಭಿಣಿಯಾದಾಗ ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದರು. ಆಗಷ್ಟೇ ಹೊರಗಿನ ಬೆಳಕನ್ನು ನೋಡಲು ಸಾಧ್ಯವಾಗುತ್ತಿತ್ತು. ಗರ್ಭಿಣಿಯಾದ ಸಂದರ್ಭದಲ್ಲಿ ೨-೩ ತಿಂಗಳೊಳಗೆ ಅಬಾರ್ಶನ್ ಮಾಡಿಸುತ್ತಿದ್ದರು. ಆಗೆಲ್ಲ ಆಗುವ ನೋವಿಗೆ ನಾನು ಸತ್ತು ಹೋಗಬಾರದೇ ಅನ್ನಿಸುತ್ತಿತ್ತು.

ಲೈಂಗಿಕ ದಂಧೆಯ ಮನೆಗಳಲ್ಲಿ ತಾವಾಗಿಯೇ ದಂಧೆ ಮಾಡಲು ಹೋದವರಿಗೆ, ಅಪ್ಪ-ಅಮ್ಮನೇ ತಂದು ಬಿಟ್ಟುಹೋದವರಿಗೆ ಅವರು ಗಳಿಸಿದ್ದರಲ್ಲಿ ಘರವಾಲಿಗೆ ಅರ್ಧ, ಹುಡುಗಿಗೆ ಅರ್ಧ ಪಾಲಾಗುತ್ತದೆ. ಆದರೆ ಯಾರೋ ಹುಡುಗಿಯರನ್ನು ಕದ್ದು ತಂದು ಮಾರಾಟ ಮಾಡಿ ಹೋದ ಹುಡುಗಿಯರಿಗೆ ಯಾವ ಹಣವೂ ಸಿಗುತ್ತಿರಲಿಲ್ಲ. ಹಾಗಾಗಿ ನನಗೆ ಊಟ ಬಟ್ಟೆ ಬಿಟ್ಟರೆ ಬೇರೆ ಏನೂ ಸಿಗುತ್ತಿರಲಿಲ್ಲ. ಘರವಾಲಿ ಅವಳನ್ನು ಗೃಹಬಂಧನದಲ್ಲಿ ಇರಿಸಿದ್ದಳು.

ಇಂತಹದೇ ಸ್ಥಿತಿಯಲ್ಲಿ ನಾನು ಮೂರು ವರ್ಷ ಕಳೆದಿದ್ದೆ. ಒಂದು ದಿನ ಪೊಲೀಸ್ ರೇಡ್ ನಡೆದು ಅವರು ನನ್ನನ್ನು ಅಲ್ಲಿಂದ ಪಾರು ಮಾಡಿದ್ದರು. ಆಗ ನನ್ನನ್ನು ಇಟ್ಟುಕೊಂಡಿದ್ದ ಘರವಾಲಿಯನ್ನೂ ಹಿಡಿದು ಜೈಲಿಗೆ ಹಾಕುತ್ತಾರೆ. ನನ್ನನ್ನು ಮುಂಬಯಿಯ ಸಂಸ್ಥೆಯಲ್ಲಿಯೇ ಸ್ವಲ್ಪ ದಿನ ಇಟ್ಟುಕೊಂಡು ಅಥಣಿಯ ಸರ್ಕಾರೇತರ ಸಂಸ್ಥೆಗೆ ನನ್ನನ್ನು ಕಳಿಸುತ್ತಾರೆ. ನಾನು ದಂಧೆಗೆ ಸಿಲುಕಿದ ವಿಷಯ ಮತ್ತು ಈಗ ರಕ್ಷಣೆಗೊಂಡ ವಿಷಯ ನನ್ನ ಮನೆಯಲ್ಲಿ ಯಾರಿಗೂ ಗೊತ್ತಿಲ್ಲ.

ನಮ್ಮ ಪರಿಸ್ಥಿತಿಯಂತೂ ಬೇರೆ. ಓದಿಲ್ಲ. ಅಕ್ಷರ ಜ್ಞಾನವಿಲ್ಲ. ಯಾರೋ ಮೋಸ ಮಾಡಿ ಕರೆದುಕೊಂಡು ಬಂದರು. ಆದರೆ ದಂಧೆಯ ಮನೆಯಲ್ಲಿ, ತುಂಬಾ ಓದಿಕೊಂಡಿದ್ದ ಹುಡುಗಿಯರೂ

*ಇದ್ದರು. ಅವರನ್ನು ಪ್ರೀತಿ ಮಾಡಿದ್ದ ಗೆಳೆಯರು, ಮದುವೆ ಮಾಡಿಕೊಂಡಿದ್ದ ಗಂಡಂದಿರೇ ಕರೆದು ತಂದು ಮಾರಿ ಹೋಗಿರುತ್ತಿದ್ದರು. ಲೈಂಗಿಕ ದಂಧೆಯ ಮನೆಗಳಲ್ಲಿ, ನನ್ನ ಹಾಗೆ ಬಹಳಷ್ಟು ಹುಡುಗಿಯರು ಇದ್ದಾರೆ. ಪೋಲೀಸ್ ರೈಡ್ ಆದಾಗ ಎಲ್ಲರೂ ಸಿಗುವುದಿಲ್ಲ. ಸಿಕ್ಕವರನ್ನು ಘರವಾಲಿ ತನ್ನ ಸಂಬಂಧಿಕರ ಮಕ್ಕಳು ಎಂದು ಹೇಳಿ ಅಥವಾ ಪೋಲೀಸರಿಗೆ ದುಡ್ಡು ಕೊಟ್ಟು ಬಿಡಿಸಿಕೊಂಡು ಹೋಗುತ್ತಾಳೆ. ನನ್ನನ್ನು ಘರವಾಲಿ ಬಿಡಿಸಿಕೊಂಡು ಹೋಗಲು ತುಂಬಾ ಪ್ರಯತ್ನಿಸಿದಳು. ಆದರೆ ನಾನು ನೀಡಿದ ಸಾಕ್ಷಿ ಹೇಳಿಕೆಯಿಂದಾಗಿಯೇ ಘರವಾಲಿ ಜೈಲು ಪಾಲಾಗಿದ್ದಳು.*

## ಪ್ರಕರಣ-೪: ಸೀತಾಳ

**ಸೀತಾಳ** ಕುರಿತು ಪುನರ್ವಸತಿ ಮತ್ತು ಪುನರ್ನಲೆ ಮಾಡಿದ ಎರಡೂ ಸಂಸ್ಥೆಯಿಂದಲೂ ಯಾವುದೇ ಮಾಹಿತಿ ದೊರೆತಿರುವುದಿಲ್ಲ. ದೇವದಾಸಿ ಪುನರ್ವಸತಿ ಯೋಜನೆಯ ಕಾರ್ಯಕರ್ತರೊಬ್ಬರು ನೀಡಿದ ಮಾಹಿತಿಯ ಪ್ರಕಾರ ಅಧ್ಯಯನದ ಅವಧಿಯಲ್ಲಿ ಸೀತಾಳ ಮನೆಗೆ ಭೇಟಿ ನೀಡಲಾಗಿತ್ತು.

ಮನೆಗೆ ಭೇಟಿ ನೀಡಿದಾಗ ಸೀತಾ ತನ್ನ ಎರಡು ಹೆಣ್ಣುಮಕ್ಕಳೊಂದಿಗೆ ಪಾತ್ರೆ ತೊಳೆಯುತ್ತಿದ್ದಳು. ಮಾತಿಗೆ ಕುಳಿತಾಗ, ಏನೂ ಮಾತನಾಡದೇ ಹಾಗೇ ಕುಳಿತಿದ್ದಳು. ಬಹಳ ಹೊತ್ತಿನ ನಂತರ ಕಣ್ಣಲ್ಲಿ ನೀರು ತುಂಬಿಕೊಂಡು ತನ್ನ ಪರಿಸ್ಥಿತಿಯನ್ನು ವಿವರಿಸಿದಳು.

*"ನನಗೆ ಇಬ್ಬರು ಅಣ್ಣಂದಿರು ಮತ್ತು ಐದು ಮಂದಿ ಅಕ್ಕತಂಗಿಯರು. ಎಲ್ಲರ ಮದುವೆಯೂ ಆಗಿದೆ. ಮನೆಯ ಬಡತನಕ್ಕಾಗಿ ನನ್ನನ್ನು ಚಿಕ್ಕವಳಿರುವಾಗಲೇ ದೇವದಾಸಿ ಮಾಡಿದ್ದರು. ಶಿನೇ ಇಯತ್ತೆಯವರೆಗೂ ನಾನು ಶಾಲೆಗೂ ಹೋಗಿದ್ದೆ. ಋತುಮತಿಯಾದ ನಂತರ ನನ್ನನ್ನು ಶಾಲೆ ಬಿಡಿಸಿದ್ದರು. ನನಗೆ ಒಬ್ಬ ಗಂಡು ಮಗ ಜನಿಸಿದ. ಊರಲ್ಲಿ ಬಹುತೇಕ ದೇವದಾಸಿಯರು ಥಾಣೆ ಜಿಲ್ಲೆಯ ಬೀವಂಡಿಗೆ ದಂಧೆ ಮಾಡಲು ಹೋಗುತ್ತಿದ್ದರು. ಊರಲ್ಲಿ ದಂಧೆ ನಡೆಯುವುದಿಲ್ಲವೆಂದು ಹೀಗೆ ಹೋಗುವವರ ಜೊತೆ ನಮ್ಮ ಮನೆಯವರು ನನ್ನನ್ನೂ ಕಳಿಸಿಕೊಟ್ಟಿದ್ದರು. ಅಲ್ಲಿಗೆ ಹೋದ ಮೂರು ವರ್ಷಗಳಲ್ಲಿ ನಾನು, ಪೋಲೀಸ್ ರೇಡ್‌ನಲ್ಲಿ ಸಿಕ್ಕಿ ಬಿದ್ದಿದ್ದೆ. ಅಪ್ರಾಪ್ತಳಾದ್ದರಿಂದ ನನ್ನನ್ನು ಮುಂಬಯಿನ ಪಾಯಸೂರ್‌ನ ಸಂಸ್ಥೆಯಲ್ಲಿ ಇಡಲಾಗಿತ್ತು. ನಾನು ಅಲ್ಲಿ ಒಂದು ವರ್ಷ ಇದ್ದೆ. ಈ ಅವಧಿಯಲ್ಲಿ ಟೇಲರಿಂಗ್ ತರಬೇತಿಯನ್ನು ತುಂಬಾ ಚೆನ್ನಾಗಿ ಕಲಿತುಕೊಂಡಿದ್ದೆ. ಅಲ್ಲಿಂದ ನನ್ನನ್ನು ಬೆಂಗಳೂರಿನ ಸಂಸ್ಥೆಗೆ ಕಳಿಸಿದ್ದರು. ಅಲ್ಲಿ ನಾನು ಸ್ವಲ್ಪ ದಿನಗಳವರೆಗೆ ಇದ್ದೆ. ಪೋಲೀಸರು ಹಿಡಿದ ನಂತರ ಒಟ್ಟು ಒಂದು ವರ್ಷದ ಅವಧಿಯಲ್ಲಿ, ನಾನು ನನ್ನ ಅಕ್ಕ, ತಾಯಿ ಮತ್ತು ಅಜ್ಜಿಯನ್ನು ಕಳೆದುಕೊಂಡಿದ್ದೆ. ಅವರ ಮಣ್ಣಿಗೂ(ಶವ ಸಂಸ್ಕಾರ) ನನ್ನನ್ನೂ ಇವರು ಬಿಡಲಿಲ್ಲ.*

*ನನ್ನ ಮಗ ಈಗ ೧೪ ವರ್ಷದವನಿದ್ದಾನೆ. ಗೌಂಡಿಗಳ ಕೈಯಲ್ಲಿ ಕೆಲಸಕ್ಕೆ ಹೋಗುತ್ತಾನೆ. ದಿನಕ್ಕೆ ಎರಡೂವರೆ ನೂರು ರೂಪಾಯಿ ಕೂಲಿ ಸಿಗುತ್ತದೆ. ನನ್ನ ಅಕ್ಕನೂ ಸತ್ತು ಹೋಗಿದ್ದಾಳೆ. ನನಗೆ ನನ್ನ ಮಕ್ಕಳ ಜೊತೆಗೆ ಅಕ್ಕನ ಮೂರು ಮಕ್ಕಳನ್ನೂ ನೋಡುವ ಜವಾಬ್ದಾರಿ ಇದೆ. ಅಕ್ಕನ ಮಕ್ಕಳಲ್ಲಿ ಒಬ್ಬನು ದೊಡ್ಡವನಿದ್ದಾನೆ. ಅವನೂ ಕೆಲಸಕ್ಕೆ ಹೋಗುತ್ತಾನೆ. ಉಳಿದ ಎಲ್ಲ ಮಕ್ಕಳು ಶಾಲೆಗೆ ಹೋಗುತ್ತಾರೆ.*

*ನಾನು ಬೆಂಗಳೂರಿನ ಹಾಸ್ಟೆಲ್‌ನಲ್ಲಿ(ಪುನರ್ವಸತಿ ಕೇಂದ್ರ) ಕಲಿತ ಹೊಲಿಗೆ ತರಬೇತಿಯನ್ನು ಮರೆಯದೇ ಈಗಲೂ ಅದೇ ಕೆಲಸ ಮಾಡುತ್ತಿದ್ದೇನೆ. ಇದೇ ಊರಿನ ರೈತರೊಬ್ಬರ ಜೊತೆ ಸಂಬಂಧವಿದೆ. ಅವರು ಅಲ್ಪ ಸ್ವಲ್ಪ ಸಹಾಯ ಮಾಡುತ್ತಾರೆ. ದೇವದಾಸಿ ಪುನರ್ವಸತಿ ಯೋಜನೆಯಿಂದ ಪ್ರತಿ ತಿಂಗಳೂ ೧೦೦೦ ರೂ. ಮಾಶಾಸನ ಬರುತ್ತದೆ. ಅದರಲ್ಲೇ ಜೀವನ ನಡೆಸುತ್ತಿದ್ದೇನೆ. ನನ್ನ ಅದೃಷ್ಟ ಚೆನ್ನಾಗಿತ್ತು ಅದಕ್ಕೆ ಸುರಕ್ಷಿತವಾಗಿ ಮರಳಿ ಬಂದಿದ್ದೇನೆ.*

## ಪ್ರಕರಣ-೫: ಗೌರಿ

**ಗೌರಿ** ಜಮಖಂಡಿ ತಾಲೂಕಿನವಳು. ಮಹಾರಾಷ್ಟ್ರ ರಾಜ್ಯದ ಥಾಣೆ ಜಿಲ್ಲೆಯ ಬೀವಂಡಿ ಪಟ್ಟಣದ ಕೆಂಪು ದೀಪದ ಲೈಂಗಿಕ ದಂಧೆಯ ಮನೆಗೆ ತನ್ನ ಅಪ್ರಾಪ್ತ ವಯಸ್ಸಿನಲ್ಲಿ ಸಾಗಿಸಲ್ಪಟ್ಟಿದ್ದಳು. ಗೌರಿಯನ್ನು ೨೧.೨.೨೦೦೭ರಂದು ಬಾಲನ್ಯಾಯ ಕಾಯಿದೆ ೨೦೦೦(ಕಾಳಜಿ ಮತ್ತು ರಕ್ಷಣೆ)ಯ ಸೆಕ್ಷನ್ ೩೨(೧)ರ ಅಡಿಯಲ್ಲಿ ರಕ್ಷಣೆ ಮಾಡಲಾಗಿತ್ತು. ರಕ್ಷಣೆಯ ನಂತರ ಗೌರಿಯನ್ನು ಬೀವಂಡಿಯ ಬಾಲಗೃಹದಲ್ಲಿ ಇಡಲಾಗಿತ್ತು. ಅದರ ನಂತರ ಮುಂಬಯಿಯ ಪಾಯ್‌ಸೂರ್ ಎಂಬಲ್ಲಿ ಸರ್ಕಾರೇತರ ಸಂಸ್ಥೆಯ ಪುನರ್ವಸತಿ ಕೇಂದ್ರಕ್ಕೆ ಅವಳನ್ನು ಸ್ಥಳಾಂತರಿಸಲಾಗಿತ್ತು. ಅಲ್ಲಿ ಒಂದು ವರ್ಷ ಇದ್ದ ಅವಳನ್ನು ಪುನರ್ನೆಲೆಗಾಗಿ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಯೊಂದಕ್ಕೆ ಕಳಿಸಿಕೊಡಲಾಗುತ್ತದೆ. ದಿನಾಂಕ ೧೦.೧೨.೨೦೦೭ರಂದು ಬೆಳಗಾವಿ ಜಿಲ್ಲೆಯ ಸಂಸ್ಥೆಗೆ ಬಂದ ಗೌರಿ ದಿನಾಂಕ ೭.೨.೨೦೦೮ರ ವರೆಗೆ ಅವರ ಸುಪರ್ದಿಯಲ್ಲಿ ಇರುತ್ತಾಳೆ. ನಂತರ ಅವಳ ತಂದೆ ತಾಯಿಯನ್ನು ಸಂಪರ್ಕಿಸಿ, ಪೊಲೀಸ್ ಸ್ಟೇಶನ್ನ ಮೂಲಕ ಅವಳ ತಂದೆ ತಾಯಿಗೆ ಒಪ್ಪಿಸಲಾಗಿದೆ. ಪುನರ್ನೆಲೆಗೊಳಿಸಿದ ಸಂಸ್ಥೆಯ ಮೂಲಕ ಅವಳ ವಿಳಾಸವನ್ನು ಪಡೆದು ಗೌರಿಯ ಮನೆಗೆ ನಾವು ಭೇಟಿ ಕೊಟ್ಟಿದ್ದೆವು. ಅವಳ ಮನೆಗೆ ಹೋದಾಗ ಗೌರಿ ಜೋಳ ಸ್ವಚ್ಛ ಮಾಡುತ್ತಾ ಕುಳಿತಿದ್ದಳು. ಅವಳ ಜೊತೆ ಮಾತನಾಡುತ್ತಾ ಕುಳಿತಾಗ ಅವಳು ನಮ್ಮೊಂದಿಗೆ ಹಂಚಿಕೊಂಡ ವಿಷಯಗಳನ್ನು ಅವಳದೇ ಮಾತಿನಲ್ಲಿ ಕೆಳಗೆ ವಿವರಿಸಲಾಗಿದೆ.

### ಪೂರ್ವ

*ನಾನು ಚಿಕ್ಕವಳಿದ್ದಾಗ ತುಂಬಾ ಮುಗ್ಧ ಹುಡುಗಿಯಾಗಿದ್ದೆ. ನನ್ನಲ್ಲಿ ಹುಡುಗತನ ತುಂಬಾ ಇತ್ತು. ಯಾರ ಮಾತನ್ನೂ ಕೇಳುತ್ತಿರಲಿಲ್ಲ. ಶಾಲೆಗೂ ಹೋಗುತ್ತಿರಲಿಲ್ಲ. ನೋಡಲು ತುಂಬಾ ಚೆನ್ನಾಗಿದ್ದೆ. ಒಬ್ಬಳೇ ಮಗಳಾದುದರಿಂದ ತಂದೆ-ತಾಯಿ ಏನೂ ಹೇಳುತ್ತಿರಲಿಲ್ಲ. ಒಂದು ಸಾರಿ ನಾನು ತಾಯಿಯ ತವರು ಮನೆಗೆ ಹೋಗಿದ್ದೆ. ಆ ಊರಿನ ನನ್ನ ದೂರದ ಸಂಬಂಧಿಯೊಬ್ಬರು ಮುಂಬಯಿಯ ಬೀವಂಡಿಯಲ್ಲಿ ಘರವಾಲಿಯಾಗಿದ್ದಳು. ನಾನು ಊರಿಗೆ ಹೋದಾಗ ಅವಳೂ ಅಲ್ಲಿಗೆ ಬಂದಿದ್ದಳು. ನನ್ನ ನಡುವಳಿಕೆಯನ್ನು ಗಮನಿಸಿದ್ದ. ಅವಳು ನನ್ನ ಕನಸುಗಳಿಗೆ ಬಣ್ಣ ಹಚ್ಚಿ. "ಮುಂಬಯಿ ತೋರಿಸಿ ಕೊಂಡು ಬರುತ್ತೇನೆ ನನ್ನ ಜೊತೆ ಬಾ" ಎಂದು ಬೀವಂಡಿಗೆ ಕರೆದುಕೊಂಡು ಹೋಗಿದ್ದಳು. ಇದು ನಮ್ಮ ತಂದೆ ತಾಯಿಗೆ ಗೊತ್ತಾದರೆ ನನ್ನನ್ನು ಅವರು ಕಳಿಸುವುದಿಲ್ಲವೆಂದು, ಅವರಿಗೆ ಹೇಳದೇ ಅವಳೊಂದಿಗೆ ಹೊರಟು ಬಂದಿದ್ದೆ. ನನಗೆ ಘರವಾಲಿ ತನ್ನನ್ನು ಯಾಕೆ ಅಲ್ಲಿಗೆ ಕರೆದುಕೊಂಡು*

*ಬಂದಿದ್ದಾಳೆಂದು ಗೊತ್ತಿರುವುದಿಲ್ಲ. ಮುಂಬಯಿ ಅಂದ ತಕ್ಷಣ ತಿರುಗಾಡಿ ಮಜಾ ಮಾಡಿ ಮರಳಿ ಊರಿಗೆ ಬರುವುದು ಅಂದುಕೊಂಡಿದ್ದೆ. ಆದರೆ ಅಲ್ಲಿಯ ವಾತಾವರಣದಿಂದ ನನ್ನ ನಿದ್ದೆಯೇ ಹಾರಿ ಹೋಗಿತ್ತು. ಘರವಾಲಿ ಲಾಭ ನೀಡುವ ಗಿರಾಕಿಯನ್ನು ಹುಡುಕುವುದರಲ್ಲಿದ್ದಳು. ಅಷ್ಟರಲ್ಲಿ ಪೋಲೀಸ್ ರೇಡ್‌ನಲ್ಲಿ ನಾನು ಸಿಕ್ಕಿ ಬಿಟ್ಟಿದ್ದೆ. ನಾನು ಅಲ್ಲಿಗೆ ಹೋಗಿ ೪-೫ ದಿನಗಳಷ್ಟೇ ಕಳೆದಿದ್ದವು. ಏನೋ ಸಮಸ್ಯೆಗೆ ಬಲಿಯಾಗುವ ಮೊದಲು, ಅಲ್ಲಿಂದ ಪಾರಾಗಿ ಬಂದಿದ್ದೆ.*

*ಅಲ್ಲಿಂದ ನನ್ನನ್ನು ಮುಂಬಯಿಯ ಸಂಸ್ಥೆಯಲ್ಲಿ ಇಟ್ಟಿದ್ದರು. ಅಲ್ಲಿಯವರೆಲ್ಲ ತುಂಬಾ ಚೆನ್ನಾಗಿದ್ದರು. ನಾನು ಅವರೊಂದಿಗೆ ನನ್ನನ್ನು ಊರಿಗೆ ಕಳಿಸಿರೆಂದು ತುಂಬಾ ಹಠ ಮಾಡುತ್ತಿದ್ದೆ. ಆದಕ್ಕೆ ಅವರು "ನೀನು ಇಲ್ಲಿಯ ತರಬೇತಿಗಳನ್ನು ಎಷ್ಟು ಬೇಗ ಕಲಿಯುತ್ತೀಯೋ ಅಷ್ಟು ಬೇಗ ನಿನ್ನನ್ನು ಊರಿಗೆ ಕಳಿಸುತ್ತೇವೆ" ಎನ್ನುತ್ತಿದ್ದರು. ಅದೇ ಕಾರಣಕ್ಕೋ ಏನೋ ನಾನು ಅಲ್ಲಿ ಟೇಲರಿಂಗ್, ಬ್ಯೂಟಿ ಪಾರ್ಲರ್ ತರಬೇತಿಗಳನ್ನು ಕಲಿತುಕೊಂಡಿದ್ದೆ. ಅಲ್ಲಿ ಸುಮಾರು ಒಂದು ವರ್ಷ ಅವರು ನಮ್ಮನ್ನು ಇಟ್ಟುಕೊಂಡಿದ್ದರು. ನನ್ನ ಜೊತೆ ನಮ್ಮ ಅಕ್ಕಪಕ್ಕದ ಊರಿನ ಇಬ್ಬರು ಹುಡುಗಿಯರೂ ಇದ್ದರು. ಅಲ್ಲಿಂದ ನಮ್ಮನ್ನು ಅಥಣಿಯ ಸಂಸ್ಥೆಗೆ ಕಳುಹಿಸಿದರು. ಅಲ್ಲಿಯೂ ನಮ್ಮನ್ನೆಲ್ಲ ತುಂಬಾ ಚೆನ್ನಾಗಿ ನೋಡಿಕೊಂಡಿದ್ದರು. ಜಮಖಂಡಿಯ ಪೋಲೀಸ್ ಸ್ಟೇಶನ್ ಮೂಲಕ ನನ್ನನ್ನು ನಮ್ಮ ತಂದೆ-ತಾಯಿಗೆ ಒಪ್ಪಿಸಿದ್ದರು. ಪೊಲೀಸ್ ಸ್ಟೇಶನ್‌ದಲ್ಲಿ ಪೊಲೀಸರು, ನನ್ನ ತಂದೆ ತಾಯಿಯ ಕಡೆಯಿಂದ, ಮಗಳನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆಂದು ಸಹಿ ಮಾಡಿಸಿಕೊಂಡಿದ್ದರು. ನನಗೂ ಸಹ "ಇನ್ನೊಂದು ಸಾರಿ ಮುಂಬಯಿಗೆ ಹೋದದ್ದು ತಿಳಿದರೆ ನಿನ್ನ ತಂದೆ ತಾಯಿಯನ್ನೇ ಜೈಲಿಗೆ ಹಾಕುತ್ತೇನೆ" ಎಂದು ಎಚ್ಚರಿಕೆ ನೀಡಿ ನನ್ನನ್ನು ಮನೆಗೆ ಕಳಿಸಿದ್ದರು.*

**ಪ್ರಸ್ತುತ ಬದುಕು**

ಊರಿಗೆ ಬಂದ ಮೇಲೆ ಒಂದೆರಡು ವರ್ಷ ಬಿಟ್ಟು ನನ್ನ ತಾಯಿಯ ತಮ್ಮ(ಸೋದರ ಮಾವ)ನೊಡನೆ ಮದುವೆಯಾಯಿತು. ಈಗ ನನಗೆ ೭ ವರ್ಷದ ಮಗಳಿದ್ದಾಳೆ. ಮದುವೆಯಾದ ಹೊಸದರಲ್ಲಿ, ಗಂಡ ತುಂಬಾ ಕಿರಿಕಿರಿ ಮಾಡುತ್ತಿದ್ದ. ನಾನು ಬೀವಂಡಿಗೆ ಹೋಗಿ ಬಂದಿದ್ದ ಕುರಿತು ಪದೇ ಪದೇ ಕೆದಕುತ್ತಿದ್ದ. ನನ್ನ ಶೀಲದ ಕುರಿತು ಅನುಮಾನಿಸುತ್ತಿದ್ದ. ದಿನ ಕಳೆದ ಹಾಗೆ ಎಲ್ಲ ಮರೆತು, ಈಗ ಚೆನ್ನಾಗಿ ಇದ್ದಾನೆ. ನನ್ನ ಗಂಡ ಹೊಲದಲ್ಲಿ ಕೂಲಿ ಕೆಲಸ ಮಾಡುತ್ತಾನೆ. ದಿನಕ್ಕೆ ೩೦೦ ರೂ. ಕೊಡುತ್ತಾರೆ. ನಾನು ಟೇಲರಿಂಗ್ ಮುಂದುವರೆಸಿದ್ದೇನೆ. ಹಳ್ಳಿಯೊಳಗ ಬಟ್ಟೆ ಹೊಲಿಯುವುದು ಬಹಳ ಕಡಿಮೆ ಇರುತ್ತದೆ. ಹಬ್ಬ ತಿಥಿ ಇದ್ದರೆ ಮಾತ್ರ ಕೆಲಸ ಸಿಗುತ್ತದೆ. ಒಂದು ಜಂಪರ ಹೊಲದ್ರ ೬೦ ರೂಪಾಯಿ ಸಿಗುತ್ತದೆ. ನಾನಂತೂ ಶಾಲೆಗೆ ಹೋಗಲಿಲ್ಲ. ನನ್ನ ಮಗಳು ಬಾಳ ಹುಷಾರದಾಳ, ಆಕೆಗೆ ಚೆನ್ನಾಗಿ ಶಾಲೆ ಕಲಿಸುತ್ತೇನೆ.

## ಪ್ರಕರಣ-೬: ಶೋಭಾ

ಶೋಭಾ ದೇವದಾಸಿಯಾಗಿದ್ದು, ಜಮಖಂಡಿ ತಾಲೂಕಿನವಳಾಗಿದ್ದಾಳೆ. ಮಹಾರಾಷ್ಟ್ರ ರಾಜ್ಯದ ಥಾಣೆ ಜಿಲ್ಲೆಯ ಬೀವಂಡಿ ಪಟ್ಟಣದ ಕೆಂಪು ದೀಪದ ದಂಧೆಯ ಮನೆಯಲ್ಲಿ ಲೈಂಗಿಕ ಜೀತಕ್ಕೆ

ಒಳಗಾಗಿದ್ದಳು. ಶೋಭಾಳನ್ನು ದಿನಾಂಕ ೫.೧.೨೦೦೭ರಂದು ಬಾಲನ್ಯಾಯ ಕಾಯಿದೆ, ೨೦೦೦(ಕಾಳಜಿ ಮತ್ತು ರಕ್ಷಣೆ)ಯ ಸೆಕ್ಷನ್ ೩೨(೧)ರ ಅಡಿಯಲ್ಲಿ ರಕ್ಷಣೆ ಮಾಡಲಾಗಿತ್ತು. ರಕ್ಷಣೆಯ ನಂತರ ಶೋಭಾಳನ್ನು ಬೀವಂಡಿಯ ಬಾಲಗೃಹ/ಪರಿವೀಕ್ಷಣಾಲಯದಲ್ಲಿ ಇಡಲಾಗಿತ್ತು. ಅದರ ನಂತರ ಮುಂಬಯಿನ ಪಾಯ್‌ಸೂರ್ ಎಂಬಲ್ಲಿ ಸರ್ಕಾರೇತರ ಸಂಸ್ಥೆಯ ಪುನರ್ವಸತಿ ಕೇಂದ್ರದಲ್ಲಿ ಸುಮಾರು ಒಂದು ವರ್ಷದವರೆಗೆ ಇರಿಸಲಾಗಿತ್ತು. ಅಲ್ಲಿ ಕಸೂತಿ ಟೇಲರಿಂಗ್, ಬ್ಯೂಟಿಪಾರ್ಲರ್, ಬ್ಯಾಗ್ ಮೇಕಿಂಗ್ ತರಬೇತಿಗಳನ್ನು ಹೇಳಿ ಕೊಡಲಾಗುತ್ತಿತ್ತು. ಆದರೂ ಸಹ ಅನಕ್ಷರಸ್ಥಳಾಗಿದ್ದ ಶೋಭಾ ಯಾವುದರಲ್ಲಿಯೂ ಆಸಕ್ತಿ ತೋರಿಸಲಿರಲಿಲ್ಲವೆಂದು ಸಮಾಲೋಚಕರ ವರದಿಯಿಂದ ತಿಳಿದು ಬರುತ್ತದೆ. ದಿನಾಂಕ ೧೦.೧೨.೨೦೦೭ ರಿಂದ ೭.೨.೨೦೦೮ರವರೆಗೆ ಪುನರ್ಮಿಲನಕ್ಕಾಗಿ ಕರ್ನಾಟಕದ ಬೆಳಗಾವಿ ಜಿಲ್ಲೆಯ ಸರ್ಕಾರೇತರ ಸಂಸ್ಥೆಯ ಸುಪರ್ದಿಗೆ ಒಪ್ಪಿಸಲಾಗುತ್ತದೆ. ಈ ಎರಡು ತಿಂಗಳ ಅವಧಿಯಲ್ಲಿ ಶೋಭಾಳನ್ನು ಮತ್ತು ಅವಳ ಪೋಷಕರನ್ನು ಸಮಾಲೋಚನೆಗೆ ಒಳಪಡಿಸಲಾಗುತ್ತದೆ. ನಂತರ ಜಮಖಂಡಿ ಪೊಲೀಸ್ ಠಾಣೆಯ ಮುಖಾಂತರ ಅವಳನ್ನು ಅವಳ ತಾಯಿಗೆ ಒಪ್ಪಿಸಲಾಗಿರುತ್ತದೆ. ಪುನರ್ಮಿಲನಗೊಳಿಸಿದ ಸಂಸ್ಥೆಯಿಂದ ಶೋಭಾಳ ಮನೆಯ ವಿಳಾಸ ಪಡೆದು ಶೋಭಾಳ ಮನೆಗೆ ಭೇಟಿ ನೀಡಿದ್ದೆವು. ಶೋಭಾಳ ಮನೆ ಶಿಥಿಲವಾಗಿತ್ತು. ಮನೆಯ ಹಿಂದಿನ ಭಾಗ ಬಿದ್ದು ಹೋಗಿತ್ತು. ನಾವು ಹೋದಾಗ ಮನೆಯಲ್ಲಿ ಯಾರೂ ಇರಲಿಲ್ಲ. ಮನೆಗೆ ಚಿಲಕ ಹಾಕಿತ್ತು. ಚಿಲಕ ತೆಗೆದು ಒಳಗೆ ನೋಡಿದಾಗ ಯಾರೋ ಅದೇ ಆಗ ಅಡುಗೆ ಮಾಡುತ್ತಾ ಅರ್ಧಕ್ಕೆ ಹಾಗೇ ನಿಲ್ಲಿಸಿ ಹೋದ ಗುರುತು ಕಾಣುತ್ತಿತ್ತು.

ಅಕ್ಕ ಪಕ್ಕದ ಮನೆಯವರಲ್ಲಿ ಶೋಭಾಳ ಕುರಿತು ವಿಚಾರಿಸಿದಾಗ, ಅವಳ ಮನೆಯ ಹತ್ತಿರವೇ ಇರುವ ಸಂಬಂಧಿಕರೊಬ್ಬರು "ಅಕೀ ದಗದಾ ಮಾಡಾಕ ಹೋಗ್ಯಾಳ. ಹೊಲಾ ಇಲ್ಲಿಂದ ಬಾಳ ದೂರ ಐತಿ. ಬರದು ಬಾಳ ತಡಾ ಅಕ್ಕೈತಿ" ಎಂದು ಹೇಳಿದರು. ಅವಳ ತಾಯಿಯ ಕುರಿತು ವಿಚಾರಿಸಿದಾಗ, "ಅಕೀನೂ ಶೋಭವ್ವನ ಜೋಡೀನ ಹೋಗ್ಯಾಳ" ಎಂದೂ ಹೇಳಿದರು. ತುಂಬಾ ಹೊತ್ತಿನವರೆಗೆ ಕಾಯ್ದರೂ ಸತ್ಯ ಏನೆಂಬುದು ಅವರಿಂದ ತಿಳಿಯಲಿಲ್ಲ. ಆದರೆ ಶೋಭಾಳ ಮೂರು ವರ್ಷದ ಮಗಳು 'ತನ್ನ ತಾಯಿ ಕೆಲಸಕ್ಕೆ ಹೋಗಿಲ್ಲ. ದೂರ ಊರಿಗೆ ಹೋಗಿದ್ದಾಳೆ. ಈಗ ಬರುವುದಿಲ್ಲ' ಎಂದು ಹೇಳಿತು. ಅದೇ ವಿಚಾರವನ್ನು ಗ್ರಾಮದ ಕೆಲವು ಯುವಕರು "ಅವರು ದಂಧೆ ಮಾಡಲೆಂದೇ ಬೀವಂಡಿಗೆ ಹೋಗಿದ್ದಾರೆ. ಅವರ ಮಗಳು ಇಲ್ಲಿಯೇ ಇರುತ್ತಾಳೆ. ಇನ್ನೊಂದು ಗಂಡು ಮಗುವಿದೆ ಅದನ್ನು ಕರೆದುಕೊಂಡು ಹೋಗಿದ್ದಾರೆ" ಎಂದರು. ಆ ವಿಷಯ ನಿಜವೂ ಆಗಿತ್ತು. ಯಾಕೆಂದರೆ ಅಲ್ಲಿಯೇ ಇದ್ದ ಕೆಲವು ವೃದ್ಧೆಯರು ಅವಳು ಮುಂಬಯಿಗೆ ಹೋದ ವಿಚಾರವನ್ನು ಹೇಳಿದರು. ಅಕ್ಕಪಕ್ಕದವರು ತಮಗೆ ಯಾಕೆ ಬೇಕು ಎಂದು ಸತ್ಯವನ್ನು ಬಾಯಿ ಬಿಟ್ಟಿರಲಿಲ್ಲ. ಅವಳ ತಾಯಿ ಅಲ್ಲಿಯೇ ಎಲ್ಲೋ ಅಡುಗಿ ಕುಳಿತಿರಬಹುದು. ನಮ್ಮನ್ನು ಎದುರಿಸಲಾರದೇ ಮರೆಯಾಗಿದ್ದಳು ಎಂಬ ಭಾಸವೂ ಆಗತೊಡಗಿತ್ತು. ಮರುದಿನ ಫೋನ್ ಮೂಲಕ ಶೋಭಾ ಮಾತನಾಡಿ "ತಾನು ಜಗಳ ಮಾಡಿ ಪಕ್ಕದ ಹಳ್ಳಿಗೆ ಹೋಗಿದ್ದೆ ನಾನು ದಂಧೆ ಮಾಡುವುದನ್ನು ಬಿಟ್ಟಿದ್ದೇನೆ ನನ್ನನ್ನು ನಂಬಿರಿ" ಎಂದು ವಿನಂತಿಸಿಕೊಳ್ಳುತ್ತಿದ್ದಳು.

*ಶೋಭಾಳ ಕುರಿತು ಸಮಾಲೋಚಕರ ವರದಿಯನ್ನು ಗಮನಿಸಿದಾಗ, ಶೋಭಾ ತುಂಬಾ ಗಂಭೀರ ಮತ್ತು ಸೂಕ್ಷ್ಮ ಸ್ವಭಾದವಳು. ಮನೆಯಲ್ಲಿ ೮೦ ವರ್ಷದ ಅಜ್ಜಿ, ಮಾನಸಿಕ ಅಸ್ವಸ್ಥಳಾದ ತಾಯಿ ಮತ್ತು ೮ ವರ್ಷದ ತಂಗಿ ಇರುತ್ತಿದ್ದರು. ತಂದೆ ಜವಾಬ್ದಾರಿ ಹೊರಲಾರದೇ ಇವರನ್ನೆಲ್ಲ ಬಿಟ್ಟು ಓಡಿ ಹೋಗಿದ್ದ. ಮನೆಯಲ್ಲಿ ಉಳಿದವರೆಲ್ಲ ಅಮಾಯಕ ಅಸಹಾಯಕ ಹೆಣ್ಣುಮಕ್ಕಳು. ಇವರನ್ನೆಲ್ಲ ನೋಡಿಕೊಳ್ಳಬೇಕಾದ ಬಹುದೊಡ್ಡ ಜವಾಬ್ದಾರಿ ಪುಟ್ಟ ಶೋಭಾಳ ಮೇಲೆ ಬಿದ್ದಿತು. ಕೇರಿಯ ಹಿರಿಯರು ಸೇರಿ ಅವಳನ್ನು ದೇವದಾಸಿ ಮಾಡುತ್ತಾರೆ. ಶೋಭಾಳ ಪಕ್ಕದ ಮನೆಯಲ್ಲಿ ಒಬ್ಬಳು ಹಿರಿಯ ದೇವದಾಸಿ ಇರುತ್ತಿದ್ದಳು. ಅವಳು ಮಹಾರಾಷ್ಟ್ರದ ಥಾಣೆ ಜಿಲ್ಲೆಯ ಬೀವಂಡಿಯಲ್ಲಿ ಘರವಾಲಿಯಾಗಿದ್ದಳು. ಅವಳು ಶೋಭಾ ಋತುಮತಿಯಾಗುವುದನ್ನೇ ಕಾಯುತ್ತಿದ್ದಳು. ಋತುಮತಿಯಾದ ಕೂಡಲೇ ಶೋಭಾಳ ಅಜ್ಜಿಗೆ ತಿಳಿಸಿ ಅವಳನ್ನು ಕರೆದುಕೊಂಡು ಬೀವಂಡಿ ಸೇರಿದ್ದಳು. ದಂಧೆಯನ್ನೇ ಮಾಡಬೇಕೆಂದು ಹೋದವಳಿಗೆ ನೋವೆನಿಸಿದರೂ ಹೊಂದಿಕೊಳ್ಳುವುದು ಅನಿವಾರ್ಯವಾಗಿತ್ತು. ಇವಳ ಮೇಲೆಯೇ ಅವಲಂಬಿತರಾದ ಮೂರು ಜೀವಗಳಿಗೆ ಶೋಭಾಳೇ ಆಧಾರವಾಗಿದ್ದಳು. ತಿಂಗಳಿಗೆ ತನ್ನ ಖರ್ಚುಗಳನ್ನು ಕಳೆದು ೮೦೦ರಿಂದ ೧೦೦೦ ರೂಪಾಯಿ ಮನೆಗೆ ಕಳಿಸುತ್ತಿದ್ದಳು. ಅದರಲ್ಲೇ ತಮ್ಮೆಲ್ಲ ದಿನನಿತ್ಯದ ಆಹಾರ, ಆರೋಗ್ಯಕ್ಕಾಗಿ ಮನೆಯವರು ವ್ಯಯಿಸಿಕೊಳ್ಳುತ್ತಿದ್ದರು. ಹೀಗೆ ೪-೫ ವರ್ಷ ಕಳೆದ ಶೋಭಾ ಒಂದು ದಿನ ಪೋಲೀಸ್ ರೇಡ್‌ನಲ್ಲಿ ಸಿಕ್ಕಿಬಿದ್ದಿದ್ದಳು. ಪುನರ್ವಸತಿಗಾಗಿ ಬೆಳಗಾವಿ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಗೆ ಬಂದಿದ್ದ ಶೋಭಾಳನ್ನು ದಿನಾಂಕ ೭.೨.೨೦೦೮ರಂದು ಜಮಖಂಡಿಯ ಪೋಲೀಸ್ ಠಾಣೆಯ ಮೂಲಕ ತಾಯಿ ಮತ್ತು ಅವಳ ಅಜ್ಜಿಗೆ ಅವಳನ್ನು ಒಪ್ಪಿಸಲಾಗಿತ್ತು. ಪೋಲೀಸ ಅಧಿಕಾರಿಗಳು ಮತ್ತೇನಾದರೂ ಇದೇ ರೀತಿ ಮರುಕಳಿಸಿದರೆ, ಮನೆಯ ಎಲ್ಲರನ್ನೂ ಜೈಲಿಗೆ ಹಾಕುವುದಾಗಿ ಎಚ್ಚರಿಕೆ ನೀಡಿ, ಅವರಿಂದ ಮುಚ್ಚಳಿಕೆ ಪತ್ರ ಬರೆಸಿಕೊಂಡು ಬಿಡುಗಡೆ ಮಾಡಿದ್ದರು.*

## ಪ್ರಕರಣ–೭: ಸುನಂದಾ

**ಸುನಂದಾ** ೧೬ ವರ್ಷದ ದೇವದಾಸಿ ಹೆಣ್ಣುಮಗಳು. ಅನಕ್ಷರಸ್ಥಳಾಗಿದ್ದಾಳೆ. ಇವಳು ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನವಳು. ಮಹಾರಾಷ್ಟ್ರ ರಾಜ್ಯದ ಥಾಣೆ ಜಿಲ್ಲೆಯ ಬೀವಂಡಿ ಪಟ್ಟಣದ ಕೆಂಪು ದೀಪದ ಪ್ರದೇಶದಲ್ಲಿ ಲೈಂಗಿಕ ಜೀತಕ್ಕಾಗಿ ಮನೆಯವರಿಂದಲೇ ನೂಕಲ್ಪಟ್ಟಿದ್ದಳು. ಇವಳನ್ನು ದಿನಾಂಕ ೫.೧.೨೦೦೭ರಂದು ಬಾಲನ್ಯಾಯ ಕಾಯಿದೆ, ೨೦೦೦ದ ಸೆಕ್ಷನ್ ೩೨(೧)ರ ಅಡಿಯಲ್ಲಿ ರಕ್ಷಣೆ ಮಾಡಲಾಗಿತ್ತು. ಅಲ್ಲಿಂದ ಮೊದಲು ಬೀವಂಡಿಯ ಪರಿವೀಕ್ಷಣಾಲಯ/ಬಾಲಗೃಹದಲ್ಲಿ ಇಡಲಾಗಿತ್ತು. ಅದರ ನಂತರ ಪಾಯ್‌ಸೂರ್‌ನ ಸರ್ಕಾರೇತರ ಸಂಸ್ಥೆಯ ಪುನರ್ವಸತಿ ಕೇಂದ್ರಕ್ಕೆ ಸ್ಥಳಾಂತರಿಸಲಾಯಿತು. ಸರಿಸುಮಾರು ಒಂದು ವರ್ಷದವರೆಗೆ ಸುನಂದಾ ಪುನರ್ವಸತಿ ಕೇಂದ್ರದಲ್ಲಿ ಇದ್ದಳು.

ಪಾಯಸೂರ್‌ನ ಸಂಸ್ಥೆ ನೀಡಿದ ವರದಿಯ ಪ್ರಕಾರ, ಸುನಂದಾ ಹೆಚ್.ಐ.ವಿ. ಪೀಡಿತೆಯಾಗಿದ್ದಾಳೆ. ಸಧ್ಯಕ್ಕೆ ಮಾತ್ರೆಗಳು ಪ್ರಾರಂಭವಿದ್ದು, ಅವುಗಳನ್ನು ಅವಳು ನಿಯಮಿತವಾಗಿ ತೆಗೆದುಕೊಳ್ಳಬೇಕು ಎಂದು ತಿಳಿಸಿದ್ದರು. ಒಂದು ವರ್ಷದ ಸಮಾಲೋಚನೆ ಮತ್ತು ತರಬೇತಿಯ ನಂತರ ಪುನರ್ವಸತಿಗಾಗಿ,

ದಿನಾಂಕ ೧೦.೧೨.೨೦೦೭ರಂದು ಕರ್ನಾಟಕದ ಬೆಳಗಾವಿ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಯೊಂದರ ಸುಪರ್ದಿಗೆ ಕಳಿಸಲಾಯಿತು.

ಪುನರ್ವಸತಿಗೊಳಿಸಿದ ಸಂಸ್ಥೆಯಿಂದ ಸುನಂದಾಳ ವಿಳಾಸ ಮತ್ತು ಮಾಹಿತಿ ಪಡೆದು ಸುನಂದಾಳ ಮನೆಗೆ ಅವಳನ್ನು ಭೇಟಿಯಾಗಲು ಮನೆಗೆ ಹೋದಾಗ ಅವಳು ಮನೆಯಲ್ಲೇ ಇದ್ದಳು. ಅವಳ ತಂದೆಯೂ ಮನೆಯಲ್ಲಿಯೇ ಇದ್ದರು. ತಾಯಿ ಮಾತ್ರ ಕೂಲಿ ಕೆಲಸಕ್ಕೆ ಹೋಗಿದ್ದರು. ಸುನಂದಾ ನೋಡಲು ತುಂಬಾ ಅಶಕ್ತಳಾದಂತೆ ಕಾಣುತ್ತಿದ್ದಳು. ಆದರೆ ತುಂಬಾ ಲವಲವಿಕೆಯಿಂದ ಇದ್ದಳು. ಅವಳಿಗೆ ತನ್ನ ರೋಗದ ಕುರಿತು ಯಾವುದೇ ಚಿಂತೆ ಇರದವಳಂತೆ ಕಾಣುತ್ತಿದ್ದಳು. ಆರೋಗ್ಯದ ಬಗ್ಗೆ ವಿಚಾರಿಸಿದಾಗ, ಅದರ ಬಗ್ಗೆ ತನಗೆ ನೆನಪೇ ಇಲ್ಲ ಅನ್ನುವ ಹಾಗೆ ಮಾತನಾಡಿದಳು. ತುಂಬಾ ದಿನಗಳಿಂದ ಮಾತ್ರೆಗಳನ್ನು ತೆಗೆದುಕೊಂಡಿಲ್ಲ ಎಂದು ತಿಳಿಸಿದಳು. ಈ ಕುರಿತು ಅವಳ ತಂದೆಯನ್ನು ಕೇಳಿದರೆ, ಆತ ನಗುತ್ತಲೇ "ನಾವೇನು ಹೇಳಿದರೂ ಕೇಳಂಗಿಲ್ರೀ ದವಾಖಾನಿ ಅಂದ್ರ, ನಂಗೇನೂ ಆಗಿಲ್ಲ. ಸುಮ್ನಿರಪ್ಪಾ" ಅಂತಾಳೆ ಅಂತ ಉತ್ತರಿಸಿದ್ದರು. ಹಾಗೆಯೇ ಸುನಂದಾಳೊಂದಿಗೆ ಅವಳ ನೋವು ನಲಿವುಗಳ ಕುರಿತು, ಸಾಗಾಣಿಕೆ ರಕ್ಷಣೆಯ ಕುರಿತು ವಿಚಾರಿಸಿದಾಗ, ಅವಳು ಹಂಚಿಕೊಂಡ ವಿಚಾರಗಳನ್ನು ಈ ಕೆಳಗೆ ವಿವರಿಸಲಾಗಿದೆ.

*ನಾನು ೨೪ ವರ್ಷದವಳಾಗಿದ್ದು, ನಮ್ಮ ತಂದೆಗೆ ಇರುವ ಮೂವರು ಮಕ್ಕಳಲ್ಲಿ ಒಬ್ಬಳೇ ಹೆಣ್ಣುಮಗಳು ಮತ್ತು ಹಿರಿಯಳು. ನನ್ನ ತಂದೆ ಏನೂ ಕೆಲಸ ಮಾಡದ ಸೋಮಾರಿಯಾಗಿದ್ದ. ನನ್ನ ತಾಯಿ ಇಟ್ಟಂಗಿ ಭಟ್ಟಿಗಳಲ್ಲಿ ದುಡಿಯುತ್ತಿದ್ದಳು. ತಾಯಿಯು ಕೆಲಸಕ್ಕೆ ಹೋದಾಗ ನನ್ನನ್ನು, ನನ್ನ ತಮ್ಮಂದಿರನ್ನು ಮನೆಯಲ್ಲಿ ಬಿಟ್ಟು ಹೋಗುತ್ತಿದ್ದಳು. ಆ ಸಂದರ್ಭದಲ್ಲಿ ನನ್ನ ತಂದೆ, ನನ್ನ ಅನಾರೋಗ್ಯದ ನೆಪಮಾಡಿ ನನಗೆ ಮುತ್ತುಕಟ್ಟಿಸಿ ದೇವದಾಸಿ ಮಾಡುತ್ತಾನೆ. ಋತುಮತಿಯಾಗುವವರೆಗೆ ಕಾಯ್ದಿದ್ದು ೧೨ ವರ್ಷಕ್ಕೆ ನನ್ನನ್ನು ಮುಂಬಯಿಗೆ ಕಳಿಸುವ ತಯಾರಿ ನಡೆಸಿದ್ದ. ಪಕ್ಕದ ಹಳ್ಳಿಯ ದೇವದಾಸಿ ಮಹಿಳೆಯೊಬ್ಬಳು ಥಾಣೆಯ ಬೀವಂಡಿಯಲ್ಲಿ ಘರವಾಲಿ ಆಗಿದ್ದಳು. ನನ್ನ ತಂದೆ ಅವಳ ಹತ್ತಿರ ೧೦,೦೦೦ ಸಾವಿರ ರೂಪಾಯಿ, ಸಾಲ ತೆಗೆದುಕೊಂಡು ನನ್ನನ್ನು, ಥಾಣೆ ಜಿಲ್ಲೆಯ ಬೀವಂಡಿಗೆ ಕಳಿಸುತ್ತಾನೆ. ದಂಧೆಗೆ ತೊಡಗುವ ಮೊದಲೇ ನನ್ನ ಮೇಲೆ ನನ್ನ ತಂದೆ ಸಾಲ ತೆಗೆದುಕೊಂಡಿದ್ದರಿಂದ, ಘರವಾಲಿಯು ಹೇಳಿದಂತೆ ನಾನು ಕೇಳಲೇಬೇಕಾಗುತ್ತದೆ. ನಾನು ಚಿಕ್ಕ ಹುಡುಗಿಯಾದ್ದರಿಂದ ನನಗೆ ನಿರೋಧ ಬಳಸುವುದು ಗೊತ್ತಿರಲಿಲ್ಲ. ಘರವಾಲಿಯು ಗಿರಾಕಿಗಳು  ಹೇಳಿದಂತೆ ಕೇಳಲು ಹೇಳುತ್ತಿದ್ದಳು. ಗಿರಾಕಿಗಳು ನಿರೋಧ ಇಲ್ಲದೇ ನನ್ನೊಂದಿಗೆ ದೈಹಿಕ ಸಂಪರ್ಕ ಮಾಡುತ್ತಿದ್ದರು. ಹೀಗಾಗಿ ನನಗೆ ಹೆಚ್.ಐ.ವಿ. ತಗುಲಿದೆ. ನನ್ನ ಅನಾರೋಗ್ಯದ ವಿಷಯವಾಗಿ ನನಗೆ ತುಂಬಾ ಚಿಂತೆಯಾಗುತ್ತಿತ್ತು. ಇದೇ ಚಿಂತೆಯಲ್ಲಿ ನಾನು ಒಂದು ವರ್ಷ ಪುನರ್ವಸತಿ ಕೇಂದ್ರದಲ್ಲಿ ಇದ್ದರೂ ಏನೂ ಕಲಿಯಲಾಗಲಿಲ್ಲ.*

*ಇಲ್ಲಿ ನಾನು ಯಾವ ಕೆಲಸಕ್ಕೂ ಹೋಗುವುದಿಲ್ಲ. ಮನೆಯಲ್ಲಿಯೇ ಇರುತ್ತೇನೆ. ನನ್ನ ತಾಯಿ ಮತ್ತು ತಮ್ಮಂದಿರು ಕೆಲಸ ಮಾಡುತ್ತಾರೆ. ಅದೇ ಆದಾಯದಲ್ಲಿ ನಾನೂ ಬದುಕುತ್ತಿದ್ದೇನೆ. ಈಗ*

*ಒಂದೆರಡು ವರ್ಷಗಳಿಂದ ನನ್ನ ತಾಯಿಯ ತವರು ಮನೆಯಲ್ಲಿ ಚೌಡಕಿ ಬಾರಿಸುವುದನ್ನು ಕಲಿಯುತ್ತಿದ್ದೇನೆ. ವರ್ಷಕ್ಕೆ ೪–೫ ಕಾರ್ಯಕ್ರಮಗಳು ಸಿಗುತ್ತವೆ. ಆದರಿಂದ ೨–೩ ಸಾವಿರ ಆದಾಯ ಬರುತ್ತದೆ. ನಾನು ದೇವದಾಸಿಯಾದರೂ ಸಹಿತ ವಯಸ್ಸು ಚಿಕ್ಕದಿರುವುದರಿಂದ ದೇವದಾಸಿಯರ ಪಟ್ಟಿಯಲ್ಲಿ ನನ್ನ ಹೆಸರನ್ನು ಬರೆಸಲು ಆಗಿಲ್ಲ. ಹಾಗಾಗಿ ಸರಕಾರದಿಂದ ದೇವದಾಸಿಯರಿಗಾಗಿ ಸಿಗುವ ಯಾವುದೇ ಸೌಲಭ್ಯಗಳೂ ನನಗೆ ಸಿಕ್ಕಿಲ್ಲ. ನನ್ನ ವಯಸ್ಸು ಸಣ್ಣದಿರುವುದರಿಂದ ಆ ಸೌಲಭ್ಯಗಳು ನನಗೆ ದೊರೆಯುವುದಿಲ್ಲ ವೆಂದು ಅಂಗನವಾಡಿಯವರು ಹೇಳುತ್ತಾರೆ.*

### ಪ್ರಕರಣ–೮ ಮತ್ತು ೯: ಸಾರಿಕಾ ಮತ್ತು ಅಂಬಿಕಾ

ಬೆಳಗಾವಿ ಜಿಲ್ಲೆಯವರಾದ ಸಾರಿಕಾ ಮತ್ತು ಅಂಬಿಕಾ ಇವರು ಶಾಲಾಬಾಯಿ ಎಂಬುವರ ಮಕ್ಕಳು. ಇವರು ಅಕ್ಕ ತಂಗಿಯರಾಗಿದ್ದು, ಮುಂಬಯಿಯ ಕಾಮಾಟಿಪೂರದಿಂದ ೨೦೦೩ರ ನವೆಂಬರ್‌ನ ಪೊಲೀಸ್ ಕಾರ್ಯಾಚರಣೆಯಲ್ಲಿ, ಬಾಲಾಪರಾಧಿ ನ್ಯಾಯ ಕಾಯಿದೆ ೨೦೦೦(ರಕ್ಷಣೆ ಮತ್ತು ಕಾಳಜಿ) ಪ್ರಕಾರ ಇವರನ್ನು ರಕ್ಷಿಸಲಾಗಿತ್ತು. ಮುಂದಿನ ಸಮಾಲೋಚನೆಗೆ ಟಾಟಾ ಇನಸ್ಟಿಟ್ಯೂಟ್ ಆಫ್ ಸೋಷಿಯಲ್ ಸಾಯಿನ್ಸ್‌ನ ಪ್ರಯಾಸ್ ಘಟಕಕ್ಕೆ ವರ್ಗಾಯಿಸಲಾಗಿತ್ತು. ಈ ಮಧ್ಯ ಇವರ ಮನೆ ಭೇಟಿ ಮಾಡಿ ವರದಿಯನ್ನು ಸಲ್ಲಿಸಲು, ಬೆಳಗಾವಿ ಜಿಲ್ಲೆಯ ಸ್ವಯಂ ಸೇವಾ ಸಂಸ್ಥೆಗೆ ವಿನಂತಿಸಿತ್ತು. ಆ ನೀಡಿದ ವಿಳಾಸದ ಪ್ರಕಾರ ನಾವು ಸಾರಿಕಾ ಮತ್ತು ಅಂಬಿಕಾ ಇವರ ಮನೆಗೆ ಭೇಟಿ ನೀಡಿದಾಗ, ಅಲ್ಲಿ ನಮಗೆ ಅವರ ತಾಯಿ ಭೇಟಿಯಾದರು. ಅವರು ನೀಡಿದ ಮಾಹಿತಿಯನ್ನು ಈ ಕೆಳಗೆ ವಿವರಿಸಲಾಗಿದೆ.

ಸಾರಿಕಾ ಮತ್ತು ಅಂಬಿಕಾ ನನ್ನ ಮಕ್ಕಳು. ನನಗೆ ಒಟ್ಟು ೪ ಮಕ್ಕಳಿದ್ದು. ಅದರಲ್ಲಿ ಮೂವರು ಹೆಣ್ಣುಮಕ್ಕಳು ಮತ್ತು ಒಬ್ಬನು ಗಂಡು ಮಗು. ಸಾರಿಕಾ ಮತ್ತು ಅಂಬಿಕಾ ಇವರಿಗಿಂತ ದೊಡ್ಡ ಮಗಳೊಬ್ಬಳಿದ್ದಾಳೆ. ಅವಳು ಬೆಳಗಾವಿಯಲ್ಲಿದ್ದಾಳೆ. ಈಗ ಅಂಬಿಕಾ ಮತ್ತು ಸಾರಿಕಾ ಇಬ್ಬರದೂ ಮದುವೆಯಾಗಿದೆ. ಅವರು ತಮ್ಮ ತಮ್ಮ ಗಂಡನ ಮನೆಗಳಲ್ಲಿ ಸಂತೋಷದಿಂದ ಇದ್ದಾರೆ. ಅವರನ್ನು ಮುಂಬಯಿಯಿಂದ ಕರೆದುಕೊಂಡು ಬಂದ ಮೇಲೆ ಬೆಳಗಾವಿಯಲ್ಲಿದ್ದ ದೊಡ್ಡ ಮಗಳ ಪರಿಚಯದ ಮೇಲೆ ವರಗಳನ್ನು ಹುಡುಕಿ ಮದುವೆ ಮಾಡಿದ್ದೇವೆ. ಸಾರಿಕಾಳ ಗಂಡ ಪಂಜಾಬಿಯಾಗಿದ್ದಾನೆ. ಪೂನಾದ ಒಂದು ಕಂಪನಿಯಲ್ಲಿ ಕೆಲಸ ಮಾಡುತ್ತಾನೆ. ಆತನಿಗೆ ೩೦,೦೦೦ ಸಾವಿರ ರೂಪಾಯಿ ಸಂಬಳವಿದೆ. ಪೂನಾದಲ್ಲಿಯೇ ಮನೆ ಮಾಡಿಕೊಂಡು ಇದ್ದಾರೆ. ಅಂಬಿಕಾಳ ಗಂಡ ತಮಿಳಿನವನಾಗಿದ್ದು ಮುಂಬಯಿಯ ಪನವೇಲದಲ್ಲಿ ಎರಡು ಬಾರ್‌ಗಳನ್ನು ಇಟ್ಟುಕೊಂಡಿದ್ದಾನೆ. ಅವರಿಗೆ ಎರಡು ಮಕ್ಕಳಾಗಿವೆ. ಅವರು ಪನವೇಲದಲ್ಲಿ ಇದ್ದಾರೆ.

ಯಾಕೆ ನಿಮ್ಮ ಮಕ್ಕಳನ್ನು ಲೈಂಗಿಕ ದಂಧೆಗೆ ತಳ್ಳಲಾಗಿತ್ತು? ಎಂಬ ಪ್ರಶ್ನೆಗೆ ತಾಯಿ ಶಾಲಾಬಾಯಿ ನೀಡಿದ ಮಾಹಿತಿಯ ಪ್ರಕಾರ. ನಾವೇನೂ ಅವರನ್ನ ದಂಧೆ ಮಾಡಲು ಕಳಿಸಿರಲಿಲ್ಲ. ನನ್ನ ಪರಿಸ್ಥಿತಿಯಿಂದ ಹಾಗೆ ಆಯಿತೇನೋ ಎಂದು ನನಗೆ ಅನ್ನಿಸುತ್ತದೆ. ನನ್ನ ಗಂಡ ಮಿಲಿಟರಿಯಲ್ಲಿ

ಸೈನಿಕರಾಗಿದ್ದರು. ಅವರು ಏನೋ ಸಮಸ್ಯೆ ಮಾಡಿಕೊಂಡು ಮಿಲಿಟರಿಯಿಂದ ಮರಳಿ ಬಂದಿದ್ದರು. ಇಲ್ಲಿಗೆ ಬಂದ ಮೇಲೆ ನನ್ನನ್ನು ಬಿಟ್ಟು ಬೇರೊಬ್ಬಳ ಜೊತೆ ಸಂಬಂಧ ಬೆಳೆಸಿದ್ದಾರೆ. ಈಗ ಅವಳ ಜೊತೆಗೇ ಇದ್ದಾರೆ. ಇದನ್ನೆಲ್ಲ ಸಹಿಸಿಕೊಳ್ಳಲಾಗದೇ ನಾನು ನನ್ನ ತಂದೆಯ ಮನೆಗೆ ಬಂದು ಬಿಟ್ಟಿದ್ದೆ. ಅವರಿವರ ಸಹಾಯ ಪಡೆದು ನನ್ನ ಮಕ್ಕಳನ್ನು ಬೆಳೆಸಿದ್ದೇನೆ. ಎರಡನೆಯ ಮಗಳು ೭ ನೇ ಇಯತ್ತೆ ಓದಿದ್ದಾಳೆ. ಇನ್ನಿಬ್ಬರು ಏನನ್ನೂ ಓದಲಿಲ್ಲ. ಅವರಿಗೆ ೧೨-೧೩ ವರ್ಷಗಳು ತುಂಬುತ್ತಲೇ ಮದುವೆ ಮಾಡಿದ್ದೆ. ಬೇರೆ ಬೇರೆ ಕಾರಣಗಳಿಂದಾಗಿ ನನ್ನ ಮೂರೂ ಮಕ್ಕಳು ಗಂಡನ ಮನೆಯಲ್ಲಿ ಹೊಂದಿಕೊಳ್ಳಲೇ ಇಲ್ಲ. ಒಂದೊಂದು ವರ್ಷದಲ್ಲಿ ಗಂಡನ ಮನೆ ಬಿಟ್ಟು ತವರು ಸೇರಿಕೊಂಡರು. ಗಂಡನ ಮನೆ ಬಿಟ್ಟು ಬಂದ ಮೇಲೆ ಅಂಬಿಕಾ ಮತ್ತು ಸಾರಿಕಾ ರೈತರಿಂದ ದಾಳಿಂಬೆ ಖರೀದಿಸಿಕೊಂಡು ಬೆಳಗಾವಿಯಲ್ಲಿ ಮಾರಾಟ ಮಾಡುತ್ತಿದ್ದರು. ಅದಕ್ಕಾಗಿ ಒಂದೊಂದು ಸಾರೆ ಅವರು ಎರಡು ಮೂರು ದಿನಗಳವರೆಗೆ ಬೆಳಗಾವಿಯಲ್ಲೆ ಉಳಿಯುತ್ತಿದ್ದರು. ನನ್ನ ಹೆಣ್ಣುಮಕ್ಕಳು ಚಿಕ್ಕವರಿದ್ದರೂ ಸಹ ದಿಟ್ಟತನದಿಂದ ವ್ಯಾಪಾರ ಮಾಡುತ್ತಿದ್ದರು. ಇದರ ಜೊತೆ ಸಾರಿಕಾ ಗೃಹ ಅಲಂಕಾರಕ್ಕೆ ಸಂಬಂಧಿಸಿದ ವ್ಯಾಪಾರ ನಿಮಿತ್ತ ದೆಹಲಿಗೂ ಸಹ ಹೋಗಿಬರುತ್ತಿದ್ದಳು.

ವ್ಯಾಪಾರದ ಸ್ಥಳದಲ್ಲಿ ಅಂಬಿಕಾಳಿಗೆ ಒಬ್ಬ ವ್ಯಕ್ತಿಯ ಪರಿಚಯವಾಗಿತ್ತು. ಅವಳು ಒಂದು ದಿನ ನಮಗ್ಯಾರಿಗೂ ಹೇಳದೇ ಆತನೊಂದಿಗೆ ಹೋಗಿ ಬಿಟ್ಟಳು. ನಾನು ಅವಳಿಗಾಗಿ ತುಂಬಾ ಹುಡುಕಾಟ ನಡೆಸಿದ್ದೆ. ಆದರೆ ಅವಳು ಸಿಗದೇ ಹೋದಾಗ, ಬಂದಾಗ ಬರಲಿ ಎಂದುಕೊಂಡು ಸುಮ್ಮನಾಗಿ ಬಿಟ್ಟಿದ್ದೆ. ಒಂದು ದಿನ ಇದ್ದಕ್ಕಿದ್ದ ಹಾಗೆ ಅಂಬಿಕಾ, ತನ್ನನ್ನು ಕರೆದುಕೊಂಡು ಹೋಗಿದ್ದ ಆ ವ್ಯಕ್ತಿ ಮತ್ತು ಒಬ್ಬಳು ವಯಸ್ಸಾದ ಮಹಿಳೆಯೊಡನೆ ನಮ್ಮ ಮನೆಗೆ ಬಂದಳು. ನಮಗೆಲ್ಲ ಅವಳು ಮುಂಬಯಲಿ ಇದ್ದಾಳೆಂದು ಆಗಲೇ ಗೊತ್ತಾಗಿದ್ದು. ಹಾಗೆ ಬಂದವಳು ಒಂದೆರಡು ದಿನ ಇದ್ದು ಮತ್ತೆ ಮರಳಿ ಮುಂಬಯಿಗೇ ಹೋದಳು. ಮುಂದೆ ಕೆಲವೇ ದಿನಗಳಲ್ಲಿ ಸಾರಿಕಾ ಸಹ ಇವಳ ದಾರಿಯನ್ನೇ ಹಿಡಿದಿದ್ದಳು. ಅಂಬಿಕಾಳ ಜೊತೆ ಬಂದವನೇ ಇವಳನ್ನೂ ಕರೆದುಕೊಂಡು ಹೋಗಿದ್ದ ಎಂಬುದು ನಮಗೆ ನಂತರದಲ್ಲಿ ಗೊತ್ತಾಗಿತ್ತು.

ಇದಾಗಿ ಒಂದೆರಡು ವರ್ಷಗಳಲ್ಲಿ ಅಂಬಿಕಾಳ ಜೊತೆ ಇದ್ದ ವ್ಯಕ್ತಿಯ ಕಡೆಯಿಂದ, ನನ್ನ ಎರಡೂ ಹೆಣ್ಣುಮಕ್ಕಳನ್ನು ಪೊಲೀಸರು ಹಿಡಿದುಕೊಂಡು ಹೋಗಿದ್ದಾರೆಂದು ಫೋನ್ ಕರೆ ಬಂದಿತ್ತು. ಅವರನ್ನು ಮುಂಬಯಿಯ ಒಂದು ಸಂಸ್ಥೆಯಲ್ಲಿ ಇಟ್ಟಿದ್ದರು. ನಾನು ಮತ್ತು ನನ್ನ ಹಿರಿಯ ಮಗಳು ಮುಂಬಯಿಗೆ ಹೋಗಿ ಅವರನ್ನು ಬಿಡಿಸಿಕೊಂಡು ಬಂದಿದ್ದೆವು. ಆನಂತರ ಒಳ್ಳೆಯ ವರಗಳನ್ನು ನೋಡಿ ಮದುವೆ ಮಾಡಿದ್ದೇವೆ. ಆದರೆ ಇದೇ ಸಂತ್ರಸ್ಥರಿಗೆ ಮತ್ತು ಅವರ ಕುಟುಂಬಕ್ಕೆ ಸಂಬಂಧಿಸಿದಂತೆ ಸಮುದಾಯದ ಕೆಲವು ಜನರೊಂದಿಗೆ ಮಾತನಾಡಿದಾಗ ಅವರಿಂದ ಶಾಲಾಬಾಯಿ ಹೇಳಿದ ವಿಷಯಕ್ಕಿಂತ ಬೇರೆಯೇ ವಿಷಯ ಹೊರಬಂದಿತು.

ಗ್ರಾಮದ ಜನರು ಹೇಳುವ ಹಾಗೆ ಶಾಲಾಬಾಯಿ ಒಳ್ಳೆಯ ಹೆಣ್ಣು ಮಗಳಲ್ಲ. ಮಕ್ಕಳನ್ನ ಸರಿಯಾಗಿ ಬೆಳೆಸಿಲ್ಲ. ಗಂಡ ಮಿಲಿಟರಿಯಲ್ಲಿ ಇದ್ದಾಗ, ಇಲ್ಲಿ ಊರಲ್ಲಿ ತನಗೆ ಹೇಗೆ ಬೇಕೋ ಹಾಗೆ

ಇದ್ದವಳು. ಮಕ್ಕಳ ವಿಷಯದಲ್ಲಿಯೂ ಅಷ್ಟೇ. ಅವರನ್ನು ಗಂಡನ ಮನೆಯಿಂದ ಹೊರ ಬರುವಂತೆ ಮಾಡಿ ತವರು ಸೇರಿಸಿಕೊಂಡಿದ್ದಳು. ಹಾಗೆ ಬಂದವರನ್ನ ತನ್ನ ಮನೆಗೆ ಬರುವ ಗಂಡಸರೊಂದಿಗೆ ಬೆಳಗಾವಿ, ಹೊಸಪೇಟ, ದೆಹಲಿವರೆಗೂ ಕಳಿಸುತ್ತಿದ್ದಳು. ಅದು ಜನರಿಗೆ ಗೊತ್ತಗಬಾರದೆಂದು ದಾಳಿಂಬೆ ವ್ಯಾಪಾರದ ಹೆಸರು ಹೇಳುತ್ತಿದ್ದರು. ದೊಡ್ಡ ಮಗಳಂತೂ ಬೆಳಗಾವಿಯಲ್ಲಿ ಯಾರದೋ ಜೊತೆಗೆ ಅನೈತಿಕ ಸಂಬಂಧವಿರಿಸಿಕೊಂಡಿದ್ದಳು(ಇದಕ್ಕೆ ಶಾಲಾಬಾಯಿಯೂ ಒಪ್ಪಿಕೊಳ್ಳುತ್ತಾಳೆ). ಇಬ್ಬರೂ ಹುಡುಗಿಯರು ಮುಂಬಯಿಗೆ ಹೋಗಲು ತಾಯಿ ಮತ್ತು ಅಕ್ಕನೇ ಕಾರಣ. ಈಗ ಅವರನ್ನು ಮದುವೆ ಮಾಡಿದ್ದೇವೆ ಅನ್ನುತ್ತಾರೆ, ಆದರೆ ಹಾಗೆ ಅನ್ನಿಸುವುದಿಲ್ಲ. ಅವರೊಂದಿಗೆ ಯಾವತ್ತೂ ಅವರ ಗಂಡಂದಿರು ಬಂದಿರುವುದಿಲ್ಲ. ಹಾಗಾಗಿ ಅವರ ಮದುವೆ ಎಷ್ಟು ಸತ್ಯವೋ ನಮಗೆ ಗೊತ್ತಿಲ್ಲ. ಈಗಲೂ ಅವರು ಮೊದಲಿನಂತೆ ದಂಧೆಯನ್ನೇ ಮಾಡುತ್ತಿರಬಹುದು, ಎಂದು ಸಮುದಾಯದವರು ಹೇಳುತ್ತಾರೆ. ಈಗಲೂ ಶಾಲಾಬಾಯಿಯ ಮನೆಗೆ ರಾತ್ರಿ ಬಹಳ ಹೊತ್ತಿನವರೆಗೆ ಕಾರುಗಳು ಬಂದು ಹೋಗಿ ಮಾಡುತ್ತವೆ ಎಂದು ಹೇಳುತ್ತಾರೆ. ಊರಲ್ಲಿ ತಾಯಿ ಮಕ್ಕಳದು ಬಹಳ ಒರಟಾದ ವರ್ತನೆಯಾಗಿದೆ. ಇವರೊಂದಿಗೆ ಮಾತಿಗೆ ಬೀಳದ ಪಂಚಾಯತಿಯವರು ಇವರಿಗೆ ಎರಡು ಮನೆಗಳನ್ನ ಮಂಜೂರು ಮಾಡಿಕೊಟ್ಟಿದ್ದಾರೆ.

ಇದನ್ನೆಲ್ಲ ನೋಡಿದಾಗ ಮತ್ತು ಮನೆಯ ವಾತಾವರಣ ಮತ್ತು ಅವಳ ವರ್ತನೆ, ಮಾಹಿತಿ ಒದಗಿಸುವಾಗಿನ ಹಿಂಜರಿಕೆಗಳು, ಕನಫ್ಯೂಶನ್ಗಳು ಮತ್ತೇನನ್ನೋ ಹೇಳುತ್ತಿದ್ದವು. ಅನಕ್ಷರಸ್ಥರಾದ ಹೆಣ್ಣುಮಕ್ಕಳು ಯಾರದೂ ಬೆಂಬಲವಿಲ್ಲದೆನೆ ದೆಹಲಿಯವರೆಗೆ ಹೋಗಿ ವ್ಯಾಪಾರ ಮಾಡುತ್ತಿದ್ದರೆಂದರೆ ಅಚ್ಚರಿ ಮೂಡುತ್ತದೆ. ಹಾಗೆಯೇ ಹೆಣ್ಣುಮಕ್ಕಳನ್ನು ಗುರುತು ಪರಿಚಯವಿಲ್ಲದವರ ಜೊತೆ ಬಿಟ್ಟು ಬಿಡುವ ರೀತಿ ಸಂಶಯಕ್ಕೆ ಎಡೆಮಾಡಿಕೊಡುತ್ತದೆ. ಚಿಕ್ಕ ಮಗಳು ಅಂಬಿಕಾ ಯಾರದೊ ಜೊತೆ ಕಾಣೆಯಾದಾಗ ಗಂಭೀರವಾಗಿ ಹುಡುಕದೇ ಇರುವುದು, ಪೊಲೀಸ್ ಕಂಪ್ಲೇಂಟ್ ಕೊಡದೇ ಇರುವುದು ಇವರಿಗೆ ಮಕ್ಕಳ ಕುರಿತಾದ ನಿಷ್ಕಾಳಜಿಯನ್ನು ತೋರಿಸುತ್ತದೆ. ಮತ್ತೆ ಒಂದು ಕಡೆಗೆ ಇವರೇ ಮುಂದೆ ನಿಂತು ಅವಳನ್ನು ಸಾಗ ಹಾಕಿರುವಂತೆ ಗೋಚರಿಸುತ್ತದೆ. ಕೆಲವು ದಿನಗಳ ನಂತರ ಅಂಬಿಕಾ ಮನೆಗೆ ಬಂದಾಗ ಏನೂ ಆಗಿಯೇ ಇಲ್ಲ ಎಂಬಂತೆ ಇವರ ವರ್ತನೆ ಇರುತ್ತದೆ, ಅವಳ ಜೊತೆ ಬಂದ ವ್ಯಕ್ತಿಯನ್ನು ಹಿಡಿದು ಪೊಲೀಸರಿಗೆ ಒಪ್ಪಿಸಬಹುದಿತ್ತು. ಮಗಳನ್ನು ಮತ್ತೆ ಹೋಗದಂತೆ ತಡೆಯಬಹುದಿತ್ತು. ಹಾಗೇನೂ ಮಾಡದ ಶಾಲಾಬಾಯಿ ಇನ್ನೊಬ್ಬ ಮಗಳೂ ಅವರೊಂದಿಗೆ ಹೋಗಲು ಅನುವು ಮಾಡಿಕೊಡುತ್ತಾಳೆ. ಇದರಿಂದ ಸ್ಪಷ್ಟವಾಗುವ ಒಂದು ವಿಷಯವೆಂದರೆ ಈ ಹುಡುಗಿಯರು ಮುಂಬಯಿಲಿ ಇದ್ದದ್ದು, ಅಲ್ಲಿಗೆ ಹೋಗಿದ್ದು ಎಲ್ಲವೂ ಶಾಲಾಬಾಯಿಗೆ ಗೊತ್ತಿದ್ದೇ ಆಗಿದೆ ಎಂಬುದು ಕಂಡುಬರುತ್ತದೆ. ಹೀಗೆ ಮಕ್ಕಳು ವೇಶ್ಯಾ ಗೃಹಗಳಲ್ಲಿ ಸೆರೆ ಸಿಕ್ಕಾಗ ತಾನೇ ಖುದ್ದಾಗಿ ಹೋಗಿ ಬಿಡಿಸಿಕೊಂಡು ಬರುತ್ತಾಳೆ. ಆ ನಂತರದ ದಿನಗಳಲ್ಲಿ ಮಕ್ಕಳಿಬ್ಬರೂ ಇವರ ಜೊತೆಗೇ ಇರುತ್ತಾರೆ. ಆದರೆ ಈಗ ಮದುವೆಯಾದ ವಿಷಯ ಕೇಳಿದರೆ ಒಬ್ಬಳನ್ನು ತಮಿಳಿನ ಹುಡುಗನಿಗೆ, ಮತ್ತೊಬ್ಬಳನ್ನ ಪಂಜಾಬಿ ಹುಡುಗನಿಗೆ ಮದುವೆ ಮಾಡಿ ಕೊಟ್ಟಿದ್ದಾಳೆ. ಇವರು ಇರುವ ಗ್ರಾಮ ತುಂಬಾ ಚಿಕ್ಕದು. ಯಾವುದೇ ವ್ಯಾಪಾರ

ಕೇಂದ್ರವಲ್ಲ. ಅಂತದ್ದರಲ್ಲಿ ಹೊರ ರಾಜ್ಯಗಳ ಇಬ್ಬರು ಯುವಕರೊಂದಿಗೆ ಹೇಗೆ ಸಂಬಂಧಗಳು ಏರ್ಪಟ್ಟವು? ಶಾಲಾಬಾಯಿಯವರನ್ನು ಕೇಳಿದರೆ, ಅವರದು ಪ್ರೇಮವಿವಾಹವಾಗಿದೆ ಎಂದು ತುಂಬಾ ತೆಲಿಸಿ ಉತ್ತರಿಸುತ್ತಾರೆ. ಪ್ರೇಮ ಅಂಕುರಿಸಲು ಅವರು ಭೇಟಿಯಾದದ್ದಾದರೂ ಎಲ್ಲಿ? ಎಂಬ ಪ್ರಶ್ನೆಗಳಿಗೆ ತುಂಬಾ ಗೊಂದಲವಾದಂತಹ ಉತ್ತರಗಳನ್ನು ಶಾಲಾಬಾಯಿ ಕೊಡುತ್ತಾರೆ. ಇಲ್ಲಿ ಒಂದಿಷ್ಟು ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ.

ಮೊದಲನೆಯದಾಗಿ ಶಾಲಾಬಾಯಿಯ ದೊಡ್ಡ ಮಗಳು ಬೆಳಗಾವಿಯಲ್ಲಿ ಲೈಂಗಿಕ ದಂಧೆಯಲ್ಲಿ ತೊಡಗಿಕೊಂಡಿರುವಂತವಳು. ಅವಳು ಈ ಎರಡೂ ಹುಡುಗಿಯರನ್ನು ತನ್ನ ಜೊತೆಗೆ ಅದೇ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿರುವ ಸಾಧ್ಯತೆಗಳು ಹೆಚ್ಚಾಗಿ ಕಂಡುಬರುತ್ತವೆ. ಎರಡನೆಯದಾಗಿ, ಉತ್ತರ ಕರ್ನಾಟಕದಲ್ಲಿ ೨೦೦೦ ದಿಂದ ೨೦೧೦ರವರೆಗೆ ಗುಜ್ಜರ ಮದುವೆಗಳು ತುಂಬಾ ನಡೆಯುತ್ತಿದ್ದವು. ಈ ಎರಡೂ ಹುಡುಗಿಯರನ್ನು ಹಾಗೆ ದುಡ್ಡು ತೆಗೆದುಕೊಂಡು ಮದುವೆ ಮಾಡಿಕೊಟ್ಟಿರುವ ಸಾಧ್ಯತೆಗಳೂ ಇವೆ. ಮೂರನೆಯದಾಗಿ, ಸಧ್ಯಕ್ಕೆ ಇಬ್ಬರೂ ಹುಡುಗಿಯರು ಇರುವುದು ಪುಣೆ ಮತ್ತು ಮುಂಬಯಿಗಳಲ್ಲಿ. ಅವರ ಗಂಡಂದಿರು ಊರಿಗೆ ಬರುವುದಿಲ್ಲ. ಈ ಊಹೆಯ ಮೇಲೆ ಅವರು ಈಗಲೂ ದಂಧೆಯನ್ನೇ ಮಾಡುತ್ತಿರುವ ಸಾಧ್ಯತೆಗಳಿವೆ. ನಾಲ್ಕನೇಯದಾಗಿ ಇಬ್ಬರೂ ಹುಡುಗಿಯರ ವಿವಾಹವನ್ನು ನೋಂದಣಿ ಮಾಡಿಸಿರುವ ಶಾಲಾಬಾಯಿ, ಜನ ಕೇಳಿದರೆ ತೋರಿಸಲು ಬರುತ್ತದೆ ಎಂದು ಮದುವೆ ಪ್ರಮಾಣ ಪತ್ರ ಮಾಡಿಸಿಟ್ಟದ್ದೇನೆ ಎಂದು ಹೇಳುತ್ತಾಳೆ. ಐದನೇಯದಾಗಿ, ಶಾಲಾಬಾಯಿಯೇ ಹೇಳುವಂತೆ ಅವಳ ತಮ್ಮನೇ, ಇವಳು ಮನೆಯಲ್ಲಿ ತನ್ನ ಹೆಣ್ಣುಮಕ್ಕಳನ್ನು ಇಟ್ಟುಕೊಂಡು ದಂಧೆ ಮಾಡುತ್ತಾಳೆ ಎಂದು ಪೊಲೀಸ್‌ಗೆ ಕಂಪ್ಲೆಂಟ್ ಕೊಟ್ಟದ್ದನೆಂಬುದು. ಈ ನಡುವೆ ಶಾಲಾಬಾಯಿಯ ದೊಡ್ಡ ಮೊಮ್ಮಗಳು ಎಲ್ಲಿ ಹೋಗಿರುವಳೋ ಯಾರಿಗೂ ಗೊತ್ತಿಲ್ಲ. ಊರವರಿಗೆ ಅದು ದೊಡ್ಡ ಅನುಮಾನ. ಅವಳನ್ನೂ ಅದೇ ಚಟುವಟಿಕೆಗೆ ರಳ್ಳಿರುವಂತೆ ಗೋಚರಿಸುತ್ತದೆ.

## ಅನುಬಂಧ-೩

### ಪದಗಳ ವಿಸ್ತರಣೆ

| | | |
|---|---|---|
| ಎನ್.ಜಿ.ಓ. | – | ನಾನ್ ಗವರ್ನಮೆಂಟ್ ಆರ್ಗನೈಜೇಶನ್ |
| ಸಿ.ಬಿ.ಓ. | – | ಕಮ್ಯುನಿಟಿ ಬೇಸ್ಡ್ ಆರ್ಗನೈಜೇಶನ್ |
| ಎಫ್.ಪಿ.ಎ.ಐ. | – | ಫ್ಯಾಮಿಲಿ ಪ್ಲ್ಯಾನಿಂಗ್ ಅಸೋಶಿಯೇಶನ್ ಆಫ್ ಇಂಡಿಯಾ |
| ಎಚ್.ಐ.ವಿ | – | ಹ್ಯೂಮನ್ ಇಮ್ಯುನೋ ಡೆಫಿಸಿಯೆನ್ಸಿ ವೈರಸ್ |
| ಎಸ್.ಪಿ | – | ಸೂಪರಿಂಟೆಂಡೆಂಟ್ ಆಫ್ ಪೋಲೀಸ್ |
| ಜೆ.ಜೆ.ಎ. ೨೦೦೦ | – | ಜುವಿನೈಲ್ ಜಸ್ಟೀಸ್ ಆ್ಯಕ್ಟ್ ೨೦೦೦ |
| ಎಸ್.ಐ.ಟಿ.ಎ. ೧೯೫೬ | – | ಸಪ್ರೆಶನ್ ಆಫ್ ಇಮ್ಮಾರಲ್ ಟ್ರ್ಯಾಫಿಕ್ ಆ್ಯಕ್ಟ್-೧೯೫೬ |
| ಪಿ.ಐ.ಟಿ.ಎ. ೧೯೮೬ | – | ಪ್ರಿವೆನ್ಶನ್ ಆಪ್ ಇಮ್ಮಾರಲ್ ಟ್ರ್ಯಾಫಿಕ್ ಆ್ಯಕ್ಟ್- ೧೯೮೬ |
| ಪಿ.ಓ.ಸಿ.ಎಸ್.ಓ. (ಪೋಕ್ಸೋ) ೨೦೧೨ | – | ಪ್ರೋಟೆಕ್ಷನ್ ಆಫ್ ಚಿಲ್ಡ್ರನ್ ಫ್ರಾಮ್ ಸೆಕ್ಸ್ಯುವಲ್ ಅಫೆನ್ಸಿಸ್- ೨೦೧೨ |

## ಅನುಬಂಧ–೪

### ಸಹಕರಿಸಿದ ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು

### ಸರ್ಕಾರಿ ಇಲಾಖೆಗಳು ಮತ್ತು ಯೋಜನೆಗಳು

ರಾಜ್ಯ ಮಕ್ಕಳ ಹಕ್ಕುಗಳ ಆಯೋಗ

ಪೋಲೀಸ್ ಆಯುಕ್ತರು, ಮುಂಬಯಿ

ಟಾಟಾ ಇನ್ಸ್ಟಿಟ್ಯೂಟ್ ಆಫ್ ಸೋಷಿಯಲ್ ಸಾಯನ್ಸ್, ಮುಂಬಯಿ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕರ್ನಾಟಕ ಮತ್ತು ಮಹಾರಾಷ್ಟ್ರ

ಕಾರ್ಮಿಕ ಇಲಾಖೆ

ಜಿಲ್ಲಾ ಮಕ್ಕಳ ರಕ್ಷಣಾ ವಿಭಾಗ

ದೇವದಾಸಿ ಪುನರ್ವಸತಿ ಯೋಜನೆ

ಸಾಂತ್ವನ ಯೋಜನೆ

ಸ್ವಾಧಾರ ಯೋಜನೆ

ಉಜ್ವಲಾ ಯೋಜನೆ

**ಸರ್ಕಾರೇತರ ಸಂಸ್ಥೆಗಳು**

ವಿಮೋಚನಾ ಸಂಸ್ಥೆ, ಅಥಣಿ

ಒಡನಾಡಿ ಸೇವಾ ಸಂಸ್ಥೆ, ಮೈಸೂರು

ರೆಸ್ಕ್ಯೂ ಫೌಂಡೇಶನ್, ಮುಂಬಯಿ

ಆಸ್ಥಾ ಪರಿವಾರ, ಮುಂಬಯಿ

ಆಶಾ ದರ್ಪಣ, ಮುಂಬಯಿ

ಆಶಾ ಮಹಿಳಾ, ಮುಂಬಯಿ

ಪ್ರೇರಣಾ, ಮುಂಬಯಿ

ಪ್ರಯಾಸ್, ಮುಂಬಯಿ

ಮಹಿಮಾ ಮಂಡಳ, ಬೀವಂಡಿ

ಭಾರತೀಯ ಕುಟುಂಬ ಯೋಜನಾ ಸಂಘ, ಬೀವಂಡಿ, ಥಾಣೆ ಜಿಲ್ಲೆ

## ಪರಾಮರ್ಶನ ಗ್ರಂಥಗಳು


೧. ಅಂಬೇಡ್ಕರ್, ಬಿ.ಆರ್., (೨೦೧೦), ಜಾತಿ ವ್ಯವಸ್ಥೆ: ಉಗಮ ವಿಕಾಸ ವಿನಾಶ, ಕನ್ನಡಕ್ಕೆ ಅನುವಾದ: ರಾಹು, ಸುಮೇಧ ಪ್ರಕಾಶನ, ಗುಲ್ಬರ್ಗ

೨. ಅನುಪಮಾ ಎಚ್. ಎಸ್, (೨೦೧೩), ಹೆಣ್ಣು, ಲಡಾಯಿ ಪ್ರಕಾಶನ, ಗದಗ

೩. ಆಶಾದೇವಿ ಎಂ. ಎಸ್., (೨೦೧೬), ನಾರಿಕೇಳಾ, ಪ್ರಜಾ ವಾಣಿ, ಬೆಂಗಳೂರು

೪. ಆನಂದ ತೇಲ್ತುಂಬ್ಡೆ, (೨೦೧೩), ದಲಿತರು, ಲಡಾಯಿ ಪ್ರಕಾಶನ, ಗದಗ

೫. ಬಾಲಗೋಪಾಲ ಕೆ., (೧೯೯೮), ಪ್ರಾಚೀನ ಭಾರತದ ಚರಿತ್ರೆ: ಡಿ ಡಿ ಕೋಸಾಂಬಿಯವರ ಚಿಂತನೆಗಳು, ಕನ್ನಡ ಅನುವಾದ, ಎಚ್.ಎಸ್, ಶ್ರೀಮತಿ ಎಚ್.ಎಸ್., ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೬. ಬೊಜ್ಜಾ ತಾರಕಂ, (೨೦೧೪), ದಲಿತರು ಮತ್ತು ಪ್ರಭುತ್ವ, ಕನ್ನಡಕ್ಕೆ ಅನುವಾದ: ಸುಜ್ಞಾನ ಮೂರ್ತಿ, ಸುಮೇಧ ಪ್ರಕಾಶನ, ಕಲಬುರ್ಗಿ

೭. ಬಿದರಿ ಚಂದ್ರಕಲಾ, (೨೦೦೯), ಮಹಿಳಾ ಬದುಕು, ತನು ಮನು ಪ್ರಕಾಶನ, ಮೈಸೂರು

೮. ಚಂದ್ರಶೇಖರ್ ಟಿ. ಆರ್., (೨೦೦೮), ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೯. ಚಂದ್ರಶೇಖರ್ ಟಿ. ಆರ್., (೨೦೧೦), ಕರ್ನಾಟಕದಲ್ಲಿ ಸಾಕ್ಷರತೆಯ ಲಿಂಗಸಂಬಂಧಿ ಸ್ವರೂಪ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೧೦. ಚಂದ್ರಶೇಖರ್ ಟಿ. ಆರ್., (೨೦೧೦), ಹಕ್ಕು-ಹಂಗು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೧೧. ಚಂದ್ರಶೇಖರ್ ಟಿ. ಆರ್., (೨೦೧೪), ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ, ಗಾಯತ್ರಿ ಪ್ರಕಾಶನ, ಬಳ್ಳಾರಿ

೧೨. ಚಂದ್ರಶೇಖರ್.ಟಿ.ಆರ್., (೨೦೧೧), ವಿಜಾಪೂರ ಜಿಲ್ಲೆ ಅಭಿವೃದ್ಧಿ ಮತ್ತು ದುಸ್ಥಿತಿ ಒಂದು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೧೩. ಚಂದ್ರ ಪೂಜಾರಿ ಎಂ., (೨೦೧೬), ದಲಿತ ಮಾನವ ಅಭಿವೃದ್ಧಿ, ದಲಿತ ಹಕ್ಕುಗಳ ಸಮಿತಿ, ಕರ್ನಾಟಕ, ಬೆಂಗಳೂರು

೧೪. ಚಂದ್ರ ಪೂಜಾರಿ ಎಂ., (೨೦೦೫), ಸಮಾಜ ಸಂಶೋಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಚಂದ್ರ ಪೂಜಾರಿ ಎಂ., (೨೦೧೪), ಸಂಶೋಧನಾ ಪರಿಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಚಂದ್ರ ಪೂಜಾರಿ ಎಂ., (೨೦೦೮), ಸಂಶೋಧನಾ ಪ್ರಸ್ತಾವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೭. ಚಂದ್ರ ಪೂಜಾರಿ ಎಂ., (೨೦೦೫), ಸಂಶೋಧಕರು ಮತ್ತು ಕ್ಷೇತ್ರ ಕಾರ್ಯ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೧೮. ಚಂದ್ರ ಪೂಜಾರಿ ಎಂ., (೨೦೧೬), ದಲಿತ ಮಾನವಾಭಿವೃದ್ಧಿ, ದಲಿತ ಹಕ್ಕುಗಳ ಸಮಿತಿ ಕರ್ನಾಟಕ

೧೯. ಚಂದ್ರ ಪೂಜಾರಿ ಎಂ., (೨೦೦೯), ಸಂಶೋಧನೆ ಏನು? ಏಕೆ? ಹೇಗೆ?, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ,

೨೦. ಚಿನ್ನಸ್ವಾಮಿ ಸೋಸಲೆ ಎನ್., (೨೦೧೨), ದಲಿತರ ಬದುಕ–ಮೆಲಕು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೨೧. ಚಿನ್ನಸ್ವಾಮಿ ಸೋಸಲೆ ಎನ್., (೨೦೦೮), ಭಾರತೀಯ ಸಮಾಜ ಮತ್ತು ದಲಿತರು, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೨೨. ಚೆನ್ನಣ್ಣ ವಾಲೀಕಾರ (೨೦೦೧), ಕರ್ನಾಟಕ ದೇವದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ

೨೩. ಚೆನ್ನಕ್ಕ ಎಲಿಗಾರ, (೧೯೯೦), ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಪ್ರಸಾರಾಂಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ.

೨೪. ಇಂದಿರಾ ಜೈ ಪ್ರಕಾಶ್, (೨೦೦೯), ಸ್ತ್ರೀ ವಾದಿ ಮನೋವಿಜ್ಞಾನ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫. ಗೀತಾ ನಾಗಭೂಷಣ (೨೦೦೧), ಬದುಕು, ಲೋಹಿಯಾ ಪ್ರಕಾಶನ, ಬಳ್ಳಾರಿ

೨೬. ಗೀತಾ ಕೃಷ್ಣ ಮೂರ್ತಿ, (೨೦೦೯), ಮಹಿಳಾ ಹಕ್ಕುಗಳು, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೨೭. ಗೀತಾ ಪ್ರಸಾದ್, (೨೦೦೯), ಆಧುನಿಕ ಮಹಿಳಾ ಅಭಿವ್ಯಕ್ತಿ, ಧಾತ್ರಿ ಪುಸ್ತಕ, ಬೆಂಗಳೂರು

೨೮. ಗುರುಲಿಂಗಯ್ಯ, (೨೦೧೦), ಸಾಮಾಜಿಕ ಹೊರತಳ್ಳುವಿಕೆಯ ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಗುರುಮೂರ್ತಿ, ಕೆ.ಜಿ., (೧೯೯೬), ಧರ್ಮ ಮತ್ತು ರಾಜಕೀಯ, ವಿಮೋಚನಾ ಪ್ರಕಾಶನ, ಅಥಣಿ

೩೦. ಹೀಗೊಂದು ಪಯಣ, (೨೦೦೮), ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ, ಘಟಪ್ರಭಾ

೩೧. ಹಿರೇಮಠ, ಎಸ್. ಎಸ್., (೨೦೦೫), ಜಾನಪದ ಪರಂಪರೆ ಮತ್ತು ಜಾತಿ, ಚಂದ್ರಶೇಖರ್ ಟಿ. ಆರ್., ದಲಿತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ಹಾಲತಿ ಸೋಮಶೇಖರ್, (೨೦೦೭), ಮಹಿಳಾ ಚಳುವಳಿ: ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು

೩೩. ಜವರಯ್ಯ ಮ. ನ., (೧೯೯೫), ಅಂಬೇಡ್ಕರ ಶೂದ್ರರು ಮತ್ತು ಮಹಿಳೆಯರು, ಬಹುಜನ ಮಾಧ್ಯಮ ಕೇಂದ್ರ, ಮೈಸೂರು

೩೪. ಜೆರಾಲ್ಡಿನ್ ಫೋರ್ಬ್ಸ್ (೨೦೦೧), ಆಧುನಿಕ ಭಾರತದಲ್ಲಿ ಮಹಿಳೆ, ಕನ್ನಡಕ್ಕೆ ಅನುವಾದ, ಶ್ರೀಮತಿ, ಎಚ್. ಎಸ್., ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೩೫. ಜೋಗನ್ ಶಂಕರ್ (೧೯೯೩), ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ

೩೬. ಜ್ಯೋತಿ ಶಶಿಕುಮಾರ್ (೨೦೦೭), ಮಹಿಳಾ ಸಾಮಾಜಿಕತೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭. ಕನಕ್ ಮುಖರ್ಜಿ (೨೦೧೩), ಭಾರತೀಯ ಮಹಿಳಾ ವಿಮೋಚನೆಯ ಆಂದೋಲನ, ಕನ್ನಡಕ್ಕೆ ಅನುವಾದ, ರಾಹು, ಲಡಾಯಿ ಪ್ರಕಾಶನ, ಗದಗ

೩೮. ಕವಿತಾ ರೈ., (೨೦೦೫), ಮಹಿಳೆ: ಅಸ್ತಿತ್ವದ ಸಂಕಥನ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೩೯. ಕಮಲಾ ಹೆಮ್ಮಿಗೆ (೧೯೯೮), ಸವದತ್ತಿ ಎಲ್ಲಮ್ಮ ಹಾಗೂ ದೇವದಾಸಿ ಪದ್ಧತಿ, ವಿಮೋಚನಾ ಪ್ರಕಾಶನ, ಅಥಣಿ

೪೦. ಕುಸುಮಾ ಶಾನಭಾಗ (೨೦೦೭), ಕಾಯದ ಕಾರ್ಪಣ್ಯ, ಹೇಮಾಂಶು ಪ್ರಕಾಶನ, ಮಂಗಳೂರು

೪೧. ಕೈಲಾಸಂ (೨೦೧೦), ಸೂಳೆ, ಅಂಕಿತ ಪುಸ್ತಕ, ಬೆಂಗಳೂರು

೪೨. ಲೀಲಾ ಸಂಪಿಗೆ (೨೦೦೪), ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆಗಳು, ಪಿಎಚ್. ಡಿ. ಮಹಾಪ್ರಬಂಧ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೪೩. ಲೀಲಾ ಸಂಪಿಗೆ (೨೦೧೪), ಬುದ್ಧನಿಲ್ಲದ ಅಮ್ರಪಾಲಿ, ಚಾರುಮತಿ ಪ್ರಕಾಶನ, ಬೆಂಗಳೂರು

೪೪. ಮನೋರಂಜಿನಿ. (೨೦೦೭). ಲಿಂಗೀಯ ಸಂಬಂಧಗಳು ಮತ್ತು ಸಮುದಾಯ ಚರ್ಚೆಗೆ ದಂಧೆ ಮಾಡುವವರ ಹಿನ್ನೆಲೆಯಲ್ಲಿ ಕೆಲ ವಿಚಾರಗಳು, ಮಹಿಳಾ ಅಧ್ಯಯನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

೪೫. ಮಹೇಶ ಚಂದ್ರ ಗುರು ಬಿ. ಪಿ., (೨೦೧೩), ಪ್ರಸಾರಾಂಗ, ಮೈಸೂರು ವಿಶ್ವ ವಿದ್ಯಾಲಯ, ಮೈಸೂರು

೪೬. ಮಂಗಳಾ ಪ್ರಿಯದರ್ಶಿನಿ ಡಿ., (೨೦೦೭) ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೭. ಮಾಳಿ ಪಿ. ಎಸ್., (ಸಂ), (೨೦೦೭), ಅಥಣಿ ತಾಲೂಕು: ಸಮಗ್ರ ದರ್ಶನ, ವಿಮೋಚನಾ ಪ್ರಕಾಶನ, ಅಥಣಿ

೪೮. ಮೈನೇನಿ ಎಸ್. ಆರ್., (೨೦೦೨), ವುಮೆನ್ ಯ್ಯಾಂಡ್ ಲಾ, ಏಶಿಯಾ ಲಾ ಹೌಸ್, ಹೈದ್ರಾಬಾದ್

೪೯. ಮೊಗಳ್ಳಿ ಗಣೇಶ್ (೨೦೧೫), ಜಾತಿ ಮೀಮಾಂಸೆ, ಅಭಿನವ ಪ್ರಕಾಶನ ಬೆಂಗಳೂರು

೫೦. ಪಾಟೀಲ ಬಿ. ಎಲ್., (ವಿಮೋಚನೆಯ ನೆನಪಿನಂಗಳದಲ್ಲಿ), ವಿಮೋಚನಾ ಪ್ರಕಾಸನ, ಅಥಣಿ

೫೧. ಪುಟ್ಟಯ್ಯ ಬಿ. ಎಂ., (೨೦೦೮), ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೨. ಪ್ರಶಾಂತ್ ಎಚ್. ಡಿ., (೨೦೧೫), ಮಾರುಕಟ್ಟೆ–ಶಾಲಾ ಶಿಕ್ಷಣ ಮತ್ತು ಭಾಷೆ, ತಾಯ್ನುಡಿಯ ಸಂಕಟಕ್ಕೆ ದನಿಯಾಗಿ (ಸಂ), ರೂಪಾ ಹಾಸನ, ಅಭಿರುಚಿ ಪ್ರಕಾಶನ, ಮೈಸೂರು

೫೩. ಪ್ರಶಾಂತ್ ಎಚ್. ಡಿ., (೨೦೧೪), ಶಿಕ್ಷಣದ ಹಕ್ಕು ಕಾಯಿದೆ–೨೦೦೯ ಹಕ್ಕಲ್ಲ ಹಕ್ಕಿನ ಪ್ರತೀಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೪. ಪ್ರಶಾಂತ್ ಎಚ್. ಡಿ., (೨೦೦೯), ಶಾಲಾ ಶಿಕ್ಷಣದ ಸಾರ್ವತಿಕರಣ: ದಲಿತ ಮಕ್ಕಳ ಸ್ಥಿತಿ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

೫೫. ಪ್ರಶಾಂತ್ ಎಚ್. ಡಿ., (೨೦೦೫), ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೬. ಪ್ರಶಾಂತ್ ಎಚ್. ಡಿ., ಮತ್ತು ವೀರಭದ್ರ ನಾಯ್ಕ, ಪಿ., (೨೦೧೫), ಸಾಮಾಜಿಕ ತಲ್ಲಣಗಳು ಕಾಳಜಿಗಳು–ಕನಸುಗಳು (ಸಂ), ರೂಪಾ ಪ್ರಕಾಶನ, ಮೈಸೂರು

೫೭. ಪ್ರಭಾಕರ ಎ. ಎಸ್., ಮತ್ತು ಶ್ರೀಪಾದ ಶೆಟ್ಟಿ, (೨೦೧೨), ಲೋಹಿಯಾ ವರ್ತಮಾನದ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

೫೮. ಪ್ರೀತಿ ಶುಭಚಂದ್ರ ಮತ್ತು ಸುಮನಾ, ಎಂ. ಎನ್., (೨೦೧೪), ಸಾಕಾರದತ್ತ ಸಮಾನತೆಯ ಕನಸು, ಲಡಾಯಿ ಪ್ರಕಾಶನ, ಗದಗ

೫೯. ಫ್ರೆಡರಿಕ್ ಎಂಗೆಲ್ಸ್ (೧೯೮೦), ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ಪ್ರಗತಿ ಪ್ರಕಾಶನ, ಮಾಸ್ಕೋ, ಕನ್ನಡ ಅನುವಾದ, ಕೆ.ಎಲ್ ಗೋಪಾಲಕೃಷ್ಣರಾವ್.

೬೦. ರೂಪಾ ಹಾಸನ (೨೦೧೪), ಮಹಿಳೆಗೆ ಹಕ್ಕುಗಳೇನೋ ಇವೆ ಆದರೆ?, ಕರ್ನಾಟಕ ಸಂಘ, ಮಂಡ್ಯ

೬೧. ರಾಜಾರಾಮ ಹೆಗಡೆ, (೨೦೦೮), ವಸಾಹತುಪೂರ್ವ ಕರ್ನಾಟಕದ ರಾಜ್ಯ ಪದ್ಧತಿ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ

೬೨. ರಾಮ ಮನೋಹರ ಲೊಹಿಯಾ (೧೯೮೬), ಜಾತಿ ಪದ್ಧತಿ, ಕನ್ನಡಕ್ಕೆ ಅನುವಾದ, ಹಸನ್ ನಯೀಂ ಸುರಕೋಡ, ಲಂಕೇಶ್ ಪ್ರಕಾಶನ, ಬೆಂಗಳೂರು

೬೩. ರಾಮಲಿಂಗಪ್ಪ ಟಿ. ಬೇಗೂರ (೨೦೧೪), ಮಹಿಳೆ ಚರಿತ್ರೆ ಪುರಾಣ, ಅಂಕಿತ ಪುಸ್ತಕ, ಬೆಂಗಳೂರು

೬೪. ರೇವತಿ ಎ. (೨೦೧೧), ಬದುಕು ಬಯಲು, ಕನ್ನಡಕ್ಕೆ ಅನುವಾದ, ಸರಸ್ವತಿ, ಡು., ಲಂಕೇಶ್ ಪ್ರಕಾಶನ, ಬೆಂಗಳೂರು

೬೫. ಸರ್ದೇಸಾಯಿ ಎಸ್. ಜಿ., (೨೦೧೩), ಭಾರತೀಯ ಇತಿಹಾಸದ ವೈಲಕ್ಷಣಗಳು, ಕನ್ನಡಕ್ಕೆ ಅನುವಾದ, ಗೋಪಾಲಕೃಷ್ಣಯ್ಯ, ಕೆ.ಎಲ್., ನವ ಕರ್ನಾಟಕ ಪ್ರಕಾಶನ, ಬೆಂಗಳೂರು

೬೬. ಸಿಮೊನ ದ ಬೊವಾ (೨೦೦೭), ದ ಸೆಕೆಂಡ್ ಸೆಕ್ಸ್, ಕನ್ನಡ ಅನುವಾದ, ಶ್ರೀಮತಿ ಎಚ್.ಎಸ್., ಬರಹ ಪಬ್ಲಿಷಿಂಗ್ ಹೌಸ್, ಬೆಂಗಳೂರ.

೬೭. ಸುಚೇತನಾ ನಾಯಕ್ (೨೦೧೩), ಕಟಕಟೆಯಲ್ಲಿ ಮಿಡಿದ ಹೃದಯಗಳು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೬೮. ಶರ್ಮ ಆರ್. ಎಸ್., (೨೦೦೪), ಪ್ರಾಚೀನ ಭಾರತದಲ್ಲಿ ಶೂದ್ರರು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು

೬೯. ಶಾಲಿನಿ ರಜನೀಶ್ (೨೦೦೮) ನಡೆಮುಂದೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು

೭೦. ಶೈಲಜ ಹಿರೇಮಠ (೨೦೧೧), ಹರದೇಶಿ–ನಾಗೇಶಿ, ಕಲೆ ಮತ್ತು ಕಲಾವಿದರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭೧. ಶೈಲಜ ಹಿರೇಮಠ (೨೦೦೩), ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ

೭೨. ಶಿವಾನಂದ ಎಂ. ಜಾಮದಾರ, (೨೦೧೬), ತಾರತಮ್ಯಮನೋಹರ ಗ್ರಂಥ ಮಾಲಾ, ಧಾರವಾಡ

೭೩. ಶಿವರಾಮ ಕಾರಂತ (೧೯೭೦), ಮೈ ಮನಗಳ ಸುಳಿಯಲ್ಲಿ, ಎಸ್ ಬಿ ಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು.

೭೪. ಶಿವರಾಮ್ ಕಾರಂತ (೧೯೯೪), ಸರಸಮ್ಮನ ಸಮಾಧಿ, ಎಸ್. ಬಿ.ಎಸ್., ಪಬ್ಲಿಷರ್ಸ್, ಬೆಂಗಳೂರು

೭೫. ಶ್ರೀಮತಿ ಎಚ್. ಎಸ್. (೨೦೧೦), ಹೆಣ್ಣು ಬರೆಹದ ಒಳಬಂಡಾಯ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೭೬. ಶ್ರೀಮತಿ ಎಚ್.ಎಸ್. (೨೦೧೨), ಸ್ತ್ರೀವಾದ: ತಾತ್ವಿಕತೆ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೭೭. ಶ್ರೀನಿವಾಸ್ ಎಂ.ಎಸ್. (೨೦೧೫), ನೆನಪಿನ ಹಳ್ಳಿ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೭೮. ಉಷಾ ಎಂ., (೨೦೦೪), ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೯. ವಸಂತಕುಮಾರ ಎನ್. ಕೆ., (೨೦೦೯), ಹಸಿವಿನ ಸಾಮ್ರಾಜ್ಯಕ್ಕೆ ಕೊನೆಯೆಂತು?, ಚಿಂತನ ಪುಸ್ತಕ, ಬೆಂಗಳೂರು

೮೦. ವಸು ಮಳಲಿ (೨೦೧೩), ಅವಳ ಪ್ರಶ್ನೆಗಳು, ಅಖಿಲ ಭಾರತ ಜನವಾದಿ ಸಂಘಟನೆ, ಬೆಂಗಳೂರು, (ಸಂ), ವಿಮಲಾ ಕೆ.ಎಸ್., ಮೀನಾಕ್ಷಿ ಬಾಳಿ, ಶಾಂತಾಮಠ.

೮೧. ವಾಸವಿ ಎ. ಆರ್., (೨೦೧೫), ಸಾಮಾಜಿಕ ಆಕಾರರೇಖೆ.ಕನ್ನಡ ಅನುವಾದ, ಪ್ರಶಾಂತ್ ಎಚ್.ವಿ. ಮತ್ತು ಇತರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೨. ವಾಸುದೇವ ಬಡಿಗೇರ, (೨೦೧೦), ಬಸವನ ಬಾಗೇವಾಡಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೩. ವಿಲ್ ಡ್ಯೂರಾಂಟ್, (೨೦೦೭), ನಮ್ಮ ಪ್ರಾಚ್ಯ ಪರಂಪರೆ, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೮೪. ವೆಂಕಟೇಶ್ ಸಿ. ಡಿ., (೨೦೦೮), ಹೆಚ್ಚುತ್ತಿರುವ ಬಾಲ ವೇಶ್ಯೆಯರು, ಮಹಿಳಾ ಅಧ್ಯಯನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ (೧೦೭)

**ಲೇಖನಗಳು**

೧. ಭಾರತಿ ಬಿಜಾಪೂರ (೨೦೧೦), ದೇವದಾಸಿ ಪದ್ಧತಿಯೂ ಮತ್ತು ವೃದ್ಧ ದೇವದಾಸಿಯೂ, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ರೂಪಾ ಹಾಸನ (೨೦೧೪), ಲೈಂಗಿಕ ಜೀತ ಅಪರಾಧಿ ಯಾರು?, ಪ್ರಜಾವಾಣಿ, ದಿನಾಂಕ: ೩೦-೦೯-೨೦೧೪, ಬೆಂಗಳೂರು.

**ವರದಿಗಳು**

೧. ಭಾರತ ಸರ್ಕಾರ (೧೯೯೪) ಮಕ್ಕಳ ಹಕ್ಕುಗಳ ಒಡಂಬಡಿಕೆ

೨. ಬಾಗಲಕೋಟ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೧೪-೨೦೧೫, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಾಗಲಕೋಟೆ

೩. ಬೆಳಗಾವಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೧೧-೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬೆಳಗಾವಿ

೪. ಗವರ್ನಮೆಂಟ್ ಆಫ್ ಇಂಡಿಯಾ (೨೦೦೪) ಟ್ರ್ಯಾಫಿಕಿಂಗ್ ಆಫ್ ವುಮೆನ್ ಯ್ಯಾಂಡ್ ಚಿಲ್ಡ್ರನ್ ಇನ್ ಇಂಡಿಯಾ

೫. ಮಕ್ಕಳಿಗಾಗಿ ರಾಷ್ಟ್ರೀಯ ನೀತಿ, ೨೦೧೩, ಚೈಲ್ಡ್ ರೈಟ್ಸ್ ಟ್ರಸ್ಟ್, ಬೆಂಗಳೂರು

೬. ನಮ್ಮೆಲ್ಲರ ಹೊಣೆ (೨೦೧೫), ಕರ್ನಾಟಕ ಸರಕಾರ ಮತ್ತು ಯುನಿಸೆಫ್ ಹೈದರಾಬಾದ್

೭. ವಿಜಾಪೂರ ಜಿಲ್ಲೆಯ ಅಂಕಿಅಂಶಗಳ ನೋಟ ೨೦೧೧-೨೦೧೨, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ವಿಜಾಪೂರ

೮. ಸಮಾಜ ಅಧ್ಯಯನ, (೨೦೧೫), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**English**

1. Altekar (1956). The Position of Women in Hindu Civilization.

2. Anupriyo Malik, (2004). Child Sexual Abuse Facts and facets. Social Welfare Magazine, West Bengal. Distributors, Delhi.

3. Bem, (2006), Commercial Sexual Exploitation of Children and Young People in Oliver Razum, hajozeeb, Ulrich laser (Hrsg) Public Health Report of Germany.
4. Gauri Pradhan,(1996), Back Home From Brothels, Child Workers in Nepal Concerned Center, Nepal
5. Gracy Farnadis, (2008), Micro Study on Girl Children in Prostitution in Kamatipura in Mumbai, Nirmal Niketan, School of Social Work, Mumbai.
6. Jayashree and Mohan Murthy, (2003) Prostitutionion in India, Humanitarian Movement Against Child oppression of other Living Exploitation,New Delhi.
7. Jean D'Cunha, (1989), The legalization of Prostitution, Wordmakers, Bangalore.
8. Jogan Shankar, (1990), Devadasi Cult: A Sociological Analysis, Ashish Publishing House, New Delhi.
9. Jogan Shankar and Manavade, V.S., (1991), Socio-Economic Study on Female Prostitutes and their Children in Bangalore City, Central Social welfare Board, New Delhi.
10. Joseph Gathia, (1999), Child Prostitution in India, Concept Publishing Company, New Delhi
11. Leuren Beth Jacobs, (2009), Sexual Exploitation and the Devadasi tradition in So1uthern India, YPEP- Young Professionals in Foreign Policy.
12. MAthur, A.S. and Gupta, B.L., (1995), Asia Press, Agra
13. Mondira Dutta, (2003), Rescued Trafficked Children from Commercial Sexual Exploitation, A situational Study, United Nations Voluntary Trust Fund on Contemporary Forms of Slavery, Geneva
14. Myneni, S. R., (2002), Women and Law, Asia Law House, Hyderbad
15. Namita Sharma, (2007), HIV-AIDS In Women and Children of India, Pearl Books, New Delhi
16. Nicole Ives, (2001), Commercial Sexual Exploitation of Children, School of Social Work, University of Pennsylvania, Philadelphia.
17. S.P Pandey, Awadesh Kr.Singh, and Sanjay Kr. Paney, (2008), Rehabilitation of disadvanced Children and Women Sex Workers,Ministery of Women and Child Development , Social Justice and Empowerment, Govt. of India.

18. Petrus C. van Duyne and Spencer, J., (2011), Flesh and Money, Wolf Leagal Publishers, The Netherlands
19. Punekar, S.D. and Kamala Rao, (1962), Lalvani Publishing House, Bombay
20. ರಿಟಾ ರೋಝಾರಿಯೋ,(೧೯೮೮), ಟ್ರ್ಯಾಫಿಕಿಂಗ್ ಇನ್ ವುಮೆನ್ ಯ್ಯಾಂಡ್ ಚಿಲ್ಡ್ರನ್ ಇನ್ ಇಂಡಿಯಾ, ಉಪ್ಪಲ್ ಪಬ್ಲಿಶಿಂಗ್ ಹೌಸ್, ನ್ಯೂ ದೆಹಲಿ.
21. Rohini Sahni and others, (2008) Prostitution And Beyond, SAGE Publications India Pvt. Ltd, New Delhi
22. Ruth Dixon-Mueller, (1995), The Sexuality Connection in Reproductive Health,Sondra Zeidenstein and Kirsten Moore, Sexuality, The Population Council And International Women's Health Coalition, New York.
23. Sumati Karmakar,( 2001), Red Light Area Social Environment of Sex workers, Dominant Publishers
24. Tandon, R.K. and Sudarshan, K.N., (1997), Child Prostitution, A.P.H. Publishing Corporation, New Delhi
25. Trafficking of Women and children in India, Challenges and Responses, (2004), Government Of India

**Articale**

1. Sukumari Bhattacharji, (2007), Prostitution in India, http://www.jstorr.org
2. Susen Louis, (2002 March), Child Marriage and Child Prostitution,Gender and Development Vol. No. 10
3. Sudhnshu bhandari,( 2012), Prostitution in Colonial India, Mainstream Weekly, http://www.mainstreamweekly.net
4. Treena Rae Orchard,( 2007), The Impact of Gender and Tradition on Sexuality and Relationships for Devadasi Sex workers in rural India, Sexuality And Culture, Vol. 11
5. Treena Rae orchard,(2007 April), Girl, Women, lover: Towards a new understanding of Child Prostitution among young Devadasis in Rural Karnataka, India, Social Science and Medicine, www.elsevier.com

## Reports

1. Child Prostitution The Ultimate Abuse, (1995), The National Consultation on Child Prostitution, New Delhi
2. Child Prostitution in Western India,(1996), INSAF, Goa
3. Devadasi, (2005), National Legal Services Authority, Andra Pradesh
4. Involvement of Children in Armed Conflict, (2011), Ministry of Women and Child Development, Government of India
5. Desire for a Change, (2010), Child Rights Resource center, Ongole
6. ILO., (2006), Commercial Sexual Exploitation of Children and Adolescents.

